# ಆಧುನಿಕ ಭಾರತದ ನಿರ್ಮಾತೃಗಳು

## ಡಾ. ಕೇಶವ ಬಲಿರಾಮ್ ಹೆಡಗೇವಾರ್

ರಾಕೇಶ್ ಸಿನ್ಹಾ

ಪ್ರಕಾಶನ ವಿಭಾಗ

# ಡಾ. ಕೇಶವ ಬಲಿರಾಮ್ ಹೆಡಗೇವಾರ್

ಮೂಲ ಲೇಖಕರು
ರಾಕೇಶ್ ಸಿನ್ಹಾ

ಅನುವಾದ
ಚಂದ್ರಶೇಖರ ಭಂಡಾರಿ



ಪ್ರಕಾಶನ ವಿಭಾಗ
ಸಮಾಚಾರ ಮತ್ತು ಪ್ರಸಾರ ಸಚಿವಾಲಯ
ಭಾರತ ಸರ್ಕಾರ

ಮೊದಲ ಮುದ್ರಣ : 2018 (ಶಕ 1940)



ಬೆಲೆ : ₹ 140.00



ISBN : 978-81-230-2814-9

BMI-KAN-TR-023-2018-19

**ಪ್ರಕಾಶಕರು** : ಮಹಾ ನಿರ್ದೇಶಕರು, ಪ್ರಕಾಶನ ವಿಭಾಗ, ಸಮಾಚಾರ ಮತ್ತು ಪ್ರಸಾರ ಸಚಿವಾಲಯ, ಭಾರತ ಸರ್ಕಾರ, ಸೂಚನಾ ಭವನ, ಸಿ.ಜಿ.ಓ. ಕಾಂಪ್ಲೆಕ್ಸ್, ಲೋಧಿ ರೋಡ್, ನವದೆಹಲಿ – 110003.

**ಜಾಲತಾಣ** : http/www.publicationsdivision.nic.in

**ಸಂಪಾದಕರು** : **ಬಿ.ಕೆ. ಕಿರಣ್ಮಯಿ**

**ಮುಖಪುಟ** : **ಗಜಾನನ ಪಿ ಧೋಪೆ**



**ಮಾರಾಟ ಕೇಂದ್ರಗಳು** : • ದೆಹಲಿ : ಸೂಚನಾ ಭವನ, ಸಿ.ಜಿ.ಓ. ಕಾಂಪ್ಲೆಕ್ಸ್, ಲೋಧಿ ರೋಡ್, **ನವದೆಹಲಿ**– 110003 • ಕೊಠಡಿ ಸಂಖ್ಯೆ 196, ಓಲ್ಡ್ ಸೆಕ್ರೆಟರಿಯೇಟ್, **ದೆಹಲಿ**–110054 • ಮುಂಬಯಿ : 701 ಬಿ ವಿಂಗ್ ಏಳನೇ ಅಂತಸ್ತು, ಕೇಂದ್ರೀಯ ಸದನ, ಸಿಬಿಡಿ ಬೇಲಾಪುರ, **ನವೀಮುಂಬಯಿ**–400614 • ಕೋಲ್ಕತಾ : 8, ಎಸ್ಪ್ಲನೇಡ್ ಈಸ್ಟ್, **ಕೋಲ್ಕತಾ**–700069 • ಚೆನ್ನೈ : ರಾಜಾಜಿ ಭವನ, ಎಫ್ ಮತ್ತು ಜಿ ಬ್ಲಾಕ್, ಎ ವಿಂಗ್, ಬೆಸೆಂಟ್ ನಗರ, **ಚೆನ್ನೈ**–600090 • ಪಾಟ್ನಾ : ಬಿಹಾರ ರಾಜ್ಯ ಸಹಕಾರಿ ಬ್ಯಾಂಕ್ ಬಿಲ್ಡಿಂಗ್, ಅಶೋಕ ರಾಜಪಥ್, **ಪಾಟ್ನಾ** – 800004 • ತಿರುವನಂತಪುರಂ : ಪ್ರೆಸ್ ರೋಡ್, ಗವರ್ನ್ಮೆಂಟ್ ಪ್ರೆಸ್ ಹತ್ತಿರ, **ತಿರುವನಂತಪುರಂ**–695001 • ಲಖನೌ : ಕೊಠಡಿ ಸಂಖ್ಯೆ 1, ಎರಡನೆಯ ಮಹಡಿ, ಕೇಂದ್ರೀಯ ಭವನ, ಸೆಕ್ಟರ್–ಎಚ್, ಅಲಿಗಂಜ್, **ಲಖನೌ**–226024 • ಹೈದರಾಬಾದ್ : ರೂಂ ನಂ. 204 & 205, 2ನೇ ಅಂತಸ್ತು, ಸಿ.ಜಿ.ಓ. ಟವರ್, ಕವಡಿಗುಡ, **ಹೈದರಾಬಾದ್**–500080 • ಬೆಂಗಳೂರು : ಮೊದಲನೆಯ ಅಂತಸ್ತು, ಎಫ್ ವಿಂಗ್, ಕೇಂದ್ರೀಯ ಸದನ, ಕೋರಮಂಗಲ, **ಬೆಂಗಳೂರು**–560034 • ಅಹ್ಮದಾಬಾದ್ : ಅಂಬಿಕಾ ಕಾಂಪ್ಲೆಕ್ಸ್, ಮೊದಲನೆಯ ಮಹಡಿ, ಪಾಲಡಿ, **ಅಹ್ಮದಾಬಾದ್**–380007 • ಗುವಾಹತಿ : ಕಟ್ಟಡ ಸಂಖ್ಯೆ 7, ನ್ಯೂ ಕಾಲೊನಿ, ಚೇನಿಕುಥಿ, ಕೆ.ಕೆ.ಬಿ.ರಸ್ತೆ, **ಗುವಾಹತಿ**–781003

This book has been printed in 70 GSM High Bulk Maplitho paper

**ಪುಟ ವಿನ್ಯಾಸ** : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್, ನಂ.3/3, 1ನೇ ಮುಖ್ಯರಸ್ತೆ, ಹೊಸ ತರಗುಪೇಟೆ, ಬೆಂಗಳೂರು – 560 002

ಮುದ್ರಣ (Printed at ) : JK Offset Graphics Pvt. Ltd., New Delhi-110020

ತಾಯಿ ಶ್ರೀಮತಿ ದ್ರೌಪದಿ ದೇವಿ

ಮತ್ತು

ತಂದೆ ಶ್ರೀ ಬಂಗಾಲಿ ಸಿಂಹ

ಅವರಿಗೆ

ಸಮರ್ಪಿತ

# ಮೊದಲ ಮಾತು

ಭಾರತದ ರಾಜಕಾರಣ ಮತ್ತು ವಿದ್ವತ್ ವಲಯದಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘ ಮತ್ತು ಅದರ ವೈಚಾರಿಕ ಭೂಮಿಕೆ – ಇವು ಸ್ವಾತಂತ್ರ್ಯ ಪ್ರಾಪ್ತಿಯ ನಂತರವಷ್ಟೇ ಚರ್ಚೆಗೆ ಗ್ರಾಸವಾದ ವಿಷಯಗಳಾಗಿವೆ. ಯಾವುದೇ ಒಂದು ಸಂಸ್ಥೆಯ ಸಾಮಾಜಿಕ ಚಿಂತನೆ, ಅದರ ರಾಜಕೀಯ ದೃಷ್ಟಿಕೋನ ಮತ್ತು ಸಂಘಟನಾತ್ಮಕ ಸಂಸ್ಕೃತಿ ಇವುಗಳನ್ನು ಸರಿಯಾಗಿ ತಿಳಿಯಬೇಕಾದಲ್ಲಿ, ಅದರ ಸಂಸ್ಥಾಪಕರ ಜೀವನ ಶೈಲಿ ಮತ್ತು ಅವರ ವೈಚಾರಿಕ ಪಾರ್ಶ್ವಭೂಮಿ – ಇವುಗಳನ್ನು ಮೊದಲು ತಿಳಿಯಬೇಕಾದುದು ಅಗತ್ಯವಾಗುತ್ತದೆ. ಸಂಘ ಮತ್ತು ಅದರ ಸಂಸ್ಥಾಪಕ ಡಾ. ಕೇಶವ ಬಲಿರಾಮ ಹೆಡಗೇವಾರ್ – ಒಂದು ರೀತಿಯಲ್ಲಿ ಪರಸ್ಪರ ಪರ್ಯಾಯ ವಾಚಕಗಳೇ. ಡಾ. ಹೆಡಗೇವಾರರ ಬದುಕಿನ ಪ್ರಸಂಗಗಳು ಮತ್ತು ಅವರ ದೃಷ್ಟಿಕೋನಗಳನ್ನು ತಿಳಿದಲ್ಲಿ ಮಾತ್ರ ಸಮಕಾಲೀನ ಇನ್ನಿತರ ಹಿಂದೂ ಸಂಘಟನೆಗಳಿಂದ ಸಂಘವು ಹೇಗೆ ಭಿನ್ನ ಮತ್ತು ಅದರ ವೈಚಾರಿಕ ಹಿನ್ನೆಲೆ ಹಾಗೂ ಜಾಗತಿಕ ದೃಷ್ಟಿಕೋನ ಏನು ಎಂಬುದನ್ನು ಸಮರ್ಪಕವಾಗಿ ತಿಳಿಯಲು ಸಾಧ್ಯವಾದೀತು. ಒಂದು ಸಂಘಟನೆಯ ವೈಚಾರಿಕ ಭೂಮಿಕೆಯನ್ನು ಜನತೆ ಒಪ್ಪಬಹುದು ಅಥವಾ ಒಪ್ಪದೆಯೇ ಇರಲೂಬಹುದು. ಅದು ಪ್ರಜಾತಂತ್ರದಲ್ಲಿ ಸಹಜವೇ; ಆದರೆ ನಮ್ಮ ಬದುಕಿನ ಎಲ್ಲಾ ರಂಗಗಳಿಗೂ ಪಸರಿಸಿದ, ಅಲ್ಲಿ ತನ್ನ ಪ್ರಭಾವವನ್ನೂ ಬೀರುವಂತಹ ಸಂಘಟನೆಯೊಂದರ ಸಂಸ್ಥಾಪಕರ ಜೀವನ ಮತ್ತು ಅವರ ವಿಚಾರಗಳ ಕುರಿತು ಅಜ್ಞಾನವಿದ್ದಲ್ಲಿ, ಅದು ಇನ್ನೂ ಅನೇಕ ತಪ್ಪು ಕಲ್ಪನೆಗಳನ್ನು ಸಹ ಹುಟ್ಟುಹಾಕಬಲ್ಲದು. ಅದರಿಂದಾಗಿ ವೈಚಾರಿಕ ನೆಲೆಯಲ್ಲಿ ಆ ಸಂಘಟನೆಯ ಸರಿಯಾದ ಮೌಲ್ಯಮಾಪನ ಮಾಡುವುದು ಸಹ ಸಾಧ್ಯವಾಗದೆ ಹೋಗಬಹುದು. ಡಾ. ಹೆಡಗೇವಾರರ ಕುರಿತು ಕೂಡ ಸಮಾಜದಲ್ಲಿ ಅನೇಕ ವಿಧದ ತಪ್ಪು ಕಲ್ಪನೆಗಳಿವೆ. ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಪಾತ್ರವಿರಲಿಲ್ಲವೆಂಬುದು ಅವುಗಳಲ್ಲಿ ಒಂದು. ಆದರೆ ಈ ಭ್ರಮೆಯು ವಾಸ್ತವಿಕತೆಗಿಂತ ಅದೆಷ್ಟು ಭಿನ್ನ ಮತ್ತು ದೂರವೂ ಹೌದು ಎಂಬುದನ್ನು ಈ ಮುಂದಿನ ಕೆಲವು ಮಾಹಿತಿಗಳಿಂದ ತಿಳಿಯಬಹುದಾಗಿದೆ.

1921ರಲ್ಲಿ ಬ್ರಿಟಿಷ್ ಸರ್ಕಾರವು ಅವರ ಮೇಲೆ 'ರಾಜದ್ರೋಹ'ದ ಮೊಕದ್ದಮೆಯೊಂದನ್ನು ಮಧ್ಯಪ್ರಾಂತದ ರಾಜಧಾನಿ ನಾಗಪುರದಲ್ಲಿ ಹೂಡಿತ್ತು. ಅದರ ವಿಚಾರಣೆಯ ಸಂದರ್ಭದಲ್ಲಿ ವಸಾಹತುಶಾಹಿಯನ್ನು ಅಮಾನವೀಯ, ಅನೈತಿಕ, ಕಾನೂನು ವಿರೋಧಿ ಮತ್ತು ಕ್ರೂರ ಆಡಳಿತ ಎಂದು ನಿಂದಿಸಿ ಬ್ರಿಟಿಷರ ನ್ಯಾಯ ವ್ಯವಸ್ಥೆ,

ಪೊಲೀಸ್ ವಿಭಾಗದ ಅವಕೃತ ವೈಖರಿ ಮತ್ತು ಒಟ್ಟು ಸಾಮ್ರಾಜ್ಯಶಾಹಿ ವರ್ತನೆಗಳನ್ನು ಖಂಡಿಸಿದ್ದರು ಮತ್ತು ಇವೆಲ್ಲವುಗಳ ವಿರುದ್ಧ ಮಾಡಲ್ಪಟ್ಟ ಸರ್ವವಿಧ ಪ್ರತಿಭಟನೆಗಳನ್ನೂ ಅವರು ಸಮರ್ಥಿಸಿದ್ದರು. ಇದರಿಂದ ಕೋಪೋದ್ರಿಕ್ತರಾದ ನ್ಯಾಯಾಧೀಶರು ಡಾ. ಹೆಡಗೇವಾರರು ನ್ಯಾಯಾಲಯದಲ್ಲಿ ನೀಡಿದ್ದ ಹೇಳಿಕೆಯು ಮೊದಲಿನ ಭಾಷಣಕ್ಕಿಂತ ಹೆಚ್ಚು 'ರಾಜದ್ರೋಹಕರ' ಎಂದು ಟೀಕಿಸಿದ್ದರು. ಅದಕ್ಕಿಂತ ಏಳು ವರ್ಷಗಳ ಪೂರ್ವದಲ್ಲಿ ಅವರು ನಡೆಸುತ್ತಿದ್ದ ಕ್ರಾಂತಿಕಾರಿ ಚಟುವಟಿಕೆಗಳಿಗಾಗಿ ಅವರ ಹೆಸರನ್ನು ಸಾಮ್ರಾಜ್ಯವಾದಿ ಸರ್ಕಾರವು ಸಂಭಾವ್ಯ ಅಪಾಯಕಾರಿ ರಾಜಕೀಯ ಅಪರಾಧಿಗಳ ಪಟ್ಟಿಯಲ್ಲಿ ಸೇರಿಸಿತ್ತು. ಅದಕ್ಕೂ ಆರು ವರ್ಷಗಳ ಮೊದಲು (1909ರಲ್ಲಿ) ಸರ್ಕಾರದ ವಿರುದ್ಧ ಜನತೆಯನ್ನು ಎತ್ತಿ ಕಟ್ಟಿದ್ದ ಮತ್ತು ಪೊಲೀಸ್ ಠಾಣೆಯ ಮೇಲೆ ಬಾಂಬ್ ಎಸೆದಿದ್ದ ಆರೋಪವನ್ನು ಅವರ ಮೇಲೆ ಹೊರಿಸಲಾಗಿತ್ತು. ಅದಕ್ಕಿಂತಲೂ ಮುಂಚಿತವಾಗಿ ನಾಗಪುರದ ಒಂದು ಸ್ಕೂಲಿನಲ್ಲಿ 'ವಂದೇ ಮಾತರಂ' ಘೋಷಣೆ ಹಾಕಿದುದಕ್ಕಾಗಿ ಹಾಗೂ ಅದರ ಸಂಬಂಧದಲ್ಲಿ ಕ್ಷಮೆ ಕೇಳಲು ನಿರಾಕರಿಸಿದ ಕಾರಣಕ್ಕಾಗಿ ಶಾಲೆಯಿಂದಲೇ ವಜಾ ಶಿಕ್ಷೆಗೆ ಅವರು ಒಳಗಾಗಿದ್ದರು. ಅಸಹಕಾರ ಆಂದೋಳನದ ನಂತರ ದೇಶದಲ್ಲಿ ನಡೆದ ಇನ್ನೊಂದು ಮಹತ್ವದ ಆಂದೋಳನವಾದ ಸವಿನಯ ಕಾನೂನು ಭಂಗದಲ್ಲಿ ಅವರು ಸತ್ಯಾಗ್ರಹದ ಮುಂದಾಳುತನ ವಹಿಸಿ ಬಂಧಿತರಾದುದಲ್ಲದೆ ಒಂಭತ್ತು ತಿಂಗಳ ಸಶ್ರಮ ಸೆರೆವಾಸದ ಶಿಕ್ಷೆಯನ್ನು ಅನುಭವಿಸಿದ್ದುದೂ ಉಂಟು. ಎರಡನೆ ವಿಶ್ವಯುದ್ಧದ ಸಂದರ್ಭದಲ್ಲಿ ಕ್ರಾಂತಿ ಎಸಗುವ ಉದ್ದೇಶದಿಂದ ಯೋಜನೆಯೊಂದನ್ನು ತಯಾರಿಸಿದ ಕಾರಣ ಸುಭಾಷ್ ಚಂದ್ರ ಬೋಸ್ ಮತ್ತು ತ್ರೈಲೋಕ್ಯನಾಥ ಚಕ್ರವರ್ತಿಯಂತಹ ಕ್ರಾಂತಿಕಾರಿಗಳು ಸಹಕಾರದ ಪೂರಾ ಭರವಸೆಯೊಂದಿಗೆ ಅವರ ಬಳಿ ಬರಲಾರಂಭಿಸಿದ್ದರು. 1940ರಲ್ಲಿ – ಅವರು ನಿಧನರಾದ ವರ್ಷ ಅದು – ಅವರ ಕ್ರಾಂತಿಕಾರಿ ಹಿನ್ನೆಲೆ, ಸಂಘಟನಾ ಕೌಶಲ್ಯ, ಉತ್ಕಟ ದೇಶಭಕ್ತಿ ಮತ್ತು ಕರ್ತೃತ್ವ ಸಂಪನ್ನತೆ ಇವೆಲ್ಲವುಗಳ ಪರಿಚಯವಿದ್ದ ಸುಭಾಷ್ ಚಂದ್ರ ಬೋಸ್ ಅವರು, ಅವರ ನಿಧನದ ಒಂದು ದಿನ ಮೊದಲಷ್ಟೇ, ಅವರನ್ನು ಕಾಣಲು ಬಂದಿದ್ದರು. ಆ ಪ್ರಸಂಗದಲ್ಲಿ ಡಾ. ಹೆಡಗೇವಾರರು ಮೃತ್ಯು ಶಯ್ಯೆಯಲ್ಲಿರುವುದನ್ನು ಕಂಡು ಅವರು ಅದೆಷ್ಟು ನಿರಾಶರಾಗಿರಬಹುದು ಎಂಬುದನ್ನು ಊಹಿಸಲು ಮಾತ್ರ ಸಾಧ್ಯ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಡಾ. ಹೆಡಗೇವಾರರು ಪಾಲ್ಗೊಂಡಿದ್ದನ್ನು ತಿಳಿಸುವಂತಹ ಹಲವಾರು ಪ್ರಸಂಗಗಳ ದಾಖಲೆಗಳು ಲಭ್ಯವಿವೆ; ಆದರೆ ಅವರ ಚಿಂತನೆಯಾಗಲಿ, ಪ್ರತ್ಯಕ್ಷ ಪಾಲ್ಗೊಳ್ಳುವಿಕೆಯೇ ಆಗಲಿ, ಸ್ವಾತಂತ್ರ್ಯ ಪ್ರಾಪ್ತಿಗೆ ಮಾತ್ರ ಸೀಮಿತವಾಗಿರಲಿಲ್ಲ. ಒಂದು ಪ್ರಾಚೀನ ರಾಷ್ಟ್ರವಾಗಿರುವ ಭಾರತವು ಸೋತಿತೇಕೆ ಮತ್ತು ಅದನ್ನೀಗ ಒಂದು ಸಂಘಟಿತ ಶಕ್ತಿಶಾಲಿ ರಾಷ್ಟ್ರವಾಗಿ ರೂಪಿಸುವುದು ಹೇಗೆ – ಇಂತಹ ಪ್ರಶ್ನೆಗಳಿಗೆ ಓರ್ವ ದ್ರಷ್ಟಾರರಂತೆ ಉತ್ತರ ಹುಡುಕಲು ಜೀವನಪೂರ್ತಿ ಪರಿಶ್ರಮಿಸಿದವರು ಅವರು. ಈ ಹಿನ್ನೆಲೆಯಲ್ಲಿ ರಾಷ್ಟ್ರದ ಹಿತಕ್ಕಾಗಿ ಹಾಗೂ ಅದನ್ನು ಸಂಘಟಿಸಿ, ಅದರ ಪುನರ್ನಿರ್ಮಾಣಕ್ಕಾಗಿ ಮಾಡಲಾಗುವ ಕಾರ್ಯವು ಭಗವಂತನ ಕಾರ್ಯವೇ ಆಗುವುದು ಎಂಬ ನಿಷ್ಕರ್ಷೆಗೂ ಅವರು ತಲುಪಿದ್ದರು. 1925ರಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘವನ್ನು ಅವರು

ಸ್ಥಾಪಿಸಿದುದು ಈ ಗುರಿಯ ಪ್ರಾಪ್ತಿಗಾಗಿಯೇ. ಸಂಘವನ್ನು ಅವರು ಆರಂಭಿಸಿದ್ದುದು ನಾಗಪುರದ ಅಲಕ್ಷಿತ ಪ್ರದೇಶವಾದ ಮೊಹಿತೆವಾಡಾದಲ್ಲಾದರೂ, ಅದರ ಕಾರ್ಯ ನೋಡನೋಡುತ್ತಿರುವಂತೆಯೇ ಬೆಳೆಯುತ್ತ ಕ್ರಮೇಣ ದೇಶದ ಎಲ್ಲ ಪ್ರಾಂತಗಳಿಗೂ ವಿಸ್ತರಿಸಿತು. ಅದು ಬೆಳೆದಂತೆ ಸಂಘ, ಸಮಾಜ, ಸಂಸ್ಕೃತಿ ಮತ್ತು ರಾಷ್ಟ್ರಗಳ ನಡುವೆ ಜೀವಂತ ಸಂಬಂಧ ಏರ್ಪಟ್ಟಿತು. ವಾಸ್ತವಿಕವಾಗಿ ಸಂಘದ ಬೆಳವಣಿಗೆ ಮತ್ತು ಸಮಾಜದ ಮೇಲೆ ಅದರ ಪ್ರಭಾವ ಇವೆಲ್ಲವುಗಳಿಗೆ ಕಾರಣಪುರುಷರು ಅವರೇ ಆಗಿದ್ದರೂ ತಮ್ಮನ್ನು ಅವರು ನೇಪಥ್ಯದಲ್ಲಿ ಇರಿಸಿಕೊಂಡರು. ಸಾರ್ವಜನಿಕ ಜೀವನದಲ್ಲಿ ವ್ಯಕ್ತಿಗತವಾದ ಮಹತ್ವಾಕಾಂಕ್ಷೆ ಮತ್ತು ಸ್ವಾರ್ಥವನ್ನು ದೂರವಿರಿಸಿಕೊಂಡು ಬದುಕುವಂತಹ ಅನುಪಮ ಆದರ್ಶವನ್ನು ಅವರು ಸ್ವಂತದ ನಡವಳಿಕೆಯಿಂದ ತೋರಿದರು.

ಪ್ರಸಿದ್ಧಿ, ಪ್ರಚಾರ ಮತ್ತು ಶ್ರೇಯಸ್ಸಿನ ಪ್ರಾಪ್ತಿ ಇತ್ಯಾದಿ ಸಂಗತಿಗಳಿಂದ ಅವರು ಅದೆಷ್ಟು ದೂರವಿರುತ್ತಿದ್ದರೆಂಬುದಕ್ಕೆ ಸಂಘದ ಸ್ಥಾಪನೆಯಾಗಿ ಒಂದು ದಶಕ ಕಳೆದ ನಂತರವೂ ಮಧ್ಯಪ್ರಾಂತದ ಸರ್ಕಾರವು ಅವರ ಹಿರಿಯ ಮಿತ್ರರಾದ ಡಾ. ಬಾಲಕೃಷ್ಣ ಮುಂಜೆ ಅವರೇ ಸಂಘದ ಸ್ಥಾಪಕರೆನ್ನುವಂತಹ ತಪ್ಪು ಮಾಡುತ್ತಿದ್ದುದೇ ಸಾಕ್ಷಿಯಾಗಿದೆ. ತಮ್ಮ ಜೀವನ ಚರಿತ್ರೆಯನ್ನು ಬರೆಯಬೇಕೆಂದಿದ್ದವರಿಗೆ ಅವರು ತಮ್ಮ ಬದುಕಿನುದ್ದಕ್ಕೂ ಅವಕಾಶವನ್ನೇ ನೀಡಲಿಲ್ಲ. ಅದಕ್ಕಾಗಿ ದಾಮೋದರ ಪಂತ ಭಟ್ ಎಂಬುವರು ಮೇಲಿಂದ ಮೇಲೆ ಆಗ್ರಹಪಡಿಸುತ್ತಿದ್ದಾಗ, ಅದನ್ನು ನಿರಾಕರಿಸುತ್ತ ಅವರು ಬರೆದಿದ್ದುದು ಹೀಗೆ:

"ಸಂಘದ ಮತ್ತು ನನ್ನ ಬಗ್ಗೆ ನಿಮ್ಮ ಮನದಲ್ಲಿರುವ ಪ್ರೀತಿ ಮತ್ತು ಆದರಗಳಿಗಾಗಿ ನಾನು ನಿಮಗೆ ಹೃದಯ ತುಂಬಿ ಆಭಾರಿ. ನನ್ನ ಜೀವನ ಚರಿತ್ರೆಯನ್ನು ಪ್ರಕಟಿಸಬೇಕೆಂಬ ನಿಮ್ಮ ಮನದಿಚ್ಛೆಯನ್ನು ತಿಳಿಸಿದ್ದೀರಿ. ಆದರೆ ನನಗನಿಸುವಂತೆ ನಾನು ಅಂತಹ ದೊಡ್ಡ ವ್ಯಕ್ತಿಯೇನೂ ಅಲ್ಲ ಮತ್ತು ಪ್ರಕಟಿಸಲು ಯೋಗ್ಯ ಎನ್ನಬಹುದಾದಂತಹ ಮಹತ್ವಪೂರ್ಣ ಘಟನೆಗಳಾವುದೂ ನನ್ನ ಜೀವನದಲ್ಲಿ ನಡೆದಿಲ್ಲ. ಅದೇ ರೀತಿಯಲ್ಲಿ ನನ್ನ ಅಥವಾ ಸಂಘದ ಯಾವುದೇ ಕಾರ್ಯಕ್ರಮದ ಭಾವಚಿತ್ರಗಳೂ ನಮ್ಮಲ್ಲಿ ಲಭ್ಯವಿಲ್ಲ. ಸಣ್ಣದರಲ್ಲಿ ಹೇಳುವುದಾದರೆ ಜೀವನಚರಿತ್ರೆ ಬರೆಯಬಹುದಾದಂತಹವರ ಶ್ರೇಣಿಯಲ್ಲಿ ನನ್ನ ಚರಿತ್ರೆಯು ಸ್ವಲ್ಪಮಾತ್ರವೂ ಸರಿಹೊಂದಲಾರದು ಎಂದಷ್ಟೇ ಹೇಳಲು ನಾನು ಬಯಸುವೆ. ನೀವು ಅದನ್ನು ಮಾಡದೆ ಇದ್ದಲ್ಲಿ ನಿಮಗೆ ನಾನು ಕೃತಜ್ಞ."

ಅವರ ಕುರಿತು ಕಿರುಗ್ರಂಥವೊಂದು ಅವರ ನಿಧನದ ನಂತರ 1941ರಲ್ಲಿ ವ.ಣ. ಶೇಂಡೆ ಅವರಿಂದ ಪ್ರಕಾಶಿತವಾಗಿತ್ತು. ಅದಾಗಿ ಎರಡು ದಶಕಗಳು ಕಳೆದನಂತರ ನಾರಾಯಣ ಹರಿ ಪಾಲ್‌ಕರ್ ಅವರು ಅವರದೊಂದು ಜೀವನ ಚರಿತ್ರೆಯನ್ನು ಬರೆದಿದ್ದರು. ಅವರ ಕುರಿತ ಅನೇಕ ಲೇಖನಗಳು, ಸಂಸ್ಮರಣೆಗಳು ಮತ್ತು ಅವರ ಭಾಷಣಗಳ ವರದಿಗಳು ಮಧ್ಯಪ್ರಾಂತದ ಪತ್ರಿಕೆಗಳಲ್ಲಿ ಪ್ರಕಟಗೊಂಡಿದ್ದಿವೆ. ಆದರೆ ಅವುಗಳ ಅಧ್ಯಯನ ನಡೆಯದಿರುವ ಕಾರಣದಿಂದಾಗಿ ಅವರ ಜೀವನದ ಅನೇಕ ಪ್ರಸಂಗಗಳು ಹಾಗೂ ಅವರ ಸಾಮಾಜಿಕ ಮತ್ತು ರಾಜಕೀಯ ವಿಚಾರಗಳು ಅಷ್ಟಾಗಿ

ಬೆಳಕಿಗೆ ಬಂದೇ ಇಲ್ಲ. ವಿಶೇಷವಾಗಿ ಸಂಘದ ವಿಚಾರಧಾರೆಯ ಬಗ್ಗೆ ಈಗ ದೇಶದ ರಾಜಕೀಯ ಮತ್ತು ವಿದ್ವತ್ ವಲಯಗಳಲ್ಲಿ ಆಗುತ್ತಿರುವ ಚರ್ಚೆಯು ಪ್ರಧಾನವಾಗಿ ಡಾ. ಹೆಡಗೇವಾರರ ಜೀವನದ ಮೌಲ್ಯಮಾಪನ ಮಾಡುವುದರ ಮೇಲಾಗುತ್ತಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವರ ಸಹಭಾಗಿತ್ವ ಮತ್ತು ಅವರ ರಾಷ್ಟ್ರೀಯ ವಿಚಾರಗಳ ಮೇಲೆ ಹಲವು ಸಂದೇಹಗಳನ್ನು ಎತ್ತಲಾಗುತ್ತಿರುವುದು ಸಹ ಇದೇ ಕಾರಣಕ್ಕಾಗಿ.

1988–89ರಲ್ಲಿ ದಿಲ್ಲಿ ವಿಶ್ವವಿದ್ಯಾಲಯದ ರಾಜ್ಯಶಾಸ್ತ್ರದ ವಿದ್ಯಾರ್ಥಿಯಾಗಿದ್ದಾಗ ನಾನು 'Political Ideas of Dr. K.B. Hedgewar' ಎಂಬ ವಿಷಯ ಕುರಿತು ಮೊಟ್ಟಮೊದಲು ಶೋಧ ಪ್ರಬಂಧ ಬರೆದಿದ್ದೆ. ಅನಂತರ ಸ್ವಾತಂತ್ರ್ಯ ಹೋರಾಟದಲ್ಲಿ ಸಂಘದ ಸಹಭಾಗಿತ್ವ ಮತ್ತು ಡಾ. ಹೆಡಗೇವಾರರ ಜೀವನದ ಬಗ್ಗೆ ನನ್ನ ಸಂಶೋಧನೆಯನ್ನು ಮುಂದುವರಿಸಿರುವೆ. ಈ ನಡುವೆ ಪ್ರಕಾಶನ ವಿಭಾಗದ ವತಿಯಿಂದ ಡಾ. ಹೆಡಗೇವಾರರ ಜೀವನ ಕುರಿತು ಬರೆಯಬೇಕೆಂಬ ಸೂಚನೆ ನನಗೆ ಬಂತು. ಈ ಗ್ರಂಥದಲ್ಲಿ ಸಾಮಾನ್ಯವಾಗಿ ಅವರ ಬದುಕಿನ ವಿಚಾರವಾಗಿ ತಿಳಿದಿರುವ ಮತ್ತು ತಿಳಿಯದೇ ಇರುವ ಪ್ರಸಂಗಗಳನ್ನೂ ಮತ್ತು ಅವರ ಚಿಂತನೆಯ ದೃಷ್ಟಿ ಹಾಗೂ ವೈಚಾರಿಕ ಭೂಮಿಕೆ ಇವುಗಳನ್ನು ಕೂಡ ಪ್ರಸ್ತುತಪಡಿಸಲು ನಾನು ಪ್ರಯತ್ನಿಸಿದ್ದೇನೆ. ಇದರಲ್ಲಿ ಹಲವಾರು ಕೊರತೆಗಳು ಮತ್ತು ದೋಷಗಳು ಇರುವ ಸಾಧ್ಯತೆಯಿದೆ. ಯಾವ ಮಹಾಪುರುಷರು ಇತಿಹಾಸದ ಭಾಗವಾಗಿ ಉಳಿಯುತ್ತಾರೊ, ಅವರ ಬಗ್ಗೆ ಮೌಲ್ಯಮಾಪನ ಮಾಡುವುದು ಕಷ್ಟಕರವೇನಲ್ಲ. ಆದರೆ ಯಾರ ಜೀವನ ಅವರ ನಂತರದ ಪೀಳಿಗೆಗಳ ಮೇಲೆ ಪ್ರಭಾವ ಬೀರುವಂತಹುದೋ ಹಾಗೂ ಯಾರು ವರ್ತಮಾನ ಮತ್ತು ಭವಿಷ್ಯದಲ್ಲೂ ಸದಾ ಪ್ರಸ್ತುತ ಹಾಗೂ ಪ್ರಖರವಾಗಿಯೇ ಉಳಿಯುತ್ತಾರೊ, ಅಂತಹ ಅಸಾಮಾನ್ಯರ ಜೀವನದ ಮೌಲ್ಯಮಾಪನವನ್ನು ಬರಲಿರುವ ಇತಿಹಾಸವೇ ಮಾಡಬಲ್ಲದು. ಡಾ. ಹೆಡಗೇವಾರರ ಜೀವನವೂ ಅದೇ ಶ್ರೇಣಿಯದು.

ಹೀಗಾಗಿ ಅವರ ಜೀವನ ಮತ್ತು ವಿಚಾರಗಳ ಕುರಿತ ಶೋಧ ಕಾರ್ಯ ಇಲ್ಲಿಗೇ ನಿಲ್ಲುವಂತಹುದಲ್ಲ. ಈ ಗ್ರಂಥದ ಬರವಣಿಗೆ ಮತ್ತು ತತ್ಸಂಬಂಧಿತ ಶೋಧ ಕಾರ್ಯದಲ್ಲಿ ಸರ್ವವಿಧ ಸಹಕಾರ ಮತ್ತು ಪ್ರೋತ್ಸಾಹ ನೀಡಿದ ಶ್ರೀಗಳಾದ ಕು.ಸೀ. ಸುದರ್ಶನ, ದತ್ತೋಪಂತ ಠೇಂಗಡಿ, ಎಚ್.ವಿ. ಶೇಷಾದ್ರಿ ಅವರಿಗೆ ನಾನು ವಿಶೇಷವಾಗಿ ಆಭಾರಿ. ಸರ್ವಶ್ರೀ ಸೂರ್ಯನಾರಾಯಣ ರಾವ್ ಮತ್ತು ಮದನದಾಸ ದೇವಿ ಅವರು ನೀಡಿದ್ದ ರಚನಾತ್ಮಕ ಸಲಹೆಗಳಿಂದಾಗಿ ಹಲವಾರು ದೋಷಗಳನ್ನು ಸರಿಪಡಿಸಲು ಸಾಧ್ಯವಾಯಿತು. ಶೋಧ ಕಾರ್ಯದ ಆರಂಭದ ವರ್ಷಗಳಲ್ಲಿ ಸ್ವ. ಎನ್.ಬಿ. ಲೇಲೆ (ಲೇಖಕರು ಮತ್ತು ಪತ್ರಕರ್ತರು) ಹಾಗೂ ಭಾನುಪ್ರತಾಪ ಶುಕ್ಲ ಮತ್ತು ದೇವೇಂದ್ರ ಸ್ವರೂಪ (ಇಬ್ಬರೂ 'ಪಾಂಚಜನ್ಯ'ದ ಪೂರ್ವ ಸಂಪಾದಕರು) ಅವರು ಡಾ. ಹೆಡಗೇವಾರರ ಕುರಿತು ಅನೇಕ ಕಡತಗಳ ಹಾಗೂ ಪುಸ್ತಕಗಳ ಕಡೆ ನನ್ನ ಲಕ್ಷ್ಯ ಸೆಳೆದಿದ್ದರು. ದಿಲ್ಲಿ ವಿಶ್ವವಿದ್ಯಾಲಯದ ಆಧುನಿಕ ಭಾರತೀಯ ಭಾಷಾ ವಿಭಾಗದ ಪ್ರೊ. ಎಸ್.ಪಿ. ಶಿರಾಮಕರ್ ಮತ್ತು ಯೂನಿವಾರ್ತಾದ ಪತ್ರಕರ್ತ ಪ್ರಮೋದ ಮಜುಂದಾರ್ ಅವರು ಮರಾಠಿ

ಲೇಖನಗಳು ಮತ್ತು ಕಡತಗಳ ಅನುವಾದದಲ್ಲಿ ಕಾಲಕಾಲಕ್ಕೆ ನನಗೆ ನೆರವಿತ್ತಿದ್ದಾರೆ. ನಾನು ಇವರೆಲ್ಲರಿಗೂ ಮತ್ತು ನನಗೆ ಪ್ರತ್ಯಕ್ಷವಾಗಿ ಹಾಗೂ ಅಪ್ರತ್ಯಕ್ಷವಾಗಿ ಸಹಕಾರ ನೀಡಿ ಪ್ರೋತ್ಸಾಹಿಸಿದ ಇನ್ನೂ ಅನೇಕರಿಗೂ ಕೃತಜ್ಞನಾಗಿರುವೆ.

ನವದೆಹಲಿಯ ರಾಷ್ಟ್ರೀಯ ಅಭಿಲೇಖಾಗಾರ, ಮುಂಬಯಿ, ಭೋಪಾಲ, ಲಖನೌ, ಪಾಟ್ನಾ ಹಾಗೂ ಇತರ ಪ್ರಾಂತಗಳ ಅಭಿಲೇಖಾಗಾರಗಳು, ನೆಹರು ಸ್ಮೃತಿ-ಸಂಗ್ರಹಾಲಯ ಮತ್ತು ಪುಸ್ತಕಾಲಯ (ನವದೆಹಲಿ), ತಿಲಕ್ ಸ್ಮೃತಿ ಸಂಗ್ರಹಾಲಯ (ಪೂಣಾ), ರತನ್‌ಟಾಟಾ ಲೈಬ್ರರಿ, ಸಪ್ರೂ ಹೌಸ್ ಲೈಬ್ರರಿ, ಸಮಾಚಾರ ಮತ್ತು ಪ್ರಸಾರ ಸಚಿವ ಖಾತೆ ಹಾಗೂ ಅದರ ಪ್ರಕಾಶನ ವಿಭಾಗದ ನಿರ್ದೇಶಕರು ಮತ್ತು ಸಂಪಾದಕ ಮಂಡಳಿಯು ನೀಡಿದ ಸಕ್ರಿಯ ಸಹಕಾರಕ್ಕಾಗಿ ನಾನು ಅವರೆಲ್ಲರಿಗೂ ಆಭಾರಿ.

ಗ್ರಂಥವೊಂದರ ನಿಜವಾದ ಮೌಲ್ಯಮಾಪನ ಮಾಡುವವರು ಅದರ ಓದುಗರೇ. ಓದುಗರಿಂದ ರಚನಾತ್ಮಕ ಸಲಹೆಗಳು ಲಭಿಸುತ್ತಲೇ ಇರುತ್ತವೆ ಎಂಬ ವಿಶ್ವಾಸ ನನ್ನದು. ಅವುಗಳನ್ನು ಆಧರಿಸಿ ಈ ಗ್ರಂಥದ ಮುಂದಿನ ಸಂಸ್ಕರಣವನ್ನು ಇನ್ನಷ್ಟು ಉಪಯುಕ್ತಗೊಳಿಸಲು ನನಗೆ ಸಾಧ್ಯವಾಗಬಹುದೆಂಬ ಭರವಸೆಯನ್ನು ಇಟ್ಟುಕೊಂಡಿರುವೆ.

**– ರಾಕೇಶ್ ಸಿನ್ಹಾ**

# ಅನುಕ್ರಮ

# ತೇಜಸ್ವಿ ಬಾಲಕ

ಅಂದು 1889ರ ಏಪ್ರಿಲ್ ಒಂದನೇ ತಾರೀಖು. ಯುಗಾದಿಯ ದಿನ. ಹಿಂದೂ ಮನೆಗಳಲ್ಲಿ ಪರಂಪರಾಗತವಾಗಿ ನಡೆದು ಬಂದ ರೂಢಿಯಂತೆ ಭಗವಾ ಧ್ವಜವನ್ನು ಹಾರಿಸಲಾಗುವ ದಿನ ಅದು. ಮಹಾರಾಷ್ಟ್ರದಲ್ಲಿ ಯುಗಾದಿಯನ್ನು 'ಗುಡಿಪಡ್ವಾ' ಎನ್ನಲಾಗುತ್ತದೆ. ಹಿಂದೂಗಳ ಮನಸ್ಸು, ಅಂತಃಕರಣ ಮತ್ತು ವಿವೇಕ ಇವುಗಳಿಗೆ ಭಾರತೀಯ ಇತಿಹಾಸದ ಘಟನಾವಳಿ, ರಾಷ್ಟ್ರದ ಸ್ವಂತಿಕೆ, ಸಾಂಸ್ಕೃತಿಕ ಸಂಪ್ರದಾಯ, ನಮ್ಮ ವೀರರು ಹಾಗೂ ಪೂರ್ವಜರು ಸೃಷ್ಟಿಸಿದ ವೈಭವೋಪೇತ ಪರಂಪರೆಯ ಯಶಸ್ಸು, ಇವೆಲ್ಲವುಗಳ ಅರಿವನ್ನು ಉಂಟು ಮಾಡುವ ದಿನವೂ ಅದೇ. ಅಂದಿನ ಶುಭದಿನದಲ್ಲಿ ಯಾವುದೇ ಮನೆಯಲ್ಲಿ, ಶುಭ ಮುಹೂರ್ತವೊಂದರಲ್ಲಿ ಬಾಲಕನೊಬ್ಬ ಜನಿಸಿದಲ್ಲಿ, ಅದನ್ನು ದೇವರ ಮಹಾಕೃಪೆ ಎಂದೇ ತಿಳಿಯಲಾಗುತ್ತದೆ.

ಅಂದು ನಾಗಪುರದ ಓರ್ವ ಬಡ ಬ್ರಾಹ್ಮಣ ಬಲಿರಾಮ ಪಂತ ಹೆಡಗೇವಾರ್ ಅವರ ಕುಟುಂಬದಲ್ಲಿ ಅಂತಹ ಒಂದು ಆನಂದದ ಪ್ರಸಂಗ ಘಟಿಸಿತು. ಅವರ ಕುಟುಂಬದಲ್ಲಿ ಐದನೆಯ ಮಗುವಾಗಿ ಕಿರಿಯ (ಮೂರನೇ) ಪುತ್ರನ ಜನನ ಅಂದಾಯಿತು. ಮುಂದೆ ಇದೇ ಬಾಲಕನು ತನ್ನ ಕೆಲಸ ಮತ್ತು ವ್ಯಕ್ತಿತ್ವದಿಂದ, ಸಂಕಲ್ಪ, ಸಾಧನೆ ಮತ್ತು ಸಂಸ್ಕಾರಗಳಿಂದ ಹಾಗೂ ಶುದ್ಧ ಚಾರಿತ್ರ್ಯ ಮತ್ತು ಮೌಲಿಕ ಚಿಂತನೆಗಳಿಂದ, ಯುಗಾದಿಯ ತನ್ನ ಜನನದ ಈ ಯೋಗಾಯೋಗದ ಪ್ರಸಂಗವನ್ನು ಯಥಾರ್ಥವಾಗಿ ಪರಿವರ್ತಿಸಿದ. ಆ ಬಾಲಕ – ಕೇಶವನ ಜನನದಿಂದಾಗಿ ಈ ದಿನಕ್ಕೆ ನಿಜಕ್ಕೂ ಹೊಸದೊಂದು ಮಹತ್ವ ಲಭಿಸಿತು. ಆ ಮಗು ಮುಂದೆ ಡಾ. ಕೇಶವ ಬಲಿರಾಮ ಹೆಡಗೇವಾರರ ಹೆಸರಲ್ಲಿ ಓರ್ವ ಯಶಸ್ವಿ ಮಹಾಪುರುಷನಾಗಿ ಆಧುನಿಕ ಭಾರತದ ಅರುಣ ಕಿರಣನಾದ. ಸಾಮಾನ್ಯವಾಗಿ ಯಾವುದೇ ವ್ಯಕ್ತಿ ತಾನು ಮಾಡಿದ ಕಾರ್ಯಗಳಿಂದಾಗಿ ತನ್ನ ಜೀವಿತಾವಧಿಯಲ್ಲೇ ಯಶಸ್ವಿಯಾದಲ್ಲಿ, ಹಲವೊಮ್ಮೆ ಆತನ ಯಶೋಗಾಥೆ ಅವನ ಮರಣಾನಂತರ ಇತಿಹಾಸದ ಪುಟಗಳಲ್ಲಿ ಮುದುರಿ ಹೋಗಿ ಕಣ್ಮರೆಯಾಗಿ ಬಿಡುತ್ತದೆ. ಆದರೆ ಹೆಡಗೇವಾರರು ವರ್ತಮಾನದ ಹಾಗೂ ಭವಿಷ್ಯದ ಜತೆಯಲ್ಲೂ ಬದುಕನ್ನು ಹೆಣೆದುಕೊಂಡವರಾಗಿದ್ದರು. ಹೀಗಾಗಿಯೇ ಅವರ ಪ್ರಸಿದ್ಧಿ ಅವರ ಜೀವಿತಕಾಲಕ್ಕಿಂತಲೂ ಅವರ ನಿಧನದ ನಂತರವೇ ಹೆಚ್ಚಾಗಿ ಆಯಿತು. ಆದರ್ಶ ರಾಷ್ಟ್ರವಾದ ಮತ್ತು ಕರ್ಮಯೋಗ ಇವೆರಡನ್ನು ಅವ್ಯಕ್ತದಿಂದ ವ್ಯಕ್ತಗೊಳಿಸಲು ಅವರು ಯಾವ ಕಾರ್ಯ ಮಾಡಿದ್ದರೊ, ಅದು ಬಹುಶಃ ಭಾರತ ರಾಷ್ಟ್ರದ ಭಾಗ್ಯದ ಯೋಜನೆಯೇ ಆಯಿತೇನೊ. ರಾಷ್ಟ್ರದ ಹೊಸ ನಿರ್ಮಾಣ, ಹೊಸ

ಸಂಘಟನೆ, ಹೊಸ ರಚನೆ ಇವುಗಳಿಗೆ ಸಂಬಂಧಿಸಿ ಅವರು ನೀಡಿರುವ ಸಂದೇಶವು ಹಿಂದೆ ಅದೆಷ್ಟು ಪ್ರಾಸಂಗಿಕವಾಗಿತ್ತೋ, ಇಂದಿಗೂ ಅದು ಅಷ್ಟೇ ಪ್ರಖರವಾಗಿ ಉಳಿದಿದೆ ಮಾತ್ರವಲ್ಲ, ಭವಿಷ್ಯದಲ್ಲಿ ಅದು ಇನ್ನೂ ಹೆಚ್ಚು ಪ್ರಭಾವಶಾಲಿಯಾಗಿ ಹಾಗೂ ಸದಾ ಪ್ರಸ್ತುತವಾಗಿಯೇ ಉಳಿಯುವಂತಹದಾಗಿದೆ.

ಈ ಇತಿಹಾಸ ಪುರುಷನ ಬಾಲ್ಯ, ಕೌಟುಂಬಿಕ ಜೀವನ, ಕುಲ ಮತ್ತು ಅವರಿದ್ದ ಕಾಲದ ಸಾಮಾಜಿಕ ಆರ್ಥಿಕ ಸ್ಥಿತಿಗತಿ ಇವೆಲ್ಲವೂ ಅತಿ ರೋಚಕ ಹಾಗೂ ಮನಸ್ಸನ್ನು ಸ್ಪಂದಿಸುವಂತಹವೂ ಆದ ಅನೇಕ ಪ್ರಸಂಗಗಳಿಂದ ಕೂಡಿದೆ.

## ಹೆಡಗೇವಾರ್ ಕುಲ – ಪೂರ್ವೇತಿಹಾಸ

ಬಲಿರಾಮ ಪಂತರ ಕುಟುಂಬದವರು ಮೂಲತಃ ಆಂಧ್ರ ಪ್ರದೇಶಕ್ಕೆ ಸೇರಿದವರು. ಅವರು ನಿಜಾಮಾಬಾದ್ ಜಿಲ್ಲೆಯ ಬೋಧನ ತಾಲೂಕಿನ ಕಂದಕುರ್ತಿ ಗ್ರಾಮದವರು. ಈ ಗ್ರಾಮವಿರುವುದು ಗೋದಾವರಿ, ವಂಗರಾ ಮತ್ತು ಹರಿದ್ರಾ ಈ ಮೂರು ನದಿಗಳ ಸಂಗಮವಾಗುವಲ್ಲಿ. ಕೇಶವನ ಪೂರ್ವದ ಒಂಭತ್ತು ಪೀಳಿಗೆಗಳ, ಅವರ ಪೂರ್ವಜರಿಗೆ ಸಂಬಂಧಿಸಿದ ಮಾಹಿತಿಗಳು ಅಲ್ಲಿ ಇಡಲಾದ ದಾಖಲೆಗಳಲ್ಲಿ ಲಭ್ಯವಿವೆ. ವೇದಗಳ ಮತ್ತು ಶಾಸ್ತ್ರಗಳ ಅಧ್ಯಯನ ಅವರ ಕುಲಕಸುಬಾಗಿತ್ತು. ಈ ಕಾರಣಕ್ಕಾಗಿಯೇ ನೂರಾರು ವರ್ಷಗಳ ಮೊದಲೇ ಆದ್ಯ ಶಂಕರಾಚಾರ್ಯರು ಈ ಕುಲದ ವ್ಯಕ್ತಿಯೊಬ್ಬರನ್ನು 'ಧರ್ಮ ಸಂರಕ್ಷಕ' ಎಂದು ನಿಯುಕ್ತಿ ಮಾಡಿದ್ದರು. ಹೈದರಾಬಾದ್ ಸಂಸ್ಥಾನ ನಿಜಾಮನ ಆಳ್ವಿಕೆಗೊಳಗಾಗಿತ್ತು. ನಿಜಾಮನ ಧಾರ್ಮಿಕ – ಭೇದಭಾವದ ನೀತಿ ಒಂದು ಮಿತಿ ದಾಟಿ ಹೆಚ್ಚಾದಾಗ, ಸುಮಾರು 200–250 ವರ್ಷಗಳ ಹಿಂದೆ ಬಲಿರಾಮ ಪಂತರ ಮುತ್ತಜ್ಜ ನರಹರಿ ಶಾಸ್ತ್ರಿ ಅವರು ತಮ್ಮ ಧರ್ಮದ ರಕ್ಷಣೆ ಹಾಗೂ ಶಾಸ್ತ್ರ ಅಧ್ಯಯನದ ಪರಂಪರೆಯನ್ನು ಸುರಕ್ಷಿತವಾಗಿ ಮುಂದುವರಿಸುವ ಸಲುವಾಗಿ ಕಂದಕುರ್ತಿಯನ್ನು ಬಿಟ್ಟು ನಾಗಪುರಕ್ಕೆ ಬಂದು ನೆಲೆಸಿದ್ದರು. ಆಗ ಅಲ್ಲಿ ನಡೆಯುತ್ತಿದ್ದುದು ಭೋಂಸ್ಲೆಯವರ ಆಳ್ವಿಕೆ. ಹೆಡಗೇವಾರ್ ಕುಟುಂಬಕ್ಕೆ ಅಲ್ಲಿ ಸಾಮಾಜಿಕವಾದ ಗೌರವ ಮತ್ತು ಆಡಳಿತಗಾರರ ಸಂರಕ್ಷಣೆ ಇವೆರಡೂ ದೊರೆತವು. ಆದರೆ ಹತ್ತೊಂಭತ್ತನೆಯ ಶತಮಾನದ ನಡುವಿನಲ್ಲಿ ಕುಟುಂಬದ ಆರ್ಥಿಕ ಸ್ಥಿತಿ ಕೆಡಲು ಆರಂಭವಾಯಿತು. ಅದಕ್ಕೆ ಇದ್ದ ಕಾರಣಗಳು ಎರಡು. ಮೊದಲನೆಯದು ಇಸವಿ 1853ರಲ್ಲಿ ನಾಗಪುರದಲ್ಲಿ ಆಗ ಇದ್ದ ಭೋಂಸ್ಲೆಯವರ ಆಡಳಿತ ಪೂರಾ ಕೊನೆಗೊಂಡು ಬ್ರಿಟಿಷರದ್ದೇ ಆಳ್ವಿಕೆ ಆರಂಭವಾದುದು. ಈ ಸ್ಥಿತಿಯಲ್ಲಿ ಈ ಕುಟುಂಬದ ಮುಂದಿದ್ದ ದಾರಿ ಒಂದೇ – ಅದು ಪೌರೋಹಿತ್ಯದ ಕಸುಬು ನಡೆಸಿ ಬದುಕಬೇಕಾದುದು. ಪಿತ್ರಾರ್ಜಿತವಾಗಿ ಬಂದಿದ್ದ ಒಂದು ಮನೆ ಬಿಟ್ಟಲ್ಲಿ ಅವರ ಬಳಿ ಬೇರಾವ ಸಂಪತ್ತೂ ಇರಲಿಲ್ಲ. ಜತೆಯಲ್ಲಿ, ಮಧ್ಯಪ್ರಾಂತದಲ್ಲಿ ಮೇಲಿಂದ ಮೇಲೆ ಪುನರಾವೃತ್ತಿಯಾಗುತ್ತಿದ್ದ ಬರಗಾಲದಿಂದಾಗಿ ಜನಸಾಮಾನ್ಯರ ಆರ್ಥಿಕ ಸ್ಥಿತಿ ದಿನಗಳೆದಂತೆ ಕೆಡುತ್ತಲೇ ಮುಂದುವರಿದಿತ್ತು. ಇದರಲ್ಲಿ ಅತ್ಯಂತ ವಿಷಾದನೀಯ ಅನಿಸುತ್ತಿದ್ದುದು ಆಡಳಿತ ನಡೆಸುತ್ತಿದ್ದ ಬ್ರಿಟಿಷರಿಗೆ ಇವೆಲ್ಲದರ ಬಗ್ಗೆ ಇದ್ದ ಪೂರಾ ನಿರ್ಲಕ್ಷ್ಯ. ಇದರ ಪ್ರಭಾವ, ಹೆಡಗೇವಾರ್ ಸಂಸಾರದ ಆರ್ಥಿಕ ವ್ಯವಸ್ಥೆಯ ಮೇಲೂ ಆದದ್ದು ಸಹಜವೇ.

## ಪರೀಕ್ಷೆಯ ಸಮಯ

ಬಲಿರಾಮ ಪಂತರ ಕುಟುಂಬ ದೊಡ್ಡದು. ಮೂವರು ಗಂಡು ಮತ್ತು ಮೂವರು ಹೆಣ್ಣು ಮಕ್ಕಳು. ಕೇಶವನ ಇಬ್ಬರು ಅಣ್ಣಂದಿರು ಮಹಾದೇವ ಶಾಸ್ತ್ರಿ ಮತ್ತು ಸೀತಾರಾಮ ಪಂತ. ಸೋದರಿಯರು ಸರೂ, ರಾಜೂ ಮತ್ತು ರಂಗೂ. ಇವರಲ್ಲಿ ರಂಗೂ ಕೇಶವನಿಗಿಂತ ಚಿಕ್ಕವಳು. ಕೇಶವನ ತಾಯಿ ರೇವತಿ ಬಾಯಿ ಧರ್ಮನಿಷ್ಠರು ಮತ್ತು ಶಾಂತ ಸ್ವಭಾವದವರು. ತಾಯಿ ತಂದೆಯರ ಪ್ರೀತಿಯ ಮಡಿಲಲ್ಲಿ ಮಕ್ಕಳಿಗೆ ಬಡತನದ ಅರಿವು ಅಷ್ಟಾಗಿ ಆಗುತ್ತಿರಲಿಲ್ಲ. ಬಲಿರಾಮ ಪಂತರು ಸ್ವತಃ ಅವಿಶ್ರಾಂತವಾಗಿ ದುಡಿದು ಸಂಸಾರ ರಥವನ್ನು ಹೇಗೋ ನಡೆಸಿಕೊಂಡು ಹೋಗುತ್ತಿದ್ದರು. ತಾವು ಬದುಕಿದ್ದಷ್ಟು ದಿನ ಅವರು ಮಕ್ಕಳನ್ನು ಪೌರೋಹಿತ್ಯದ ಕೆಲಸದಲ್ಲಿ ತೊಡಗಿಸಲಿಲ್ಲ. ಹಿರಿಯ ಮಕ್ಕಳಿಬ್ಬರಿಗೂ ವೇದದ ಅಧ್ಯಯನದಲ್ಲೇ ತೊಡಗಿರಲು ಅವರು ಪ್ರೇರಣೆ ನೀಡಿದರು. ಕೇಶವನ ಹೆಸರೂ ಕೂಡ ಸಂಸ್ಕೃತ ಪಾಠಶಾಲೆಯಲ್ಲಿ ದಾಖಲಾಗಿತ್ತು. ಬಲಿರಾಮ ಪಂತರು ಪರಂಪರಾಗತ ಮೌಲ್ಯಗಳು, ಧಾರ್ಮಿಕ ರೀತಿ ರಿವಾಜುಗಳು ಮತ್ತು ಕಾರ್ಯವೈಖರಿ ಇವುಗಳಿಗೆ ಅತಿ ಹೆಚ್ಚಿನ ಮಹತ್ವ ನೀಡುತ್ತಿದ್ದರು.

ಆದರೆ ಈ ಪಾರಂಪರಿಕ ರೂಢಿಯ ಬಗ್ಗೆ ಅವರ ಕಿರಿಯ ಪುತ್ರ ಪ್ರಶ್ನೆ ಎತ್ತುವಂತಹ ಯಶಸ್ವಿ ಪ್ರಯತ್ನ ನಡೆಸಿದ. ಕೇಶವನ ಯೋಚನೆಯ ರೀತಿ ಅಸಾಮಾನ್ಯವಿತ್ತು. ತನ್ನ ಸೂಕ್ಷ್ಮ ಚಿಂತನೆ, ಚುರುಕುತನ ಮತ್ತು ಪ್ರತಿಭೆಗಳಿಂದಾಗಿ ಅವನು ಆಧುನಿಕ ಶಿಕ್ಷಣದಲ್ಲಿ ಒಲವು ತೋರಿದ; ಮತ್ತು ತಂದೆ ತಾಯಿ ಸಹ ಕಂದಾಚಾರದ ಹಾದಿ ಬಿಟ್ಟು, ಮನೆತನದ ಪರಂಪರೆಗೆ ಭಿನ್ನವಾಗಿದ್ದರೂ, ಆಗ ಮಧ್ಯಪ್ರಾಂತದಲ್ಲೆ ಸುವಿಖ್ಯಾತವಾಗಿದ್ದ ನಾಗಪುರದ ನೀಲ್ ಸಿಟಿ ಸ್ಕೂಲ್‌ನಲ್ಲಿ ಅವನನ್ನು ಶಿಕ್ಷಣಕ್ಕಾಗಿ ಸೇರಿಸಿದರು. ಕೇಶವನ ಮಟ್ಟಿಗೆ ಇದೊಂದು ಬಹು ದೊಡ್ಡ ಸಾಧನೆಯೇ ಎನ್ನಬಹುದು. ಅಷ್ಟಾದರೂ ವಿಧಿ ಕೇಶವನ ಖುಷಿಯ ಮೇಲೆ ತಣ್ಣೀರನ್ನೆರಚಿತು. 1902ರಲ್ಲಿ ನಾಗಪುರದಲ್ಲಿ ಪ್ಲೇಗ್‌ನ ಪೀಡೆ ಕಾಣಿಸಿಕೊಂಡಿತ್ತು. ಬಲಿರಾಮ ಪಂತರು ಸತ್ತವರ ದೇಹ ಸಂಸ್ಕಾರಕ್ಕಾಗಿ ಎಂದೂ ಹಿಂದೇಟು ಹಾಕದೆ ಸಹಕರಿಸುತ್ತಿದ್ದವರು. ಗಂಡ ಹೆಂಡತಿ ಇಬ್ಬರದೂ ವಿಶೇಷವಾದ ಸಾಮಾಜಿಕ ಕಾಳಜಿ ಮತ್ತು ತ್ಯಾಗದ ಮನೋಭಾವ. ಅವರಿಬ್ಬರ ಈ ಸಾಮಾಜಿಕ ಮನೋಭಾವದ ಪ್ರಭಾವ ಕೇಶವನ ಬದುಕಿನಲ್ಲೂ ಅಚ್ಚೊತ್ತಿದ್ದುದು ಸಹಜ. ಅವನ ಮುಂದಿನ ಜೀವನದಲ್ಲಿ ಅದು ಚೆನ್ನಾಗಿ ಬೆಳಕಿಗೆ ಬಂದಿದೆ. ಆದರೆ ಈ ನಡುವೆ ಸ್ವತಃ ಬಲಿರಾಮ ಪಂತ ದಂಪತಿಗಳಿಬ್ಬರೂ ಸಹ ಆ ಮಹಾಮಾರಿಗೆ ಒಂದೇ ದಿನ ಬಲಿಯಾಗಿ ತಮ್ಮ ಅಸು ನೀಗಿದರು. ಅತ್ಯಂತ ಸೂಕ್ಷ್ಮ ಸಂವೇದನಾಶೀಲ ಮನದ, ಇನ್ನೂ ಹದಿಮೂರರರ ಎಳೆಯ ವಯಸ್ಸಿನ ಕೇಶವ ತನ್ನ ತಂದೆ ತಾಯಿ ಇಬ್ಬರೂ ಒಂದೇ ದಿನದಂದು ಚಿತೆಯನ್ನೇರಿದುದನ್ನು ಕಾಣಬೇಕಾಯಿತು.

ಈ ವಜ್ರಾಘಾತದ ನೋವು ಕೇಶವನಿಗೆ ಮತ್ತೂ ಅಸಹನೀಯವಾಮುದು, ಅವರ ಕುಟುಂಬದಲ್ಲಿ ಸಂಪಾದನೆಗೆ ಯಾವುದೇ ಸ್ಥಿರವಾದ ವ್ಯವಸ್ಥೆಯೇ ಇಲ್ಲದ ಕಾರಣದಿಂದ. ವೇದಾಧ್ಯಯನ ಪೂರೈಸಿದ್ದ ಮಹಾದೇವ ಶಾಸ್ತ್ರಿಯ ಮೇಲೆ ಕುಟುಂಬದ ಹೊಣೆ ಏಕಾಯೇಕಿ ಬಂದಿತ್ತು. ತಂದೆಯ ಇಚ್ಛೆಯಂತೆ ಮಹಾದೇವ, ಸೋದರ ಸೀತಾರಾಮ ಪಂತನನ್ನು ವೇದಾಧ್ಯಯನಕ್ಕಾಗಿ ಇಂದೋರ್‌ಗೆ ಕಳುಹಿಸಿಕೊಟ್ಟ.

ವಿದ್ಯಾರ್ಥಿಗಳಿಗೆ ರಸವತ್ತಾಗಿ ಹೇಳುತ್ತಿದ್ದರು. ಶಿವಾಜಿಯ ಶೌರ್ಯ ಸಾಹಸದ ಪ್ರಸಂಗಗಳು, ಸಂಕಲ್ಪಶಕ್ತಿ ಮತ್ತು ರಾಷ್ಟ್ರೀಯ ದೃಷ್ಟಿ – ಇವುಗಳ ಬಲವಾದ ಪ್ರಭಾವ ಕೇಶವನ ಬದುಕಿನಲ್ಲೂ ಮೂಡಿತ್ತು. ಆ ದಿನಗಳಲ್ಲಿ ನಾಗಪುರದ ಸೀತಾಬರ್ಡಿ ಕೋಟೆಯ ಮೇಲೆ ಇಂಗ್ಲೆಂಡ್‌ನ ಯೂನಿಯನ್ ಜಾಕ್ ಧ್ವಜ ಹಾರಾಡುತ್ತಿದ್ದುದು ಕೇಶವನ ಎಳೆಯ ಮನಸ್ಸನ್ನು ಕುಟುಕಿ ನೋಯಿಸುತ್ತಿತ್ತು. ಒಂದು ದಿನ ಅವನು ತನ್ನ ಮಿತ್ರರನ್ನೆಲ್ಲ ಸೇರಿಸಿ, ಶಿವಾಜಿಯಂತೆ ಗೆರಿಲ್ಲಾ ಪದ್ಧತಿಯಿಂದ ಕೋಟೆಯನ್ನು ವಶಪಡಿಸಿಕೊಂಡುಬಿಡೋಣ ಎಂಬ ಯೋಜನೆಯೊಂದನ್ನು ರೂಪಿಸಿದ. ಅವರೆಲ್ಲರ ಜತೆಗೂಡಿ ತಮ್ಮ ಅಧ್ಯಾಪಕರಾದ ವಝೆ ಗುರೂಜಿಯವರ ಮನೆಯಿಂದ ಸುರಂಗ ತೋಡುವ ಕಾರ್ಯವನ್ನೂ ಆರಂಭಿಸಿದ! ಆ ವಯಸ್ಸಿನ ಪೋರರಿಗೆ ಸುಮಾರು ಎರಡು ಕಿಲೋಮೀಟರ್‌ನಷ್ಟು ಉದ್ದದ ಸುರಂಗ ತೋಡುವುದಂತೂ ಸಾಧ್ಯವೇ ಇಲ್ಲದ ಸಂಗತಿ. ವಿಷಯ ಏನೆಂದು ಗೊತ್ತಾದಾಗ ಹಿರಿಯರು ಮಕ್ಕಳಿಗೆ ಚೆನ್ನಾಗಿ ಬೈದು ಒಂದೆರಡು ಏಟು ಬಿಗಿದುದೂ ಆಯಿತು. ಕೇಶವನ ಚಿಕ್ಕಪ್ಪ ಮೋರೇಶ್ವರ (ಆಬಾಜಿ) ಹೆಡಗೇವಾರ್ ತಮ್ಮ ಸಂಸ್ಮರಣೆಯಲ್ಲಿ ಬರೆದಿರಿಸಿದುದು ಹೀಗಿದೆ:

"ಇನ್ನಿತರ ಬಾಲಕರೆಲ್ಲ ಕುಣಿದು ಕುಪ್ಪಳಿಸುತ್ತ ಆಟವಾಡುವುದರಲ್ಲಿ ಆನಂದ ಕಾಣುವಂತಹ ವಯಸ್ಸಿನಲ್ಲಿ ಈ ಮರಿ ಸೇನಾಪತಿ ಬ್ರಿಟಿಷರನ್ನು ಹೊರದಬ್ಬುವ ತನ್ನ ಉದ್ದೇಶವು ಪೂರ್ಣಗೊಳ್ಳುವ ಮೊದಲೇ ಕಿರಿಯ ಗೆರಿಲ್ಲಾ ದಳ ಸಹಿತ ಮನೆಯವರಿಂದಲೇ ಬಂಧನಕ್ಕೊಳಗಾದ."

ಒಂದು ಕಡೆ ಅವರ ಬಾಲ್ಯ ಹಲವು ವಿಧ ಕಷ್ಟಗಳಿಂದಲೇ ತುಂಬಿದ್ದು, ಇನ್ನೊಂದು ಕಡೆ ಅವರ ನಡವಳಿಕೆಯಲ್ಲಿ ಸಾಹಸದ ಮನೋವೃತ್ತಿ ಮತ್ತು ಆತ್ಮವಿಶ್ವಾಸ ತುಂಬಿಕೊಂಡಿದ್ದುದು ಕಾಣುತ್ತದೆ. ಕೇಶವನ ಮನೆತನಕ್ಕೆ ರಾಜಕೀಯ ಚಟುವಟಿಕೆಗಳಲ್ಲಿ ದೂರದಿಂದಲೂ ಸಂಬಂಧವಿದ್ದಂತಹ ಹಿನ್ನೆಲೆ ಇಲ್ಲ. ನಾಗಪುರದ ಅಂದಿನ ಸಾಮಾಜಿಕ ಹಾಗೂ ರಾಜಕೀಯ ಸನ್ನಿವೇಶಗಳೂ ಬ್ರಿಟಿಷ್ ವಿರೋಧದ ಅಲೆಯಿಂದ ಕೂಡಿತ್ತೆಂದೇನೂ ಅಲ್ಲ. ಅಷ್ಟಾದರೂ ಕೇಶವನಲ್ಲಿ ದೇಶಭಕ್ತಿಯ ಪ್ರೇರಣೆ ಚಿಗುರಿದ್ದುದು ಹೇಗೆ? ವಿದೇಶಿ ಆಡಳಿತದ ವಿರುದ್ಧ ತಿರಸ್ಕಾರದ ಹಾಗೂ ಬಂಡೇಳುವ ವಿಚಾರ ಮೊಳಕೆಯೊಡೆದದ್ದು ಹೇಗೆ? ಪ್ರಾಯಶಃ ಈ ವಿಧದ ಪ್ರಶ್ನೆಗಳಿಗೆ ಉತ್ತರವನ್ನು ಹೇಳಲು ಮನೋವಿಜ್ಞಾನಿಗಳಿಗೆ ಮಾತ್ರ ಸಾಧ್ಯವಾದೀತು.

# ದೇಶಭಕ್ತಿಯ ಮೊದಲ ಕಿರಣ

ಕಿರಿಯ ವಯಸ್ಸಿನಲ್ಲೇ ಕೇಶವ ಹೇಳುತ್ತಿದ್ದ ಪರಿಪಕ್ವವಾದ ವಿಚಾರಗಳು ಮತ್ತು ಅವನ ರಾಷ್ಟ್ರವಾದಿ ಆಕಾಂಕ್ಷೆಗಳು ಆಶ್ಚರ್ಯವನ್ನುಂಟು ಮಾಡುವಂತಹವು. ಆದರೆ ಅಣ್ಣ ಮಹಾದೇವ ಶಾಸ್ತ್ರಿಗೆ ಮಾತ್ರ ಅವನ ಚಟುವಟಿಕೆಗಳು ಅರ್ಥಹೀನ ಎನಿಸುತ್ತಿದ್ದವು. "ನಮ್ಮಂತಹ ಬಡವರಿಗೆ ಇವೆಲ್ಲ ನಮ್ಮ ಕಾಲುಗಳನ್ನು ನಾವೇ ಕೊಡಲಿಯಿಂದ ಕಡಿದುಕೊಂಡಂತೆ" ಎನ್ನುತ್ತಿದ್ದರು ಅವರು. ಆದರೆ ಬೆಳೆಯುತ್ತಿದ್ದ ಕೇಶವನಿಗೆ ತಾನೇನಾದರೂ ಮಾಡಿತೋರಿಸಬೇಕೆಂಬ ಮನಸ್ಸಿನ ತುಡಿತ ಹೆಚ್ಚುತ್ತಲೇ ಇತ್ತು. ಇಂತಹ ಕ್ರಿಯಾಶೀಲ ದೇಶಭಕ್ತಿಯ ಕಾರಣದಿಂದಲೇ ತನಗಿಂತ ಹಿರಿಯರಾದ ತರುಣ ರಾಷ್ಟ್ರವಾದಿಗಳ ಜತೆ ಅವನು ಸುಲಭವಾಗಿ ಬೆರೆಯುತ್ತಿದ್ದ.

ಅನ್ಯ ಕ್ರಾಂತಿಕಾರಿಗಳಂತೆ ಅವನ ದೇಶಭಕ್ತಿಯ ಯಾತ್ರೆಯೂ ಒಂದು ಅಖಾಡಾದಿಂದ ಆರಂಭವಾಯಿತು. ನಾಗಪುರದಲ್ಲಿ ರಾಷ್ಟ್ರವಾದಿ ಚಿಂತನೆಯುಳ್ಳವರ ನಡುವೆ ಅತ್ಯಂತ ಜನಪ್ರಿಯವಾಗಿದ್ದುದು ಶಿವರಾಮ ಗುರು ಅವರ ಅಖಾಡಾ. ಅದೊಂದು ಅಖಾಡಾ ಆಗಿರುವುದರ ಜತೆಯಲ್ಲೆ ರಾಷ್ಟ್ರವಾದಿ ತರುಣರಿಗೆ ಒಂದೆಡೆ ಸೇರುವ ಕೇಂದ್ರವೂ ಆಗಿತ್ತು. ಅಲ್ಲಿ ಕೇಶವನಿಗೆ ಹಿರಿಯ ಜತೆಗಾರರಾಗಿದ್ದವರ ಪೈಕಿ ಮೋರೂ ಅಭ್ಯಂಕರ, ಗಣೂ ಜೋಶಿ ಮತ್ತು ಹನುಮಂತ ನಾಯ್ಡು ಮೊದಲಾದವರು ಉಲ್ಲೇಖಿಸಬಹುದಾದ ಕೆಲವರು. ಇವರೆಲ್ಲರೂ ಈ ಅಖಾಡಕ್ಕೆ ನಿಯಮಿತವಾಗಿ ಬರುತ್ತಿದ್ದವರು. 1904ರಲ್ಲಿ ಡಾ. ಬಿ.ಎಸ್. ಮುಂಜೆ ದೃಷ್ಟಿ ಕೇಶವನ ಮೇಲೆ ಬಿದ್ದುದು ಸಹ ಈ ಅಖಾಡದಲ್ಲಿ. ಅವರು ಕ್ರಾಂತಿಕಾರಿ ವಿಚಾರಗಳ ಬಲವಾದ ಸಮರ್ಥಕರಾಗಿದ್ದುದಷ್ಟೇ ಅಲ್ಲ, ತಿಲಕರ ಪ್ರಮುಖ ಅನುಯಾಯಿಗಳ ಪೈಕಿಯೂ ಒಬ್ಬರಾಗಿದ್ದರು. ಕೇಶವನೂ ಕೂಡ ಅದೇ ವಿಚಾರದವನಾಗಿದ್ದು ತನ್ನ ಇಚ್ಛೆಯಿಂದ ಕ್ರಾಂತಿಮಾರ್ಗಕ್ಕೆ ಬದ್ಧನೂ ಆಗಿ ಮುಂಜೆ ಅವರಿಗೆ ಸಹಜವಾಗಿಯೇ ಅಚ್ಚುಮೆಚ್ಚಿನವನಾದ. ಇತ್ತ ಕೇಶವನಿಗೂ ಮುಂಜೆಯವರ ಸಹೃದಯತೆ ಮತ್ತು ನಿಸ್ವಾರ್ಥ ದೇಶಭಕ್ತಿ ಮೆಚ್ಚುಗೆಯಾದವು. ಕೇಶವನ ಸಾರ್ವಜನಿಕ ಜೀವನ ಆರಂಭವಾದುದೇ ಅಲ್ಲಿಂದ. ಆಗ ಮಧ್ಯಪ್ರಾಂತದಲ್ಲಿ ತಿಲಕಯುಗ ಇನ್ನೂ ಆರಂಭವಾಗಿತ್ತಷ್ಟೆ. ತಿಲಕರು ಮೊದಲ ಬಾರಿ ನಾಗಪುರಕ್ಕೆ ಬಂದಿದ್ದುದು 1891ರಲ್ಲಿ. ಅವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ಎರಡು ಪತ್ರಿಕೆಗಳು – 'ಕೇಸರಿ' ಮತ್ತು 'ಮರಾಠಾ" ಮಧ್ಯಪ್ರಾಂತದಲ್ಲಿ, ಅದರಲ್ಲೂ ವಿಶೇಷವಾಗಿ ನಾಗಪುರದಲ್ಲಿ ಆಗ ಅತ್ಯಂತ ಜನಪ್ರಿಯವಾಗಿದ್ದವು. ಅವೆರಡೂ ಪತ್ರಿಕೆಗಳು ರಾಷ್ಟ್ರವಾದಿ ವಿಚಾರವನ್ನು ವಿಶಾಲವಾಗಿ ಹರಡುವುದರಲ್ಲಿ ಮಹತ್ವದ ಕೊಡುಗೆ ನೀಡಿವೆ. 1902ರಲ್ಲಿ ತಿಲಕರು ನಾಗಪುರಕ್ಕೆ ಎರಡನೇ ಬಾರಿ ಬಂದಾಗ ಅವರನ್ನು ಪ್ರತ್ಯಕ್ಷ ಕಾಣುವ ಹಾಗೂ ಅವರ ಭಾಷಣ

ಕೇಳುವ ಸದವಕಾಶ ಕೇಶವನಿಗೂ ದೊರಕಿತು. ವಯಸ್ಸಿನಿಂದ ಚಿಕ್ಕವನಿರುವಾಗಲೇ 'ಕೇಸರಿ'ಯನ್ನು ತಪ್ಪದೇ ಓದುವಂತಹ ರೂಢಿ ಬೆಳೆಸಿಕೊಂಡಿದ್ದ ಕಾರಣದಿಂದಾಗಿ, ಅವನಿಗೆ ತಿಲಕರ ಬಗ್ಗೆ ಅತ್ಯಂತ ಶ್ರದ್ಧೆ ಗೌರವಗಳು ಮೊದಲೇ ಮೂಡಿದ್ದವು. ತಿಲಕರ ವಿಚಾರಶೈಲಿಗೆ ಪ್ರಮುಖವಾದ ಪ್ರತಿಪಾದಕರಾಗಿ ಇದ್ದವರು ನಾಗಪುರದಲ್ಲಿ ಡಾ. ಮುಂಜೆ ಮತ್ತು ಅಮರಾವತಿಯಲ್ಲಿ ಜಿ. ಜಿ. ಖಾಪರ್ಡೆ ಅವರು. ಕೇಶವನಲ್ಲಿ ಕ್ರಾಂತಿಕಾರಿ ಮನೋಭಾವ ಮೊಳಕೆಯೊಡೆದುದು ಇವರಿಬ್ಬರ ಪ್ರಭಾವದಿಂದಾಗಿ.

ತಿಲಕ್ ಯುಗದ ಮೊದಲು, ಎಂದರೆ ಹತ್ತೊಂಭತ್ತನೆಯ ಶತಮಾನದ ಕೊನೆಯವರೆಗೆ ನಾಗಪುರದ ರಾಜಕೀಯ ವಾತಾವರಣದಲ್ಲಿ ದೇಶಭಕ್ತಿಯು ಇನ್ನೂ ನಿದ್ರಾವಸ್ಥೆಯಲ್ಲೆ ಇದ್ದು ರಾಜಭಕ್ತಿಯೇ ಮೇಲ್ಗೈ ಹೊಂದಿತ್ತು. ಮಧ್ಯಪ್ರಾಂತವು ಭೀಕರ ಬರಗಾಲದಿಂದ ತತ್ತರಿಸುತ್ತಿದ್ದಾಗಲೂ ನಾಗಪುರದ ರಾಯ್ ಬಹಾದೂರ್‌ಗಳು ಮತ್ತು ಇನ್ನಿತರ ರಾಜಭಕ್ತರು ವಿದೇಶಿ ಮಹಾರಾಣಿ ಮತ್ತು ಮಹಾರಾಜರ ರಾಜ್ಯಾಭಿಷೇಕದ ಬೂಟಾಟಿಕೆಯ ಸಮಾರಂಭಗಳನ್ನು ನಡೆಸುವುದರಲ್ಲಿ ಧನ್ಯತೆ ಸವಿಯುತ್ತಿದ್ದರು. 1897ರಲ್ಲಿ ಭಯಾನಕ ಬರಗಾಲದ ಬವಣೆಯಲ್ಲಿದ್ದಾಗಲೂ ಮಧ್ಯಪ್ರಾಂತದಲ್ಲಿ ದಾಖಲೆ ಪ್ರಮಾಣದಲ್ಲಿ ತೆರಿಗೆ ವಸೂಲಿ ಮಾಡಿದುದಂತೂ ಅಂದಿನ ಇಂಗ್ಲಿಷ್ ಸರ್ಕಾರದ ರಾಕ್ಷಸಿ ಪ್ರವೃತ್ತಿಗೆ ಕನ್ನಡಿ ಹಿಡಿದಂತಿದೆ. ಆ ವರ್ಷ ವಸೂಲಾದ ಕಂದಾಯ ರೂ. 97,32,000, 1893–94ರಲ್ಲಿ ವಸೂಲಾದ ಕಂದಾಯದ ಹೋಲಿಕೆಯಲ್ಲಿ ರೂ. 22,04,000ದಷ್ಟು ಅಧಿಕವಾಗಿತ್ತು[1].

ನಾಗಪುರದ ರಾಜಕಾರಣದಲ್ಲಿ ಹೆಚ್ಚಿನ ಪ್ರಭಾವವಿದ್ದುದು ರಾಜಭಕ್ತ ಪರಿವಾರಗಳದ್ದೇ. ಅದರಲ್ಲೂ ಚಿಟಣವೀಸ್ ಮತ್ತು ಬೋಸ್ ಇವೆರಡೂ ಪರಿವಾರಗಳ ಹೆಸರುಗಳು ಈ ನಿಟ್ಟಿನಲ್ಲಿ ವಿಶೇಷವಾಗಿ ಉಲ್ಲೇಖಿಸಬೇಕಾದಂತಹದು. 1886ರಲ್ಲಿ ಕಾಂಗ್ರೆಸ್‌ನ ಎರಡನೇ ಅಖಿಲ ಭಾರತೀಯ ಅಧಿವೇಶನದ ನಂತರ ಮೊಟ್ಟಮೊದಲ ಬಾರಿಗೆ ಒಂದು ಹೊಸ ರಾಜಕೀಯ ಸಂಸ್ಥೆಯೊಂದು ಹುಟ್ಟಿಕೊಂಡಿತು. ಅದರ ಹೆಸರು 'ಲೋಕಸಭಾ' ಎಂದಿತ್ತು. ಇದರ ಸ್ಥಾಪನೆ ಆಗಿದ್ದುದು ಸಹ 'ಪೂಣಾ ಸಾರ್ವಜನಿಕ ಸಭಾ'ದ ರೀತಿಯಲ್ಲೆ. ಆದರೆ ಉದಾರವಾದಿ ಮತ್ತು ಸಂವಿಧಾನಬದ್ಧ ರೀತಿನೀತಿಗಳನ್ನು ಪ್ರತಿಪಾದಿಸುವಂತಹದಾಗಿದ್ದ ಸಂಸ್ಥೆ ಅದು.

ಇಪ್ಪತ್ತನೆಯ ಶತಮಾನದ ಅರುಣೋದಯದ ಜತೆಜತೆಯಲ್ಲಿ ತಿಲಕ್ ಯುಗವು ಕಾಲಿರಿಸಿದಾಗ ರಾಯ್‌ಬಹಾದೂರ್‌ಗಳ ರಾಜಕಾರಣವು ಕೊನೆಯುಸಿರು ಎಳೆಯತೊಡಗಿತು. ಇವೆರಡೂ ಪ್ರಕ್ರಿಯೆಗಳು ರಭಸವಾಗಿಯೇ ನಡೆದವು. ಹೀಗಾಗಿ ಭಾರತದ ರಾಷ್ಟ್ರೀಯ ಆಂದೋಳನದ ನಭೋಮಂಡಲದಲ್ಲಿ ಹೊಳೆಯುವ ಒಂದು ನಕ್ಷತ್ರವಾಗಿ ನಾಗಪುರವು ಕ್ರಮೇಣ ಮಿನುಗಲಾರಂಭಿಸಿತು.

ಮಹಾರಾಷ್ಟ್ರದಲ್ಲಿ ಸಣ್ಣವರಿರಲಿ, ದೊಡ್ಡವರಿರಲಿ, ಎಲ್ಲ ವಯಸ್ಸಿನವರನ್ನು ಛತ್ರಪತಿ ಶಿವಾಜಿಯ ಶೌರ್ಯ, ಸಾಹಸ ಮತ್ತು ರಾಷ್ಟ್ರವಾದದ ಯಶೋಗಾಥೆ ತುಂಬ ಪ್ರಭಾವಿತಗೊಳಿಸುತ್ತದೆ. ಕಥಾರೂಪದಲ್ಲಿ ಹೇಳಲಾಗುತ್ತಿದ್ದ ಶಿವಾಜಿಯ ಇತಿಹಾಸವನ್ನು ಕೇಶವ ಅತ್ಯಾಸಕ್ತಿಯಿಂದ ಕೇಳುತ್ತಿದ್ದ. ಒಂದು ಕಡೆ ಶಿವಾಜಿಯ ಕಥೆ ಅವನ ಮನದ

1. ಮಧ್ಯಪ್ರದೇಶ ಮೇ ಸ್ವತಂತ್ರತಾ ಆಂದೋಲನ್ ಕಾ ಇತಿಹಾಸ್, ಸಂಪಾದಕರು ಡಿ.ಪಿ. ಮಿಶ್ರಾ ಪು. 198

ಮೇಲೆ ಅಗಾಧ ಅಚ್ಚೊತ್ತಿತ್ತು. ಇನ್ನೊಂದು ಕಡೆ ಸಮರ್ಥ ರಾಮದಾಸರ 'ಶ್ಲೋಕ'ಗಳು ಅವನಿಗೆ ಅತ್ಯಂತ ಅಚ್ಚುಮೆಚ್ಚಿನವಾಗಿದ್ದವು. ಹೀಗಾಗಿ ಅವನು ಅದೆಲ್ಲವನ್ನೂ ಕಂಠಪಾಠ ಮಾಡಿಕೊಂಡಿದ್ದ.

ಡಾ. ಮುಂಜೆ ಅವರ ಸಹವಾಸದಲ್ಲಿ ಕೇಶವನ ಮನದಲ್ಲಿ ಕ್ರಾಂತಿಕಾರಿ ಮನೋವೃತ್ತಿ ಬೆಳೆಯತೊಡಗಿತು. 1904ರಲ್ಲಿ ತನ್ನ ಇನ್ನೂ ಕೆಲವು ಮಿತ್ರರ ಜೊತೆಗೂಡಿ ಅವನು ಬಾಂಬ್ ತಯಾರಿಸುವ ವಿಧಾನವನ್ನೂ ಕಲಿತಿದ್ದ. ಇದೆಲ್ಲವೂ ನಡೆಯುತ್ತಿದ್ದುದು ಡಾ. ಮುಂಜೆ ಅವರ ಮನೆಯಲ್ಲೇ. 1905ರಲ್ಲಿ ಬಂಗಾಳ ವಿಭಜನೆಯ ಧ್ವನಿ ನಾಗಪುರದಲ್ಲೂ ಕೇಳಿಸಿತು. ಆ ವರ್ಷ ಮುಂಜೆ ಅವರು 'ವಿದ್ಯಾರ್ಥಿ ಸಮಾಜ' ಎಂಬ ಒಂದು ಸಂಘಟನೆಯನ್ನು ಆರಂಭಿಸಿ ಅದಕ್ಕಾಗಿ ಶಾಲಾ ವಿದ್ಯಾರ್ಥಿಗಳನ್ನು ಸಂಘಟಿಸುವ ಹೊಣೆಯನ್ನು ಕೇಶವನಿಗೆ ವಹಿಸಿದರು. ಈ ಸಂಘಟನೆಗೆ ಅಧ್ಯಕ್ಷರಾಗಿದ್ದವರು ಭವಾನಿಶಂಕರ ನಿಯೋಗಿ ಅವರು. ಇಂತಹ ಸಾರ್ವಜನಿಕ ಚಟುವಟಿಕೆಗಳಲ್ಲಿ ತುಂಬುಮನದ ಉತ್ಸಾಹ ವಹಿಸುತ್ತಿದ್ದರೂ, ತಾನು ಮಾಡುವ ಕೆಲಸದಲ್ಲಿ ಯಾವುದೇ ಸ್ವಾರ್ಥದ ದೃಷ್ಟಿ ಇರದಿದ್ದ ಕಾರಣದಿಂದಾಗಿ ಕೇಶವ ದಿನಗಳೆದಂತೆ ಹೆಚ್ಚೆಚ್ಚು ಜನಪ್ರಿಯನಾಗುತ್ತಿದ್ದ. 'ತಿಲಕ್ ಪೈಸಾ ಫಂಡ್'ಗಾಗಿ ಚಂದಾ ಸಂಗ್ರಹಿಸಿದ ಸಮವಯಸ್ಕರ ಪೈಕಿ ಯಶಸ್ವಿಯಾಗಿದ್ದವನು ಕೇಶವನೊಬ್ಬನೇ. ಸ್ವದೇಶಿ ವಿಚಾರ ಮತ್ತು ಸ್ವದೇಶಿ ಉದ್ಯೋಗ ಇವುಗಳನ್ನು ಪ್ರೋತ್ಸಾಹಿಸುವ ಸಲುವಾಗಿ ಸಂಗ್ರಹಿಸಲಾಗಿದ್ದ ನಿಧಿ ಅದು. ನಾಗಪುರದಲ್ಲಿ ಸ್ವದೇಶಿ ವಸ್ತುಗಳ ಪ್ರಚಾರಕ್ಕಾಗಿ 'ಆರ್ಯ ಬಾಂಧವ ವೀಥಿಕಾ' ಎಂಬ ಸಂಸ್ಥೆಯೊಂದನ್ನು ಹುಟ್ಟುಹಾಕಲಾಗಿತ್ತು. ಇದರ ಸಂಸ್ಥಾಪಕರಲ್ಲಿ ಸುವಿಖ್ಯಾತ ಕ್ರಾಂತಿಕಾರಿ ಪಿ.ಎಸ್. ಖಾನಖೋಜೆ ಅವರೂ ಒಬ್ಬರು. ಈ ಸಂಸ್ಥೆಯ ಹೆಸರಲ್ಲಿ ಸ್ವದೇಶಿ ವಸ್ತುಗಳ ಪ್ರಚಾರಕ್ಕಾಗಿ ನಾಗಪುರದಲ್ಲಿನ ವಿವಿಧ ವಿದ್ಯಾಲಯಗಳಿಗೆ ಕೇಶವ ಹೋಗುತ್ತಿದ್ದ.

## ಬಾಂಧವ ಸಮಾಜ

ತನ್ನ ಹದಿನಾರನೇ ವಯಸ್ಸಿನಲ್ಲಿ ಕೇಶವ ಒಂದು ಚರ್ಚಾ ತಂಡವನ್ನು ಆರಂಭಿಸಿದ. ತನ್ನ ಸಮವಯಸ್ಕರ ಜತೆ ರಾಷ್ಟ್ರೀಯ ವಿದ್ಯಮಾನಗಳ ಕುರಿತು ಚರ್ಚಿಸಿ, ಅವರಲ್ಲಿ ಕ್ರಾಂತಿಕಾರಿ ಗುಣಗಳನ್ನು ಬೆಳೆಸುವ ಸಲುವಾಗಿ ಅವನು ಆರಂಭಿಸಿದ ಸಂಸ್ಥೆ ಅದು. ಅದಕ್ಕೆ ಅವನು ಇರಿಸಿದ್ದ ಹೆಸರು 'ದೇಶಬಂಧು ಸಮಾಜ'[1]. ಇದರ ಕೆಲಸದಲ್ಲಿ ಕೇಶವನ ಮಿತ್ರ ಭಾವೂಜಿ ಕಾವರೆಯ ಪಾತ್ರ ಗಣನೀಯವಾಗಿತ್ತು. ಇತ್ತ ವರ್ಧಾದಲ್ಲಿ 'ಬಾಂಧವ ಸಮಾಜ' ಎಂಬ ಸಂಸ್ಥೆಯೊಂದು ಖಾನಖೋಜೆಯ ಮುಂದಾಳುತನದಲ್ಲಿ ಆರಂಭವಾಗಿತ್ತು. ಅವನು ಶಿಕ್ಷಣಕ್ಕಾಗಿ ನೀಲ್‌ಸಿಟಿ ಶಾಲೆಗೆ ಬಂದು ಸೇರಿದಾಗ ಬಾಂಧವ ಸಮಾಜದ ಒಂದು ಶಾಖೆಯನ್ನು ನಾಗಪುರದಲ್ಲೂ ಆರಂಭಿಸಿದ. ಅದಕ್ಕೆ ಪೋಷಕವಾದ ವಾತಾವರಣವನ್ನು 'ದೇಶಬಂಧು ಸಮಾಜ' ಮೊದಲೇ ರೂಪಿಸಿತ್ತು. ಕೇಶವ ಸ್ವತಃ 'ಬಾಂಧವ ಸಮಾಜ'ದ ಕೆಲಸದಲ್ಲಿ ಕ್ರಿಯಾಶೀಲನಾದ. ಅದಕ್ಕೆ ಎರಡು ಶಾಖೆಗಳಿದ್ದವು. ಒಂದು ಗುಪ್ತರೀತಿಯ ಕೆಲಸಗಳಿಗಾಗಿ, ಇನ್ನೊಂದು ಎಲ್ಲರಿಗೂ ಕಾಣುವಂತೆ ಬಹಿರಂಗವಾಗಿ ಮಾಡುವ ಕೆಲಸಗಳಿಗಾಗಿ.

---

1. [illegible]

ಮೋರೊ ಪಂತ ಅಭ್ಯಂಕರ್, ಜಮನಾಲಾಲ್ ಬಜಾಜ್ ಹಾಗೂ ಭವಾನಿಶಂಕರ ನಿಯೋಗಿ ಮೊದಲಾದವರು ಬಹಿರಂಗ ಶಾಖೆಯಲ್ಲಿ ಕ್ರಿಯಾಶೀಲರಾಗಿದ್ದಲ್ಲಿ, ಖಾನಖೋಜೆ ಮತ್ತು ಕೇಶವ ರಹಸ್ಯ ಶಾಖೆಯಲ್ಲಿ ಮುಂದಾಳುಗಳಾಗಿದ್ದರು. ಈ ಉಪಶಾಖೆಗೆ ಇಡಲಾಗಿದ್ದ ಹೆಸರು 'ಸಮರ್ಥ ಶಿವಾಜಿ ಸಮಾಜ' ಎಂದು. ಅದಕ್ಕೆ ನಿಗದಿಯಾಗಿದ್ದ ಕೆಲಸವೆಂದರೆ ಶಸ್ತ್ರಗಳ ಸಂಗ್ರಹ ಮತ್ತು ಪ್ರಾಂತ್ಯದ ವಿಭಿನ್ನ ಭಾಗಗಳಲ್ಲಿ ಹರಡಿರುವ ಕ್ರಾಂತಿಕಾರಿ ಮನೋಭಾವದ ತರುಣರಲ್ಲಿ ಪರಸ್ಪರ ಸಮನ್ವಯವನ್ನು ಸಾಧಿಸುವುದು. ಅದರ ಸದಸ್ಯರಿಗೆ ಮರಾಠಿಯಲ್ಲಿ ಪ್ರತಿಜ್ಞೆ ನೀಡಲಾಗುತ್ತಿತ್ತು.

*'ಕರಿತೊ ಸನ್ಮಿತ್ರ ಕೊ ನಿಶ್ಚಯೆ*
*ಆಪಲ್ಯಾ ಪುಢೆ ಯಾ ಪಣಾ ।*
*ಅರ್ಪಣೀ ದೇಹಾಸ ದೇಶಕಾರ್ಯೆ ಮೀ*
*ಜೆ ರುಚೆ ಆಪಣಾ ॥'*

(ಎಲೈ ನನ್ನ ಮಿತ್ರ, ನಿನ್ನನ್ನು ಸಾಕ್ಷಿಯಾಗಿರಿಸಿ ನಾನು ಪ್ರತಿಜ್ಞೆ ಮಾಡುವುದೇ-ನೆಂದರೆ ನಮ್ಮ ಪ್ರಿಯ ಮಾತೃಭೂಮಿಯ ಸೇವೆಗಾಗಿ ನಾನು ನನ್ನ ಶರೀರ ಮತ್ತು ಆತ್ಮವನ್ನು ಸಮರ್ಪಿಸುತ್ತಿದ್ದೇನೆ)

ಈ ಸಮಾಜವು ಮಧ್ಯಪ್ರಾಂತದ ಹೊರಗೆ ಸಹ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸುವುದರೊಂದಿಗೆ ಜನಪ್ರಿಯವೂ ಆಗಿತ್ತು.

## ವಂದೇ ಮಾತರಂ ಆಂದೋಳನ

1901ನೇ ಇಸವಿ, ನಾಗಪುರ ನಗರಕ್ಕೆ ಮತ್ತು ವ್ಯಕ್ತಿಗತವಾಗಿ ಕೇಶವನಿಗೂ ಅತಿ ಮಹತ್ವದ್ದಾಯಿತು. ಆ ವರ್ಷ ಇಂಗ್ಲಿಷ್ ಸಾಮ್ರಾಜ್ಯದ ವಿರುದ್ಧ ಸಂಘಟಿತವಾದ ವಿದ್ಯಾರ್ಥಿಗಳ ಆಂದೋಳನವೊಂದು ನಾಗಪುರದಲ್ಲಿ ಆರಂಭವಾಯಿತು. ಅದರ ಎಲ್ಲ ಕಾರ್ಯಯೋಜನೆ ಮತ್ತು ಅದಕ್ಕೆ ಪ್ರತ್ಯಕ್ಷ ಕಾರ್ಯರೂಪ ನೀಡುವ ಕೆಲಸವನ್ನೂ ಸ್ವತಃ ಕೇಶವನೇ ನೋಡಿಕೊಳ್ಳುತ್ತಿದ್ದ.

ಬಂಗಾಳದ ವಿಭಜನೆಯ ನಂತರ ಬ್ರಿಟಿಷ್ ಸರ್ಕಾರದ ದಬ್ಬಾಳಿಕೆ ಇಡೀ ದೇಶದಲ್ಲೆ ಇನ್ನಷ್ಟು ಉಗ್ರಗೊಂಡಿತು. ಬಂಗಾಳದ ರಾಜಕೀಯ ಆಂದೋಳನದಲ್ಲಿ ವಿದ್ಯಾರ್ಥಿಗಳ ಸಕ್ರಿಯತೆ ಹೆಚ್ಚುತ್ತಿರುವುದನ್ನು ಕಂಡು ಸರ್ಕಾರವು ಬಂಗಾಳದಲ್ಲಿ ಒಂದು ವಿಶೇಷ ಆದೇಶವನ್ನು ಜಾರಿಗೊಳಿಸಿತು. ವಿದ್ಯಾರ್ಥಿಗಳು ರಾಜಕೀಯ ಚಟುವಟಿಕೆಗಳಲ್ಲಾಗಲಿ, ಆಂದೋಳನಗಳಲ್ಲಾಗಲಿ ಸಹಭಾಗಿಯಾಗುವಂತಿಲ್ಲ ಎಂಬ ನಿಷೇಧವನ್ನು ಹೇರಲಾಗಿದ್ದ ಆದೇಶ ಅದು. ಇದರ ಜತೆಯಲ್ಲಿ 'ವಂದೇ ಮಾತರಂ' ಮತ್ತು 'ತಿಲಕ್ ಮಹಾರಾಜ ಕೀ ಜಯ್' ಎಂಬ ಘೋಷಣೆಯು ಸಹ ಶಿಕ್ಷಾರ್ಹ ಅಪರಾಧವೆಂದು ಸಾರಲಾಯಿತು. 'ರಿಸ್ಲೆ ಸರ್ಕ್ಯುಲರ್' ಎಂಬ ಹೆಸರಲ್ಲಿ ಕುಖ್ಯಾತವಾಗಿದ್ದುದು ಇದೇ ಆದೇಶ. ಇದಕ್ಕೂ ಪೂರ್ವದಲ್ಲಿ ಪೂರ್ವ ಬಂಗಾಳದ ಸರ್ಕಾರವು ಇದೇ ವಿಧದ 'ಕಾರ್ಲೈಲ್ ಸರ್ಕ್ಯುಲರ್' ಎಂಬ ಹೆಸರಿನ ಆದೇಶವೊಂದನ್ನು ಜಾರಿಗೊಳಿಸಿತ್ತು. ಆ ದಿನಗಳಲ್ಲಿ ಮಹರ್ಷಿ ಅರವಿಂದರು 'ವಂದೇ ಮಾತರಂ' ಪತ್ರಿಕೆಯಲ್ಲಿ 'ಟ್ರೂ ಮೀನಿಂಗ್ ಆಫ್ ರಿಸ್ಲೆ ಸರ್ಕ್ಯುಲರ್' ಎಂಬ ಶೀರ್ಷಿಕೆಯಡಿಯಲ್ಲಿ ಬರೆದಿದ್ದ ಲೇಖನವೊಂದರಲ್ಲಿ, ಸರ್ಕಾರವು ನಮ್ಮ ತರುಣರನ್ನು ದೇಶಭಕ್ತಿಯ ವಾಹಿನಿಯಿಂದ, ಅಂತಹ ಭಾವನೆಗಳಿಂದ ಮತ್ತು

ಕಾರ್ಯಕ್ರಮಗಳಿಂದಲೂ ದೂರಗೊಳಿಸಲು ಇಚ್ಛಿಸುವಂತಿದೆ ಎಂದು ಸಾಮ್ರಾಜ್ಯವಾದಿ ಸರ್ಕಾರವನ್ನು ಕಟುವಾಗಿ ಟೀಕಿಸಿದ್ದರು. ಸರ್ಕಾರದ ಮುಖ್ಯ ಉದ್ದೇಶವಿರುವುದೇ ತನ್ನ ವಿರುದ್ಧವಾಗಿರುವ ಆಂದೋಲನವನ್ನು ಪೂರಾ ಹತ್ತಿಕ್ಕುವಂತಹದು ಎಂದು ಅವರು ಆರೋಪಿಸಿದ್ದರು.

ಮಧ್ಯಪ್ರಾಂತದಲ್ಲಿ ಈ ಸರ್ಕ್ಯುಲರ್‌ಗೆ ವಿರೋಧ ನಾಗಪುರದಿಂದ ಆರಂಭವಾಯಿತು. 1907ರ ಶಾಲಾ ವರ್ಷದ ಆರಂಭದಲ್ಲಿ ತಮ್ಮ ವರ್ಷಾವಧಿ ಕಾರ್ಯ ನಿರೀಕ್ಷಣೆಯ ಭಾಗವಾಗಿ ಶಾಲಾ ಪರೀಕ್ಷಕರೊಬ್ಬರು ನೀಲ್ ಸಿಟಿ ಹೈಸ್ಕೂಲ್‌ಗೆ ಬಂದಿದ್ದರು. ಅವರು ಕೇಶವನ ತರಗತಿಗೆ ಕಾಲಿಡುತ್ತಿದ್ದಂತೆಯೇ ಎಲ್ಲ ವಿದ್ಯಾರ್ಥಿಗಳೂ ಎದ್ದು ನಿಂತು ಒಕ್ಕೊರಲಿನಿಂದ 'ವಂದೇ ಮಾತರಂ' ಘೋಷಣೆಯೊಂದಿಗೆ ಅವರನ್ನು ಸ್ವಾಗತಿಸಿದರು. ತದನಂತರ ಪ್ರತಿಯೊಂದು ತರಗತಿಯಲ್ಲೂ ಇದರ ಪುನರಾವೃತ್ತಿಯಾಯಿತು. ಕೇಶವನ ಸಹಪಾಠಿಯಾಗಿದ್ದ ಗೋವಿಂದ ಗಣೇಶ ಆವಡೆ ಈ ಪ್ರಸಂಗದ ಕುರಿತು ಹೀಗೆ ಬರೆದಿದ್ದಾರೆ.

"ಕೋಪದಿಂದ ಕೆಂಡಾಮಂಡಲರಾಗಿದ್ದ ವಿದ್ಯಾಲಯದ ಪರೀಕ್ಷಕರು ಶಾಲೆಯ ಪ್ರಧಾನ ಅಧ್ಯಾಪಕ ಜನಾರ್ದನ ವಿನಾಯಕ ಓಕ್ ಅವರ ಕೊಠಡಿಗೆ ಧಾವಿಸಿ ಬೇರೇನೂ ಮಾತಾಡದೆ ತಮ್ಮ ಹ್ಯಾಟ್ ತೆಗೆದುಕೊಂಡು ನೇರವಾಗಿ ಹೊರಟೇಹೋದರು. ಅದಾದ ತರುವಾಯ ಅವರು ವಿದ್ಯಾಲಯದ ನಿರ್ವಾಹಕ ಸಮಿತಿಯ ಅಧ್ಯಕ್ಷರಾದ ಸರ್ ಬಿಪಿನ್ ಕೃಷ್ಣ ಬೋಸ್ ಅವರಿಗೆ ಪತ್ರ ಬರೆದು, ತಪ್ಪಿತಸ್ಥ ವಿದ್ಯಾರ್ಥಿಗಳನ್ನು ಅವರ ಅಶಿಸ್ತಿಗಾಗಿ ಅದೇ ಕ್ಷಣದಲ್ಲಿ ಶಿಕ್ಷಿಸಬೇಕೆಂದು ಆದೇಶಿಸಿದರು."[3]

ಡಾ. ಮುಂಜೆ ಮೊದಲಾದ ನಾಗಪುರದ ಹಿರಿಯ ರಾಷ್ಟ್ರವಾದಿ ನಾಯಕರಿಗೂ ಅಂದು ಇಂತಹ ಘಟನೆಯೊಂದು ನಡೆಯಬಹುದೆಂಬ ಪೂರ್ವಾನುಮಾನವಿರಲಿಲ್ಲ. ಕೇಶವ ಎಸೆದ ಒಂದು ಸಣ್ಣ ಕಿಡಿಯಿಂದಾಗಿ ಸಂಪೂರ್ಣ ಪ್ರಾಂತದಲ್ಲಿ ಸಾಮ್ರಾಜ್ಯವಾದ ವಿರೋಧದ ಜ್ವಾಲೆ ಭುಗಿಲೇಳಬಹುದೆಂದು ಯಾರೂ ಊಹಿಸಿರಲಿಲ್ಲ. ಈ ಘಟನೆಯ ನಂತರ ವಾತಾವರಣವು ಬಿಸಿಯೇರಿತು. ಮಾರನೇ ದಿನವೇ ಬೋಸ್ ಅವರು ವಿದ್ಯಾಲಯದ ವಿದ್ಯಾರ್ಥಿಗಳನ್ನೆಲ್ಲ ಸೇರಿಸಿ ಎಲ್ಲರೂ ಕೂಡಿ ಕ್ಷಮೆ ಕೇಳಬೇಕೆಂದು ಬುದ್ಧಿವಾದವನ್ನೇನೋ ಉಪದೇಶಿಸಿದರು. "ನೋಡಿರಪ್ಪ, ನಾನು ಸ್ವತಃ ಪ್ರತಿನಿತ್ಯ ರಾತ್ರಿ ಮಲಗುವ ಮುನ್ನ 'ವಂದೇ ಮಾತರಂ' ಗೀತೆ ಹಾಡುತ್ತೇನೆ. ಆದರೆ ಅದನ್ನು ಹಾಡಲು ಶಾಲೆ ಸರಿಯಾದ ಸ್ಥಾನವಲ್ಲ. ಅದಕ್ಕಾಗಿ ನೀವೆಲ್ಲರೂ ತಪ್ಪು ಒಪ್ಪಿಕೊಂಡು ಕ್ಷಮೆ ಕೇಳಿಕೊಳ್ಳಿ" ಎಂದರು. ಅವರ ಭಾಷಣ ಮುಗಿದುದೇ ತಡ, ಕೇಶವನ ಮುಂದಾಳುತನದಲ್ಲಿ ಅವನ ತರಗತಿಯ ವಿದ್ಯಾರ್ಥಿಗಳೆಲ್ಲರೂ ಕೂಡಿ ಇನ್ನೂ ಏರಿದ ಸ್ವರದಲ್ಲಿ 'ವಂದೇ ಮಾತರಂ'ನ ಘೋಷಣೆಯನ್ನು ಹಾಕಿದರು. ಕ್ರೋಧತಪ್ತರಾದ ಶ್ರೀ ಬೋಸ್ ಅವರು ಕೇಶವನ ತರಗತಿಯ ಎಲ್ಲ ವಿದ್ಯಾರ್ಥಿಗಳನ್ನು ಶಾಲೆಯಿಂದ ಹೊರಹಾಕಿರುವುದಾಗಿ ಆದೇಶ ಪತ್ರವನ್ನು ಜಾರಿಗೊಳಿಸಿದರು.[4]

---

3 ಗೋವಿಂದ ಗಣೇಶ ಆವಡೆ, ಮಹಾರಾಷ್ಟ್ರ 28 ಜುಲೈ 1940 ಪು. 12

4 ಗೋವಿಂದ ಗಣೇಶ ಆವಡೆ, ಮಹಾರಾಷ್ಟ್ರ 28 ಜುಲೈ 1940 ಪು. 12

ವಿದ್ಯಾರ್ಥಿಗಳಲ್ಲಿ ಇಷ್ಟೊಂದು ಬಲವಾಗಿ ರಾಜಕೀಯ ಧ್ರುವೀಕರಣವಾಗಬಹುದೆಂದು ಶಾಲೆಯ ಅಧಿಕಾರಿಗಳಿಗೂ ಕಲ್ಪನೆಯಿರಲಿಲ್ಲ. ಕೇಶವ ಮಾಡಿದ್ದ ಈ ಅದ್ಭುತ ಯೋಜನೆಯು ಆರಂಭದಿಂದ ಕೊನೆ ತನಕವೂ ಅಷ್ಟು ರಹಸ್ಯವಾಗಿಯೇ ಇತ್ತು. ವಿದ್ಯಾಲಯದ ಆಡಳಿತ ಸಮಿತಿಯ ನಿರ್ಣಯದ ವಿರುದ್ಧ ಶಾಲೆಯ ಎರಡು ಸಾವಿರ ವಿದ್ಯಾರ್ಥಿಗಳು ಅನಿರ್ದಿಷ್ಟಕಾಲದ ಹರತಾಳ ಆಚರಿಸಿದರು. ಈ ಹರತಾಳ ಎರಡು ತಿಂಗಳ ಕಾಲ ಮುಂದುವರಿಯಿತು.[5] ನಾಗಪುರದ ಮೊರಿಸ್ ಕಾಲೇಜಿನ ವಿದ್ಯಾರ್ಥಿಗಳೂ ಅದರಲ್ಲಿ ಸಹಭಾಗಿಗಳಾದರು. ಕೇಶವನ ಮುಂದಾಳುತನದಲ್ಲಿ ಮೆರವಣಿಗೆ, ಪ್ರಭಾತ್ ಫೇರಿ ಇತ್ಯಾದಿ ನಾಗಪುರದಲ್ಲಿ ಪ್ರತಿನಿತ್ಯದ ಸಂಗತಿಗಳಾದವು. ಕಟ್ಟಕಡೆಯಲ್ಲಿ ಅಚ್ಯುತರಾವ್ ಕೋಲ್ಹಟ್‌ಕರ್ ಅವರ ಮಧ್ಯಸ್ಥಿಕೆಯಿಂದಾಗಿ ಶಾಲೆಯೇನೋ ಪುನರಾರಂಭವಾಯಿತು. ವಿದ್ಯಾರ್ಥಿಗಳಿಗೆ ಸಾಕಷ್ಟು ತಿಳಿವಳಿಕೆ ನೀಡಿ ಒಪ್ಪಿಸಿದ ನಂತರ, ತಂದೆ ತಾಯಿ ಮತ್ತು ಅಧ್ಯಾಪಕರ ಒತ್ತಡಕ್ಕೊಳಗಾಗಿ ಅವರು ಕ್ಷಮೆ ಯಾಚನೆಗೆ ಹೂಂಗುಟ್ಟಿದರು. ಕೊನೆಗೆ ಇದರಲ್ಲಿ ಕೇಶವನು ಏಕಾಂಗಿಯಾಗಿ ಉಳಿದರೂ ಅದಕ್ಕೆ ಒಪ್ಪಲಿಲ್ಲ.

ಅವನು ತುಂಬಿದ್ದ ಸಭೆಯಲ್ಲಿ "ತಾಯಿನಾಡಿನ ಆರಾಧನೆ ಮಾಡುವುದು ಅಪರಾಧವೆಂದಾದಲ್ಲಿ, ಅಂತಹ ಅಪರಾಧವನ್ನು ಒಂದಲ್ಲ, ಲೆಕ್ಕವೇ ಇಲ್ಲದಷ್ಟು ಬಾರಿ ನಾನು ಪುನಃ ಪುನಃ ಮಾಡುವೆ. ಮಾತ್ರವಲ್ಲ ಅದಕ್ಕಾಗಿ ಲಭಿಸಬಹುದಾದ ಶಿಕ್ಷೆಯನ್ನೂ ಸಂತೋಷದಿಂದಲೇ ಸ್ವೀಕರಿಸುವೆ"[6] ಎಂದ.

ಪರಿಣಾಮವಾಗಿ ಕೇಶವ ಸೆಪ್ಟೆಂಬರ್‌ನಲ್ಲಿ ವಿದ್ಯಾಲಯದಿಂದ ವಜಾ ಶಿಕ್ಷೆಗೆ ಒಳಗಾದ.[7] ತನ್ನ ದೇಶಭಕ್ತಿಗೆ ಅದು ತನಗೆ ದೊರೆತ ಪ್ರಸಾದವೆಂದು ಬಗೆದು ಅದನ್ನು ಸಂತೋಷದಿಂದಲೇ ಅವನು ಸ್ವೀಕರಿಸಿದ. ನಾಗಪುರದಲ್ಲಿ ಓರ್ವ ಜನಪ್ರಿಯ ಯುವ ನೇತಾರನಾಗಿ ಅವನ ಖ್ಯಾತಿ ಸ್ಥಾಪಿತವಾಯಿತು. ಈ ಪ್ರಸಂಗದ ವಿರುದ್ಧ ತಮ್ಮ ಅಸಮಾಧಾನದ ಸಂಕೇತವಾಗಿ ನಾಗಪುರದ ಸರ್ಕಾರಿ ಅಧಿಕಾರಿಗಳು, ಐರೋಪ್ಯ ಜನಗಳು ಮತ್ತು ರಾಜನಿಷ್ಠ ವ್ಯಕ್ತಿಗಳನ್ನು ವಿದ್ಯಾರ್ಥಿಗಳು 'ವಂದೇ ಮಾತರಂ' ಘೋಷಣೆಯೊಂದಿಗೆ ಚುಡಾಯಿಸಲು ಮತ್ತು ಗೇಲಿ ಮಾಡಲು ಆರಂಭಿಸಿದರು. ಮಧ್ಯಪ್ರಾಂತದ ಮುಖ್ಯ ಸರ್ಕಾರಿ ಅಧಿಕಾರಿ, ಸರ್ ರೆಜಿನಾಲ್ಡ್ ಕ್ರಾಡೆಕ್ ಆಗಿನ ಪೊಲೀಸ್ ಮಹಾ ನಿರೀಕ್ಷಕ ಸಿ. ಆರ್. ಕ್ಲೀವ್‌ಲ್ಯಾಂಡ್‌ಗೆ ಬರೆದ ಪತ್ರದಲ್ಲಿ ನಾಗಪುರದ ವಿದ್ಯಮಾನಗಳ ಬಗ್ಗೆ ತೀವ್ರ ಚಿಂತೆಯನ್ನು ವ್ಯಕ್ತಪಡಿಸಿದ್ದರು. "ನಾಗಪುರದ ವಿದ್ಯಾರ್ಥಿಗಳ ಕೀಟಲೆಯನ್ನು ಪೊಲೀಸರು ನಿಭಾಯಿಸುತ್ತಿರುವ ರೀತಿಯಲ್ಲಿ ನನಗೆ ಸ್ವಲ್ಪವೂ ಸಮಾಧಾನವಿಲ್ಲ. ಪರಿಸ್ಥಿತಿ ಇದೇ ರೀತಿಯಲ್ಲಿ ಮುಂದುವರಿದುದೇ ಆದಲ್ಲಿ, ನಮ್ಮೆಲ್ಲ ಗೌರವಾನ್ವಿತ ವ್ಯಕ್ತಿಗಳು ಭಯಭೀತಿಯಿಂದ ನಾಗಪುರದಿಂದ ಓಡಿ ಹೋದಾರು" ಎಂದು ತನ್ನ ಪತ್ರದಲ್ಲಿ ಅವರು ಬರೆದಿದ್ದಾರೆ.[8]

---

5. ಗೋವಿಂದ ಗಣೇಶ ಆವದೆ, ಮಹಾರಾಷ್ಟ್ರ 28 ಜುಲೈ 1940 ಪು. 12
6. ಗೋವಿಂದ ಗಣೇಶ ಆವದೆ, ಮಹಾರಾಷ್ಟ್ರ 28 ಜುಲೈ 1940 ಪು. 12
7. ಪೊಲಿಟಿಕಲ್ ಕ್ರಿಮಿನಲ್ಸ್ 'ಹೂ ಈಸ್ ಹೂ' – ಆಫೀಸ್ ಆಫ್ ದಿ ಡೈರೆಕ್ಟರ್ ಕ್ರಿಮಿನಲ್ ಇಂಟೆಲಿಜೆನ್ಸ್ ಜನವರಿ 1914, ಪು. 97 ಇಂಡಿಯ ಹೌಸ್, ಲಂಡನ್ 'ಡಾ. ಹೆಡಗೇವಾರ್ ಯಾಂಚಾ ಚರಿತ್ರ ವ ಕಾರ್ಯ' ಲ.ವ. ಪರಾಂಜಪೆ, ಕೇಸರಿ, ಜುಲೈ 5, 1940 ಪು.5.
8. ಮಧ್ಯಪ್ರದೇಶ ಮೇ ಸ್ವತಂತ್ರತಾ ಆಂದೋಲನ್ ಕಾ ಇತಿಹಾಸ್, ಪು. 214–215

## ಮೊದಲ ಬಂಧನ

ಒಟ್ಟಿನಲ್ಲಿ ಕೇಶವನ ಶಿಕ್ಷಣದಲ್ಲಿ ನಡುವಿನ ಒಂದು ವರ್ಷ ನಷ್ಟವಾಯಿತು. ಆದರೆ ಅವನ ಪಾಲಿಗೆ ಕ್ರಾಂತಿಯ ಕಲ್ಪನೆ ಮತ್ತು ಅಂತಹ ಚಟುವಟಿಕೆಗಳದ್ದೇ ನಿಜವಾದ ಕಲಿಕೆಯಾಗಿತ್ತು. ಅವನು ನಾಗಪುರದಿಂದ ಆಗಾಗ ರಾಮಪಾಯಲಿಯಲ್ಲಿದ್ದ ಅವನ ಚಿಕ್ಕಪ್ಪ ಆಬಾಜಿ ಹೆಡಗೇವಾರರಲ್ಲಿಗೆ ಹೋಗುತ್ತಿದ್ದ. ಆಬಾಜಿಯವರು ಅಲ್ಲಿ ರೆವೆನ್ಯೂ ಇನ್ಸ್‌ಪೆಕ್ಟರ್ ಆಗಿದ್ದರು. ಕೇಶವನಿಗೆ ತನ್ನ ಸಮವಯಸ್ಕರನ್ನು ಸಂಘಟಿಸಿ ಪ್ರಭಾವಿತಗೊಳಿಸುವಂತಹ ಅದ್ಭುತ ಸಾಮರ್ಥ್ಯವಿತ್ತು. ಹೀಗಾಗಿ ರಾಮಪಾಯಲಿಯಲ್ಲೂ ಅವನಿಗೆ ಸಹಕಾರಿಗಳ ಉತ್ತಮ ತಂಡವೊಂದು ಲಭಿಸಿತು. ಇಸವಿ 1908ರ ಒಂದು ಪ್ರಸಂಗ. ಆ ವರ್ಷ ಆಗಸ್ಟ್‌ನಲ್ಲಿ ಕೇಶವ ರಾಮಪಾಯಲಿಯಲ್ಲಿನ ಪೊಲೀಸ್ ಚೌಕಿಯ ಮೇಲೆ ಒಂದು ಬಾಂಬ್ ಎಸೆದ. ಅದು ಸಮೀಪದಲ್ಲಿ ಇದ್ದ ಒಂದು ಕೆರೆಯ ಬಳಿ ಸ್ಫೋಟಿಸಿತು.[9] ಆದರೆ ಖಚಿತ ಸಾಕ್ಷಿಗಳು ದೊರೆಯದ ಕಾರಣದಿಂದಾಗಿ ಅವನ ಮೇಲೆ ಯಾವುದೇ ಮೊಕದ್ದಮೆ ಹೂಡಲು ಸಾಧ್ಯವಾಗಲಿಲ್ಲ. ಅದಾದ ಎರಡು ತಿಂಗಳ ನಂತರ ದಸರಾ ಹಬ್ಬ ಬಂತು. ಈ ಹಬ್ಬದಲ್ಲಿ ಊರಾಚೆ ಗಡಿಯಲ್ಲಿ ಸೀಮೋಲ್ಲಂಘನದ ಕಾರ್ಯಕ್ರಮ ನಡೆಸುವುದು ಅಲ್ಲಿ ಬೆಳೆದು ಬಂದಿದ್ದ ರೂಢಿ. ಅದರಲ್ಲಿ ಊರಿನ ಹಿರಿಯರು, ಕಿರಿಯರು, ಪುರುಷರು ಮತ್ತು ಮಹಿಳೆಯರು ಎಲ್ಲರೂ ಪಾಲ್ಗೊಳ್ಳುತ್ತಿದ್ದರು. ಅಂದು ರಾವಣನ ಗೊಂಬೆ ದಹನವೇ ಉತ್ಸವದ ವಿಶೇಷತೆ. ಆದರೆ ಆ ವರ್ಷ ಸೀಮೋಲ್ಲಂಘನಕ್ಕೆ ಇನ್ನೊಂದು ಹೊಸ ರೂಪ ಬಂತು. ಕೇಶವನ ಸಹಕಾರಿಗಳ ತಂಡ ಅಂದು ಪೂರ್ತಿ ತಯಾರಾಗಿ ಬಂದಿತ್ತು. ಅವರೆಲ್ಲ ಕೂಡಿ ಅಂದಿನ ವಿಶಾಲ ಸಭೆಯಲ್ಲಿ ಭಾಷಣ ಮಾಡುವಂತೆ ಕೇಶವನನ್ನು ಆಗ್ರಹಿಸಿದರು. ಸರಿ, ಕೇಶವನಿಗೆ ಇದಕ್ಕಿಂತ ಸೊಗಸಾದ ಸದವಕಾಶ ಇನ್ನೆಲ್ಲಿ ಸಿಗಬೇಕು? ಅಂದಿನ ಧಾರ್ಮಿಕ ಕಾರ್ಯಕ್ರಮದ ವೇದಿಕೆಯನ್ನು ಅವನು ರಾಷ್ಟ್ರೀಯ ಜಾಗೃತಿಯ ಅತ್ಯುಪಯುಕ್ತ ಸಾಧನವನ್ನಾಗಿ ಮಾರ್ಪಡಿಸಿಕೊಂಡ. ತುಂಬ ರಾಷ್ಟ್ರಭಾವದಿಂದ ಕೂಡಿದ್ದ ಅವನ ಉತ್ಕಟ ಭಾಷೆಯ ಭಾಷಣ ಕೇಳ ಬಂದ ಜನರ ಭಾವನೆಗಳೂ ಕೆರಳಿದವು. ಆ ವರ್ಷದ ಸೀಮೋಲ್ಲಂಘನಕ್ಕೆ ಅವನು ಹೊಸದೊಂದು ದಿಕ್ಕು ತೋರಿದ.

"ನಾವಿಂದು ಅನೇಕ ವಿಧಗಳ ಗಡಿಗಳೊಳಗೆ ಬಂಧಿತರಾಗಿದ್ದೇವೆ. ಅವುಗಳನ್ನು ದಾಟಿ ಮುಂದೆ ಹೋಗಬೇಕಾದುದೇ ನಾವೀಗ ನಿರ್ವಹಿಸಬೇಕಾದ ಕರ್ತವ್ಯವಾಗಿದೆ. ನಾವು ಪರತಂತ್ರರಾಗಿರುವುದೇ ನಮ್ಮ ಮನಸ್ಸಿಗೆ ತುಂಬ ನೋವು ನೀಡುವಂತಹ ಹಾಗೂ ಅತಿ ನಾಚಿಕೆಗೇಡಿನ ಸಂಗತಿಯಾಗಿದೆ. ಗುಲಾಮತನಕ್ಕಿಂತ ಮಿಗಿಲಾದ ಅಧರ್ಮ ಇನ್ನೊಂದಿಲ್ಲ. ಪಾಪಿಗಳು ಮತ್ತು ಪರಕೀಯರಾಗಿರುವವರಿಂದ ನಡೆಯುವ ಅನ್ಯಾಯಗಳನ್ನು ಸಹಿಸಿಕೊಂಡಿರುವುದು ಸಹ ಇನ್ನೊಂದು ವಿಧದಲ್ಲಿ ಪಾಪವೇ. ಹೀಗಾಗಿ ವಿದೇಶಿ ರಾಜ್ಯದ ವಿರುದ್ಧ ಬಂಡೇಳುವುದು ಮತ್ತು ಅದನ್ನು ಸಪ್ತಸಾಗರದಾಚೆ ಅಟ್ಟಿ ಬಿಡುವುದೇ ಇಂದಿನ ಸನ್ನಿವೇಶದಲ್ಲಿ ಸೀಮೋಲ್ಲಂಘನದ ನಿಜ ಅರ್ಥವಾಗಿದೆ. ಇಂದಿನ ಮಟ್ಟಿಗೆ ರಾವಣವಧೆಯ ಅರ್ಥವೆಂದರೆ, ಬ್ರಿಟಿಷ ಆಳ್ವಿಕೆಯನ್ನು ಸಮಾಪ್ತಿಗೊಳಿಸುವುದಲ್ಲದೆ ಬೇರೇನೂ ಅಲ್ಲ."

---

9. ಪೊಲಿಟಿಕಲ್ ಕ್ರಿಮಿನಲ್ಸ್ ಹೂ ಈಸ್ ಹೂ, ಪು.97

ಭಾಷಣದ ನಂತರ ಸಭೆಯಲ್ಲಿದ್ದವರೆಲ್ಲರ ಕಂಠಗಳಿಂದ 'ವಂದೇ ಮಾತರಂ'ನ ಸಿಂಹಗರ್ಜನೆ ಮೊಳಗಿತು. ಪೊಲೀಸರಿಗೆ ಮತ್ತು ಆಡಳಿತದ ಅಧಿಕಾರಿಗಳಿಗೆ ಈ ಸುದ್ದಿ ಗೊತ್ತಾದಂತೆಯೇ ಅವರು ಚುರುಕಾದರು. ಪರಿಸ್ಥಿತಿ ಇನ್ನೂ ಪ್ರಕೋಪಕ್ಕೆ ತಿರುಗದಿರಲೆಂಬ ಉದ್ದೇಶದಿಂದ ಅವರು ದಮನಕಾರಿ ಕ್ರಮಗಳನ್ನು ಆರಂಭಿಸಿದರು. ಇದರ ಫಲವಾಗಿ ಕೇಶವನ ಇಬ್ಬರು ಸಹಕಾರಿಗಳಾದ ಡಬೀರ ಮತ್ತು ಭಗೋರೆ ಎಂಬವರು ರಾಮಪಾಯಲಿಯಲ್ಲಿನ ಶಾಲೆಯಿಂದ ವಜಾ ಶಿಕ್ಷೆಗೊಳಗಾದರು. ಕೇಶವನ ಮೇಲೂ 'ರಾಜದ್ರೋಹದ ಭಾಷಣ' ಮಾಡಿದುದಕ್ಕಾಗಿ ಅಪರಾಧಿಕ ದಂಡ ಸಂಹಿತೆಯ 108ನೇ ವಿಧಿಯಂತೆ ಮೊಕದ್ದಮೆ ಹೂಡಲಾಯಿತು. ನವೆಂಬರ್‌ನಲ್ಲಿ ಕೇಶವ ಬಂಧಿತನಾದ.[10] ಆದರೆ ಭಂಡಾರಾ ಜಿಲ್ಲೆಯಲ್ಲಿ ಕೆಲವು ಉದಾರ ರಾಷ್ಟ್ರವಾದಿಗಳಿದ್ದರು. ಅವರಲ್ಲಿ ಸುವಿಖ್ಯಾತರಾಗಿದ್ದ ಹಿರಿಯ ವಕೀಲ ಪುರುಷೋತ್ತಮ ಸೀತಾರಾಮ ದೇವ್ ಅವರೂ ಒಬ್ಬರು. ಅವರು ವಿಶೇಷ ಆಸಕ್ತಿ ವಹಿಸಿ ಸೂಕ್ತ ವ್ಯವಸ್ಥೆಗಳನ್ನು ಮಾಡಿದ ಕಾರಣದಿಂದಾಗಿ ಆಂಗ್ಲ ಸರ್ಕಾರ ಆತನ ಮೇಲಿನ ಮೊಕದ್ದಮೆ ಹಿಂತೆಗೆದುಕೊಂಡಿತು. ಆದರೆ, ಒಂದು ವರ್ಷದವರೆಗೆ ಕೇಶವ ಯಾವುದೇ ಭಾಷಣ ಮಾಡಬಾರದು ಎಂಬ ಪ್ರತಿಬಂಧ ಆತನ ಮೇಲೆ ವಿಧಿಸಲ್ಪಟ್ಟಿತು.

## ಯಶಸ್ವಿ ವಿದ್ಯಾರ್ಥಿ

ಓರ್ವ ಯಶಸ್ವಿಯಾದ ಕ್ರಾಂತಿಕಾರಿಯು ಉತ್ತಮ ವಿದ್ಯಾರ್ಥಿಯೂ ಆಗಿರಬಲ್ಲ ಎಂಬುದನ್ನು ಶಿಕ್ಷಣದಲ್ಲಿ ತನ್ನ ತನ್ಮಯತೆ ಹಾಗೂ ಪ್ರಾಮಾಣಿಕ ಪರಿಶ್ರಮ ಇವುಗಳ ಮೂಲಕ ಕೇಶವ ತೋರಿಸಿಕೊಟ್ಟ. ಶಾಲೆಯಿಂದ ವಜಾ ಶಿಕ್ಷೆಗೊಳಗಾದ ಅವನನ್ನು ನಾಗಪುರದ ಹಿರಿಯ ರಾಷ್ಟ್ರವಾದಿಗಳು ಸೇರಿ ಲೋಕನಾಯಕ ಎಂ.ಎಸ್. ಅಣೆಯವರ ನಿರ್ವಾಹಕತ್ವದಲ್ಲಿ ನಡೆಯುತ್ತಿದ್ದಂತಹ ಯವತಮಾಳದ ರಾಷ್ಟ್ರೀಯ ವಿದ್ಯಾಲಯಕ್ಕೆ ಸೇರಿಸಿದರು. ಈ ವಿದ್ಯಾಲಯದಲ್ಲಿ ಕೇಶವ ಲೋಕನಾಯಕ ಅಣೆಯವರದೇ ನೇರವಾದ ಮೇಲ್ವಿಚಾರಣೆಯಲ್ಲಿ ಬೆಳೆದ. ಅವನ ಊಟದ ವ್ಯವಸ್ಥೆಯೂ ಅವರ ಮನೆಯಲ್ಲೆ ಆಗಿತ್ತು. ಕೇಶವ ಯವತಮಾಳಕ್ಕೆ ಬಂದ ನಂತರ ಅಲ್ಲೂ ಅವನು 'ಬಾಂಧವ ಸಮಾಜ'ದ ಶಾಖೆಯೊಂದನ್ನು ಆರಂಭಿಸಿದ. ಈ ರಾಷ್ಟ್ರೀಯ ವಿದ್ಯಾಲಯದಲ್ಲಿ ಪ್ರಧಾನ ಅಧ್ಯಾಪಕರಾಗಿದ್ದವರು ದತ್ತಾತ್ರೇಯ ವಿಷ್ಣು ಆಪ್ಟೆ ಅವರು. ಆ ವಿದ್ಯಾಲಯದ ಇತರ ಅಧ್ಯಾಪಕರು ಸಹ ಕ್ರಾಂತಿಕಾರಿ ವಿಚಾರಗಳಲ್ಲಿ ಆಸಕ್ತಿ ಇದ್ದವರೇ ಆಗಿದ್ದರು. ಅಲ್ಲಿನ ವಾತಾವರಣದಲ್ಲಿ ಅದು ಸಹಜವಾಗಿಯೇ ಇತ್ತು. ಕೇಶವ ಅಲ್ಲೂ ಸಹ ವಿದ್ಯಾರ್ಥಿಗಳ ನಡುವೆ ಕ್ರಾಂತಿಕಾರಿ ಚಟುವಟಿಕೆಗಳನ್ನು ಆರಂಭಿಸಿದ. 1909ರಲ್ಲಿ ಕೇಶವ ಆ ವಿದ್ಯಾಲಯಕ್ಕೆ ಸೇರಿದ ಕೆಲವೇ ದಿನಗಳಲ್ಲಿ ಯವತಮಾಳದ ಪೊಲೀಸ್ ಚೌಕಿ ಬಳಿ ಒಂದು ಬಾಂಬ್ ಸ್ಫೋಟಿಸಿತು. ಇದರಲ್ಲಿ ಈ ಶಾಲೆಯ ವಿದ್ಯಾರ್ಥಿಗಳದ್ದೇ ಕೈವಾಡವಿದ್ದಿರಬೇಕು ಎಂಬ ಬಲವಾದ ಗುಮಾನಿ ಆಡಳಿತದ ಅಧಿಕಾರಿಗಳಿಗಿದ್ದರೂ, ಅದನ್ನು ಖಚಿತಪಡಿಸಲು ಸರಿಯಾದ ಪುರಾವೆಗಳು ಅವರ ಬಳಿಯಿರಲಿಲ್ಲ. ಅದಕ್ಕಾಗಿ ವಿದ್ಯಾರ್ಥಿಗಳ ಮೇಲೆ ಹದ್ದುಗಣ್ಣಿರಿಸಲು ಶಾಲೆಯ ಸಮೀಪದಲ್ಲೆ ಪೊಲೀಸ್ ಚೌಕಿಯೊಂದನ್ನು ಅಧಿಕಾರಿಗಳು ತೆರೆದರು. ಅಷ್ಟಾದರೂ ಕೇಶವನ ಓಡಾಟ, ಕೆಲಸದ ರೀತಿಗಳಲ್ಲಿ ವ್ಯತ್ಯಾಸವೇನೂ

---

10. ಪೊಲಿಟಿಕಲ್ ಕ್ರಿಮಿನಲ್ಸ್ ಹೂ ಈಸ್ ಹೂ, ಪು.97

ಆಗಲಿಲ್ಲ. ಅವನು ಲೋಕಮಾನ್ಯ ತಿಲಕರ ರಾಷ್ಟ್ರವಾದಿ ಕೆಲಸದ ಶೈಲಿ, ರೀತಿ ಇತ್ಯಾದಿಗಳನ್ನು ಚೆನ್ನಾಗಿ ಮೈಗೂಡಿಸಿಕೊಂಡಿದ್ದ. ಯುವಕನಾದಾಗಲೂ ಅದನ್ನೇ ಅವನು ಕಾರ್ಯರೂಪದಲ್ಲಿರಿಸಿದ. ತಿಲಕರು ಆರಂಭಿಸಿದ ಸಾರ್ವಜನಿಕ ಗಣೇಶೋತ್ಸವದ ರೀತಿಯಲ್ಲಿ 1909ರ ಏಪ್ರಿಲ್ 5 ರಂದು ಶಾಲೆಯ ವಿದ್ಯಾರ್ಥಿಗಳೆಲ್ಲ ಸೇರಿ ಹನುಮಾನ್ ಜಯಂತಿಯನ್ನಾಚರಿಸಿದರು. ಅಂದಿನ ಕಾರ್ಯಕ್ರಮದಲ್ಲಿ ಬ್ರಿಟಿಷರ ವಿರುದ್ಧ ಕ್ರಾಂತಿಗಾಗಿ ಕರೆ ನೀಡಲಾಯಿತು. [illegible] ಆಗ ಅವರು ಸಹ ಅಂದಿನ ತಮ್ಮ ಭಾಷಣದಲ್ಲಿ ಮಂಡಿಸಿದುದು ಉಗ್ರ ರಾಷ್ಟ್ರವಾದದ ವಿಚಾರವನ್ನೇ. ಅಂದು ಅವರು ಮಾಡಿದ್ದ ಭಾಷಣವನ್ನೇ ಆಧರಿಸಿ ಅವರಿಗೆ ವಕೀಲಿ ವೃತ್ತಿಯನ್ನು ನಡೆಸಲು ನೀಡಲಾಗಿದ್ದ ಸರ್ಕಾರಿ ಅನುಮತಿ ಪತ್ರವನ್ನು 1910ರ ಮಾರ್ಚ್ 31ರವರೆಗೆ ರದ್ದುಗೊಳಿಸಲಾಯಿತು.[11] ಕೆಲವು ದಿನಗಳ ನಂತರ 1908ರಲ್ಲಿ ಮಾಡಲಾಗಿದ್ದ ಅಧಿನಿಯಮ 16ರಂತೆ ರಾಷ್ಟ್ರೀಯ ವಿದ್ಯಾಲಯವನ್ನೇ ಕಾನೂನು ಬಾಹಿರವೆಂದು ಸಾರಿ ಮುಚ್ಚಿಸಲಾಯಿತು.[12]

ಅಲ್ಲಿಂದ ಮುಂದೆ ಕೇಶವ ಪುಣೆಯ ಸಮರ್ಥ ವಿದ್ಯಾಲಯವನ್ನು ಸೇರಿದ. ಆದರೆ ತನ್ನ ಶಾಲಾಂತ್ಯದ ಪರೀಕ್ಷೆಯನ್ನು ಅವನು ಅಮರಾವತಿಯ ರಾಷ್ಟ್ರೀಯ ವಿದ್ಯಾಲಯದ ಮೂಲಕ ತೆಗೆದುಕೊಂಡ. 1909ರ ಡಿಸೆಂಬರ್‌ನಲ್ಲಿ ಪರೀಕ್ಷೆಯ ಫಲಿತಾಂಶ ಪ್ರಕಟವಾದಾಗ ಕೇಶವ ಉತ್ತಮ ಅಂಕಗಳನ್ನು ಪಡೆದು ಎರಡನೇ ಶ್ರೇಣಿಯಲ್ಲಿ ಉತ್ತೀರ್ಣನಾಗಿದ್ದ. ಅವನಿಗೆ ನ್ಯಾಷನಲ್ ಕೌನ್ಸಿಲ್ ಆಫ್ ಎಜ್ಯುಕೇಷನ್ ನೀಡಿದ್ದ ಶಾಲಾಂತ್ಯ ಪರೀಕ್ಷೆಯ ಪ್ರಮಾಣಪತ್ರದಲ್ಲಿ ಅದರ ಅಧ್ಯಕ್ಷರಾಗಿದ್ದ ರಾಸ್ ಬಿಹಾರಿ ಘೋಷ್ ಅವರ ಹಸ್ತಾಕ್ಷರವಿತ್ತು.

ಕೌಟುಂಬಿಕ ಬಡತನ, ಹಲವು ವಿಧ ಅಡ್ಡಿ ಆತಂಕಗಳು, ಜತೆಯಲ್ಲಿ ದೇಶವನ್ನಾಳುತ್ತಿದ್ದವರ ದಮನಕಾರಿ ಕ್ರಮ, ಇವೆಲ್ಲವೂ ಕೇಶವನ ಪ್ರಬಲ ಇಚ್ಛಾಶಕ್ತಿಯ ಮುಂದೆ ಸೋತು ಶರಣಾಗಿದ್ದವು.

---

11 [illegible] ನವದೆಹಲಿ

12 [illegible] ಅಭಿಲೇಖಾಗಾರ, ನವದೆಹಲಿ

# ಕ್ರಾಂತಿಕಾರಿ ಜೀವನ

ಬಂಗಾಳ ಮತ್ತು ಮಧ್ಯಪ್ರಾಂತದಲ್ಲಿನ ಕ್ರಾಂತಿಕಾರಿಗಳ ನಡುವೆ ಪರಸ್ಪರ ಸಂಬಂಧಗಳು 1909–10ರ ಸುಮಾರಿಗೆ ದೃಢಗೊಳ್ಳಲಾರಂಭಿಸಿದ್ದವು. ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಬಂಗಾಳ ಮೊದಲಿಂದಲೂ ಮುಂದಿತ್ತು. ಮಧ್ಯ-ಪ್ರಾಂತದಲ್ಲಿನ ರಾಷ್ಟ್ರವಾದಿ ನಾಯಕರು ತಮ್ಮಲ್ಲಿನ ಹೋರಾಟವನ್ನು ಬಲಗೊಳಿಸಲು ಬಂಗಾಳದಿಂದ ನೆರವನ್ನು ನಿರೀಕ್ಷಿಸುತ್ತಿದ್ದರು. ಹೀಗಾಗಿ ಇವೆರಡೂ ಪ್ರಾಂತಗಳಲ್ಲಿ ಕ್ರಾಂತಿಕಾರಿಗಳು ಆಗಾಗ ಬಂದು ಹೋಗುವ ರೂಢಿ ಸಹ ಆರಂಭವಾಗಿತ್ತು. ಶಾಲಾಂತ್ಯದ ಪರೀಕ್ಷೆಯ ನಂತರ ಹೆಡಗೇವಾರರು ಸಹ ತಮ್ಮ ಸಂಪೂರ್ಣ ಸಮಯವನ್ನು ಕ್ರಾಂತಿಕಾರಿಗಳ ಜತೆಯಲ್ಲಿರುವುದಕ್ಕಾಗಿಯೇ ಬಳಸಿದರು. ಬಂಗಾಳದ ಮಾಧವದಾಸ ಸನ್ಯಾಸಿ ಎಂಬ ಕ್ರಾಂತಿಕಾರಿಯೋರ್ವರು ನಾಗಪುರಕ್ಕೆ ಬಂದಾಗ ಅವರನ್ನು ಭೂಗತವಾಗಿ ಸುರಕ್ಷಿತವಿರಿಸುವ ಹೊಣೆ ಕೇಶವರ ಪಾಲಿಗೇ ಬಂತು. ಆರು ತಿಂಗಳ ಕಾಲ ಈ ಕ್ರಾಂತಿಕಾರಿ ನಾಗಪುರದ ಸುತ್ತಮುತ್ತ ಅಲ್ಲಿ ಇಲ್ಲಿ ಇದ್ದು ನಂತರ ಜಪಾನ್‌ಗೆ ಹೋದರು. ಅಲಿಪುರ್ ಬಾಂಬ್ ಪ್ರಕರಣದಲ್ಲಿ ಪಾತ್ರವಹಿಸಿದ್ದ ಕ್ರಾಂತಿಕಾರಿಗಳ ರಕ್ಷಣೆಗಾಗಿ ಮಧ್ಯಪ್ರಾಂತದಲ್ಲಿ ನಡೆದ ಹಣ ಸಂಗ್ರಹದ ಕೆಲಸದಲ್ಲಿ ನಾಗಪುರ ಪ್ರದೇಶದ ಜವಾಬ್ದಾರಿ ಕೇಶವರದೇ ಆಗಿತ್ತು. ಈ ಪಿತೂರಿಯಲ್ಲಿ ಅರವಿಂದ ಘೋಷ್‌ರ ಹೆಸರು ಸಹ ಸೇರಿಕೊಂಡಿದ್ದುದು ಸರ್ವವಿದಿತ.

ಆ ದಿನಗಳಲ್ಲಿ ದೇಶದ ಕ್ರಾಂತಿಕಾರಿ ಚಟುವಟಿಕೆಗಳಿಗೆಲ್ಲ ಕಾಶಿಯಂತಿದ್ದುದು ಕಲ್ಕತ್ತವೇ. ಅದಕ್ಕಾಗಿ ಕಲ್ಕತ್ತಾದಲ್ಲಿದ್ದು ಕ್ರಾಂತಿಕಾರಿ ಆಂದೋಳನದಲ್ಲಿ ಕ್ರಿಯಾಶೀಲರಾಗಿರಲು ಕೇಶವರ ಮನಸ್ಸು ಸಹ ತುಡಿಯುತ್ತಿತ್ತು. ತಮ್ಮ ಮೇಲೆ ಗುಪ್ತಚರರು ಮತ್ತು ಪೊಲೀಸರದೂ ಹದ್ದುಗಣ್ಣಿದ್ದುದು ಅವರಿಗೆ ತಿಳಿದಿದ್ದ ಸಂಗತಿಯೇ. ಅದಕ್ಕಾಗಿ ಶಿಕ್ಷಣದ ಸೋಗು ಹಾಕಿ ಕಲ್ಕತ್ತಾಗೆ ಹೋಗಲು ಅವರು ಯೋಚಿಸಿದರು. ಶಾಲಾಂತ್ಯದ ಪರೀಕ್ಷೆಯಲ್ಲಿ ಅಪೇಕ್ಷಿತ ಅಂಕಗಳನ್ನು ಗಳಿಸಿ ದ್ವಿತೀಯ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದ್ದುದರಿಂದಾಗಿ ಅವರ ಪಾಲಿಗೆ ಈ ನಿಟ್ಟಿನಲ್ಲಿ ಭಾಗ್ಯದ ಬಾಗಿಲು ತೆರೆದಂತಾಗಿತ್ತು. ಶೈಕ್ಷಣಿಕವಾಗಿ ಅವರಿಗೆ ಅಭಿರುಚಿಯಿದ್ದುದು ವಿಜ್ಞಾನ ವಿಷಯದಲ್ಲಿ. ಶಾಲಾಂತ್ಯದ ಪರೀಕ್ಷೆಯ ನಂತರ ಕೆಲವು ದಿನಗಳ ಕಾಲ ಒಂದು ಖಾಸಗಿ ಶಾಲೆಯಲ್ಲಿ ಶಿಕ್ಷಕ ವೃತ್ತಿ ನಡೆಸಿ ಅವರು ಒಂದಿಷ್ಟು ಹಣ ಸಹ ಸಂಪಾದಿಸಿದ್ದರು. ಆದರೆ ಕಲ್ಕತಾದಂತಹ ದುಬಾರಿ ನಗರದಲ್ಲಿರಬೇಕಾದಲ್ಲಿ ಇನ್ನೂ ಹೆಚ್ಚಿನ ಹಣ ಕೈಯಲ್ಲಿರಬೇಕಾದ ಅಗತ್ಯವೂ ಇತ್ತು. ತಮ್ಮ ಕಾರ್ಯನಿಷ್ಠೆ ಮತ್ತು ಶುದ್ಧ ನಡವಳಿಕೆಯಿಂದ ಅವರು ತಮ್ಮ ಪ್ರಾಂತ್ಯದಲ್ಲಿನ ತಿಲಕವಾದಿ ನಾಯಕರ ಹೃದಯವನ್ನು ಗೆದ್ದಿದ್ದರು. ಅವರೆಲ್ಲರೂ ಕೂಡ ಕೇಶವರ ಭವಿಷ್ಯದ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿ ಪರಸ್ಪರ ಚಿಂತನೆ ನಡೆಸಿದ್ದುದು ಸಹಜವೇ ಆಗಿತ್ತು. ಕೇಶವರ ವಿಶೇಷತೆಯೆಂದರೆ

ಬಾಲ್ಯದಿಂದಲೂ ತಮ್ಮ ಮನದಿಚ್ಛೆ, ತನಗಿರುವ ತೊಂದರೆಗಳು, ತಾನೆದುರಿಸುತ್ತಿರುವ ಕಷ್ಟಗಳು ಇವುಗಳ ಬಗ್ಗೆ ಎಂದೂ ಇತರರ ಮುಂದೆ ಬಾಯಿಬಿಚ್ಚಿ ಹೇಳುತ್ತಿರಲಿಲ್ಲ. ಅವರ ಈ ಸ್ವಭಾವ ವಿಶೇಷದ ಪರಿಚಯ ಡಾ. ಮುಂಜೆ ಮತ್ತು ಇತರ ಸಹಕಾರಿಗಳಿಗೂ ಚೆನ್ನಾಗಿ ಇತ್ತು. ಹೀಗಾಗಿ ಅವರೆಲ್ಲ ಸೇರಿ ಪರಸ್ಪರ ಚರ್ಚಿಸಿ ಕಲ್ಕತ್ತಾದ ನ್ಯಾಷನಲ್ ಮೆಡಿಕಲ್ ಕಾಲೇಜಿಗೆ ಕೇಶವ ಸೇರಬೇಕು. ಅಲ್ಲಿ ವಸತಿ ಗೃಹದಲ್ಲಿದ್ದು ಶಿಕ್ಷಣದ ಜತೆ ಕ್ರಾಂತಿಕಾರಿ ಚಟುವಟಿಕೆಗಳಲ್ಲೂ ತೊಡಗಿರಬೇಕು ಎಂಬ ಯೋಜನೆಗನುಗುಣವಾಗಿ ಸರ್ವವಿಧ ವ್ಯವಸ್ಥೆಗಳನ್ನೂ ಮಾಡಿದರು. ಈ ಬಗ್ಗೆ ರಾಮಲಾಲ ವಾಜಪೇಯಿ ಅವರು ತಮ್ಮ ಜೀವನ ಚರಿತ್ರೆಯಲ್ಲಿ ಉಲ್ಲೇಖಿಸಿದುದು ಹೀಗಿದೆ: ಕೇಶವರನ್ನು ಕಲ್ಕತ್ತಾಗೆ ಕಳುಹಿಸಬೇಕೆಂಬುದರಲ್ಲಿ ನಿಜವಾದ ಉದ್ದೇಶವಿದ್ದುದು ಕ್ರಾಂತಿಕಾರಿ ಸಂಘಟನೆಗೆ ಸಂಬಂಧಿಸಿದಂತೆ ಅವರು ಅನುಭವ ಗಳಿಸಬೇಕು ಮತ್ತು ಮಧ್ಯಪ್ರಾಂತ ಹಾಗೂ ಬಂಗಾಳ ಇವುಗಳ ನಡುವೆ ಕೊಂಡಿಯಾಗಿ ಕೆಲಸ ನಿರ್ವಹಿಸಬೇಕು ಎಂಬುದೇ ಆಗಿತ್ತು. "ಆರ್. ಎಸ್.ಎಸ್.ನ ಸಂಸ್ಥಾಪಕ ಶ್ರೀ ಕೇಶವ ಹೆಡಗೇವಾರರಿಗೆ ಶ್ರೀ ದಾಜಿಸಾಹೇಬ ಬುಟಿ ಅವರಿಂದ ಒಂದಿಷ್ಟು ಆರ್ಥಿಕ ನೆರವು ಕೊಡಿಸಿ, ಶಿಕ್ಷಣಕ್ಕಿಂತ ಮುಖ್ಯವಾಗಿ ಪುಲಿನ ಬಿಹಾರಿ ದಾಸ (ಕಲ್ಕತ್ತಾದ ಹಿರಿಯ ಕ್ರಾಂತಿಕಾರಿ) ಅವರ ಕೈಕೆಳಗೆ ಕ್ರಾಂತಿಕಾರಿ ಚಟುವಟಿಕೆಗಳು ಮತ್ತು ಸಂಘಟನೆಯ ಅನುಭವದ ಗಳಿಕೆಗಾಗಿ ಕಲ್ಕತ್ತಾಗೆ ಕಳುಹಿಸಲಾಗಿತ್ತು". ಅವರ ವಸತಿ ವ್ಯವಸ್ಥೆಯನ್ನು ಮಾಡಲಾಗಿದ್ದುದು ಕಲ್ಕತ್ತಾದ ಪ್ರೇಮ್ ಗುಜರಾಲ್ ಮಾರ್ಗದಲ್ಲಿನ 'ಶಾಂತಿ ನಿಕೇತನ'ದಲ್ಲಿ. ಸರಿಯಾದ ಸ್ಥಳಾವಕಾಶ ದೊರೆಯದ ಕಾರಣ ಒಂದು ಸಣ್ಣ ಕೊಠಡಿಯಲ್ಲಿ ಇನ್ನಿಬ್ಬರು ವಿದ್ಯಾರ್ಥಿಗಳ ಜತೆಗೂಡಿ ಅವರು ಇರುತ್ತಿದ್ದರು. ಅವರಲ್ಲಿ ಒಬ್ಬರು ಅಮರಾವತಿಯ ದಾದಾಸಾಹೇಬ ಖಾಪರ್ಡೆಯವರ ಪುತ್ರ ಅಣ್ಣಾ ಸಾಹೇಬ ಖಾಪರ್ಡೆ ಮತ್ತು ಇನ್ನೊಬ್ಬರು ಶಂಕರರಾವ್ ನಾಯಕ್ ಅವರು. ಬಟ್ಟೆಗೆ ಇರುವುದರಲ್ಲಾಗಲಿ, ಊಟ, ತಿಂಡಿ ವಿಷಯದಲ್ಲಾಗಲಿ ಸುಖಿಯಾಗಿರುವ ಭಾಗ್ಯವನ್ನು ಸಣ್ಣ ವಯಸ್ಸಿನಿಂದಲೂ ವಿಧಿ ಅವರ ಹಣೆಯಲ್ಲಿ ಬರೆದಿರಲಿಲ್ಲ. ಕಲ್ಕತ್ತಾದಲ್ಲೂ ಅದೇ ಪರಿಸ್ಥಿತಿ ಮುಂದುವರೆಯಿತು. ತಮ್ಮ ಮುಂದಿನ ಜೀವನದಲ್ಲೂ ಅಂತಹ ಭೌತಿಕ ಸುಖದಿಂದ ಸದಾ ವಂಚಿತರಾಗಿರುವುದರಲ್ಲೆ ಆನಂದ ಅನುಭವಿಸಲು ಅವರಿಗೆ ಸಾಧ್ಯವಾದುದು ಅದು ಮೊದಲೇ ತನಗೆ ರೂಢಿಯಾಗಿದ್ದ ಕಾರಣದಿಂದಾಗಿಯೇ.

ನ್ಯಾಶನಲ್ ಮೆಡಿಕಲ್ ಕಾಲೇಜನ್ನು ಡಾ. ಎಸ್.ಕೆ. ಮಲ್ಲಿಕ್ ಮತ್ತು ಮಹಾರಾಜಾ ಮೊಹಿಂದ್ರಾ ಚಂದ್ರ ನಂದಿ ಅವರು ಇನ್ನೂ ಕೆಲವು ರಾಷ್ಟ್ರವಾದಿ ನಾಯಕರ ನೆರವಿನಿಂದ ಆರಂಭಿಸಿದ್ದರು. ಆ ದಿನಗಳಲ್ಲಿ 'ನ್ಯಾಷನಲ್ ಕೌನ್ಸಿಲ್ ಆಫ್ ಎಜ್ಯುಕೇಶನ್' ವತಿಯಿಂದ ನೀಡಲಾಗುವ ಶಿಕ್ಷಣವನ್ನು ಪಡೆದವರಿಗೆ ಸರ್ಕಾರಿ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ನಿರಾಕರಿಸುತ್ತಿದ್ದ ಕಾರಣದಿಂದಾಗಿ, ಅಂತಹವರಿಗೆ ಮಾತ್ರ – ಅವರು ದೇಶದ ಯಾವುದೇ ಭಾಗದವರಿದ್ದರೂ – ನ್ಯಾಶನಲ್ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ನೀಡಲಾಗುತ್ತಿತ್ತು. ಹೀಗಾಗಿ ಈ ಕಾಲೇಜಿನಲ್ಲಿ ಸಹಜವಾಗಿಯೇ ಸಂಪೂರ್ಣ ದೇಶದಿಂದ ಬರುತ್ತಿದ್ದ ವಿದ್ಯಾರ್ಥಿಗಳಿರುತ್ತಿದ್ದರು ಮತ್ತು ಇದೇ ಕಾರಣಕ್ಕಾಗಿ ಅಖಿಲ ಭಾರತೀಯ ಸ್ವರೂಪ ಇರುತ್ತಿದ್ದ ಕಾಲೇಜು ಅದು. ಕೇಶವರ ಜತೆಯಲ್ಲಿ ಮಹಾರಾಷ್ಟ್ರದಿಂದ ವೈ. ಎಸ್. ಅಣೆ, ನಾರಾಯಣ ರಾವ್ ಸಾವರಕರ, ಅಶವಳೆ ಮೊದಲಾದ ಅನೇಕ ಮಿತ್ರರೂ ಅಲ್ಲಿಗೆ ಶಿಕ್ಷಣಕ್ಕಾಗಿ ಬಂದಿದ್ದರು.

ಕೇಶವರು ಕಲ್ಕತ್ತಾ ತಲಪಿದಾಗ ಕ್ರಾಂತಿಕಾರಿಗಳ ವಿರುದ್ಧದ ಬ್ರಿಟಿಷ್ ಸರ್ಕಾರದ ದಮನ ನೀತಿ ಅತ್ಯುಗ್ರ ಸ್ತರದಲ್ಲಿತ್ತು. ರಾಷ್ಟ್ರದ್ರೋಹಿ ಸಭಾ ಅಧಿನಿಯಮ, 1907; ಅಪರಾಧಿಕ ಕಾನೂನು ಸಂಶೋಧನ ಅಧಿನಿಯಮ, 1908; ಇಂಡಿಯನ್ ಪ್ರೆಸ್ ಆಕ್ಟ್, 1910 ಮೊದಲಾದ ಕಾನೂನುಗಳ ಅಡಿಯಲ್ಲಿ ಕ್ರಾಂತಿಕಾರಿಗಳನ್ನು ವ್ಯಕ್ತಿಶಃ ಮತ್ತು ಅವರ ಸಂಘಟನೆಗಳನ್ನು ಹಾಗೂ ಪತ್ರಿಕೆಗಳನ್ನೂ ಶಿಕ್ಷಿಸುವ, ನಿಷೇಧಿಸುವ ಮತ್ತು ಅವುಗಳ ಮೇಲೆ ಮೊಕದ್ದಮೆ ನಡೆಸುವಂತಹ ಕಠಿಣ ಕ್ರಮಗಳನ್ನು ಕೈಗೊಳ್ಳಲು ಸರ್ಕಾರವು ತೊಡಗಿದ್ದ ದಿನಗಳು ಅವು. ಬಾಂಧವ ಬರ್ತಿ, ಅನುಶೀಲನಾ ಸಾಧನಾ ಸಮಿತಿ, ಆತ್ಮೋನ್ನತಿ ಸಮಿತಿ ಮೊದಲಾದ ಕ್ರಾಂತಿಕಾರಿ ಸಂಘಟನೆಗಳಂತೂ ಆಗಲೇ ಕಾನೂನು ಬಾಹಿರವೆಂದು ಘೋಷಿಸಲ್ಪಟ್ಟಿದ್ದವು. ಅವುಗಳ ಪ್ರಮುಖರನ್ನು ಮತ್ತು ಸಾಮಾನ್ಯ ಕಾರ್ಯಕರ್ತರನ್ನು ಸಹ ಬಂಧಿಸಿ ಸೆರೆಯಲ್ಲಿಡುವ ಪ್ರಕ್ರಿಯೆಗೆ ರಭಸ ಬಂದಿತ್ತು. ಸರ್ಕಾರದಿಂದ ಕಾನೂನು ಬಾಹಿರವೆಂದು ಘೋಷಿತವಾದ ಸಂಘಟನೆಗಳ ಸಂಖ್ಯೆಯೇ ಐವತ್ತರಷ್ಟಿತ್ತು. 1901ರಲ್ಲಿ ಆರಂಭವಾಗಿದ್ದ ಅನುಶೀಲನಾ ಸಮಿತಿಯು ಆಗ ಬಂಗಾಳ ಪ್ರಾಂತದಾದ್ಯಂತ ಅತ್ಯಂತ ಜನಪ್ರಿಯವಾಗಿದ್ದ ಮತ್ತು ಚೆನ್ನಾಗಿ ಸಂಘಟಿತವೂ ಆಗಿದ್ದ ಕ್ರಾಂತಿಕಾರಿ ಸಂಘಟನೆ. ಅದರ ಸಂಸ್ಥಾಪಕರು ಪಿ. ಮಿತ್ರಾ ಎಂಬವರು. ಬಂಗಾಳದ ಪ್ರಮುಖ ಕ್ರಾಂತಿಕಾರಿಗಳೆಲ್ಲ ಈ ಸಂಘಟನೆಯ ಜತೆ ಸಂಬಂಧವಿದ್ದವರೇ. ಇವರಲ್ಲಿ ಅರವಿಂದ ಘೋಷ್, ಬಿಪಿನ್ ಚಂದ್ರಪಾಲ್, ತ್ರೈಲೋಕ್ಯನಾಥ ಚಕ್ರವರ್ತಿ, ನಳಿನಿಕಿಶೋರ ಗುಹಾ, ಪ್ರತುಲ್ ಗಂಗುಲಿ, ಜೋಗೇಶಚಂದ್ರ ಚಟರ್ಜಿ ಮೊದಲಾದವರು ಉಲ್ಲೇಖಿಸಲ್ಪಡಬಹುದಾದ ಕೆಲವರು.

ನಿಷೇಧಿಸಲ್ಪಟ್ಟ ನಂತರ ಅನುಶೀಲನಾ ಸಮಿತಿಯು ಒಂದು ಗುಪ್ತ ಸಂಸ್ಥೆಯಾಗಿ ಪರಿವರ್ತಿತವಾಯಿತು. ಅದರ ಪ್ರಮುಖರೆಲ್ಲ ಬಂಧಿತರಾದ ಮೇಲೆ ಸಮಿತಿಯ ನಾಯಕತ್ವ ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಾಗಿರುವ ತರುಣರ ಹೆಗಲಿಗೇರಿತು. 'ಸೆರೆಮನೆಯಲ್ಲಿ ಮೂವತ್ತು ವರ್ಷಗಳು' ಎಂಬ ತಮ್ಮ ಆತ್ಮಕತೆಯಲ್ಲಿ ತ್ರೈಲೋಕ್ಯನಾಥ ಚಕ್ರವರ್ತಿ ಅವರು ಸಮಿತಿಯ ಸದಸ್ಯರಲ್ಲಿ ಪರಸ್ಪರರಲ್ಲಿ ಪ್ರೀತಿ, ತ್ಯಾಗದ ಮನೋವೃತ್ತಿ ಮತ್ತು ರಹಸ್ಯ ಕಾಪಾಡುವ ಸ್ವಭಾವ ಇತ್ಯಾದಿ ಇದ್ದ ಕಾರಣದಿಂದಾಗಿ, ಸರ್ಕಾರದ ದಮನಕಾರಿ ಕ್ರಮಗಳನ್ನೆದುರಿಸಿಯೂ ಅದರ ಚಟುವಟಿಕೆಗಳನ್ನು ಸಹಜವಾಗಿ ಮುಂದುವರಿಸಿಕೊಂಡು ಹೋಗಲು ಸಾಧ್ಯವಾಯಿತೆಂದು ಬರೆದಿದ್ದಾರೆ.

ಹೆಡಗೇವಾರರು ಕಲ್ಕತ್ತಾ ತಲಪಿದೊಡನೆಯೇ ಅನುಶೀಲನಾ ಸಮಿತಿಯ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವರು ನ್ಯಾಶನಲ್ ಮೆಡಿಕಲ್ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ 'ಬಂಗಲಾರ ವಿಪ್ಲವವಾದ್' ಎಂಬ ಸುಪ್ರಸಿದ್ಧ ಬಂಗಾಳಿ ಭಾಷೆಯ ಪುಸ್ತಕದ ಲೇಖಕರಾದ ನಳಿನಿಕಿಶೋರ ಗುಹಾ ಅವರು ಸಹ ಅಲ್ಲೆ ವಿದ್ಯಾರ್ಥಿಯಾಗಿದ್ದರು. ಅನುಶೀಲನಾ ಸಮಿತಿಯಲ್ಲಿ ಹೆಡಗೇವಾರ್, ನಾರಾಯಣ ರಾವ್ ಸಾವರಕರ್ ಮತ್ತು ಇನ್ನೂ ಕೆಲವು ವಿದ್ಯಾರ್ಥಿಗಳನ್ನು ಸೇರಿಸಿದ್ದವರೇ ಗುಹಾ ಅವರು ಎಂದು ಚಕ್ರವರ್ತಿ ಬರೆದಿರಿಸಿದ್ದಾರೆ.[1]

---

1. 'ಥರ್ಟಿ ಇಯರ್ಸ್ ಇನ್ ಪ್ರಿಸನ್' ತ್ರೈಲೋಕ್ಯನಾಥ ಚಕ್ರವರ್ತಿ, ಪು. 277–78 ಆಲ್ಫಾ ಬೀಟಾ ಪಬ್ಲಿಕೇಶನ್, ಕಲ್ಕತ್ತಾ – 1963

ಹೆಡಗೇವಾರರು ಸಮಿತಿಯಲ್ಲಿ ಬಹು ಬೇಗನೆ ಎಲ್ಲರ ವಿಶ್ವಾಸಕ್ಕೆ ಪಾತ್ರರಾದರು. ಕ್ರಮೇಣ ಅವರ ವಸತಿ ಗೃಹವೇ ಕ್ರಾಂತಿಕಾರಿ ಚಟುವಟಿಕೆಗಳ ಕೇಂದ್ರವೂ ಆಯಿತು. ಭೂಗತರಾಗಿ ಓಡಾಡುತ್ತಿದ್ದ ಶ್ಯಾಮಸುಂದರ ಚಕ್ರವರ್ತಿಯವರು ಆಗಾಗ ಅಲ್ಲಿಗೆ ಬಂದು ಹೋಗುತ್ತಿದ್ದರು. ನಳಿನಿಕಿಶೋರ ಗುಹಾ ಸೇರಿದಂತೆ ಹಲವಾರು ಕ್ರಾಂತಿಕಾರಿಗಳು ಹೆಡಗೇವಾರರ ಕೊಠಡಿಯನ್ನು ಅಡಗಿಕೊಳ್ಳುವುದಕ್ಕಾಗಿ ಮತ್ತು ಶಸ್ತ್ರಗಳನ್ನು ರಹಸ್ಯವಾಗಿ ಇರಿಸುವ ಸಲುವಾಗಿ ಬಳಸಿಕೊಳ್ಳುತ್ತಿದ್ದರು.

ಹೆಡಗೇವಾರರ ಪಾತ್ರದ ಕುರಿತು ನಳಿನಿಕುಮಾರ ಗುಹಾ ಇನ್ನೂ ಸೊಗಸಾದ ರೀತಿಯಲ್ಲಿ ಬೆಳಕು ಚೆಲ್ಲಿರುವುದು ಹೀಗೆ: "ಹೆಡಗೇವಾರರು ನಿಜಕ್ಕೂ ಓರ್ವ ಆದರ್ಶ ಕ್ರಾಂತಿಕಾರಿ. ಸಮಿತಿಯ ಸದಸ್ಯರ ಪೈಕಿ ಅವರ ಚಿಂತನದ ರೀತಿ ರಚನಾತ್ಮಕವಾಗಿರುತ್ತಿತ್ತು. ಮತ್ತು ಅವರು ಮಾಡುತ್ತಿದ್ದ ಕೆಲಸಗಳೂ ಅಷ್ಟೇ, ತುಂಬ ಚೊಕ್ಕವಾಗಿರುತ್ತಿದ್ದವು." ಕ್ರಾಂತಿಕಾರಿಗಳ ನಡುವೆ ಹೆಡಗೇವಾರರು ಗುರುತಿಸಲ್ಪಡುತ್ತಿದ್ದುದು 'ಕೊಕೇನ್' ಎಂಬ ಗುಪ್ತ ನಾಮದಿಂದ. ಅವರು ಶಸ್ತ್ರಗಳಿಗೆ ಇರಿಸಿದ್ದ ಹೆಸರು 'ಅನಾಟೊಮಿ'. ಸಮಿತಿಯ ಸದಸ್ಯರಾಗಿರುವವರು ಒಳಗಿನ ಮಾಹಿತಿಗಳನ್ನು ಇನ್ನಾರಿಗೂ ತಿಳಿಸಲೇಬಾರದು ಎಂಬ ಪ್ರತಿಜ್ಞೆ ಸ್ವೀಕರಿಸುತ್ತಿದ್ದರು. ಇಂತಹ ಸಂಘಟನೆಗಳಿಗೆಲ್ಲ ಅವುಗಳಲ್ಲಿನ ಗೌಪ್ಯವೇ ಮುಖ್ಯ ಶಕ್ತಿ. ಸಮಿತಿಯಲ್ಲಿ ಹೆಡಗೇವಾರರ ಪಾತ್ರ ಹಾಗೂ ಸ್ಥಾನಮಾನವೇನಿತ್ತು ಇತ್ಯಾದಿ ಕುರಿತು ಅಧಿಕೃತವೆನ್ನಬಹುದಾದ ಮಾಹಿತಿಗಳಾವುವೂ ಈಗ ಲಭ್ಯವಿಲ್ಲ. ಆದರೆ ಇಷ್ಟು ಮಾತ್ರ ಖಚಿತ – ಸಮಿತಿಯ ಜತೆ ಸಂಬಂಧವಿದ್ದ ಪ್ರಮುಖ ಕ್ರಾಂತಿಕಾರಿಗಳೆಲ್ಲರೂ ಹೆಡಗೇವಾರರನ್ನು ತುಂಬ ಗೌರವದಿಂದ ಮತ್ತು ತಮಗಿಂತ ಮೇಲಿನವರು ಎಂಬಂತೆಯೇ ನೋಡುತ್ತಿದ್ದರು. ಸೆರೆಮನೆಯಲ್ಲಿ 24 ವರ್ಷಗಳನ್ನು ಕಳೆದಿದ್ದ ಜೋಗೇಶ ಚಂದ್ರ ಚಟರ್ಜಿಯವರು ತಮ್ಮ ಪುಸ್ತಕದಲ್ಲಿ ಹೆಡಗೇವಾರರ ಸ್ವಲ್ಪವೂ ಸ್ವಾರ್ಥದ ಸೋಂಕು ಇರದ ಕಾರ್ಯಶೈಲಿಯನ್ನು ಉಲ್ಲೇಖಿಸಿದ್ದಾರೆ.[2]

ಕಲ್ಕತ್ತಾದಲ್ಲಿನ ಐದು ವರ್ಷಗಳ ಕಾಲಾವಧಿಯಲ್ಲಿ ಹೆಡಗೇವಾರರು ಎಲ್ಲ ರಾಷ್ಟ್ರವಾದಿ ನಾಯಕರು ಮತ್ತು ಕ್ರಾಂತಿಕಾರಿಗಳಿಗೆ ಬೇಕಾದ ವ್ಯಕ್ತಿಯಾಗಿ ತಮ್ಮ ಬದುಕನ್ನು ವಿಕಸಿತಗೊಳಿಸಿಕೊಂಡಿದ್ದರು.

ಶ್ಯಾಮಸುಂದರ ಚಕ್ರವರ್ತಿಯವರ ಬಗ್ಗೆ ಹೆಡಗೇವಾರರಿಗಿದ್ದ ಪ್ರೀತಿ ಅಪಾರ. ಅವರ ಮನೆಗೆ ಹೆಡಗೇವಾರರು ಬಂದುಹೋಗುತ್ತಿದ್ದುದೂ ಬಹಳ. ಚಕ್ರವರ್ತಿಯವರದು ಇನ್ನಿತರ ಅನೇಕ ಕ್ರಾಂತಿಕಾರರಂತೆ ಆರ್ಥಿಕವಾಗಿ ಅತ್ಯಂತ ದಯನೀಯ ಸ್ಥಿತಿ. ತಮ್ಮ ಮಗಳ ಮದುವೆಯ ಸಂದರ್ಭದಲ್ಲಿ ಅವರು ಅನುಭವಿಸಿದ್ದ ಹಣದ ಕೊರತೆಯನ್ನು ನೀಗಿಸುವ ಸಲುವಾಗಿ ಸ್ವತಃ ಹೆಡಗೇವಾರರೇ ವಿಶೇಷವಾಗಿ ಓಡಾಡಿ ಹಣ ಸಂಗ್ರಹಿಸಿ ಅವರಿಗೆ ಕೊಟ್ಟಿದ್ದರು. ಕಲ್ಕತ್ತಾದಲ್ಲಿದ್ದಾಗ ಹೆಡಗೇವಾರರು ಹೆಚ್ಚಿನ ಸಂಪರ್ಕವಿರಿಸಿಕೊಂಡಿದ್ದ ಇನ್ನೋರ್ವ ರಾಷ್ಟ್ರವಾದಿ ವ್ಯಕ್ತಿಯೆಂದರೆ ಮೌಲವಿ ಲಿಯಾಕತ್ ಹುಸೇನ್ ಅವರು. ಅವರು ಏರ್ಪಡಿಸಿದ್ದ ಸಭೆಗಳಲ್ಲಿ ಮತ್ತು ಪ್ರಭಾತ್ ಫೇರಿಗಳಲ್ಲಿ ಹೆಡಗೇವಾರರು ತಪ್ಪದೇ ಭಾಗವಹಿಸುತ್ತಿದ್ದರು. ಅವರಿಬ್ಬರ ನಡುವೆ ಅತ್ಯಂತ ನಿಕಟವಾದ ಸ್ನೇಹವಿದ್ದ

2. ಜೋಗೇಶ್ ಚಂದ್ರ ಚಟರ್ಜಿ, ಇನ್ ಸರ್ಚ್ ಆಫ್ ಫ್ರೀಡಂ ಪು. 27

ಕಾರಣದಿಂದಾಗಿ ಹೆಡಗೇವಾರರ ಸಲಹೆಯಂತೆ ಹುಸೇನರು ತಾವು ಧರಿಸುತ್ತಿದ್ದ 'ಫೈಜ್ ಕ್ಯಾಪ್' ಬಿಟ್ಟು ಗಾಂಧಿ ಟೋಪಿ ಧರಿಸಲು ಆರಂಭಿಸಿದ್ದು ಸಹ ಉಂಟು.[3]

ಮೋತಿಲಾಲ್ ಘೋಷ್, ಡಾ. ಆಶುತೋಷ ಮುಖರ್ಜಿಯಂತಹವರ ಜತೆಯಲ್ಲಿ ಅತಿ ಸಮೀಪದ ಸಂಬಂಧವಿರಿಸಿಕೊಂಡಿದ್ದ ಹೆಡಗೇವಾರರು ಇನ್ನೊಂದು ಕಡೆ ರಾಸಬಿಹಾರಿ ಬೋಸ್, ವಿಪಿನ್ ಚಂದ್ರ ಪಾಲರಂತಹ ಉಗ್ರ ವಿಚಾರವುಳ್ಳವರ ಜತೆಯೂ ಒಡನಾಟವಿರಿಸಿಕೊಂಡಿದ್ದರು. ಅವರ ಸ್ವಭಾವ, ರೀತಿನೀತಿಗಳ ಬಗ್ಗೆ ಹೆಚ್ಚಿನ ಬೆಳಕು ಚೆಲ್ಲಿದ ಹರದಾಸ್ ಅವರು "ತಮ್ಮ ಸಾತ್ವಿಕ ಚಾರಿತ್ರ್ಯ, ಧ್ಯೇಯದ ಬಗ್ಗೆ ಕಠೋರನಿಷ್ಠೆ ಮತ್ತು ಅಸಾಮಾನ್ಯ ಸಂಘಟನಾ ಕೌಶಲ್ಯದಿಂದಾಗಿ ಹೆಡಗೇವಾರರು ತರುಣ ಕ್ರಾಂತಿಕಾರಿಗಳ ಮನಸ್ಸುಗಳನ್ನು ಗೆದ್ದಿದ್ದರು ಹಾಗೂ ತನ್ನ ಬಗ್ಗೆ ಅಪಾರ ಭಕ್ತಿಯಿಂದ ನೋಡುವಂತಹ ದೇಶಭಕ್ತರ ಒಂದು ವಿಶಾಲ ತಂಡವನ್ನೇ ಬೆಳೆಸಿಕೊಂಡಿದ್ದರು" ಎಂದು ಬರೆದಿದ್ದಾರೆ.[4]

ಬಂಗಾಳ ಮತ್ತು ಮಧ್ಯಪ್ರಾಂತಗಳಲ್ಲಿನ ಕ್ರಾಂತಿಕಾರಿ ಚಟುವಟಿಕೆಗಳ ನಡುವೆ ಹೆಡಗೇವಾರರು ಒಂದು ಕೊಂಡಿಯಾಗಿದ್ದರು. ಅವರ ಕಾರಣದಿಂದಾಗಿ 1910-15ರ ನಡುವಿನ ಕಾಲಾವಧಿಯಲ್ಲಿ ಬಂಗಾಳದಿಂದ ಮಧ್ಯಪ್ರಾಂತಕ್ಕೆ ಪಿಸ್ತೂಲ್ ಮತ್ತು ಇನ್ನಿತರ ರೀತಿಯ ಶಸ್ತ್ರಗಳು ಧಾರಾಳವಾಗಿ ರವಾನೆಯಾಗಿದ್ದವು. ಹೆಡಗೇವಾರರು ನಾಗಪುರಕ್ಕೆ ಬಂದಾಗಲೆಲ್ಲ ತಮ್ಮ ಜತೆಯಲ್ಲಿ ಎಲ್ಲಾದರೂ ಅಡಗಿಸಿಕೊಂಡು ಶಸ್ತ್ರಗಳನ್ನು ತರುತ್ತಿದ್ದರು.[5]

ಇಸವಿ 1912ರಲ್ಲಿ ನಾಗಪುರದ ಕ್ರಾಂತಿಕಾರಿಗಳು, ಬಂಗಾಳದ ಕ್ರಾಂತಿಕಾರಿಗಳ ಜತೆ ಸಂಬಂಧ ಹೊಂದಿದ್ದಾರೆಂಬ ವಾಸ್ತವಿಕತೆಯನ್ನು ಮಧ್ಯಪ್ರಾಂತದ ಸರ್ಕಾರವು ಒಪ್ಪಿಕೊಂಡಿತ್ತು. ಹೆಡಗೇವಾರರ ಮೇಲೆ ವಿಶೇಷವಾಗಿ ಕಣ್ಣಿರಿಸುವ ಸಲುವಾಗಿಯೇ ಗೋಪಾಲ ವಾಸುದೇವ ಕೇತ್ಕರ್ ಎಂಬ ವ್ಯಕ್ತಿಯೊಬ್ಬ ಮಧ್ಯಪ್ರಾಂತದಿಂದ ಕಲ್ಕತ್ತಾಗೆ ಸರ್ಕಾರಿ ನಿಯುಕ್ತಿ ಮೇಲೆ ಬಂದಿದ್ದ. ಓರ್ವ ಗುಪ್ತಚರನಾಗಿದ್ದ ಆತ ನ್ಯಾಶನಲ್ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ಪಡೆಯುವುದರಲ್ಲೂ ಸಫಲನಾಗಿದ್ದ. ಆದರೆ ಅವನ ಸಾಚಾತನವೇನೆಂಬುದು ಬಹುಬೇಗನೆ ಬಯಲಾದ ನಂತರ ಆತನೋರ್ವ ಎಲ್ಲರ ಉಪಹಾಸಕ್ಕೆ ಮಾತ್ರ ಯೋಗ್ಯನಾದ ವ್ಯಕ್ತಿಯಾಗಿ ಉಳಿದ. ಕೆಲವೊಮ್ಮೆ ಗೆಳೆಯರಿಂದ ಶಾರೀರಿಕ 'ಪೂಜೆ'ಗೂ ಆತ ಗುರಿಯಾದ. ನಾಗಪುರದ ಪೊಲೀಸರು ಹೆಡಗೇವಾರ್ ಮತ್ತು ಡಾ. ಮುಂಜೆ ಅವರ ಮನೆಗಳನ್ನು ಎರಡೆರಡು ಬಾರಿ ಶೋಧಿಸಿದ್ದರೂ ತಮ್ಮ ಪ್ರಯತ್ನದಲ್ಲಿ ಪೂರಾ ಸೋತಿದ್ದರು. ಅವರು ನಿರೀಕ್ಷಿಸಿದ ಯಾವ ವಸ್ತುವೂ ಅವರಿಗೆ ಸಿಗಲಿಲ್ಲ. ಹೀಗಾಗಿ ಹೆಡಗೇವಾರರು ಏನೆಂಬುದು ಸರ್ಕಾರಕ್ಕೆ ಪೂರಾ ತಿಳಿದಿದ್ದರೂ, ಅವರ ವಿರುದ್ಧ ಯಾವುದೇ ಕ್ರಮ ಕೈಗೊಳ್ಳಲು ಅದು ಅಸಮರ್ಥವಾಗಿಯೇ ಉಳಿದಿತ್ತು.

ಕ್ರಾಂತಿಕಾರಿ ಆಂದೋಳನಗಳಲ್ಲಿ ಕ್ರಿಯಾಶೀಲರಾಗಿರುವ ಜತೆಯಲ್ಲೆ ಅವರು ಬಂಗಾಳದ ಇನ್ನೆರಡು ಜನಾಂದೋಳನಗಳಲ್ಲೂ ಅಷ್ಟೇ ಸಕ್ರಿಯರಾಗಿದ್ದರು. 1911ರ ದಿಲ್ಲಿ ದರಬಾರಿನ ಬಹಿಷ್ಕಾರದ ಆಂದೋಳನದಲ್ಲೂ ಅವರು ಪಾಲ್ಗೊಂಡಿದ್ದರು. ಅದೇ ರೀತಿಯಲ್ಲಿ 1914ರಲ್ಲಿ ನ್ಯಾಶನಲ್ ಮೆಡಿಕಲ್ ಕಾಲೇಜಿನ ಪದವಿಯನ್ನು ಸರ್ಕಾರವು

---

3. ಅತುಲ್ಯರತ್ನ ಘೋಷ್, 'ಮಾಡರ್ನ್ ರಿವ್ಯೂ' ಮಾರ್ಚ್ 1941
4. ಬಾಳಶಾಸ್ತ್ರಿ ಹರದಾಸ, ಆರ್ಮ್ಡ್ ಸ್ಟ್ರಗಲ್ ಫಾರ್ ಫ್ರೀಡಂ ಪು. 373
5. ಜಿ. ವಿ. ಕೇತ್ಕರ್, ರಣಝುಣಕರ್, ಪಿ.ಸಿ ಖಾನಖೋಜೆಯಾಂಚಾ ಚರಿತ್ರ, ಪು. 12

# ಪ್ರಥಮ ವಿಶ್ವ ಯುದ್ಧ ಮತ್ತು ಡಾ. ಹೆಡಗೇವಾರ್

ಭಾರತ ಸರ್ಕಾರದ ಗುಪ್ತಚರ ವಿಭಾಗವು 1914ರ ಜನವರಿಯಲ್ಲಿ 'ಭಾರತದ ರಾಜಕೀಯ ಅಪರಾಧಿಗಳು' ಎಂಬ ಒಂದು ಪುಸ್ತಕವನ್ನು ಪ್ರಕಟಿಸಿತು. ಇದರಲ್ಲಿ ಸೇರಿಸಲಾಗಿದ್ದುದು ಕ್ರಾಂತಿಕಾರಿ ಸಂಘಟನೆಗಳಲ್ಲಿ ಮತ್ತು ಅದರ ಚಟುವಟಿಕೆಗಳಲ್ಲಿ ಸಹಭಾಗಿಯಾಗಿರುವವರನ್ನು ಮತ್ತು ಬಾಂಬ್ ಹಾಗೂ ಇತರ ಶಸ್ತ್ರಗಳನ್ನು ತಯಾರಿಸಲು ತಿಳಿದಿರುವವರನ್ನು ಮಾತ್ರ. ಪೊಲೀಸ್ ಮತ್ತು ಗುಪ್ತಚರ ವಲಯಗಳಲ್ಲಿ ಈ ಪುಸ್ತಕದ ಉಲ್ಲೇಖವಾಗುತ್ತಿದ್ದುದು 'ಬುಕ್ 1914' ಎಂಬ ಹೆಸರಲ್ಲಿ. ಇದರಲ್ಲಿ ಮಧ್ಯಪ್ರಾಂತದವರು ಎಂದು ಹೇಳಲಾಗಿರುವವರ ಪೈಕಿ ಡಾ. ಹೆಡಗೇವಾರರ ಹೆಸರು, ಚಿತ್ರ, ಚಹರೆ, ನೀಲ್ ಸಿಟಿ ಹೈಸ್ಕೂಲ್‌ನಿಂದ ಆರಂಭಿಸಿ ಅನುಶೀಲನಾ ಸಮಿತಿಯವರೆಗಿನ ಅವರ ಎಲ್ಲ ಚಟುವಟಿಕೆಗಳ ಮಾಹಿತಿಗಳು ವಿವರವಾಗಿ ಇವೆ.

ಈ ಕಾರಣಕ್ಕಾಗಿಯೇ ಪ್ರಥಮ ವಿಶ್ವ ಯುದ್ಧವಾರಂಭವಾದ ನಂತರ, ಬ್ರಿಟಿಷ್ ಸೇನೆಯಲ್ಲಿ ಚಿಕಿತ್ಸೆಯ ಸೇವೆ ಸಲ್ಲಿಸುವ ಸಲುವಾಗಿ ಅವರು 1915ರಲ್ಲಿ ಅರ್ಜಿಯನ್ನು ಸಲ್ಲಿಸಿದಾಗ, ಅದನ್ನು ಯಾವುದೇ ಕಾರಣ ನೀಡದೆಯೇ ತಿರಸ್ಕರಿಸಲಾಗಿತ್ತು. ವಾಸ್ತವಿಕವಾಗಿ ಆಗ ಸಾಮ್ರಾಜ್ಯವಾದಿ ಸರ್ಕಾರದ ಸೇನೆಯ ಚಿಕಿತ್ಸಾ ಸೇವಾ ವಿಭಾಗದಲ್ಲಿ ಚಿಕಿತ್ಸಕರ ಭಾರೀ ಕೊರತೆಯಿತ್ತು. ಸೇನೆಗೆ ಚಿಕಿತ್ಸಕರು ಧಾರಾಳವಾಗಿ ಬೇಕಾಗಿಯೂ ಇದ್ದರು. ಡಾ. ಹೆಡಗೇವಾರರು ಕಲ್ಕತ್ತಾದ ತಮ್ಮ ಸಹಕಾರಿಗಳ ಜತೆ ಸೇರಿ ಒಂದು ಯೋಜನೆಯನ್ನು ರೂಪಿಸಿದ್ದರು. ತಾವೆಲ್ಲರೂ ಸೇನೆಯಲ್ಲಿ ಭರ್ತಿಯಾಗಿ 1857ರ ಸ್ವಾತಂತ್ರ್ಯ ಸಮರದ ಸಂದರ್ಭದಲ್ಲಿ ಮಾಡಿದ ರೀತಿಯಲ್ಲೆ ಒಳಗಿದ್ದುಕೊಂಡು ವಿದ್ರೋಹ ನಡೆಸಬೇಕೆಂಬುದು ಅವರ ಯೋಜನೆಯಾಗಿತ್ತು. ಅವರ ಈ ಯೋಜನೆಯು ಪ್ರಥಮ ವಿಶ್ವಸಮರದ ಸಂದರ್ಭದಲ್ಲಿ ಅವರು ಯೋಚಿಸುತ್ತಿದ್ದ ರೀತಿಯ ಮೇಲೆ ಬೆಳಕು ಚೆಲ್ಲುವಂತಿದೆ.

1915ರ ಕೊನೆಯಲ್ಲಿ ಅವರು ನಾಗಪುರಕ್ಕೆ ವಾಪಸಾದರು. ಆ ದಿನಗಳಲ್ಲಿ ಮಧ್ಯಪ್ರಾಂತದ ರಾಷ್ಟ್ರೀಯವಾದಿಗಳು ಸಹ ದೇಶದ ಇನ್ನುಳಿದ ಭಾಗಗಳ ರಾಷ್ಟ್ರೀಯವಾದಿಗಳ ರೀತಿಯಲ್ಲೆ ಸಾಮ್ರಾಜ್ಯವಾದಿಗಳ ವಂಚನೆಗೆ ಬಲಿಯಾಗಿದ್ದರು. ವಿಶ್ವ ಸಮರದಲ್ಲಿ ಬ್ರಿಟನ್ ಗೆದ್ದ ನಂತರ ಭಾರತಕ್ಕೆ 'ಡೊಮಿನಿಯನ್ ಸ್ಟೇಟಸ್' (ಸಾಮ್ರಾಜ್ಯಾಂತರ್ಗತ ಸ್ಥಾನಮಾನ) ನೀಡುವುದು ಎಂಬ ಭ್ರಮೆಯನ್ನು ಆಗ ಎಲ್ಲ ಕಡೆಗಳಲ್ಲಿ ಹರಡಿಸಲಾಗಿತ್ತು.

ಮಹಾತ್ಮಾ ಗಾಂಧೀಜಿ, ಲೋಕಮಾನ್ಯ ತಿಲಕರು ಮತ್ತು ಅವರ ಅನುಯಾಯಿಗಳೂ ಕೂಡ ಯುದ್ಧದಲ್ಲಿ ತೊಡಗಿರುವ ಬ್ರಿಟನ್‌ನ ಪರವಾಗಿ, ನೇರವಾಗಿ ಹಾಗೂ ಅಪ್ರತ್ಯಕ್ಷವಾಗಿಯೂ ಸಹಾಯ ಕೊಡಿಸುವ ಪ್ರಯತ್ನಗಳಲ್ಲಿ ನಿರತರಾಗಿದ್ದರು. ಮಧ್ಯಪ್ರಾಂತದಲ್ಲಿನ ಪರಿಸ್ಥಿತಿಯಂತೂ ಇನ್ನೂ ಭಿನ್ನರೂಪ ತಾಳಿತ್ತು. ಸಾಮ್ರಾಜ್ಯವಾದಿಗಳ ನಡುವಿನ ಈ ಯುದ್ಧದಲ್ಲಿ ಇಂಗ್ಲೆಂಡ್ ಪರವಾಗಿ ಹೋರಾಡಲು ಸೇನೆಗೆ ಸೇರುವಂತೆ

ರಾಷ್ಟ್ರೀಯ ನಾಯಕರೇ ತರುಣರನ್ನು ಪ್ರೋತ್ಸಾಹಿಸುತ್ತಿದ್ದರು. ಅದಕ್ಕಾಗಿ ರಚಿಸಲಾಗಿದ್ದ 'ಪ್ರಾಂತೀಯ ಐಕ್ಯ ಸಮಿತಿ'ಯಲ್ಲಿ ಪ್ರಾಂತದ ತಿಲಕವಾದಿ ಪ್ರಮುಖರೆಲ್ಲರೂ ಸೇರಿಕೊಂಡಿದ್ದರು. ಅದಕ್ಕೆ ಅಧ್ಯಕ್ಷರಾಗಿ ಜಿ.ಎಸ್. ಖಾಪರ್ಡೆ ಹಾಗೂ ಡಾ. ಮುಂಜೆ ಮತ್ತು ನೀಲಕಂಠರಾವ್ ಉಧೋಜಿ ಅವರು ಕ್ರಮವಾಗಿ ಕಾರ್ಯದರ್ಶಿ ಮತ್ತು ಉಪಾಧ್ಯಕ್ಷರಾಗಿದ್ದರು. ತಾವು ಒಬ್ಬೊಬ್ಬರೂ ಎಷ್ಟು ಮಂದಿಯನ್ನು ಸೇನೆಗೆ ಭರ್ತಿಮಾಡಿಸುವುದರಲ್ಲಿ ಸಫಲರಾಗುತ್ತೇವೆ ಎಂಬ ಬಗ್ಗೆ ಅವರವರಲ್ಲೇ ಸ್ಪರ್ಧೆಯೂ ಸಹ ನಡೆಯುತ್ತಿತ್ತು. ಡಾ. ಮುಂಜೆ ಅವರು "ನಮ್ಮ ಪ್ರಾಂತವೊಂದರಲ್ಲೇ ಶಿಕ್ಷಿತರು, ಚುರುಕಾಗಿ ಗಟ್ಟಿಮುಟ್ಟಾಗಿರುವವರು ಮತ್ತು ಚೆನ್ನಾಗಿ ಸುರಿತವರು, ಇಂತಹ ಐವತ್ತು ಸಾವಿರದಿಂದ ಒಂದು ಲಕ್ಷದವರೆಗೆ ತರುಣರನ್ನು ಸೇನೆಗೆ ಭರ್ತಿ ಮಾಡಿಸುವಲ್ಲಿ ಆಶ್ಚರ್ಯಪಡಬೇಕಾದುದೇನೂ ಇಲ್ಲ ಎಂದು ನನ್ನ ಅನಿಸಿಕೆ" ಎಂಬ ಪತ್ರವನ್ನು ಸಹ ಬರೆದಿದ್ದರು.[1]

ಡಾ. ಹೆಡಗೇವಾರರಿಗೆ ಇದೊಂದೂ ಇಷ್ಟವಿರಲಿಲ್ಲ. ಆದರೂ ಇಂತಹ ಪರಿಸ್ಥಿತಿಯಲ್ಲೂ ಅವರ ಉತ್ಸಾಹವಾಗಲಿ, ಆತ್ಮವಿಶ್ವಾಸವಾಗಲಿ ಕಿಂಚಿತ್ತೂ ಕಡಿಮೆಯಾಗಲಿಲ್ಲ. 'ಇಂಗ್ಲೆಂಡಿನ ಕಷ್ಟಗಳು ಭಾರತಕ್ಕೆ ಸದವಕಾಶಗಳು' ಎಂಬ ತಮ್ಮ ನಂಬಿಕೆಯಲ್ಲಿ ಅವರು ದೃಢವಾಗಿದ್ದರು. ಯುದ್ಧರಂಗದಲ್ಲಿ ಇಂಗ್ಲೆಂಡಿನ ದೌರ್ಬಲ್ಯದ ಲಾಭ ಪಡೆದು, ದೇಶದ ಸಂಪೂರ್ಣ ಸ್ವಾತಂತ್ರ್ಯದ ಪ್ರಾಪ್ತಿಗಾಗಿ ಅದನ್ನು ಬಳಸಲು ಸಂಘಟಿತ ರೀತಿಯಲ್ಲಿ ಪ್ರಯತ್ನಿಸಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ಈ ನಿಟ್ಟಿನಲ್ಲಿ ಪ್ರಾಂತದ ರಾಷ್ಟ್ರೀಯ ನಾಯಕರ ಜತೆ ಚರ್ಚೆಯನ್ನೂ ಅವರು ಆರಂಭಿಸಿದ್ದರು. "ಜತೆಗಾರರಾಗಿ ಯಾರೂ ಇಲ್ಲದಿದ್ದಲ್ಲಿ, ಒಬ್ಬಂಟಿಯಾಗಿಯಾದರೂ ಹೆಜ್ಜೆ ಮುಂದಿಡಬೇಕು" ಎಂಬ ನಂಬಿಕೆಯನ್ನು ಮೈಗೂಡಿಸಿಕೊಂಡಿದ್ದವರು ಅವರು. ಅದಕ್ಕಾಗಿ 'ಸಹಕಾರವಿಲ್ಲ, ಬಂಡಾಯ' ಎಂಬ ಗುರಿಯನ್ನಿರಿಸಿಕೊಂಡು ಯಾವುದೇ ಅಳುಕಿಲ್ಲದೆ, ಯಾರಿಗೂ ಅಂಜದೆ, ಒಬ್ಬರೇ ಆದರೂ ಎಲ್ಲೆಲ್ಲೂ ಚುರುಕಾಗಿ ಅವರು ಓಡಾಡಿದರು. ಅವರ ಇಂತಹ ಪ್ರಯತ್ನದ ಫಲವಾಗಿಯೇ ಕ್ರಮೇಣ ನೀಲಕಂಠರಾವ್ ಉಧೋಜಿ, ಎಂ.ಆರ್. ಚೋಳ್ಕರ್, ಭವಾನಿಶಂಕರ ನಿಯೋಗಿ, ಲ. ವಾ. ಪರಾಂಜಪೆ ಮತ್ತು ನಾರಾಯಣರಾವ್ ಅಲೇಕರ್ ಮೊದಲಾದವರು, ಸೇನೆಗೆ ಭರ್ತಿ ಮಾಡಿಸುವಂತಹ ಸರ್ಕಾರದ ಪ್ರಯತ್ನಗಳಲ್ಲಿ ಅಡ್ಡಿ ಆತಂಕಗಳನ್ನು ಸೃಷ್ಟಿಸಲು ಆರಂಭಿಸಿದರು.[3]

ಒಂದು ಕಡೆ ಹೆಚ್ಚಿನ ರಾಷ್ಟ್ರೀಯ ನಾಯಕರೆಲ್ಲ ಇಂಗ್ಲೆಂಡಿನ ಗೆಲುವಿಗಾಗಿ ಜನರನ್ನು ಮತ್ತು ಹಣವನ್ನು ಕೂಡಿಸಲು ಹೊರಟಿದ್ದಲ್ಲಿ, ಇನ್ನೊಂದು ಕಡೆ ಡಾ. ಹೆಡಗೇವಾರರು ಭಾರತದ ಸ್ವಾತಂತ್ರ್ಯ ಪ್ರಾಪ್ತಿಯ ಗುರಿಗಾಗಿ 1916ರ ಫೆಬ್ರವರಿ ಮಾರ್ಚ್‌ನಲ್ಲಿ ಕ್ರಾಂತಿಕಾರಿಗಳನ್ನು ಮತ್ತು ಅಸ್ತ್ರದ ಸಾಮಗ್ರಿಗಳನ್ನು ಕಲೆ ಹಾಕುವುದರಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಇದರ ನಡುವೆ ಕೆಲ ಕಾಲ ತಿಲಕರ ಹೋಂ ರೂಲ್ ಚಳವಳಿಯಲ್ಲೂ ಅವರು ಕ್ರಿಯಾಶೀಲರಾದರು. ಆದರೆ ಈ ಚಳವಳಿಯ ವೇದಿಕೆಯಿಂದ ಅವರು ಪೂರ್ಣ ಸ್ವಾತಂತ್ರ್ಯದ ತಮ್ಮ ವಾದವನ್ನು ಉಗ್ರ ಭಾಷೆಯಲ್ಲಿ ಪ್ರತಿಪಾದಿಸುತ್ತಿದ್ದುದರಿಂದ ಹೋಂ ರೂಲ್ ಆಂದೋಲನದ ಸ್ಥಾನೀಯ ನಾಯಕರು ಅವರನ್ನು ಉಪೇಕ್ಷಿಸಲಾರಂಭಿಸಿದರು

1. ಮುಂಜೆ ದಸ್ತಾವೇಜು, ಫೈಲ್ ಕ್ರ. 1918–19, [illegible]
2. ಮುಂಜೆ ದಸ್ತಾವೇಜು, ಫೈಲ್ ಕ್ರ. 1918–19, [illegible]
3. ಹಿತವಾದ, 29 ಜೂನ್ 1918, ಪು. 7

ಪರಿಣಾಮವಾಗಿ ಡಾ. ಹೆಡಗೇವಾರರು ಹೋಂ ರೂಲ್ ಚಳವಳಿಯಿಂದ ತಾವಾಗಿಯೇ ದೂರವಾದರು.

## ಬಂಡಾಯದ ಯೋಜನೆ

ಮಧ್ಯಪ್ರಾಂತದಲ್ಲಿ ಸಶಸ್ತ್ರ ಬಂಡಾಯಕ್ಕಾಗಿ ಕ್ರಾಂತಿಕಾರಿ ಸಂಘಟನೆಯನ್ನು ಕಟ್ಟಲು ಅವರು ತಮ್ಮ ಬಾಲ್ಯದ ಮಿತ್ರ ಭಾವೂಜಿ ಕಾವರೆ ಅವರಿಗೆ ಸಹಕಾರ ನೀಡಿದರು. ಇಸವಿ 1908ರಿಂದಲೂ ಅವರಿಬ್ಬರೂ ಪರಸ್ಪರ ಪರಿಚಿತರು ಮತ್ತು ಒಬ್ಬರಿನ್ನೊಬ್ಬರಿಗೆ ಸಂಪೂರ್ಣ ವಿಶ್ವಾಸಪಾತ್ರರೂ ಆಗಿದ್ದವರು. ಇಬ್ಬರ ಚಿಂತನೆಯ ರೀತಿಯೂ ಒಂದೇ ಆಗಿತ್ತು. ಇಬ್ಬರೂ ಸೇರಿ ಪ್ರಾಂತದಾದ್ಯಂತ ಬಿರುಗಾಳಿ ಪ್ರವಾಸ ನಡೆಸಿದರು. ಪೊಲೀಸರ ಕಣ್ಣಿಗೆ ಮಣ್ಣೆರಚಲು 'ನರೇಂದ್ರ ಮಂಡಲ' ಎಂಬ ಸಾಂಸ್ಕೃತಿಕ ವೇದಿಕೆಯನ್ನು ಅವರು ಹುಟ್ಟುಹಾಕಿದ್ದರು. ಅವರ 'ಬೈಠಕ್'ಗಳೆಲ್ಲ ನಡೆಯುತ್ತಿದ್ದುದು ಈ 'ನರೇಂದ್ರ ಮಂಡಲ'ದ ಹೆಸರಲ್ಲಿ. ಅದಲ್ಲದೆ, ಮದುವೆ ಅಥವಾ ಇನ್ನಿತರ ವಿವಿಧ ಸಾಮಾಜಿಕ ಪ್ರಸಂಗಗಳು ಪರಸ್ಪರ ಸೇರುವಿಕೆಗೆ, ಹಣ ಸಂಗ್ರಹಕ್ಕೆ ಅವರಿಗೆ ಅನುಕೂಲ ಅವಕಾಶಗಳನ್ನೊದಗಿಸುತ್ತಿದ್ದವು.

ನಾಗಪುರ ಮತ್ತು ವರ್ಧಾಗಳಲ್ಲಿ ಕ್ರಾಂತಿಕಾರಿಗಳ ಆಯ್ಕೆ ಮತ್ತು ಪ್ರಶಿಕ್ಷಣಕ್ಕಾಗಿ ವ್ಯಾಯಾಮ ಶಾಲೆ ಮತ್ತು ವಾಚನಾಲಯಗಳನ್ನು ಅವರು ಆರಂಭಿಸಿದರು. ಡಾ. ಹೆಡಗೇವಾರರಿಗೆ ಅವರ ಕೆಲಸಗಳಲ್ಲಿ ಸಹಾಯಕರಾಗಿದ್ದವರು ನಾಗಪುರದಲ್ಲಿ ಅಣ್ಣಾ ಖೋತ್ ಮತ್ತು ವರ್ಧಾದಲ್ಲಿ ಹರಿಕೃಷ್ಣ ಜೋಶಿ. ತರುಣರ ಆಯ್ಕೆ ಸಂದರ್ಭದಲ್ಲಿ ಅವರಲ್ಲಿರುವ ಆತ್ಮವಿಶ್ವಾಸ, ತ್ಯಾಗದ ಮನೋಭಾವ, ಸಾಹಸದ ಸ್ವಭಾವ, ಆದೇಶವನ್ನು ಗೌರವಿಸಿ ಕೆಲಸ ನಿರ್ವಹಿಸುವಂತಹ ಮಾನಸಿಕತೆ ಮುಂತಾದ ಸಂಗತಿಗಳನ್ನು ಮುಖ್ಯವಾಗಿ ಗಮನಿಸಲಾಗುತ್ತಿತ್ತು. ಒಮ್ಮೆಯಂತೂ ಪರೀಕ್ಷೆಯ ಸಲುವಾಗಿ ಮೂವರು ತರುಣರಿಗೆ ಬಾವಿಗೆ ಹಾರಲು ತಿಳಿಸಲಾಗಿತ್ತು. ಅವರಲ್ಲಿ ಓರ್ವ ಸಿದ್ಧನಾದ ಹಾಗೂ ಇನ್ನಿಬ್ಬರು ಅಂಜಿದರು. ಸಂಘಟನೆಯಲ್ಲಿ ಸೇರಲು ಆಯ್ಕೆಯಾದವರಿಗೆ ಓದಲು ಮ್ಯಾಜಿನಿ, ಜೋನ್ ಆಫ್ ಆರ್ಕ್, ಶಿವಾಜಿಯ ಜೀವನ ಚರಿತ್ರೆ, ಸಾವರಕರರಿಂದ ರಚಿತವಾಗಿದ್ದ 'ಇಂಡಿಯನ್ ವಾರ್ ಆಫ್ ಇಂಡಿಪೆಂಡೆನ್ಸ್', ಬಂಗಾಳದ ಕ್ರಾಂತಿಕಾರಿಗಳ ಕತೆಗಳು, ಇತ್ಯಾದಿ ಸಾಹಿತ್ಯಗಳನ್ನು ಒದಗಿಸಲಾಗುತಿತ್ತು. ಹೀಗೆ ಆಯ್ಕೆಯಾದ ತರುಣರಲ್ಲಿ ಪ್ರಖರ ರಾಷ್ಟ್ರವಾದದ ಭಾವನೆಯನ್ನು ತಟ್ಟಿ ಎಬ್ಬಿಸುವುದರಲ್ಲಿ ಅಗತ್ಯವೆನಿಸುವ ಎಲ್ಲ ಆಯಾಮಗಳನ್ನೂ ಡಾ. ಹೆಡಗೇವಾರರು ಬಳಸುತಿದ್ದರು. ಆ ಮೂಲಕ ತರುಣರಲ್ಲಿ ಕ್ರಾಂತಿಕಾರಿಯಾಗಲು ಪ್ರಬಲವಾದ ಇಚ್ಛಾಶಕ್ತಿಯನ್ನು ಎಚ್ಚರಿಸುವ ಪ್ರಯತ್ನ ಅವರದಾಗಿರುತ್ತಿತ್ತು. ಬಂಗಾಳದ ಕ್ರಾಂತಿಕಾರಿ ಆಂದೋಳನವನ್ನು ಅತಿ ಸಮೀಪದಿಂದ ನೋಡಿ ತಿಳಿದಿದ್ದವರು ಅವರು. ಕೇವಲ ಭಾವನಾಶೀಲರಾಗಿ ಈ ಕಾರ್ಯದಲ್ಲಿ ಸೇರಲು ಉತ್ಸಾಹ ಪಡುವಂತಹವರು ಒಂದಿಷ್ಟು ಒತ್ತಡ ಹೆಚ್ಚಾದಲ್ಲಿ, ದಮನಕ್ಕೊಳಗಾದಲ್ಲಿ ಅಥವಾ ಅಲ್ಪಸ್ವಲ್ಪ ಸೋಲು ಕಂಡಲ್ಲಿ ಮತ್ತು ಕೆಲವೊಮ್ಮೆ ಇತರ ಸಹಕಾರಿಗಳ ಜತೆ ಭಿನ್ನಾಭಿಪ್ರಾಯ ಬೆಳೆದಲ್ಲಿ ಸಂಘಟನೆಯಿಂದ ದೂರವಾಗುವುದನ್ನು ಅವರು ಅನುಭವದಿಂದ ಕಂಡಿದ್ದರು. ಅದಕ್ಕಾಗಿ ಇಂತಹ ಹಲವಾರು ವಿಧಗಳಲ್ಲಿ ಪರೀಕ್ಷೆಗೊಳಪಡಿಸಿ, ಅದರಿಂದ ಆಯ್ಕೆಯಾದ ಸುಮಾರು 150 ಕ್ರಾಂತಿಕಾರಿಗಳ ಸಂಘಟನೆಯೊಂದು ಅವರ ಕೈಕೆಳಗೆ ರೂಪುಗೊಂಡಿತು. ಆಯ್ಕೆಯಾದ ತರುಣರಿಗೆ ಪ್ರಶಿಕ್ಷಣ ನೀಡುತ್ತಿದ್ದವರು ನಾನಾಸಾಹೇಬ ತೇಲಂಗ್ ಮತ್ತು ಭಾವೂಸಾಹೇಬ ಟಾಲಾಟುಲೆ ಅವರು. ಈ ಕ್ರಾಂತಿ ಸಂಘಟನೆಯಲ್ಲಿ ನಾನಾಸಾಹೇಬ ತೇಲಂಗ್, ಗಂಗಾಪ್ರಸಾದ ಪಾಂಡೆ ಮತ್ತು ವಾಮನರಾವ್ ಧರ್ಮಾಧಿಕಾರಿ ಪ್ರಮುಖ

ನಾಯಕರಾಗಿದ್ದರು ಡಾ. ಹೆಡಗೇವಾರರು ಬೇರೆ ಬೇರೆ ವಿಧದ ಕೆಲಸಗಳನ್ನು ಇವರ ಮೂಲಕ ಮಾಡಿಸುತ್ತಿದ್ದರು.

ನಾನಾಸಾಹೇಬ ಟಾಲಾಟುಲೆ ಗುರಿಭೇದನ ಶಿಕ್ಷಣ ನೀಡುತ್ತಿದ್ದರು. ಧರ್ಮಾಧಿಕಾರಿ ಗೋವಾ ಹಾಗೂ ಇನ್ನಿತರ ಪ್ರದೇಶಗಳಿಗೆ ಹೋಗಿ ಶಸ್ತ್ರಗಳನ್ನು ತರುವ ಕೆಲಸ ಮಾಡುತ್ತಿದ್ದರು. ಗಂಗಾ ಪ್ರಸಾದ ಪಾಂಡೆಯನ್ನು ಇಪ್ಪತ್ತು ತರುಣ ಕ್ರಾಂತಿಕಾರಿಗಳ ಜತೆಗೂಡಿಸಿ ಉತ್ತರ ಭಾರತಕ್ಕೆ ಕಳುಹಿಸಲಾಗಿತ್ತು. ರಾಜಸ್ಥಾನದಲ್ಲಿನ ಅಜ್ಮೀರವನ್ನು ಪಾಂಡೆ ತನ್ನ ಕೇಂದ್ರವಾಗಿ ಮಾಡಿಕೊಂಡಿದ್ದ. ಅವನಿಗೆ ಅಲ್ಲಿನ ಸುವಿಖ್ಯಾತ ರಾಷ್ಟ್ರವಾದಿ ನಾಯಕ ಚಾಂದ್ ಕರಣ ಶಾರದಾ ಅವರಿಂದ ಪೂರ್ಣ ಸಹಕಾರ ಲಭಿಸಿತ್ತು. ಈ ಸಂಘಟನೆಯಲ್ಲಿ ಇದ್ದ ಇನ್ನೊರ್ವ ಕ್ರಿಯಾಶೀಲ ಕಾರ್ಯಕರ್ತರೆಂದರೆ ನಾಗಪುರದ ಹಿರಿಯ ವಕೀಲ ವಿ. ವಿ. ಕೇಳ್ಕರ್ ಅವರು. ಅವರಿಂದಲೇ ಬಾಳಾಜಿ ಹುದ್ದಾರ್ ಎಂಬ ಇನ್ನೊರ್ವ ತರುಣ ಈ ಕ್ರಾಂತಿಕಾರಿ ಸಂಘಟನೆಯೊಳಗೆ ಬಂದು ಸೇರಿದ. ಹುದ್ದಾರ್ ಈ ಸಂಘಟನೆಗೆ 'ಗುಪ್ತ ಸ್ವಾತಂತ್ರ್ಯಕಾರಿ ದಳ' ಎಂಬ ಹೆಸರನ್ನಿರಿಸಿದ್ದರು.[4] ಸಂಘಟನೆಗಾಗಿ ಹೊಸ ತರುಣರನ್ನು ಗುರುತಿಸಿ, ಸಂಪರ್ಕಿಸುವ ಕೆಲಸವನ್ನು ಮಾಡುತ್ತಿದ್ದವರು ವರ್ಧಾದ ನಾನಾಜಿ ಪುರಾಣಿಕ್ ಮತ್ತು ಬಾಬಾರಾವ್ ಪುರಾಣಿಕ್ ಅವರು. ಇವರಿಬ್ಬರೂ ಈ ಕೆಲಸದ ಸಲುವಾಗಿ ಪ್ರಾಂತದಲ್ಲೆಲ್ಲೆಡೆ ಪ್ರವಾಸ ಕೈಗೊಳ್ಳುತ್ತಿದ್ದರು. ತರಬೇತಿ ಪಡೆದ ತರುಣರಿಗೆ ಡಾ. ಹೆಡಗೇವಾರ್ ಮತ್ತು ಭಾವೂಜಿ ಕಾವರೆ ಅವರು ಶಿವಾಜಿ ಮತ್ತು ಸಮರ್ಥ ರಾಮದಾಸರ ಹೆಸರಲ್ಲಿ, ದೇಶದ ಸ್ವಾತಂತ್ರ್ಯಪ್ರಾಪ್ತಿಗಾಗಿ ಸರ್ವತ್ಯಾಗಕ್ಕೆ ಸಿದ್ಧರಿರಬೇಕು ಎನ್ನುವಂತಹ ಪ್ರತಿಜ್ಞೆ ಮಾಡಿಸುತ್ತಿದ್ದರು.

ಕ್ರಾಂತಿಕಾರಿ ತರುಣರ ಬೈಠಕ್‌ಗಳು ನಾಗಪುರದಲ್ಲಿ ತುಳಸಿಬಾಗ್, ಕರ್ನಲ್ ಬಾಗ್, ಮೋಹಿತೆವಾಡ ಮತ್ತಿತರ ಮಂದಿರಗಳಲ್ಲಿ ನಡೆಯುತ್ತಿದ್ದವು. ಶಸ್ತ್ರಗಳ ಸಂಗ್ರಹಕ್ಕಾಗಿ ಹೊಸ ಹೊಸ ವಿಧಾನಗಳನ್ನು ಹುಡುಕಲಾಗುತ್ತಿತ್ತು. 1917ರ ಕೊನೆಯ ಭಾಗದಲ್ಲಿ ಪಿಸ್ತೂಲ್‌ಗಳ ಖರೀದಿಗಾಗಿ ವಾಮನರಾವ್ ಧರ್ಮಾಧಿಕಾರಿಯನ್ನು ಗೋವಾಗೆ ಕಳುಹಿಸಲಾಗಿತ್ತು. 1918ರಲ್ಲಿ ಒಮ್ಮೆ ಸೈನಿಕರ ಸಮವಸ್ತ್ರ ಧರಿಸಿದ್ದ ಕೆಲವು ಕ್ರಾಂತಿಕಾರಿ ತರುಣರು ನಾಗಪುರ ಮೂಲಕ ಹಾದುಹೋಗುವ ಒಂದು ರೈಲಿನಲ್ಲಿನ ಡಬ್ಬಿಯೊಂದರಿಂದ ಶಸ್ತ್ರಗಳ ಒಂದು ಪೆಟ್ಟಿಗೆಯನ್ನೇ ಉಡಾಯಿಸಿದ್ದರು. ಇನ್ನೂ ಕೆಲವು ಆಯ್ದ ತರುಣರಿಗೆ ಛದ್ಮವೇಷ ಹಾಕಿಸಿ, ಅವರಿಂದ ಹಲವು ಬಾರಿ ಡಾ. ಹೆಡಗೇವಾರರು ಶಸ್ತ್ರಗಳ ಕಳ್ಳತನ ಮಾಡಿಸಿದ ಪ್ರಸಂಗಗಳೂ ಇವೆ.

ಪಂಜಾಬ್, ರಾಜಸ್ಥಾನ ಮತ್ತು ದೇಶದ ಇನ್ನೂ ಹಲವು ಪ್ರದೇಶಗಳಲ್ಲಿನ ಕ್ರಾಂತಿಕಾರಿಗಳ ಜತೆ ಡಾ. ಹೆಡಗೇವಾರರಿಗೆ ಕ್ರಿಯಾಶೀಲ ಸಂಪರ್ಕವಿತ್ತು. ಬಂಗಾಳದ ಅನುಶೀಲನಾ ಸಮಿತಿಯ ಅನೇಕ ಸದಸ್ಯರಂತೂ ಅವರ ಜತೆಯಲ್ಲಿ ನಿಕಟವಾಗಿಯೇ ಇದ್ದವರು. ನಾಗಪುರದಲ್ಲಿ ಕಲೆ ಹಾಕಲಾಗುತ್ತಿದ್ದ ಶಸ್ತ್ರಗಳನ್ನು ಮತ್ತು ಹಣವನ್ನು ಅಗತ್ಯಕ್ಕನುಗುಣವಾಗಿ ಇತರ ಕೇಂದ್ರಗಳಿಗೆ ಕಳುಹಿಸಲಾಗುತ್ತಿತ್ತು.

ಅವರೆ ವಿಶ್ವ ಯುದ್ಧದಲ್ಲಿ ಜರ್ಮನಿಯ ಸೋಲಿನ ನಂತರ ಬ್ರಿಟನ್ನಿನ ಸ್ಥಿತಿ ಇನ್ನೂ ಹೆಚ್ಚು ಬಲವಾಯಿತು. ಯುದ್ಧ ಕೊನೆಗೊಂಡ ಮೇಲೆ ಬ್ರಿಟಿಷ್ ಸರ್ಕಾರ ಕ್ರಾಂತಿಕಾರಿ ಸಂಘಟನೆಯನ್ನು ಪೂರಾ ದಮನಿಸಲು ತನ್ನ ಲಕ್ಷ್ಯವನ್ನು ಕೇಂದ್ರೀಕರಿಸಿತು. ಪರಿಣಾಮವಾಗಿ

---

4 ಬಾಳಾಜಿ ಹುದ್ದಾರ್, ದಿ ಆರ್‌ಎಸ್‌ಎಸ್ ಆಂಡ್ ನೇತಾಜಿ, ದಿ ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ, 7–13, ಅಕ್ಟೋಬರ್ 1979, ಪುಟ 23.

ಪೊಲೀಸರು ಹೆಚ್ಚು ಚುರುಕಾದರು. ಈ ಹಂತದಲ್ಲಿ ಡಾ. ಹೆಡಗೇವಾರರು ತಿಲಕರಿಂದ ಸಹಕಾರವನ್ನು ಅಪೇಕ್ಷಿಸಿದ್ದರು. ಡಾ. ಮುಂಜೆ ಅವರಿಂದ ಪರಿಚಯ ಪತ್ರ ಪಡೆದು ಅವರು ಪುಣೆಗೆ ಹೋದರು. ಅಲ್ಲಿ ಅವರು ಎರಡು ದಿನಗಳ ಕಾಲ ಇದ್ದರು.[5] ಅವರ ಅಪೇಕ್ಷೆಯಿದ್ದುದು ಭಾರತದ ಪೂರ್ಣ ಸ್ವಾತಂತ್ರ್ಯದ ಘೋಷಣೆಯಾದಲ್ಲಿ, ಅದರಿಂದ ದೇಶದಲ್ಲಂತೂ ಕ್ರಾಂತಿಯೇ ಆಗುವುದು, ಜತೆಯಲ್ಲಿ ವಿಶ್ವದ ಅನೇಕ ಭಾಗಗಳಲ್ಲೂ ಈ ಘೋಷಣೆಯಾಗಬೇಕು ಎಂದು. ವಿದೇಶಗಳಲ್ಲಿದ್ದ ಭಾರತೀಯ ಕ್ರಾಂತಿಕಾರರ ಜತೆ ಡಾ. ಹೆಡಗೇವಾರರಿಗೆ ಸಂಪರ್ಕವಿತ್ತೇ ಎಂಬ ಬಗ್ಗೆ ಯಾವುದೇ ಆಧಾರಗಳಿಲ್ಲ. ಆದರೆ ಪಿ.ಎಸ್. ಖಾನಖೋಜೆ ಅವರ ಮೂಲಕ ಗದರ್ ಪಕ್ಷದ ಜತೆ ಅವರಿಗೆ ಸಂಪರ್ಕವಿದ್ದಿರುವ ಸಾಧ್ಯತೆಯಿದೆ. ಡಾ. ಹೆಡಗೇವಾರರ ಸಲಹೆಯನ್ನು ಅವ್ಯಾವಹಾರಿಕವೆಂದು ತಿಳಿದ ತಿಲಕರು ಅದಕ್ಕೆ ತಮ್ಮ ಅಸಮ್ಮತಿಯನ್ನು ಸೂಚಿಸಿದರು.

ಇನ್ನೊಂದು ಕಡೆ ಸಾಕಷ್ಟು ಎಚ್ಚರಿಕೆ ವಹಿಸಿದ್ದರೂ ಕೆಲವು ಕ್ರಾಂತಿಕಾರಿಗಳ ನಡವಳಿಕೆಯಲ್ಲಿ ವ್ಯತ್ಯಾಸವಾಗಿದ್ದುದು ಡಾ. ಹೆಡಗೇವಾರರಿಗೆ ಸಂದೇಹ ಮೂಡಿಸಿತು. ಬಾಳಾಜಿ ಹುದ್ದಾರರ ಅಭಿಪ್ರಾಯದಂತೆ ಕ್ರಾಂತಿಕಾರಿ ಸಂಘಟನೆಯ ಮೇಲೆ ಮಹಾತ್ಮಾ ಗಾಂಧೀಯವರ ವಿಚಾರಗಳ ಪ್ರಭಾವ ಕಾಣಿಸತೊಡಗಿತ್ತು ಮತ್ತು ಕ್ರಾಂತಿಕಾರಿಗಳೂ ಎರಡು ಗುಂಪುಗಳಲ್ಲಿ ಒಡೆದಿದ್ದರು.

ಡಾ. ಹೆಡಗೇವಾರರು ಕೂಡಲೇ ಚುರುಕಾದರು. ಕ್ರಾಂತಿಯ ಯೋಜನೆಯ ಎಲ್ಲ ಮಾಹಿತಿಗಳು ಮತ್ತು ಸಾಕ್ಷಿಗಳು ಪೊಲೀಸರ ವಶವಾದಲ್ಲಿ, ಅದರಿಂದಾಗಿ ನಿರಪರಾಧಿ ದೇಶಭಕ್ತರು ಸಾಮ್ರಾಜ್ಯವಾದಿಗಳ ದಮನಕಾರಿ ಒತ್ತಡಗಳನ್ನು ಎದುರಿಸಬೇಕಾದೀತು ಎಂದು ಅವರಿಗೆ ಅನಿಸಿದುದರಿಂದ ಅವರೇ ಸ್ವತಃ ಎಲ್ಲ ಸಾಕ್ಷಿಗಳನ್ನು ನಾಶಗೊಳಿಸುವ ಕೆಲಸವನ್ನು ಆರಂಭಿಸಿದರು. ಮೊದಲ ಹಂತದಲ್ಲಿ ವಿಭಿನ್ನ ಕೇಂದ್ರಗಳಲ್ಲಿದ್ದ ಕ್ರಾಂತಿಕಾರಿಗಳನ್ನು ವಾಪಸ್ ಕರೆಸಲಾಯಿತು. ತದನಂತರ ಅಲ್ಲಲ್ಲಿ ಸಂಗ್ರಹಿಸಿ ಇರಿಸಲಾಗಿದ್ದ ಶಸ್ತ್ರಗಳನ್ನು ನಾಶ ಮಾಡಲಾಯಿತು. ಈ ಕೆಲಸದಲ್ಲಿ ವರ್ಧಾದ ಅಪ್ಪಾಜಿ ಜೋಶಿ ಮತ್ತು ಒಬ್ಬಿಬ್ಬರು ವಿಶ್ವಾಸಪಾತ್ರ ಮಿತ್ರರಿಂದ ಮಾತ್ರ ಅವರು ನೆರವು ಪಡೆದರು. ಮೂರು ವರ್ಷಗಳ ಕಾಲ ಅವಿಶ್ರಾಂತ ಪರಿಶ್ರಮ ಸುರಿದು ತಾವೇ ಕಟ್ಟಿದ ಸಂಘಟನೆ, ಅದಕ್ಕಾಗಿ ಮಾಡಲಾಗಿದ್ದ ವಿವರವಾದ ಯೋಜನೆ, ಕಲೆ ಹಾಕಲಾದ ಅಪಾರ ಪ್ರಮಾಣದ ಶಸ್ತ್ರಗಳು, ಇವೆಲ್ಲವನ್ನೂ ಈಗ ಸ್ವಂತದ ಕೈಗಳಿಂದ ತಾವೇ ನಾಶ ಮಾಡಬೇಕಾಗಿ ಬಂದಲ್ಲಿ ಅದೆಷ್ಟು ಮನ ನೋಯುವಂತಹ ಅನುಭವ ಆಗಿರಬಹುದು ಎಂಬುದನ್ನು ಊಹಿಸಲು ಮಾತ್ರ ಸಾಧ್ಯವಾದೀತು. ಅಷ್ಟಾದರೂ ಅವರು ತಮ್ಮ ಮನಸ್ಸಿನ ಸಂತುಲನ ಕಳೆದುಕೊಳ್ಳಲಿಲ್ಲ ಎಂಬುದೇ ಅವರ ವಿಶೇಷತೆ.

ಸಾಮ್ರಾಜ್ಯವಾದದ ವಿಷಯದಲ್ಲಿ ರಾಜಿಯಾಗುವುದಾಗಲಿ ಅಥವಾ ಒಂದಿಷ್ಟು ಮೃದು ಧೋರಣೆ ತಳೆಯುವುದೇ ಇರಲಿ, ಅದು ದೇಶಹಿತಕ್ಕೆ ಅನ್ಯಾಯವೆಸಗಿದಂತೆ ಎಂದು ತಿಳಿಯುತ್ತಿದ್ದವರು ಡಾ. ಹೆಡಗೇವಾರರು. ಯಾವುದೆ ನಾಯಕನಿರಲಿ, ಸಂಘಟನೆಯಿರಲಿ ಅಥವಾ ಸಾಮಾನ್ಯ ವ್ಯಕ್ತಿಯೇ ಇರಲಿ, ಅಂತಹವರ ಬಗ್ಗೆ ಅವರಿಗಿದ್ದ ಶ್ರದ್ಧೆಗೆ ಒಂದೇ ಒರೆಗಲ್ಲು – ಅಲ್ಲಿ ತಾಯಿನಾಡಿಗಾಗಿ ತ್ಯಾಗದ ಭಾವನೆಯಿದೆಯೇ, ಪೂರ್ಣ ಸ್ವಾತಂತ್ರ್ಯದ ಗಳಿಕೆಯ ವಿಚಾರವಿದೆಯೇ ಮತ್ತು ನಿಃಸ್ವಾರ್ಥ ಭಾವದಿಂದ ದೇಶದ ಸೇವೆ ಮಾಡುವ ದೃಷ್ಟಿಯಿದೆಯೇ – ಇವು ಮಾತ್ರ. ಹೀಗಾಗಿ ತಿಲಕರ ಬಗ್ಗೆ ಅವರ ಮನದಲ್ಲಿ ಅಪಾರ

---

5. ದಿ ಗೆಜೆಟ್ ಆಫ್ ಮಹಾರಾಷ್ಟ್ರ ಸ್ಟೇಟ್, ನಾಗಪುರ ಡಿವಿಜನ್ 1966, ಪು. 113.

# ಆತ್ಮದರ್ಶನ

ಅಧ್ಯಯನ ಪೂರೈಸಿ 1915ರ ಕೊನೆಯಲ್ಲಿ ಡಾ. ಹೆಡಗೇವಾರರು ಕಲ್ಕತ್ತಾದಿಂದ ನಾಗಪುರಕ್ಕೆ ವಾಪಸಾದಾಗ ಅವರ ಕುಟುಂಬದವರಿಗೆಲ್ಲ ಭಾರೀ ಸಂತೋಷ ಉಕ್ಕೇರಿದ್ದುದು ಸಹಜವೇ. ಅವರಿಂದ ತುಂಬ ನಿರೀಕ್ಷೆ ಸಹ ಆ ಪರಿವಾರಕ್ಕಿತ್ತು. ಆರು ವರ್ಷಗಳ ಹಿಂದೆ ತನ್ನ ಪರಿವಾರವನ್ನು ಬಿಟ್ಟು ಅವರು ಹೋದಾಗಿನಿಂದಲೂ ಅದರ ಸ್ಥಿತಿಗತಿಯಲ್ಲಿ ವ್ಯತ್ಯಾಸವೇನೂ ಆಗಿರಲಿಲ್ಲ. ಆರ್ಥಿಕವಾಗಿ ಅದು ಮೊದಲು ಹೇಗಿತ್ತೊ ಅದೇ ಸ್ಥಿತಿ ಈಗಲೂ ಮುಂದುವರಿದಿತ್ತು. ಅವರ ಪರಿವಾರಕ್ಕೆ ಸಂಪಾದನೆಯ ಮಾರ್ಗವಿದ್ದುದು ಪೌರೋಹಿತ್ಯದಿಂದ ಮಾತ್ರ. ಸೀತಾರಾಮ ಪಂತರು ಸಂಸಾರ ರಥವನ್ನು ಹೇಗೋ ಏನೋ ಕಷ್ಟದಿಂದ ಎಳೆಯುತ್ತಲೇ ಇದ್ದರು. ಹೀಗಾಗಿ ತಮ್ಮ ಬಡ ಪರಿವಾರದಲ್ಲಿ ಒಬ್ಬ ವ್ಯಕ್ತಿ ವೈದ್ಯನಾದುದಕ್ಕೆ ಮಿಕ್ಕವರು ಸಂತೋಷಪಟ್ಟಿದ್ದುದು ಸ್ವಾಭಾವಿಕವೇ.

ಸಂಪೂರ್ಣ ಮಧ್ಯಪ್ರಾಂತದಲ್ಲಿ ಆಗ ಇದ್ದ ವೈದ್ಯರು ಕೇವಲ 75 ಮಾತ್ರ. ಪ್ರಾಂತದ ಅಷ್ಟು ದೊಡ್ಡ ಗಾತ್ರದ ಜನಸಂಖ್ಯೆಗೆ ಅದು ಏನೇನೂ ಸಾಲದಾಗಿತ್ತು ಎಂಬುದು ನಿಸ್ಸಂದೇಹ. ಇಂತಹ ಸ್ಥಿತಿಯಲ್ಲಿ ವೈದ್ಯಕೀಯ ವೃತ್ತಿ ಯಾರೇ ಆರಂಭಿಸಿದರೂ ಅವರು ಯಶಸ್ವಿಗಳಾಗುತ್ತಿದ್ದುದು ಖಚಿತ. ಆದರೆ ಸ್ವಂತದ ಪರಿವಾರದ ಆರ್ಥಿಕ ದುಸ್ಥಿತಿ ಮತ್ತು ಆಪ್ತರ ಹಾಗೂ ಮಿತ್ರರ ಒತ್ತಡ ಇವೆರಡರಿಂದಲೂ ಡಾ. ಹೆಡಗೇವಾರರು ಸ್ವಲ್ಪವೂ ಪ್ರಭಾವಿತರಾಗಲಿಲ್ಲ. ವ್ಯಕ್ತಿಯೊಬ್ಬನು ತನ್ನ ಆಪ್ತರ ಮತ್ತು ಪರಿವಾರದ ಕಷ್ಟದ ಸ್ಥಿತಿಯನ್ನು ಕಂಡೂ ಸಹ ತನ್ನ ಸ್ವಂತದ ಶಕ್ತಿ, ಸಮಯ ಮತ್ತು ಪ್ರತಿಭೆ ಇವುಗಳನ್ನು ಹಣ ಸಂಪಾದನೆಗಾಗಿ ಬಳಸದೆ, ಒಟ್ಟು ರಾಷ್ಟ್ರದ ಹಿತಕ್ಕಾಗಿ ಮಾತ್ರ ಬಳಸುವೆ ಎಂಬ ನಿರ್ಧಾರ ಕೈಗೊಳ್ಳುವುದು ಸುಲಭದ ಸಂಗತಿಯಲ್ಲ. ಅದರಲ್ಲಿ ಇರುವಂತಹ ಕಷ್ಟವನ್ನು ಸ್ವತಃ ಸೂಕ್ಷ್ಮ ಸಂವೇದನೆಯುಳ್ಳ ವ್ಯಕ್ತಿ ಮಾತ್ರ ಅರ್ಥಮಾಡಿಕೊಳ್ಳಬಲ್ಲ. ತನ್ನೊಳಗಿನ ದೇಶಭಕ್ತಿಯನ್ನು ಆಧ್ಯಾತ್ಮಿಕತೆಯ ಹಂತಕ್ಕೆ ಏರಿಸಬಲ್ಲವನಿಗೆ ಮಾತ್ರ ಅದನ್ನು ಅರಿತುಕೊಳ್ಳಲು ಸಾಧ್ಯವಾದೀತು. ಡಾ. ಹೆಡಗೇವಾರರು ತನ್ನ ಪರಿವಾರದಿಂದ ದೂರವಾಗಲಿಲ್ಲ. ಬದಲಾಗಿ ಇನ್ನಷ್ಟು ನಿಕಟವಾದರು. ಸೀತಾರಾಮ ಪಂತರು ಮತ್ತು ಅವರ ಧರ್ಮಪತ್ನಿ ಸಹ ಡಾ. ಹೆಡಗೇವಾರರಿಗೆ ತಮ್ಮ ಮನದಲ್ಲಿ ಗೌರವದ ಹಾಗೂ ಸಮ್ಮಾನದ ಸ್ಥಾನವನ್ನೇ ನೀಡಿದರು. ಈ ಬಗ್ಗೆ ಆಮೇಂದ್ರ ಬರೆಯುತ್ತಾರೆ: "ಆ ಪರಿವಾರದಲ್ಲಿ ಭೌತಿಕ ಅಗತ್ಯಗಳಲ್ಲಿ ಅನುಭವವಾಗುತ್ತಿದ್ದ ಕೊರತೆಗಳೆಲ್ಲವನ್ನೂ ಹೃದಯದ ವಿಶಾಲತೆಯಿಂದ ಪೂರೈಸಿಕೊಳ್ಳಲಾಗುತ್ತಿತ್ತು." [1]

---

1. ಕಾಳ, 24 ಜೂನ್ 1940

ಅಂತಹ ಅನೇಕ ದೇಶಭಕ್ತರ ಉದಾಹರಣೆಗಳು ನಮ್ಮ ಕಣ್ಣಮುಂದಿವೆ. ರಾಷ್ಟ್ರದ ಕಾರ್ಯಕ್ಕೆ ಪರಿವಾರವು ಅಡ್ಡಿಯಾಗುವ ಬದಲು, ಅದೇ ನಮ್ಮ ಬದುಕಿಗೆ ಪರಿಪೂರ್ಣತೆಯನ್ನು ನೀಡಿ, ಅಪ್ರತ್ಯಕ್ಷವಾಗಿ ಸಹಕಾರಿಯೇ ಆಗುವುದು ಸಹ ಸಾಧ್ಯವಿದೆ. ಬದುಕಿಗೆ ಅದು ಸಮತೋಲನವನ್ನು ನೀಡುತ್ತದೆ. ಪರಿವಾರವನ್ನು ಬೆಳೆಸುವ ಜವಾಬ್ದಾರಿಯು ಸಹ ದೇಶದ ಸೇವೆಯಷ್ಟೇ ಮಹತ್ವದ್ದು" ಎಂದು ಬರೆದಿದ್ದರು.

ಆಬಾಜಿಯವರ ಬಗ್ಗೆ ಡಾ. ಹೆಡಗೇವಾರರಿಗಿದ್ದ ಶ್ರದ್ಧೆ ಅಪಾರ. ಅವರಿಬ್ಬರ ನಡುವೆ ಇದ್ದ ಮನದ ಸಾಮೀಪ್ಯವೂ ಅದೇ ರೀತಿಯದು. ಆಬಾಜಿಯವರು ತಮ್ಮ ಸರ್ಕಾರಿ ನೌಕರಿಯಿಂದ ಕೈತೊಳೆಯಬೇಕಾಗಿ ಬಂದಿದ್ದುದು ಡಾ. ಹೆಡಗೇವಾರರ ದೇಶಭಕ್ತಿಯ ಫಲವಾಗಿಯೇ. 1908ರಲ್ಲಿ ರಾಮಪಾಯಲಿಯಲ್ಲಿ ಡಾ. ಹೆಡಗೇವಾರರ ಮೇಲೆ 'ರಾಜದ್ರೋಹ'ದ ಮೊಕದ್ದಮೆ ನಡೆದಾಗಲೇ, ಆಬಾಜಿಯವರ ಮೇಲೆ ಸರ್ಕಾರದ ವಕ್ರದೃಷ್ಟಿ ಬಿದ್ದಿತ್ತು. ಅದೇ ಕಾರಣಕ್ಕಾಗಿ ತಮ್ಮ ನೌಕರಿಯಿಂದ ಅವರು ವಜಾಗೊಳ್ಳಬೇಕಾಯಿತು. ತಮ್ಮ ನೌಕರಿ ಕಳೆದುಕೊಂಡಿದ್ದಕ್ಕೆ ಆಬಾಜಿಯವರೇನೂ ದುಃಖಪಟ್ಟವರಲ್ಲ ಮತ್ತು ಕೇಶವನ ರಾಷ್ಟ್ರಪರ ಚಟುವಟಿಕೆಗಳ ಬಗ್ಗೆ ಅವರು ಆಕ್ಷೇಪಿಸಿದ್ದವರೂ ಅಲ್ಲ. ಅವರ ಈ ತ್ಯಾಗ ಮತ್ತು ತಮ್ಮ ಪ್ರೀತಿಯ ಕೇಶವನಿಗಾಗಿ ಅವರು ನೀಡುತ್ತಿದ್ದ ಸರ್ವವಿಧ ಸಂರಕ್ಷಣೆಯ ಕಾರಣದಿಂದಾಗಿ ನಿಶ್ಚಿತವಾಗಿಯೂ ಅವರಿಗೆ ಡಾ. ಹೆಡಗೇವಾರರ ಮೇಲೆ ಅಂತಹ ನೈತಿಕ ಒತ್ತಡ ಹೇರಲು ಮಿಕ್ಕೆಲ್ಲರಿಗಿಂತ ಹೆಚ್ಚಿನ ಅಧಿಕಾರವಿತ್ತು. ಆದರೆ ಆಬಾಜಿಯವರ ಪತ್ರ ಓದಿದ ನಂತರವೂ ಡಾ. ಹೆಡಗೇವಾರರು ತನ್ನ ನಿರ್ಧಾರದಿಂದ ವಿಚಲಿತರಾಗಲಿಲ್ಲ. ಅವರು ಕೈಗೊಂಡಿದ್ದ ನಿರ್ಧಾರ ಯಾವುದೋ ಕ್ಷಣಿಕ ಭಾವನೆಗಳ ಆವೇಶಕ್ಕೆ ಒಳಗಾಗಿ ಅಥವಾ ಹೊರಗಿನ ಇನ್ನಾವುದೋ ಕಾರಣದಿಂದ ಪ್ರೇರಿತವಾಗಿ ಅಲ್ಲ. ಅದರ ಹಿಂದೆ ಒಂದು ಗಟ್ಟಿಯಾದ ನಿಲುವು ಮತ್ತು ಭವಿಷ್ಯದಲ್ಲಿ ಅದರ ಕಾರಣದಿಂದ ಬರಬಹುದಾದ ಸವಾಲುಗಳನ್ನು ಎದುರಿಸುವಂತಹ ಅದಮ್ಯ ಮನೋಬಲವೂ ಇದ್ದವು. ಹೀಗಾಗಿ ತಮ್ಮ ಚಿಕ್ಕಪ್ಪನಿಗೆ ಅವರು ಸಹ ಒಂದು ಸುದೀರ್ಘ ಪತ್ರದ ಮೂಲಕ ತಮ್ಮ ನಿರ್ಧಾರದ ದೃಢತೆಯನ್ನು ಸ್ಪಷ್ಟಗೊಳಿಸಿದರು. ಈ ಪತ್ರದಲ್ಲಿ "ವಿವಾಹವಾಗಬಾರದೆಂಬ ನಿರ್ಧಾರವನ್ನು ನಾನು ಸಾಕಷ್ಟು ಯೋಚಿಸಿಯೇ ಕೈಗೊಂಡಿರುವೆ. ಮನೆ-ಸಂಸಾರ ಇತ್ಯಾದಿ ಕಟ್ಟಿಕೊಂಡು ಪರಿವಾರದ ವರ್ತುಲದಲ್ಲಿ ನನ್ನ ಬದುಕನ್ನು ಮುದುರಿಕೊಳ್ಳಲು ಮತ್ತು ಸ್ವಂತದ ಬದುಕಿಗೇನು ಮಾಡೋಣ ಎಂಬ ಚಿಂತೆಗೆ ನನ್ನನ್ನು ಗಂಟುಹಾಕಿಕೊಳ್ಳಲು ಸಹ ನನಗೆ ಇಷ್ಟವಿಲ್ಲ. ನನ್ನ ಮನಸ್ಸಿನಲ್ಲಿರುವ ವಿಚಾರವೇನಿದ್ದರೂ, ಅದು ರಾಷ್ಟ್ರದ ಸಲುವಾಗಿ ತನು-ಮನ-ಧನಪೂರ್ವಕ ಸೇವೆ ಮಾಡುವಂತಹದು. ನಾನು ಈ ರಾಷ್ಟ್ರವು ವಿದೇಶಿಯರ ಗುಲಾಮಗಿರಿಯಿಂದ ಮುಕ್ತವಾಗುವುದನ್ನು ಕಾಣಲು ಬಯಸುತ್ತಿದ್ದೇನೆ. ಅದಕ್ಕಾಗಿ ನನಗೆ ಹಿಂಸೆಯದಿರಲಿ, ಅಹಿಂಸೆಯದಿರಲಿ ಎರಡೂ ವಿಧದ ಮಾರ್ಗಗಳು ಪ್ರಿಯವೇ. ಹಿಂದೂಸ್ಥಾನಕ್ಕೆ ದಾಸ್ಯವು ಹೊಸದೇನಲ್ಲ. ದಾಸ್ಯದ ಸಂಕಲೆಯಲ್ಲಿ ನಾವು ಸತತವಾಗಿ ಬಂಧಿಸಲ್ಪಟ್ಟವರಾಗಿದ್ದೇವೆ. ಹೀಗೇಕೆ ? ನನ್ನ ಮನಸ್ಸನ್ನು ಸದಾ ಕಾಡುತ್ತಿರುವ ಪ್ರಶ್ನೆಯಿದು.

"ನಾವಿಂದು ಪಾರತಂತ್ರ್ಯದಲ್ಲಿರಲು ಕಾರಣವೆಂದರೆ ನಮ್ಮ ಹೇಡಿತನವೇ. 'ನಾವು ಒಂದು ರಾಷ್ಟ್ರವಾಗಿದ್ದೇವೆ, ನಮ್ಮದೇ ಆದ ಶುದ್ಧ ರಾಷ್ಟ್ರೀಯತೆ ನಮಗಿದೆ, ಮತ್ತು ನಾವೆಲ್ಲರೂ ಸೋದರರು' ಇತ್ಯಾದಿ ಸಂಗತಿಗಳ ಅರಿವೇ ನಮಗಿಲ್ಲ. ಹೀಗಾಗಿಯೇ ಬೆರಳೆಣಿಕೆಯಷ್ಟೇ ಇರುವ ಇಂಗ್ಲಿಷರು ಕೋಟಿಗಟ್ಟಲೆಯಿರುವ ನಮ್ಮನ್ನು ಗುಲಾಮತನದ ಸಂಕೋಲೆಯಲ್ಲಿ



ಬಂಧಿಸಿಡಲು ಸಾಧ್ಯವಾಗಿದೆ. ಇಂಗ್ಲಿಷರು ನೀಡುವ ಯಾತನೆಗಳಿಗೆ ಒಳಗಾಗಿರುವವರು ಕ್ರಾಂತಿಕಾರಿಗಳು ಮಾತ್ರವಲ್ಲ. ಮಹಾತ್ಮಾ ಗಾಂಧಿಯವರ ಅನುಯಾಯಿಗಳೂ ಅವರಿಂದ ಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ಪಂಡಿತ ಅರ್ಜುನಲಾಲ್ ಸೇಟಿ ಅವರು ಒಬ್ಬ ಅಹಿಂಸಾವಾದಿಗಳು. ಆದರೆ ಸೆರೆಮನೆ ವಾಸದಲ್ಲಿ ಅವರಿಗೂ ಕಷ್ಟಗಳು ತಪ್ಪಿಲ್ಲ.

"ನನ್ನ ಮನಸ್ಸಲ್ಲಿ ಏಳುವ ಪ್ರಶ್ನೆಯೆಂದರೆ – ಇಂಗ್ಲಿಷರನ್ನು ಸೋಲಿಸಲು ನಮಗೆ ಸಾಧ್ಯವಿಲ್ಲವೇನು? ನನಗನಿಸುವಂತೆ ಅದಕ್ಕಿರುವ ದಾರಿಯೆಂದರೆ, ರಾಷ್ಟ್ರಕ್ಕಾಗಿ ಸರ್ವಸ್ವವನ್ನೂ ಸಮರ್ಪಣೆ ಮಾಡುವುದೊಂದೇ. ನನ್ನ ಶರೀರ, ಬುದ್ಧಿ, ಮನಸ್ಸು, ವಿವೇಕ ಮತ್ತು ಆತ್ಮ ಇವೆಲ್ಲವುಗಳಲ್ಲಿ ಅನಿಸುತ್ತಿರುವ ಒಂದೇ ವಿಚಾರವೆಂದರೆ ನಮ್ಮ ರಾಷ್ಟ್ರವನ್ನು ಸಂಘಟಿಸುವ, ದೇಶಭಕ್ತಿಯನ್ನು ಬೆಳೆಸುವ, ನಮ್ಮ ಜನರಲ್ಲಿನ ಆತ್ಮ ಹೀನಾಯತೆಯನ್ನು ದೂರಗೊಳಿಸುವ ಕಾರ್ಯವನ್ನು ಮಾಡಿದ್ದೇ ಆದಲ್ಲಿ, ನನ್ನ ಬದುಕಿಗೆ ಅದಕ್ಕಿಂತಲೂ ಉತ್ತಮವಾದ ಸದುಪಯೋಗದ ರೀತಿ ಬೇರೊಂದಿರಲಾರದು ಎಂಬುದೇ ಆಗಿದೆ.

"ಬಾಬಾ, ನಾರಾಯಣ ರಾವ್ ಮತ್ತು ವಿನಾಯಕ ರಾವ್ ಸಾವರಕರರು, ಲೋಕಮಾನ್ಯ ತಿಲಕರು, ಮಹಾತ್ಮಾಗಾಂಧಿಯವರಂತಹ ದೇಶಭಕ್ತರು ವಿವಾಹಿತರಾಗಿದ್ದುಕೊಂಡೂ ಸಹ ರಾಷ್ಟ್ರಕ್ಕಾಗಿ ಅವಿಶ್ರಾಂತವಾಗಿ ದುಡಿದಿದ್ದಾರೆ. ಆದರೆ ನನ್ನ ಮನದ ರಚನೆಯೇ ಬೇರೆ ವಿಧವು. ನನಗೆ ವಿವಾಹವಾಗಬೇಕು ಎಂದು ಅನಿಸುವುದೇ ಇಲ್ಲ. ಬದಲಾಗಿ ಒಂದೊಂದು ಕ್ಷಣದಲ್ಲೂ ನನಗೆ ಸಾಮಾಜಿಕ ಮತ್ತು ರಾಷ್ಟ್ರೀಯ ಜವಾಬ್ದಾರಿಗಳದೇ ನೆನಪಾಗುತ್ತದೆ. ಈ ಸ್ಥಿತಿಯಲ್ಲಿ ನನಗಿರುವ ಒಂದು ಶರೀರ, ಒಂದು ಮನಸ್ಸು ಮತ್ತು ಒಂದು ಆತ್ಮ ಇವುಗಳನ್ನು ನಾನು ಬೇರಾವುದೇ ಚಟುವಟಿಕೆಗಳಿಗಾಗಿ ಹಂಚಿಕೊಳ್ಳಲಾರದವನಾಗಿದ್ದೇನೆ. ವಿವಾಹವಾಗುವ ಮೂಲಕ ಒಬ್ಬಳು ಕನ್ಯೆ ಸದಾ ನನಗಾಗಿ ದಾರಿ ಕಾಯುತ್ತಾ ಕುಳಿತುಕೊಳ್ಳಬೇಕಾಗುವಂತಹ ಸ್ಥಿತಿಯಲ್ಲಿರುವುದು ನಾನು ಇಷ್ಟಪಡುವುದಿಲ್ಲ. ಅದೇ ರೀತಿಯಲ್ಲಿ ಮನೆಯನ್ನು ಸದಾ ಕತ್ತಲೆಯಲ್ಲಿರಿಸಿ ನಾನೇನೋ ಸಾಮಾಜಿಕ ಹೊಣೆಯಲ್ಲಿ ಮಗ್ನನಾಗಿರುವೆ ಎಂಬಂತಹ ಸ್ಥಿತಿಯೂ ನನಗೆ ಬೇಕಾಗಿಲ್ಲ.

"ನನ್ನ ಮನದಲ್ಲಿ ಯಾವುದೇ ವಿಧದ ಇಬ್ಬಂದಿಯಿಲ್ಲ. ಅವಿವಾಹಿತನಾಗಿ ಉಳಿಯುವ ನಿರ್ಧಾರದಲ್ಲಿ ನಾನು ದೃಢವಾಗಿರುವೆ. ಈ ನಿರ್ಧಾರ ನನ್ನ ಸ್ವಭಾವದ ಅನುಗುಣವಾಗಿಯೇ ಇದೆ."

ಅವರ ಈ ನಿರ್ಧಾರಕ್ಕೆ ಕಟ್ಟಕಡೆಯಲ್ಲಿ ಅವರ ಪರಿವಾರದವರು, ಸ್ನೇಹಿತರು ಮತ್ತು ಇತರ ಸಾಮಾಜಿಕ ಕಾರ್ಯಕರ್ತರು ಸಹ ಒಪ್ಪಬೇಕಾಯಿತು. ಅಂತಹ ಸನ್ಯಸ್ತ ಜೀವನದಲ್ಲೇ ಅವರು ಸುಖದ ಅನುಭವ ಪಡೆದರು. ಅಷ್ಟಾದರೂ ಸನ್ಯಾಸವೃತ್ತಿಯ ಒಂದು ಹೊಸ ಪರಂಪರೆಯನ್ನೇ ಅವರು ಹುಟ್ಟುಹಾಕಿದರು. ಸಮಾಜದ ನಡುವೆ ಇದ್ದುಕೊಂಡು, ಸಾಮಾಜಿಕ ಜೀವನದ ಯಥಾರ್ಥತೆಗಳು, ವಿರೋಧಾಭಾಸಗಳು ಮತ್ತು ಸಮಸ್ಯೆಗಳು ಇವುಗಳನ್ನು ಎದುರಿಸಿಕೊಂಡೇ ಇದ್ದರೂ, ಇವುಗಳಿಂದ ಹೊರತಾಗಿ ಇರುವಂತಹ ಒಂದು ಹೊಸ ಜೀವನಶೈಲಿಯನ್ನು ಅವರು ತಮ್ಮದಾಗಿಸಿಕೊಂಡರು.

ಒಂದು ರೀತಿಯಲ್ಲಿ ತಮ್ಮ ಸಾರ್ವಜನಿಕ ಜೀವನಕ್ಕೆ ಅವರೊಂದು ಹೊಸ ತಿರುವನ್ನೇ ನೀಡಿದರು. ಅಂತಹ ಸಂಪೂರ್ಣ ಸಮರ್ಪಿತ ಜೀವನದ ವಿಶೇಷತೆಯನ್ನು ಅವರು ತಮ್ಮ ಕೊನೆಯುಸಿರಿನವರೆಗೂ ಉಳಿಸಿಕೊಂಡರು. ಅನೇಕ ರೀತಿಯ

ವೇದಿಕೆಗಳು, ಸಾಧನೆಯ ಮಾರ್ಗಗಳು ಮತ್ತು ಮಾಧ್ಯಮಗಳ ಮೂಲಕ ತಮ್ಮೆಲ್ಲ ಶಕ್ತಿಯನ್ನು ರಾಷ್ಟ್ರಕಾರ್ಯಕ್ಕಾಗಿ ಸಮರ್ಪಿಸಿ, ತನಗಾಗಿ ಏನನ್ನೂ ಉಳಿಸಿಕೊಳ್ಳದೆ ಬದುಕನ್ನು ಸವೆಸಿದ ಅವರು ಎಲ್ಲ ಕಡೆಗಳಲ್ಲೂ ಗೌರವಾನ್ವಿತರಾಗಿ ಉಳಿದರು. ಅವರ ಮೃತ್ಯುವಿನ ನಂತರ 'ಕೇಸರಿ' ಪತ್ರಿಕೆಯು ತನ್ನ ಸಂಪಾದಕೀಯದಲ್ಲಿ – "ವೈದ್ಯಕೀಯ ವೃತ್ತಿ ನಡೆಸಲು ಸರ್ವರೀತಿಯಲ್ಲಿ ಸಮರ್ಥರಾಗಿದ್ದರೂ, ಅವರು ವೃತ್ತಿ ಜೀವನವನ್ನು ನಡೆಸಲಿಲ್ಲ. ವಿವಾಹವನ್ನು ಸಹ ಮಾಡಿಕೊಳ್ಳಲಿಲ್ಲ. ರಾಷ್ಟ್ರದ ಸೇವೆ ಮಾಡುವ ವಿಚಾರದಿಂದ ಪ್ರೇರಿತವಾಗಿದ್ದ ತಮ್ಮ ಈ ನಿರ್ಧಾರವನ್ನು ಒಂದು ವ್ರತದಂತೆ ಅವರು ಜೀವನಪೂರ್ತಿ ಉಳಿಸಿಕೊಂಡರು"[3] ಎಂದು ಬರೆಯಿತು.

## ದೇಶಭಕ್ತಿಯ ಒರೆಗಲ್ಲು

ತಮ್ಮನ್ನು ಪರಿಚಯಿಸುವಾಗ 'ದೇಶಭಕ್ತ' ಎಂಬ ವಿಶೇಷಣವನ್ನು ಬಳಸಲು ಅವರು ಬಿಡುತ್ತಿರಲಿಲ್ಲ. ಅದನ್ನು ಅಸ್ವಾಭಾವಿಕವಾಗಿ ಕಾಣುತ್ತಿದ್ದ ಅವರು ಆ ಪದದ ಪ್ರಯೋಗವನ್ನು ಇಷ್ಟಪಡುತ್ತಿರಲಿಲ್ಲ. ಒಮ್ಮೆ ಒಂದು ಸಭೆಯಲ್ಲಿ "ಇವರೋರ್ವ ಮಹಾನ್ ದೇಶಭಕ್ತರು" ಎಂದು ಯಾರೋ ಹೇಳಿದಾಗ, ಅವರು ತಮ್ಮ ಉತ್ತರದಲ್ಲಿ "ಆ ರೀತಿಯಲ್ಲಿ ಪರಿಚಯಿಸಿಕೊಳ್ಳುವುದೇ ಅವಮಾನಾಸ್ಪದವಾದುದು. ಯಾರಾದರೂ ವ್ಯಕ್ತಿ ನನ್ನ ಪರಿಚಯ ಮಾಡಿಸುತ್ತಾ 'ನಾನು ಓರ್ವ ಮನುಷ್ಯ' ಎಂದಲ್ಲಿ ನನಗೆ ಏನೆನಿಸಬಹುದು? ಅದೊಂದು ಅವಮಾನಕರ ಸಂಗತಿ ಅನಿಸುವುದಿಲ್ಲವೇ? ನಾನೋರ್ವ ಮನುಷ್ಯನೆಂದು ಹೇಳದೇ ಹೋದಲ್ಲಿ ನನ್ನನ್ನು ಮನುಷ್ಯನಲ್ಲವೆಂದು ತಿಳಿಯುವ ಸಾಧ್ಯತೆಯಿದೆ. ಅದಕ್ಕಾಗಿ ಮನುಷ್ಯನೆಂದು ಹೇಳಬೇಕಾಗಿದೆ. ಅದರರ್ಥ ನನ್ನಲ್ಲಿ ಮನುಷ್ಯತ್ವದ ಏನೋ ಕೊರತೆಯಿದೆ ಎಂದಾಗುವುದಿಲ್ಲವೆ? ಅದೇ ರೀತಿಯಲ್ಲಿ 'ಇವನೋರ್ವ ದೇಶಭಕ್ತ'ನೆಂದಲ್ಲಿ ನನ್ನೊಳಗೆ ಇಲ್ಲದುದನ್ನು ತೋರಿಸಲಿಕ್ಕಾಗಿ ನಾನೇನೊ ಪ್ರಯತ್ನಿಸುತ್ತಿರುವೆ ಅನಿಸುವಂತಹ ಸಾಧ್ಯತೆಯಿದೆ. ಯಾವುದೇ ದೇಶದಲ್ಲಿ ಜನಿಸಿದ ವ್ಯಕ್ತಿಯೊಬ್ಬ ಆ ದೇಶದ ಹುಟ್ಟು ದೇಶಭಕ್ತನಾಗಿಯೇ ಇರುತ್ತಾನೆ. ಆ ರೀತಿಯಲ್ಲಿ ಇರಲೂಬೇಕು" ಎಂದು ಹೇಳಿದರು.

ಪ್ರಸ್ತುತ ರಾಜಕೀಯದಲ್ಲಿ ದೇಶಭಕ್ತಿಯ ಪಲ್ಲವಿಯನ್ನು ಪದೇಪದೇ ಹಾಡುವವರ ಬಗ್ಗೆ ಅವರು ಹೇಳುತ್ತಿದ್ದುದು: "ಈ ರೀತಿಯಲ್ಲಿ ಹೇಳುವಂತಹ ರೂಢಿ ಕೇವಲ ನಮ್ಮ ದೇಶದಲ್ಲಿ ಮಾತ್ರವಿದೆ. ಇನ್ಯಾವುದೇ ದೇಶದಲ್ಲೂ ಇಂತಹ ಮೂರ್ಖತೆಯ ರೂಢಿ ಇರುವುದು ಸಂಭವವೇ ಇಲ್ಲ. ದೇಶಭಕ್ತರು ಸಹಜವಾಗಿಯೇ ಹುಟ್ಟುತ್ತಾರೆ. ಅವರನ್ನು ತಯಾರಿಸಲಾಗುವುದಿಲ್ಲ. ದೇಶಭಕ್ತಿಯ ಶಿಕ್ಷಣ ತಾಯಿಯ ಮಡಿಲಿನಿಂದಲೇ ಆರಂಭವಾಗುತ್ತದೆ. ಅದು ಸ್ವಯಂಸಿದ್ಧವಾದ ಸಂಗತಿಯಾಗಿರಲೂಬೇಕು." ಅವರು ದೇಶದ ಜನಗಳನ್ನು ದೇಶಭಕ್ತರು ಮತ್ತು ದೇಶಭಕ್ತರಲ್ಲದವರು ಎಂಬಂತಹ ಎರಡು ಗುಂಪುಗಳಲ್ಲಿ ನೋಡಲು ಇಷ್ಟಪಡುತ್ತಿರಲಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಅರಿವು ಮತ್ತು ಶಕ್ತಿ, ಸಾಮರ್ಥ್ಯಕ್ಕನುಗುಣವಾಗಿ ದೇಶಕ್ಕಾಗಿ ಸಮರ್ಪಿತನಾಗಿಯೇ ಇರುತ್ತಾನೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಎಂದರೆ ದೇಶಭಕ್ತಿಯ ಭಾವನೆ ಎಲ್ಲರಲ್ಲೂ ಸಹಜವಾಗಿಯೇ ಇರಬೇಕಾದುದು. ಅಸಹಜತೆ ಇರುವುದೇ ಆದಲ್ಲಿ

---

3. ಕೇಸರಿ, 25 ಜೂನ್ 1940

ಅದು 'ದೇಶದ್ರೋಹ'ವು ಮಾತ್ರ. ಅಂತಹವರು ಕೆಲವೇ ಮಂದಿ ಬೆರಳೆಣಿಕೆಯಷ್ಟು ಇರಬಹುದು. ಅಂತಹವರ ಪರಿಚಯ ಸಮಾಜಕ್ಕಾಗುವ ಅಗತ್ಯವಿದೆ ಎನ್ನುತ್ತಿದ್ದರು ಅವರು.

ದೇಶಭಕ್ತಿಯ ಲಕ್ಷಣಗಳನ್ನು ಅವರು ಹೇಳುತ್ತಿದ್ದುದು ಈ ಮುಂದಿನ ಹತ್ತು ಸೂತ್ರಗಳಲ್ಲಿ:

- ದೇಶಭಕ್ತಿಯ ಅರ್ಥವೆಂದರೆ – ನಾವು ಹುಟ್ಟಿರುವ ಭೂಮಿ ಮತ್ತು ಸಮಾಜ, ಇವುಗಳ ಬಗ್ಗೆ ಅಪಾರ ಆತ್ಮೀಯತೆ ಮತ್ತು ಪ್ರೀತಿ.
- ನಾವು ಹುಟ್ಟಿರುವ ಸಮಾಜದ ಸಂಸ್ಕೃತಿಯ ಜತೆ ನಿಕಟವಾದ ಸಂಪರ್ಕ ಮತ್ತು ಗೌರವದ ಭಾವನೆ.
- ಸಮಾಜದ ಜೀವನಮೌಲ್ಯಗಳ ಬಗ್ಗೆ ವಿವೇಕಪೂರ್ಣವಾದ ನಿಷ್ಠೆ.
- ಸಮಾಜ/ರಾಷ್ಟ್ರದ ಏಳ್ಗೆ ಮತ್ತು ವಿಕಾಸಕ್ಕಾಗಿ ಸರ್ವವಿಧದ ಸಮರ್ಪಣೆ ಮಾಡಲು ಸ್ವಯಂಪ್ರೇರಣೆ.
- ವ್ಯಕ್ತಿನಿಷ್ಠವಾಗಿರದೆ ಸಮಾಜನಿಷ್ಠವಾಗಿ ಶುದ್ಧಜೀವನ ನಡೆಸುವುದು.
- ಭೌತಿಕ ಸುಖಕ್ಕಾಗಿ ಬಯಸದೆ ತಾಯಿನಾಡಿನ ಮತ್ತು ಆಕೆಯ ಮಕ್ಕಳ ಸಲುವಾಗಿ ಸ್ವಾರ್ಥರಹಿತವಾಗಿ ಮಾಡುವ ಸೇವೆ.
- ವ್ಯಕ್ತಿಗತವಾದ ಆಕಾಂಕ್ಷೆಗಳಿಗಿಂತಲೂ ಹೆಚ್ಚಾಗಿ ರಾಷ್ಟ್ರದ ಅಗತ್ಯಗಳು ಮತ್ತು ಅಪೇಕ್ಷೆಗಳಿಗೆ ಮಹತ್ತ್ವ ನೀಡುವುದು.
- ಮಾತೃಭೂಮಿಯ ಚರಣಗಳಲ್ಲಿ ಇನ್ನಾವುದೇ ಸ್ವಾರ್ಥದ ಅಪೇಕ್ಷೆಯಿಲ್ಲದೆ, ಕರ್ತವ್ಯಕಠೋರ ಜೀವನಪುಷ್ಪಗಳ ಮಧುರ ಸುಗಂಧವೆಲ್ಲವನ್ನೂ ಸಮರ್ಪಿಸುವುದು.
- ಸಮಾಜ ಮತ್ತು ರಾಷ್ಟ್ರ ಇವುಗಳನ್ನೇ ಸರ್ವೋಚ್ಚ ದೇವ-ದೇವತೆಗಳೆಂಬಂತೆ ತಿಳಿದು ಅವುಗಳನ್ನೇ ಆರಾಧಿಸುವುದು.
- ಸಮಾಜದಲ್ಲಿ ಏಕಾತ್ಮ ಭಾವವನ್ನು ಸೃಷ್ಟಿಸುವುದು.

ಈ ಲಕ್ಷಣಗಳನ್ನು ಅಳವಡಿಸಿಕೊಂಡೇ ಅವರು ಓರ್ವ ಸಂಘಟಕರಾಗಿ ಮತ್ತು ಹೋರಾಟಗಾರರೂ ಆಗಿ ಜೀವನಪೂರ್ತಿ ಶ್ರಮಿಸುತ್ತಲೇ ಇದ್ದರು.

# ಕಾಂಗ್ರೆಸ್‌ಗೆ ಪ್ರವೇಶ

ಕ್ರಾಂತಿಕಾರಿ ಮಾರ್ಗದ ವಿಫಲತೆ ಮತ್ತು ಅದರ ಇತಿಮಿತಿಗಳನ್ನು ಅನುಭವದಿಂದ ಅರಿತುಕೊಂಡ ಮೇಲೆ ಡಾ. ಹೆಡಗೇವಾರರು ಇನ್ನಿತರ ರೀತಿಯ ಸಂಘಟಿತ ಜನಾಂದೋಳನಗಳ ಮಾರ್ಗವನ್ನು ತಮ್ಮದಾಗಿಸಿಕೊಂಡರು. ಕಾಂಗ್ರೆಸ್‌ನ ಸದಸ್ಯರಾದ ಅವರು ಮೊದಲ ವಿಶ್ವ ಯುದ್ಧದ ನಂತರ ಕಾಂಗ್ರೆಸ್‌ನ ವೇದಿಕೆಯಿಂದ ಜನಜಾಗೃತಿಯ ಕೆಲಸದಲ್ಲಿ ಧುಮುಕಿದರು. ಆಗ ಮಧ್ಯಪ್ರಾಂತದ ಕಾಂಗ್ರೆಸ್‌ನಲ್ಲಿ ವರ್ಚಸ್ಸು ನಡೆಯುತ್ತಿದ್ದುದು ಲೋಕಮಾನ್ಯ ತಿಲಕರ ಅನುಯಾಯಿಗಳದ್ದೇ. ಅವರೆಲ್ಲರೂ 'ರಾಷ್ಟ್ರೀಯ ಮಂಡಲ' ಎಂಬ ಸಂಸ್ಥೆಯೊಂದರ ಅಡಿಯಲ್ಲಿ ಕೆಲಸ ಮಾಡುತ್ತಿದ್ದವರು. ನೀಲಕಂಠರಾವ್ ಉಧೋಜಿ ಎಂಬವರು 1907ರಲ್ಲಿ ಸ್ಥಾಪಿಸಿದ್ದ ಸಂಸ್ಥೆ ಅದು. ಅದರೊಳಗೆ ತಿಲಕರ ಪ್ರಮುಖ ಸಮರ್ಥಕರೆಲ್ಲರೂ ಸೇರಿಕೊಂಡಿದ್ದರು. ಅವರ ಪೈಕಿ ಡಾ. ಮುಂಜೆ, ಡಾ. ನಾ. ಭಾ. ಖರೆ, ವಿಶ್ವನಾಥ ರಾವ್ ಕೇಳ್ಕರ್, ಗೋಪಾಲರಾವ್ ಬುಟಿ, ಡಾ. ಲ. ವಾ. ಪರಾಂಜಪೆ, ನಾರಾಯಣರಾವ್ ಕೇಳ್ಕರ್ ಮೊದಲಾದವರು ಉಲ್ಲೇಖಿಸಲ್ಪಡಬಹುದಾದ ಕೆಲವರು. 1909ರಲ್ಲಿ ಸರ್ಕಾರವು ಈ ರಾಷ್ಟ್ರೀಯ ಮಂಡಲದ ಮೇಲೆ ಒಮ್ಮೆ ನಿಷೇಧ ಹೇರಿದ್ದರೂ, ಮೊದಲ ಜಾಗತಿಕ ಸಮರದ ಸಂದರ್ಭದಲ್ಲಿ ಅದನ್ನು ತೆಗೆದುಹಾಕಲಾಗಿತ್ತು.

ಡಾ. ಹೆಡಗೇವಾರರು ಕಲ್ಕತ್ತಾದಿಂದ ನಾಗಪುರಕ್ಕೆ ವಾಪಸಾದಾಗ, ಅವರನ್ನು ರಾಷ್ಟ್ರೀಯ ಮಂಡಲದಲ್ಲಿ ಸೇರಿಸಿಕೊಳ್ಳಲಾಯಿತು. ಡಿ. ವಿ. ಕೇಳ್ಕರ್ ಅವರು ಹೇಳುವಂತೆ ಡಾ. ಹೆಡಗೇವಾರರ ಜತೆಯಲ್ಲಿ ತಾವೂ ಸಹ ಈ ರಾಷ್ಟ್ರೀಯ ಮಂಡಲದ 'ಸಹಾಯಕ ಸದಸ್ಯ'ರಾಗಿದ್ದರು.[1] ಆದರೆ ಈ ಮಂಡಲದ ರಾಜಕೀಯ ಚಿಂತನೆ, ರೀತಿನೀತಿಗಳು ಮತ್ತು ಮಹಾತ್ಮಾಗಾಂಧಿ ಅವರಿಗೆ ಸಂಬಂಧಿಸಿ ಅದರ ದೃಷ್ಟಿಕೋನ ಇವುಗಳು ಡಾ. ಹೆಡಗೇವಾರರಿಗೆ ಒಪ್ಪಿಗೆಯಾಗಲಿಲ್ಲ. ಸಾಮ್ರಾಜ್ಯವಾದವನ್ನು ವಿರೋಧಿಸುವಂತಹ ಅದರ ಹಳೆಯ ಮೊನಚು ಕಳೆದುಕೊಂಡು, ಅದರ ದೃಷ್ಟಿ ಮೊಂಡಾಗಿತ್ತು. ಅದರ ಸದಸ್ಯರು ಬ್ರಿಟಿಷ್ ಆಡಳಿತದ ಜತೆ ಮೃದು ಭಾವವನ್ನು ಹೊಂದಿದವರಾಗಿದ್ದರು. ವಿಶ್ವಸಮರದ ಸಂದರ್ಭದಲ್ಲಿ ರಾಷ್ಟ್ರೀಯ ಮಂಡಲದ ಮೇಲಿನ ನಿಷೇಧವನ್ನು ದೂರಗೊಳಿಸಲಾಗಿದ್ದುದು ಇದೇ ಕಾರಣಕ್ಕಾಗಿ. ಮಂಡಲದಿಂದ ದೂರವಾದ ಡಾ. ಹೆಡಗೇವಾರರು 1919ರ ಮಧ್ಯಭಾಗದಲ್ಲಿ ಈ ಮಂಡಲದ್ದೇ ಅನೇಕ ಸದಸ್ಯರ ಜತೆಗೂಡಿ 'ನಾಗಪುರ ನ್ಯಾಶನಲ್ ಯೂನಿಯನ್' ಎಂಬ ಹೊಸ ಸಂಸ್ಥೆಯೊಂದನ್ನು ಹುಟ್ಟುಹಾಕಿದರು. ಮುಂಚೆ ಮಂಡಲದ

---

1. ಡಿ. ವಿ. ಕೇಳ್ಕರ್, 'ದಿ ಆರ್.ಎಸ್.ಎಸ್.'. ಇಕಾನಾಮಿಕ್ ವೀಕ್ಲಿ, 4 ಫೆಬ್ರವರಿ 1950 ಪು. 132. ಕೇಳ್ಕರರು ಸುಪ್ರಖ್ಯಾತ ಪತ್ರಕರ್ತರು. ಆರಂಭದ ವರ್ಷಗಳಲ್ಲಿ ಅವರಿಗೆ ಸಂಘದ ಜತೆ ಸಂಬಂಧವಿತ್ತು. ಆದರೆ ಮುಂದೆ ಭಿನ್ನಾಭಿಪ್ರಾಯದ ಕಾರಣದಿಂದಾಗಿ ಅವರು ದೂರವಾದರು.

ಸದಸ್ಯರೇ ಆಗಿದ್ದ ನಾ. ಭಾ. ಖರೆ, ವಿಶ್ವನಾಥ ರಾವ್ ಕೇಳ್ಕರ್, ಬಲವಂತರಾವ್ ಮಂಡಲೇಕರ್, ಮನೋಹರ ಪಂತ, ಚೋಬಡೆ, ಚೋರ್ಘಡೆ ಮೊದಲಾದ ಕೆಲವರು ಯೂನಿಯನ್‌ನಲ್ಲಿ ಬಂದು ಸೇರಿಕೊಂಡರು. ಮಂಡಲ ಮತ್ತು ಯೂನಿಯನ್ ಇವುಗಳಲ್ಲಿ ಮುಖ್ಯವಾಗಿ ಇದ್ದ ಅಂತರಗಳು ಎರಡು. ಮಂಡಲವು ದೈನಂದಿನ ರಾಜಕೀಯ ಚಟುವಟಿಕೆಗಳಲ್ಲಿ ಪೂರಾ ಆಸಕ್ತವಾಗಿದ್ದಲ್ಲಿ ಯೂನಿಯನ್ ಅದರಿಂದ ಸಂಪೂರ್ಣವಾಗಿ ದೂರವಿತ್ತು. ಮಂಡಲವು 'ಪೂರ್ಣ ಸ್ವಾತಂತ್ರ್ಯ'ಕ್ಕೆ ಸಂಬಂಧಿಸಿ ಮೌನಧಾರಣೆ ಮಾಡಿದ್ದರೆ, ಯೂನಿಯನ್‌ನ ಮುಖ್ಯ ಉದ್ದೇಶವಿದ್ದುದೇ ಪೂರ್ಣ ಸ್ವಾತಂತ್ರ್ಯಕ್ಕಾಗಿ ಬೇಡಿಕೆ ಹಾಗೂ ಅದರ ಈ ಕಲ್ಪನೆಯನ್ನು ವಿಶಾಲ ಪ್ರಮಾಣದಲ್ಲಿ ಪ್ರಚಾರ ಮಾಡುವುದು. ಯೂನಿಯನ್‌ನ ಆರಂಭದ ಸಂದರ್ಭದಲ್ಲಿ ಡಾ. ಹೆಡಗೇವಾರರು ಹೇಳಿದ್ದುದು: "ರಾಷ್ಟ್ರವಾದಿಗಳಾಗಿರುವವರೇ ಭಾರತದ ಹಿತ ಮತ್ತು ಸಾಮ್ರಾಜ್ಯವಾದದ ಹಿತ ಇವುಗಳ ನಡುವಿನ ವ್ಯತ್ಯಾಸವನ್ನು ಗುರುತಿಸಲಾಗದೆ ಹೋಗಿರುವುದು ಅತ್ಯಂತ ಖೇದಕರ. ಸಾಮ್ರಾಜ್ಯವಾದಿಗಳು ನಿಜಕ್ಕೂ ಉತ್ತಮರೇ ಆಗಿದ್ದಲ್ಲಿ, ಭಾರತವನ್ನು ಇನ್ನೂ ಗುಲಾಮಗಿರಿಯಲ್ಲಿ ಏಕೆ ಇರಿಸಿದ್ದಾರೆ? ಇಂದಿನ ರಾಜಕಾರಣದಲ್ಲಿ ಅನೇಕ ವಿಧ ಕೊರತೆಗಳಿವೆ. ಈ ಕೊರತೆಗಳನ್ನು ದೂರಗೊಳಿಸಲು ಸಾಮೂಹಿಕವಾದ ಪ್ರಯತ್ನಗಳ ಅಗತ್ಯವಿದೆ."

1919ರ ಡಿಸೆಂಬರ್‌ನಲ್ಲಿ 'ಶಾಂತಿದಿನ'ವನ್ನು ಆಚರಿಸಬೇಕೆಂದು ಜನತೆಗೆ ಸರ್ಕಾರವು ಕರೆ ನೀಡಿದ್ದಾಗ, ಯೂನಿಯನ್ ಅದನ್ನು ವಿರೋಧಿಸಿತು. ಯೂನಿಯನ್ ಅಂದು 'ವಿರೋಧಿ ದಿನ'ವನ್ನು ಆಚರಿಸಿತು. ಈ ಸಂಬಂಧದಲ್ಲಿ ಯೂನಿಯನ್ ಪ್ರಕಟಿಸಿದ್ದ ಪ್ರಚಾರ ಪತ್ರದಲ್ಲಿ "ನಾವು ಶಾಂತಿದಿನವನ್ನು ಆಚರಿಸಬಲ್ಲೆವೇನು?" ಎಂಬ ಶೀರ್ಷಿಕೆಯಿದೆ. ಹೀಗಾಗಿ ನಾಗಪುರದ ತರುಣರ ನಡುವೆ ಯೂನಿಯನ್ ದಿನಗಳೆದಂತೆ ಹೆಚ್ಚೆಚ್ಚು ಜನಪ್ರಿಯವಾಗತೊಡಗಿತು.

## ಸಂಕಲ್ಪ

ಕಾಂಗ್ರೆಸ್‌ನಲ್ಲಿ ಡಾ. ಹೆಡಗೇವಾರರ ಕ್ರಿಯಾಶೀಲತೆ ಹೆಚ್ಚಾಗುತ್ತ ಹೋದಂತೆ ಅವರ ಮೇಲಿನ ಜವಾಬ್ದಾರಿಗಳೂ ಹೆಚ್ಚತೊಡಗಿದವು. ಮಧ್ಯಪ್ರಾಂತದಲ್ಲಿ ಹಿಂದಿ ಭಾಷೆಯ ಜಿಲ್ಲೆಗಳು ಹದಿನಾಲ್ಕು ಮತ್ತು ಮರಾಠಿಯವು ನಾಲ್ಕು ಇದ್ದವು. ಆದರೆ ಕಾಂಗ್ರೆಸ್‌ಗೆ ಪ್ರಚಾರ ನೀಡುವಂತಹ ಹಿಂದಿ ಭಾಷೆಯ ಪತ್ರಿಕೆ ಒಂದೂ ಇರಲಿಲ್ಲ. ಪ್ರಾಂತೀಯ ಕಾಂಗ್ರೆಸ್ ನಿಯುಕ್ತಿಸಿದ ಒಂದು ತ್ರಿಸದಸ್ಯ ಸಮಿತಿಯು 'ಸಂಕಲ್ಪ' ಎಂಬ ಹೆಸರಿನ ಹಿಂದಿ ಸಾಪ್ತಾಹಿಕವನ್ನು ಹೊರತರಲು ನಿರ್ಧರಿಸಿತು. 1919ರ ಫೆಬ್ರವರಿ 1 ರಂದು ಎಲ್ಲಾ ಜಿಲ್ಲಾ ಘಟಕಗಳಿಗೆ ಒಂದು ಸುತ್ತೋಲೆ ಮೂಲಕ ಈ ಸೂಚನೆಯನ್ನು ಕಳುಹಿಸಲಾಯಿತು. 'ಸಂಕಲ್ಪ'ಕ್ಕಾಗಿ ಗ್ರಾಹಕರನ್ನು ಸೇರಿಸುವ ಮತ್ತು ಅವರಿಂದ ಪತ್ರಿಕೆಗಾಗಿ ಮೂರು ವರ್ಷಗಳ ಮುಂಗಡ ಚಂದಾ ಸಂಗ್ರಹಿಸುವ ಹೊಣೆಯನ್ನು ಡಾ. ಹೆಡಗೇವಾರರಿಗೆ ವಹಿಸಲಾಯಿತು. ಅವರು ಪ್ರಾಂತದಾದ್ಯಂತ ಇದಕ್ಕಾಗಿ ಪ್ರವಾಸ ಕೈಗೊಂಡರು. ಈ ಕೆಲಸ ಸುಲಭವಾಗಿರಲಿಲ್ಲ. ಇದರ ಹಿಂದೆಯೂ ಇದೇ ರೀತಿಯ ಪತ್ರಿಕೆಗಾಗಿ ಮುಂಗಡ ಚಂದಾಕೊಟ್ಟು, ನಂತರ ಆ ಪತ್ರಿಕೆಯೇ ನಿಂತು ಹೋಗಿರುವುದರ ಕಹಿ ಅನುಭವ ಅನೇಕರದಾಗಿತ್ತು. ಹೀಗಾಗಿ ಜನರ ಮನದಲ್ಲಿ ಮುಂಗಡ ಚಂದಾ ಕೊಡುವ ವಿಷಯದಲ್ಲಿ ಭರವಸೆಯೇ ಇರಲಿಲ್ಲ. ಡಾ. ಮುಂಜೆ ಅವರಿಗೆ ಆಗಾಗ ಪತ್ರ ಬರೆದು ಡಾ. ಹೆಡಗೇವಾರರು ಅಂತಹ ಹಲವು ತಮ್ಮ ಅನುಭವಗಳನ್ನು ತಿಳಿಸಿದ್ದಾರೆ – "ಮೂರು ವರ್ಷಗಳಿಗಾಗಿ ಮುಂಗಡ ಚಂದಾ ನೀಡಲು ಇಲ್ಲಿ ಜನರಲ್ಲಿ ಉತ್ಸಾಹವಿಲ್ಲ. ಅದಕ್ಕೆ ಕಾರಣವೆಂದರೆ, ಈ ಹಿಂದೆ ಸಾರ್ವಜನಿಕ

ಉದ್ದೇಶಗಳಿಗಾಗಿ ಸಂಗ್ರಹಿತವಾಗಿರುವ ಹಣ, ಸರಿಯಾದ ರೀತಿಯಲ್ಲಿ ಬಳಕೆಯಾಗಿಲ್ಲ ಎಂಬ ಆಪಾದನೆ ಇರುವುದರಿಂದ." [2]

ಅಷ್ಟಾದರೂ ತಮ್ಮ ವಾಕ್ಚಾತುರ್ಯ, ತರ್ಕಬದ್ಧವಾದ ವಿಷಯದ ಮಂಡನೆ ಮತ್ತು ಸ್ವೀಕೃತ ಕಾರ್ಯದ ಸಲುವಾಗಿ ನಿಷ್ಠೆಯಿಂದ ಪರಿಶ್ರಮಿಸುವ ಅವರ ಸ್ವಭಾವ ಇವುಗಳ ಕಾರಣದಿಂದಾಗಿ ಪ್ರಾಂತದಲ್ಲಿ ಸಂಗ್ರಹವಾಗಬೇಕೆಂದಿದ್ದ ಗುರಿಗಿಂತಲೂ ಹೆಚ್ಚಿನ ಹಣವನ್ನು ಒಟ್ಟುಗೂಡಿಸುವುದರಲ್ಲಿ ಅವರು ಸಫಲರಾಗಿದ್ದರು. ಖಂಡ್ವಾದಲ್ಲಿ ಅವರು ನಲವತ್ತು ಗ್ರಾಹಕರನ್ನು ಸೇರಿಸಿದಲ್ಲಿ, ಸಾಗರದಲ್ಲಿ ಇಪ್ಪತ್ತು, ಮತ್ತು ದಾಮೋಹದಲ್ಲಿ ಮೂವತ್ತು ಮಂದಿಯನ್ನು ಚಂದಾದಾರರನ್ನಾಗಿ ಮಾಡಿದ್ದರು. ಏಪ್ರಿಲ್ 2 ರಂದು ಮತ್ತು ಅದೇ ತಿಂಗಳ 25ರಂದು ಎರಡು ಕಂತುಗಳಲ್ಲಿ ಡಾ. ಮುಂಜೆ ಅವರಿಗೆ ರೂ. 500/– ಮತ್ತು ರೂ. 600/– ಅವರು ಕಳುಹಿಸಿಕೊಟ್ಟಿದ್ದರು. ಮೂರು ತಿಂಗಳ ಕಾಲ ದೂರದೂರದ ಊರುಗಳವರೆಗೆ ಅವರ ಪ್ರವಾಸ ಸತತವಾಗಿ ನಡೆಯಿತು. ಕೆಲವು ಊರುಗಳಲ್ಲಿ ಅವರಿಗೆ ಪರಿಚಿತರೆನ್ನುವವರು ಒಬ್ಬರೂ ಇರಲಿಲ್ಲ. ಅಷ್ಟಾದರೂ ಅವರು ಒಂದು ಸಾವಿರ ಗ್ರಾಹಕರನ್ನು ಸೇರ್ಪಡೆಗೊಳಿಸುವುದರಲ್ಲಿ ಯಶಸ್ವಿಯಾದರು.[3] ಕೆಲವು ಊರುಗಳಿಗೆ ಅವರು ಎತ್ತಿನ ಬಂಡಿಯಲ್ಲಿ ಪ್ರಯಾಣಿಸಿದ್ದೂ ಉಂಟು. ಉದಾಹರಣೆಗಾಗಿ ನರಖೇಡ, ಪಾಟ್ಣಾ ಮೊದಲಾದ ಊರುಗಳಿಗೆ ಹಲವಾರು ಘಂಟೆಗಳ ಕಾಲ ಎತ್ತಿನ ಬಂಡಿಯಲ್ಲಿ ಪ್ರಯಾಣಿಸಿ ಅವರು ತಲಪಿದ್ದರು. ಈ ಕೆಲಸದಿಂದಾಗಿ ಅವರ ಪರಿಚಿತರ ವರ್ತುಲವಂತೂ ವಿಶಾಲವಾಯಿತು. ಜತೆಯಲ್ಲಿ ಇದೇ ಮೊದಲ ಬಾರಿಗೆ ರಾಜಕೀಯ ವ್ಯಕ್ತಿಗಳು ಹೇಗಿರುತ್ತಾರೆ, ರಾಷ್ಟ್ರಭಕ್ತಿಯ ಹೆಸರಲ್ಲಿ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಹಾಗೂ ಹಲವು ಮುಖಗಳಲ್ಲಿ ಏನೇನು ನಡೆಯುತ್ತವೆ ಎಂಬಿವೇ ಮೊದಲಾದವುಗಳನ್ನು ತಿಳಿದುಕೊಳ್ಳುವ ಅವಕಾಶಗಳೂ ಅವರಿಗೆ ದೊರೆತವು. ತಾವು ಎದುರಿಸಿದ ವಿವಿಧ ರೀತಿಯ ಪ್ರಶ್ನೆಗಳು, ಪರಿಸ್ಥಿತಿಗಳು, ಸನ್ನಿವೇಶಗಳು ಮತ್ತು ಪ್ರಸಂಗಗಳಿಂದ ಅವರಿಗೆ ಭಾರತದ ರಾಷ್ಟ್ರೀಯತೆಯ ಮತ್ತು ಕಾಂಗ್ರೆಸ್ ಸಂಘಟನೆಯ ರೀತಿನೀತಿಗಳ, ಅದರ ಅಲ್ಲಲ್ಲಿನ ಸ್ಥಾನೀಯ ನಾಯಕರ ಶಕ್ತಿ ಸಾಮರ್ಥ್ಯದ ಮತ್ತು ಸಾರ್ವಜನಿಕ ಜೀವನದಲ್ಲಿ ವ್ಯಾಪಕವಾಗಿ ಇರುವಂತಹ ಕೊರತೆಗಳ ಪರಿಚಯವೂ ಆಯಿತು. ತಮ್ಮ ಬದುಕಿನ ಮೊದಲ ಭಾಗದಲ್ಲಿ ಕ್ರಾಂತಿಕಾರಿಗಳ ನಡುವೆ ಬೆಳೆದಿದ್ದ ಕಾರಣದಿಂದಾಗಿ ಸಾರ್ವಜನಿಕ ಆಂದೋಳನಗಳ ವ್ಯಾವಹಾರಿಕ ಸ್ವರೂಪ ಅವರಿಗೆ ಸರಿಯಾಗಿ ಗೊತ್ತಾಗಿರಲಿಲ್ಲ. ಅವರು ಡಾ. ಮುಂಜೆ ಅವರಿಗೆ ಬರೆದಿದ್ದ ಒಂದು ಪತ್ರದಲ್ಲಿ "ಕಾಂಗ್ರೆಸ್‌ನ ನಾಯಕರು ಉತ್ತಮ ಭಾಷಣಕಾರರಾಗಿರುವುದೇನೋ ನಿಜ. ತಮ್ಮ ಭಾಷಣದಿಂದ ಅವರು ಜನರನ್ನು ಆಕರ್ಷಿಸಿ ಪ್ರಭಾವಿಗೊಳಿಸಲು ಸಹ ಬಲ್ಲರು. ಆದರೆ ಎರಡು ಮೂರು ದಿನಗಳ ನಂತರ ಅವರ ಭಾಷಣದ ಪ್ರಭಾವ ಜನರ ಮನಸ್ಸಿನಲ್ಲಿ ಉಳಿಯುವುದೇ ಇಲ್ಲ. ಕಾರಣವೆಂದರೆ, ಅವರೆಲ್ಲ ಹಣ ಮಾಡುವುದರಲ್ಲಿ ಹೆಚ್ಚು ಲಕ್ಷ್ಯ ವಹಿಸುತ್ತಾರೆ" ಎಂದು ಅನುಭವವನ್ನು ತಿಳಿಸಿದ್ದರು.

ಕಾಂಗ್ರೆಸ್ ಮೂಲಕ ಜನರಿಗೆ ಅಗತ್ಯವಿರುವ ರಾಜಕೀಯ ಶಿಕ್ಷಣದ ಕೆಲಸವು ಆಗಿಲ್ಲ ಎಂಬುದು ಅವರ ಅನುಭವವಾಯಿತು. ತಮ್ಮ ಇನ್ನೊಂದು ಪತ್ರದಲ್ಲಿ ಓರ್ವ ಕಾಂಗ್ರೆಸ್ ಕಾರ್ಯಕರ್ತರಾದ ಮುಜುಂದಾರ ವಕೀಲ್ ಎಂಬುವರ ಉದಾಹರಣೆ ನೀಡುತ್ತ "ಸಾರ್ವಜನಿಕರಿಗಾಗಿ ಕೆಲಸವನ್ನು ಸ್ವತಃ ಮಾಡದೆ ಇತರರಿಂದ ಮಾಡಿಸುವ

---

2. ಮುಂಜೆ ಪೇಪರ್ಸ್, ಡಾ. ಹೆಡಗೇವಾರರಿಂದ ಮುಂಜೆ ಅವರಿಗೆ ಪತ್ರ, 24 ಫೆಬ್ರವರಿ 1919
3. ಮುಂಜೆ ಪೇಪರ್ಸ್, ವ್ಯಕ್ತಿಗತ ಡೈರಿ, ನೆಹರು ಸ್ಮೃತಿ ಸಂಗ್ರಹಾಲಯ ಮತ್ತು ಪುಸ್ತಕಾಲಯ. ನವದೆಹಲಿ

ಈ ನಿಟ್ಟಿನಲ್ಲಿ ನಾಗಪುರ ನ್ಯಾಶನಲ್ ಯೂನಿಯನ್ ತನ್ನ ಕಾರ್ಯವನ್ನು ಆರಂಭಿಸಿತು. ಆಗಸ್ಟ್‌ನ ಮೊದಲ ಸಪ್ತಾಹದಲ್ಲಿ ಡಾ. ಹೆಡಗೇವಾರರು ಕಾಂಗ್ರೆಸ್‌ನ ಹೊಸ ಅಧ್ಯಕ್ಷರಾಗಿ ಅರವಿಂದ ಘೋಷರ ಹೆಸರನ್ನು ಪ್ರಸ್ತಾಪಿಸಿದಾಗ ಯೂನಿಯನ್ ಒಮ್ಮತದಿಂದ ಅದಕ್ಕೆ ಒಪ್ಪಿಗೆ ನೀಡಿತು. ತದನಂತರ ಪ್ರಾಂತೀಯ ಕಾಂಗ್ರೆಸ್ ಸಹ ತನ್ನ ಸಹಮತವನ್ನು ಸೂಚಿಸಿತು. ಆಗ ಡಾ. ಹೆಡಗೇವಾರರು ಕಾಂಗ್ರೆಸ್‌ನ ನಾಗಪುರ ನಗರ ಘಟಕದ ಸಹಕಾರ್ಯದರ್ಶಿಯಾಗಿದ್ದರು. ಅವರ ಆಗ್ರಹದ ಕಾರಣದಿಂದಾಗಿ ಡಾ. ಮುಂಜೆ ಮತ್ತು ಸ್ವತಃ ಡಾ. ಹೆಡಗೇವಾರರು ಅರವಿಂದರ ಭೇಟಿಗಾಗಿ ಆಗಸ್ಟ್‌ನಲ್ಲಿ ಪಾಂಡಿಚೇರಿಗೆ ತೆರಳಿದರು. ಅರವಿಂದರು 1910ರಿಂದಲೂ ಅಲ್ಲಿ ಸನ್ಯಾಸಿ ಜೀವನ ಸಾಗಿಸುತ್ತಿದ್ದರು.

ಅವರಿಬ್ಬರೂ ಅರವಿಂದರನ್ನು ಸಕ್ರಿಯ ರಾಜಕಾರಣಕ್ಕೆ ಮರಳಿ ಕಾಂಗ್ರೆಸ್‌ನ ಅಧ್ಯಕ್ಷತೆ ವಹಿಸುವಂತೆ ಒತ್ತಾಯಿಸಿದರು. ಆದರೆ ಅರವಿಂದರು ಈ ಸಲಹೆಯನ್ನು ಸ್ಪಷ್ಟವಾಗಿ ತಿರಸ್ಕರಿಸಿದರು. ಅಲ್ಲಿಂದ ಅವರಿಬ್ಬರೂ ವಾಪಸ್ ಬಂದ ನಂತರವೂ ಪ್ರಯತ್ನ ಮುಂದುವರಿಯಿತು. ಕೊನೆಯಲ್ಲಿ 1920ರ ಆಗಸ್ಟ್ 30ರಂದು ಅರವಿಂದರು ಡಾ. ಮುಂಜೆ ಅವರಿಗೆ ಪತ್ರ ಬರೆದು ತನಗೆ ರಾಜಕೀಯಕ್ಕೆ ಮರಳಲು ಸ್ವಲ್ಪವೂ ಇಚ್ಛೆ ಇಲ್ಲವೆಂಬುದನ್ನು ಪೂರಾ ಸ್ಪಷ್ಟಗೊಳಿಸಿದರು. ಈ ಹಂತದಲ್ಲಿ ಡಾ. ಹೆಡಗೇವಾರರು ಇನ್ನೂ ಅನೇಕರಿಂದ ಅರವಿಂದರಿಗೆ ಪತ್ರ ಮತ್ತು ಟೆಲಿಗ್ರಾಮ್ ಮೂಲಕ ತಮ್ಮ ನಿರ್ಧಾರದ ಕುರಿತು ಮರು ವಿಚಾರ ಮಾಡುವಂತೆ ಆಗ್ರಹಿಸಿ ಪ್ರಯತ್ನವನ್ನು ಮುಂದುವರಿಸಿದ್ದರು. ಅಂತಿಮವಾಗಿ ಪಾಂಡಿಚೇರಿಯಿಂದ "ಮರುವಿಚಾರ ಅಸಾಧ್ಯ" ಇಂಗಿತದ ಟೆಲಿಗ್ರಾಮ್ ಸೆಪ್ಟೆಂಬರ್ 30 ರಂದು ಬಂದ ಮೇಲೆ ಮುಂದಿನ ಪ್ರಯತ್ನಗಳನ್ನು ನಿಲ್ಲಿಸಲಾಯಿತು.

ಈ ಅಧಿವೇಶನಕ್ಕಾಗಿ ರಚಿಸಲಾದ ಸ್ವಾಗತ ಸಮಿತಿಯಲ್ಲಿ ಡಾ. ಹೆಡಗೇವಾರರು ಓರ್ವ ಸದಸ್ಯರಾಗಿದ್ದರು. ಪ್ರಾಂತೀಯ ಕಾಂಗ್ರೆಸ್ ವತಿಯಿಂದ ಅಧ್ಯಕ್ಷ ಸ್ಥಾನಕ್ಕಾಗಿ ಅರವಿಂದ ಘೋಷ್, ವಿಜಯ ರಾಘವಾಚಾರ್ಯ, ಚಿತ್ತರಂಜನದಾಸ, ಮಹಮ್ಮದ್ ಅಲಿ ಮತ್ತು ಕ್ರಾಂತಿಕಾರಿಯಾಗಿದ್ದ ಶ್ಯಾಮಸುಂದರ ಚಕ್ರವರ್ತಿ ಮೊದಲಾದವರ ಹೆಸರುಗಳನ್ನು ಸೂಚಿಸಲಾಯಿತು.

ಪಂಜಾಬ್, ಬಿಹಾರ, ದೆಹಲಿ, ಮಧ್ಯಪ್ರಾಂತ, ಮದ್ರಾಸ್, ಮುಂಬಯಿ ಮತ್ತು ಸಂಯುಕ್ತ ಪ್ರಾಂತಗಳಿಂದ ವಿಜಯ ರಾಘವಾಚಾರ್ಯ ಹೆಸರಿಗೆ ಸಮರ್ಥನೆ ದೊರಕಿತು. ಡಾ. ಮುಂಜೆ ಅವರೂ ಕೂಡ ತಮ್ಮ ಸಮರ್ಥನೆಯನ್ನು ಅವರಿಗೆ ನೀಡಿದ್ದರು. 1920ರ ಅಕ್ಟೋಬರ್ 10 ರಂದು ನಾಗಪುರದಲ್ಲಿ ಸ್ವಾಗತ ಸಮಿತಿಯ ಬೈಠಕ್ ನಡೆಯಿತು. ಅದರಲ್ಲಿ ಪ್ರಾಂತದಾದ್ಯಂತದಿಂದ 550 ಪ್ರತಿನಿಧಿಗಳು ಪಾಲ್ಗೊಂಡಿದ್ದರು. ಈ ಬೈಠಕ್‌ನಲ್ಲಿ ಡಾ. ಹೆಡಗೇವಾರರು ವಿಜಯ ರಾಘವಾಚಾರ್ಯರ ಹೆಸರಿಗೆ ತಮ್ಮ ವಿರೋಧವನ್ನು ಪ್ರಕಟಿಸಿದರು. ಅವರ ವಿರೋಧದಲ್ಲಿ ಸೈದ್ಧಾಂತಿಕ ಮತ್ತು ಭಾವನಾತ್ಮಕ ಇವೆರಡೂ ಅಂಶಗಳಿದ್ದವು. ಜಲಿಯನ್‌ವಾಲಾ ಬಾಗ್ ಘಟನೆಯಾದಾಗ ಸಂಪೂರ್ಣ ದೇಶವೇ ಸಾಮ್ರಾಜ್ಯವಾದದ ರಾಕ್ಷಸಿ ಮನೋಭಾವ ವಿರುದ್ಧ ಆಕ್ರೋಶದಿಂದಿದ್ದ ಸಂದರ್ಭದಲ್ಲಿ ವಿಜಯ ರಾಘವಾಚಾರ್ಯ ಅವರು ಮದ್ರಾಸಿನ ರಾಜ್ಯಪಾಲರ ಆಹ್ವಾನವನ್ನು ಸ್ವೀಕರಿಸಿ 'ಚಹಾಕೂಟ'ದಲ್ಲಿ ಪಾಲ್ಗೊಂಡಿದ್ದರು ಎಂಬುದೇ ಡಾ.ಹೆಡಗೇವಾರರ ಆಕ್ಷೇಪವಾಗಿತ್ತು.

'ಸಾಮ್ರಾಜ್ಯವಾದದ ಮಾನಸಿಕತೆಯನ್ನು ಮತ್ತು ದೇಶದ ಜನರ ಮನದ ಭಾವನೆಗಳನ್ನು ಗುರುತಿಸಲಾಗದ ವ್ಯಕ್ತಿ ಕಾಂಗ್ರೆಸ್‌ನ ಅಧ್ಯಕ್ಷರಾಗಿರಲು ಹೇಗೆ ಸಾಧ್ಯ?' ಎಂಬ ಪ್ರಶ್ನೆಯನ್ನು ಅವರು ಎತ್ತಿದರು.

ಸುಸೂತ್ರವಾಗಿ ನಡೆಯುವಂತೆ ನೋಡಿಕೊಳ್ಳುವುದರಲ್ಲಿ ನೆರವಾಗುವ ಹೊಣೆ ಇವುಗಳು ಒಳಗೊಂಡಿದ್ದವು. ಈ ಸಮಿತಿಯಲ್ಲಿ ಡಾ. ಲ. ವಾ. ಪರಾಂಜಪೆ, ಹರಕರೆ ಮತ್ತು ಡಿ.ವಿ. ದೇಶಮುಖ ಅವರೂ ಸದಸ್ಯರಾಗಿದ್ದರು. ಆದರೆ ಇವರೆಲ್ಲರ ಪೈಕಿ ವಯಸ್ಸಿನಿಂದ ಚಿಕ್ಕವರಾಗಿದ್ದವರು ಡಾ. ಹೆಡಗೇವಾರರೇ. ಮತ್ತು ಸ್ವಇಚ್ಛೆಯಿಂದ ಪೂರ್ಣಕಾಲಿಕ ಕಾರ್ಯಕರ್ತರಾಗಿ ದುಡಿಯುತ್ತಿದ್ದವರೂ ಅವರೇ. ಹೀಗಾಗಿ ಮುಖ್ಯ ಜವಾಬ್ದಾರಿಯೆಲ್ಲವೂ ಇದ್ದುದು ಅವರ ಮೇಲೆಯೇ. ಅವರು 1200 ಸ್ವಯಂಸೇವಕರನ್ನು ಕಲೆಹಾಕಿ ಅವರಿಗೆಲ್ಲ ತರಬೇತಿ ನೀಡಿದರು. ನಾಗಪುರ ಅಧಿವೇಶನ ಅದುವರೆಗೆ ನಡೆದಿದ್ದ ಅಧಿವೇಶನಗಳಲ್ಲಿ ಅತಿ ದೊಡ್ಡದು. ಅದರಲ್ಲಿ ಮೂವತ್ತು ಸಾವಿರ ಮಂದಿ ಪಾಲ್ಗೊಂಡಿದ್ದರು. ಇಪ್ಪತ್ತು ಸಾವಿರದಷ್ಟು ಪ್ರತಿನಿಧಿಗಳೇ ಇದ್ದರು. ಈ ಅಧಿವೇಶನದಲ್ಲಿ ಡಾ. ಹೆಡಗೇವಾರರು ಓರ್ವ ಕುಶಲ ಸಂಘಟಕರಾಗಿ ಬೆಳಕಿಗೆ ಬಂದರು. ಸ್ವಯಂಸೇವಕ ಸಮಿತಿಗೆ ದೊರೆತ ಎಲ್ಲ ಅಭಿನಂದನೆಗಳು ವಾಸ್ತವಿಕವಾಗಿ ಡಾ. ಹೆಡಗೇವಾರರಿಗೇ ಸಲ್ಲಬೇಕಾದವು. ಕೆಲಸದ ಉತ್ತಮ ನಿರ್ವಹಣೆಗಾಗಿ ನಾಯಕರು ವ್ಯಕ್ತಪಡಿಸಿದ ಮೆಚ್ಚುಗೆ ಮತ್ತು ಪ್ರತಿನಿಧಿಗಳಿಂದಲೂ ಕೇಳಿಬಂದ ಅಭಿನಂದನೆಗಳಿಂದ ಅವರೇನೂ ಉಬ್ಬಲಿಲ್ಲ. ತಮಗೆ ದೊರೆತ ಪ್ರಸಿದ್ಧಿಯನ್ನು ಅವರು ಯಾವುದೇ ಸ್ಥಾನಮಾನ ಗಳಿಸಲು ಬಳಸಲಿಲ್ಲ. ಅದರ ನಂತರವೂ ಅವರು ಕಾಂಗ್ರೆಸ್‌ನ ಓರ್ವ ಸಾಮಾನ್ಯ ಕಾರ್ಯಕರ್ತನಂತೆಯೇ ಕೆಲಸದಲ್ಲಿ ಮುಂದುವರಿದರು. ಕಾಂಗ್ರೆಸ್ ಅಧಿವೇಶನದ ವಿಷಯ ಸಮಿತಿಯ ಬೈಠಕ್‌ನಲ್ಲಿ ಅವರು ತಮ್ಮದೇ ಆದ ಠರಾವು ಒಂದನ್ನು ಮಂಡಿಸಿದ್ದರು. ಈ ಠರಾವಿನಲ್ಲಿ ಕಾಂಗ್ರೆಸ್‌ನ ಗುರಿಯನ್ನು ಇನ್ನೊಮ್ಮೆ ಸ್ಪಷ್ಟಪಡಿಸುತ್ತ "ಬಂಡವಾಳವಾದಿಗಳ ದೌರ್ಜನ್ಯದಿಂದ ರಾಷ್ಟ್ರಗಳನ್ನು ಬಿಡುಗಡೆಗೊಳಿಸುವುದು ಮತ್ತು ಭಾರತೀಯ ಗಣರಾಜ್ಯವನ್ನು ಸ್ಥಾಪಿಸುವುದೇ ಕಾಂಗ್ರೆಸ್‌ನ ಗುರಿಯಾಗಿದೆ" ಎಂದು ಹೇಳಲಾಗಿತ್ತು. ಈ ಠರಾವೇನೊ ಸ್ವೀಕಾರವಾಗಲಿಲ್ಲ. ಆದರೆ ಡಾ. ಹೆಡಗೇವಾರರಂತೂ ಭಾರತೀಯ ಸ್ವಾತಂತ್ರ್ಯ ಹೋರಾಟವನ್ನು ವಿಶ್ವದ ಪೀಡಿತ, ಶೋಷಿತ ಮತ್ತು ಸಾಮ್ರಾಜ್ಯವಾದಿಗಳ ದಬ್ಬಾಳಿಕೆಗೆ ಒಳಗಾದ ಇನ್ನೂ ಅನೇಕ ರಾಷ್ಟ್ರಗಳು ನಡೆಸುವಂತಹ ಹೋರಾಟದ ಜತೆಯಲ್ಲಿ ಪೋಣಿಸಿದರು. 'ಮಾಡರ್ನ್ ರಿವ್ಯೂ' ಪತ್ರಿಕೆಯು "ಪ್ರಸ್ತಾವಿತ ಠರಾವು ಗಂಭೀರ ಚಿಂತನೆಯುಳ್ಳವರಿಂದ ನಗೆಗೀಡಾದರೂ, ವಿಷಯ ಸಮಿತಿಯ ಬೈಠಕ್‌ನಲ್ಲಿ ಅದಕ್ಕೆ ಇನ್ನೂ ಚೆನ್ನಾಗಿರುವ ಸ್ಪಂದನ ಸಿಗಬೇಕಾದ ಅಗತ್ಯವಿತ್ತು". (But the proposed resolution, which excited laughter among serious minded people, deserved better fate than what it met with the subject Committee)[6] ಎಂದು ಬರೆಯಿತು. ಈ ಪತ್ರಿಕೆಯು ಇನ್ನೂ ಮುಂದುವರಿದು ನಾಗಪುರ ಕಾಂಗ್ರೆಸ್‌ನ ಸ್ವಾಗತ ಸಮಿತಿಯಲ್ಲಿ ಗಣರಾಜ್ಯದ ಮನೋಭಾವವುಳ್ಳವರು ಇದ್ದಾರೆ ಎಂದು ಸಹ ಬರೆಯಿತು.

ನಾಗಪುರ ಕಾಂಗ್ರೆಸ್ ಅಧಿವೇಶನದ ನಂತರ ಡಾ. ಹೆಡಗೇವಾರರು ಪ್ರಾಂತದ ಪ್ರಮುಖ ನಾಯಕರಲ್ಲಿ ಒಬ್ಬರಾಗಿ ಗುರುತಿಸಲ್ಪಡುವವರಾದರು. 1921ರ ಏಪ್ರಿಲ್‌ನಲ್ಲಿ ಅವರು ಮಧ್ಯಪ್ರಾಂತದ ಹನ್ನೆರಡು ಸದಸ್ಯರ 'ತಿಲಕ್ ಸ್ವರಾಜ್ಯ ಫಂಡ್' ನ ಓರ್ವ ಸದಸ್ಯರಾಗಿಯೂ ಆಯ್ಕೆಯಾದರು. ಮೇ ಮಾಸದಲ್ಲಿ ಅವರು ನಾಗಪುರ ಜಿಲ್ಲಾ ಕಾಂಗ್ರೆಸ್‌ಗೆ ಚುನಾಯಿತರಾದರು. ಅವರ ಜನಪ್ರಿಯತೆ ಈಗ ಅದೆಷ್ಟಾಗಿತ್ತದೆಂಬುದು ಅಸಹಕಾರ ಆಂದೋಳನದಲ್ಲಿ ಅವರು ನಿರ್ವಹಿಸಿದ ಪಾತ್ರದಿಂದ ಗೊತ್ತಾಗುತ್ತದೆ.

---

6. 'ಮಾಡರ್ನ್ ರಿವ್ಯೂ', ಮಾರ್ಚ್ 1921

# ಅಸಹಕಾರ ಆಂದೋಳನ

ಮೊದಲ ವಿಶ್ವ ಯುದ್ಧದ ಸಂದರ್ಭದಲ್ಲಿ ಡಾ. ಹೆಡಗೇವಾರರು ಬ್ರಿಟಿಷ್ ಸಾಮ್ರಾಜ್ಯವಾದದ ವಿರುದ್ಧ ಸಂಪೂರ್ಣವಾಗಿ ಅಸಹಕಾರದ ಮತ್ತು ಕ್ರಾಂತಿಕಾರಕ ದೃಷ್ಟಿಕೋನವನ್ನು ತಳೆದಿದ್ದುದು ಸರ್ವವಿದಿತ. ಆದರೆ ಆಂದಿನ ರಾಷ್ಟ್ರೀಯ ಮತ್ತು ಪ್ರಾಂತೀಯ ನಾಯಕರಿಂದ ಅದಕ್ಕೆ ಸಮರ್ಥನೆ ಇರಲಿಲ್ಲ. ಯುದ್ಧದ ನಂತರ ಪರಿಸ್ಥಿತಿ ಸಂಪೂರ್ಣವಾಗಿ ಬದಲಾಯಿತು. ಮಧ್ಯಪ್ರಾಂತದಲ್ಲಿ ಅವರ ಚಿಂತನೆಗೆ ಅದೇ ನಾಯಕರಿಂದ ಮನ್ನಣೆ ದೊರೆಯಿತು. ಸಾಮ್ರಾಜ್ಯವಾದ ಪರವಾಗಿ ಯಾವುದೇ ವಿಧದ ಸಹಾನುಭೂತಿಯನ್ನು ತೋರುವುದು ರಾಷ್ಟ್ರೀಯತೆಗೆ ದ್ರೋಹ ಬಗೆದಂತೆ ಅನಿಸುತ್ತಿದ್ದ ದಿನಗಳು ಅವು. ಯುದ್ಧದ ನಂತರ ವಸಾಹತುಶಾಹಿ ದಮನಚಕ್ರ ಇನ್ನೊಮ್ಮೆ ತಿರುಗಲಾರಂಭಿಸಿತು. ರೌಲೆಟ್ ಕಾನೂನು ಮತ್ತು ಜಲಿಯನ್ ವಾಲಾಬಾಗ್‌ನ ರಾಕ್ಷಸೀ ಘಟನೆಯಿಂದಾಗಿ ದೇಶವೆಲ್ಲ ಆಗ ಕೋಪದಿಂದ ಕುದಿಯುತ್ತಿತ್ತು. ಜನ-ಸಾಮಾನ್ಯರಲ್ಲೂ ಆಕ್ರೋಶ ಕುದಿಬಂದು ಮುಟ್ಟಿತ್ತು. ಸ್ವಾತಂತ್ರ್ಯದ ಹೋರಾಟದಿಂದ ಸುಮಾರಾಗಿ ದೂರವೇ ಉಳಿದಿದ್ದ ಮುಸಲ್ಮಾನ ಸಮುದಾಯವೂ ಬ್ರಿಟನ್ ವಿರುದ್ಧ ಕೆರಳಿ ನಿಂತಿದ್ದ ಸಂದರ್ಭ ಅಂದಿನದು. ಅದಕ್ಕೆ ಕಾರಣವೆಂದರೆ ತುರ್ಕಿಯ ಖಲೀಫ್‌ನ ವಿರುದ್ಧ ಬ್ರಿಟಿಷರು ಎಸಗಿದ್ದ ಅನ್ಯಾಯ. ಖಲೀಫನು ಮುಸಲ್ಮಾನರಿಗೆಲ್ಲ ಧಾರ್ಮಿಕ ನಾಯಕನಾಗಿದ್ದ. ಮುಸಲ್ಮಾನರ ಜಾಗತಿಕ ಬಾಂಧವ್ಯದ (Pan-Islam) ಕಲ್ಪನೆಗೆ ಅನುಗುಣವಾಗಿ ಭಾರತೀಯ ಮುಸಲ್ಮಾನರಿಗೆ ಖಲೀಫನ ಬಗ್ಗೆ ಸಹಾನುಭೂತಿ ಇದ್ದುದು ಸ್ವಾಭಾವಿಕ. ಹೀಗಾಗಿ ಅವನ ಪರವಾಗಿ ಭಾರತೀಯ ಮುಸಲ್ಮಾನರೆಲ್ಲರೂ ಒಕ್ಕೊರಲಿನ ಧ್ವನಿಗೂಡಿಸಿದ್ದರು. ಈ ಸಂದರ್ಭವನ್ನು ನಮ್ಮ ಸಾಮ್ರಾಜ್ಯವಾದ ವಿರೋಧಿ ಆಂದೋಳನದ ಸಾಮಾಜಿಕ ಭೂಮಿಕೆಯನ್ನು ಇನ್ನಷ್ಟು ವಿಶಾಲಗೊಳಿಸುವ ಒಂದು ಸದವಕಾಶವಾಗಿ ಮಾಡಿಕೊಳ್ಳಲು ಮಹಾತ್ಮ ಗಾಂಧಿಯವರು ಯೋಚಿಸಿದರು. ಅವರು ಮುಸಲ್ಮಾನರ ನೊಂದ ಮನದ ಕೋಪವನ್ನು ಅಸಹಕಾರ ಆಂದೋಳನದ ಒಂದು ಹೆಚ್ಚಿನ ಅಸ್ತ್ರವಾಗಿ ಮಾಡಿಕೊಂಡರು. ಹಿಂದೂಗಳು ಮತ್ತು ಮುಸಲ್ಮಾನರ ನಡುವೆ ಬಾಂಧವ್ಯವನ್ನು ಬೆಸೆಯುವ ವಿಚಾರವೂ ಆಗ ಅವರಿಗಿತ್ತು. ಗಾಂಧೀಜಿಯವರ ಯೋಜನೆಗನುಗುಣವಾಗಿ ಅಸಹಕಾರ ಆಂದೋಳನವು ಆರಂಭವಾಯಿತು. ನ್ಯಾಯಾಲಯ, ಕಾಲೇಜು ಮತ್ತು ವಿಧಾನ ಮಂಡಲದ ಬಹಿಷ್ಕಾರ, ಸರ್ಕಾರಿ ಪದವಿಯ ಮರಳಿಸುವಿಕೆ ಮತ್ತು ಶಾಂತ ರೀತಿಯಲ್ಲಿ ಎಲ್ಲ ಹಂತಗಳಲ್ಲೂ ಸರ್ಕಾರವನ್ನು ವಿರೋಧಿಸಿ ಸಹಕರಿಸದಿರುವುದೇ ಈ ಆಂದೋಳನದ ಕಾರ್ಯಸೂತ್ರವಾಯಿತು.

ಮಧ್ಯಪ್ರಾಂತದಲ್ಲಿ ಆಗ ರಾಜಕೀಯ ವರ್ಚಸ್ಸು ಇದ್ದುದು ಸ್ವರಾಜ್ಯ ಪಕ್ಷಕ್ಕೆ. ಹೀಗಾಗಿ ಅಸಹಕಾರ ಆಂದೋಳನದ ಬಗ್ಗೆ ಅನೇಕ ವಿಧದ ಸಂದೇಹ ಹಾಗೂ

ಆಕ್ಷೇಪಗಳನ್ನು ಜನರಾಡಿಕೊಳ್ಳುತ್ತಿದ್ದರು. ಸ್ವರಾಜ್ಯ ಪಕ್ಷದ ಓರ್ವ ಪ್ರಮುಖ ನಾಯಕರಾಗಿದ್ದ ಬಿ.ಜಿ. ಖಾರ್ಪಡೆಯವರಂತೂ ಮಹಾತ್ಮಾಗಾಂಧಿಯವರಿಗೊಂದು ಪತ್ರ ಬರೆದು 'ನಿಮ್ಮ ವಿಚಾರಗಳನ್ನು ಒಪ್ಪಿಕೊಂಡೇ ಅಸಹಕಾರ ಆಂದೋಳನವನ್ನು ನಾನು ಸಮರ್ಥಿಸಬೇಕೆಂದು ನೀವೇನಾದರೂ ಅಪೇಕ್ಷಿಸುವುದಾದಲ್ಲಿ ನನಗದು ಸಾಧ್ಯವಿಲ್ಲ' ಎಂದೇ ತಿಳಿಸಿದ್ದರು. ಎಲ್ಲಿವರೆಗೆಂದರೆ, ಡಾ. ಮುಂಜೆಯವರೂ ಸಹ ಆಂದೋಳನದ ಕುರಿತು ತಮ್ಮ ಆಕ್ಷೇಪಗಳನ್ನು ಬಹಿರಂಗವಾಗಿಯೇ ಹೇಳುತ್ತಿದ್ದುದುಂಟು. ಅವರೆಲ್ಲರಿಗೆ ಅನಿಸುತ್ತಿದ್ದುದು ಮಹಾತ್ಮಾ ಗಾಂಧಿಯವರು ಮುಸಲ್ಮಾನರ ತುಷ್ಟೀಕರಣದ ಮೂಲಕ ಆಂದೋಳನವನ್ನು ಬೆಳೆಸಬೇಕೆಂದಿದ್ದಾರೆ ಎಂಬುದೇ. ಮಧ್ಯಪ್ರಾಂತದ ಮರಾಠಿ ಪ್ರದೇಶದಲ್ಲಂತೂ ಆಂದೋಳನದ ಯಶಸ್ಸು ಸಹ ಸಂದೇಹಾಸ್ಪದವೆನಿಸಿತ್ತು.

ಆದರೆ ಡಾ. ಹೆಡಗೇವಾರರು ಎಂ.ಆರ್. ಚೋಳ್ಕರ್, ಸಮೀಉಲ್ಲಾ ಖಾನ್ ಮತ್ತು ಇನ್ನೂ ತಮ್ಮ ಸಮವಯಸ್ಕ ಕೆಲವು ನಾಯಕರ ಜೊತೆಗೂಡಿ ಅಲ್ಲಿನ ಸನ್ನಿವೇಶ ಪೂರಾ ಬದಲಿಸಿದರು. ಅದರಿಂದಾಗಿ ನಾಗಪುರ ಮತ್ತು ಇತರ ಮರಾಠಿ ಜಿಲ್ಲೆಗಳಲ್ಲೂ ಆಂದೋಳನಕ್ಕೆ ಅನಿರೀಕ್ಷಿತ ರೀತಿಯಲ್ಲಿ ಅಪೂರ್ವವಾದ ಯಶಸ್ಸು ಲಭಿಸಿತು. ಡಾ. ಹೆಡಗೇವಾರರು ತಮ್ಮ ಸ್ವಂತದ ವಿಚಾರ ಮತ್ತು ಅನೇಕ ಹಿರಿಯರ ಜತೆ ತಮಗೆ ವ್ಯಕ್ತಿಗತವಾಗಿ ಇದ್ದ ಸಂಬಂಧಗಳನ್ನು ಪಕ್ಕಕ್ಕಿರಿಸಿ ರಾಷ್ಟ್ರದ ಅಂದಿನ ಅಗತ್ಯಗಳೇನು ಎಂಬ ಬಗ್ಗೆ ಮಾತ್ರ ಯೋಚಿಸಿದರು. ಅವರ ಬದುಕಿನ ಮುಂದಿನ ದಿನಗಳ ಅವಲೋಕನ ಮಾಡಿದಾಗಲೂ ಒಂದು ಸಂಗತಿ ಚೆನ್ನಾಗಿ ಕಾಣಿಸುತ್ತದೆ. ಖಿಲಾಫತ್ ವಿಷಯವನ್ನು ರಾಷ್ಟ್ರೀಯ ಆಂದೋಳನದ ಜತೆ ಬೆಸೆದುದರ ಬಗ್ಗೆ ಅವರಿಗೆ ಅಸಮಾಧಾನವಿದ್ದರೂ ಸಾರ್ವಜನಿಕವಾಗಿ ಅವರದನ್ನು ಎಲ್ಲೂ ಪ್ರಕಟಿಸಿರುವ ದಾಖಲೆಯೇ ಇಲ್ಲ. ಅವರು ಯಾವುದೇ ಸಂಸ್ಥೆಯಲ್ಲಾಗಲಿ ಆಂದೋಳನದಲ್ಲಾಗಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದುದಕ್ಕೆ ಇರುತಿದ್ದ ಅಳತೆಗೋಲು ಒಂದೇ – ಅದು ವಸಾಹತುಷಾಹಿಯ ವಿರೋಧವಾದುದೇ ಎಂಬುದು. ಅಸಹಕಾರ ಆಂದೋಳನದಲ್ಲಿ ತಾನು ಮನಃಪೂರ್ವಕ ಸಹಭಾಗಿಯಾಗುವಾಗಲೂ ಅವರು ದೇಶದ ರಾಜಕೀಯ ವಾತಾವರಣ ಹೇಗಿದೆ, ಅಥವಾ ಖಂಡತುಂಡ ಮಾತಾಡುವ ತಿಲಕವಾದಿಗಳ ಅಭಿಪ್ರಾಯವೇನಿದೆ ಇತ್ಯಾದಿ ಕುರಿತು ಸ್ವಲ್ಪವೂ ಚಿಂತಿಸಲೇ ಇಲ್ಲ. ತಮ್ಮ ಸ್ವಚಿಂತನೆ, ಸಂಕಲ್ಪ ಮತ್ತು ಶುದ್ಧ ರಾಷ್ಟ್ರಭಕ್ತಿಯಿಂದ ಕೂಡಿದ ತನ್ನದೇ ನಿರ್ಧಾರ ಇವು ಮಾತ್ರ ಅವರ ಮಟ್ಟಿಗೆ ಮಹತ್ವದ್ದಾಗಿದ್ದವು. ವಸಾಹತುಶಾಹಿಯ ವಿರುದ್ಧ ರಾಷ್ಟ್ರೀಯ ಹೋರಾಟ ನಡೆಯುತ್ತಿರುವಾಗ "ಯಾವುದೋ ವೈಯಕ್ತಿಕ ಅಥವಾ ಸೈದ್ಧಾಂತಿಕ ಭಿನ್ನಾಭಿಪ್ರಾಯದಿಂದಾಗಿ ಅದರಿಂದ ನಿಷ್ಕ್ರಿಯ ಹಾಗೂ ತಟಸ್ಥವಾಗಿ ಉಳಿಯುವುದು ನೈತಿಕವಾಗಿ ಸರಿಯೇನು?" ಎಂಬುದು ಅವರು ತಮ್ಮನ್ನು ತಾವೇ ಕೇಳಿಕೊಳ್ಳುತಿದ್ದ ಪ್ರಶ್ನೆ. ಈ ಹಿನ್ನೆಲೆಯಲ್ಲಿ ಮಹಾತ್ಮಾಗಾಂಧಿಯವರ ಬಗ್ಗೆ ತಮ್ಮ ಮನದ ಶ್ರದ್ಧೆ ಪ್ರಕಟಿಸುವುದರಲ್ಲಾಗಲಿ, ಅವರ ನಾಯಕತ್ವವನ್ನು ಒಪ್ಪಿಕೊಳ್ಳುವುದರಲ್ಲಾಗಲಿ ಅವರಿಗೆ ಸ್ವಲ್ಪವೂ ಕಸಿವಿಸಿಯಾಗಲೇ ಇಲ್ಲ. ಅವರ ಯೋಚನೆಗೆ ಇದ್ದ ಒರೆಗಲ್ಲು ಕೇವಲ ಒಂದೇ ರಾಷ್ಟ್ರೀಯ ಹೋರಾಟವನ್ನು ಬಲಗೊಳಿಸಲು ಮತ್ತು ಬ್ರಿಟಿಷ್ ಸಾಮ್ರಾಜ್ಯವಾದವನ್ನು ದುರ್ಬಲಗೊಳಿಸಲು ಯಾವುದೇ ಅವಕಾಶ ಅಥವಾ ಯಾವುದೇ ಮಾರ್ಗವಿರಲಿ ಅದನ್ನು ಬಳಸಲು ತಯಾರಾಗಬೇಕು. ಹೀಗಾಗಿ ಅಂದಿನ ರಾಜಕೀಯ ಭಾಷೆಯಲ್ಲಿ ಹೇಳುವುದೇ ಆದಲ್ಲಿ, ಅವರು 'ತಿಲಕವಾದಿ'ಯಾಗಿದ್ದವರು, 'ಗಾಂಧಿವಾದಿ'ಯಾಗಿ ಪರಿವರ್ತನೆಗೊಂಡಿದ್ದರು.

ಡಾ. ಹೆಡಗೇವಾರರ ಬದುಕು, ರಾಜಕೀಯ ಚಿಂತನೆ, ನಂಬಿಕೆಗಳು ಮತ್ತು ಧೋರಣೆಗಳು ತಿಲಕರು ಅಥವಾ ಗಾಂಧಿ, ಹಿಂಸೆ ಅಥವಾ ಅಹಿಂಸೆ, ಕಾಂಗ್ರೆಸ್ ಅಥವಾ ಕ್ರಾಂತಿಮಾರ್ಗ ಈ ಮುಂತಾದ ಸಣ್ಣಪುಟ್ಟ ಸಂಗತಿಗಳನ್ನು ಮಾತ್ರ ಆಧರಿಸಿ ನಿರ್ಧಾರಿತವಾಗುತ್ತಿದ್ದಂತಹವುಗಳಲ್ಲ; ತಮ್ಮ ಬದುಕಿನಲ್ಲಿ ಯಾವುದೇ ವ್ಯಕ್ತಿ ಅಥವಾ ಯಾವುದೇ ಭಿನ್ನವಾದ ಮಾರ್ಗಕ್ಕಿಂತ ಹೆಚ್ಚಾಗಿ ಸ್ವಾತಂತ್ರ್ಯ ಪ್ರಾಪ್ತಿಗೆ ಆದ್ಯತೆ ನೀಡುತ್ತಿದ್ದವರು ಅವರು. ದೇಶದ ಸ್ವಾತಂತ್ರ್ಯದ ಸಂಗ್ರಾಮದಲ್ಲಿ ರಾಷ್ಟ್ರೀಯ ಹೋರಾಟಗಾರರೆಲ್ಲರೂ ಪರಸ್ಪರ ನೆರವಾಗಬೇಕು ಮಾತ್ರವಲ್ಲ, ಅದರ ಸಲುವಾಗಿ ತಮ್ಮದೇ ಆದ ಸಂಕುಚಿತ ವಾದಗಳನ್ನು ಬಿಟ್ಟು ಮೇಲೇಳಬೇಕು ಎನ್ನುವುದು ಅವರ ದೃಷ್ಟಿಯಾಗಿತ್ತು.

ಇಲ್ಲಿ ಒಂದು ಉದಾಹರಣೆಯನ್ನು ಉಲ್ಲೇಖಿಸುವುದು ಉಚಿತವಾದೀತು. 1921ರಲ್ಲಿ ನಡೆದ ಪ್ರಾಂತೀಯ ಕಾಂಗ್ರೆಸ್‌ನ ಬೈಠಕ್‌ವೊಂದರಲ್ಲಿ ಕ್ರಾಂತಿಕಾರಿಗಳನ್ನು ಟೀಕಿಸುವ ಒಂದು ಠರಾವು ಚರ್ಚೆಗೆ ಬಂತು. ಡಾ. ಹೆಡಗೇವಾರರು ಅದನ್ನು ದಿಟ್ಟ ಶಬ್ದಗಳಲ್ಲಿ ವಿರೋಧಿಸಿದುದರಿಂದಾಗಿ ಆ ಠರಾವನ್ನು ಹಿಂದೆ ತೆಗೆದುಕೊಳ್ಳಬೇಕಾಯಿತು. ಈ ಬೈಠಕ್‌ನಲ್ಲಿ ಅಧ್ಯಕ್ಷರಾಗಿದ್ದವರು ಲೋಕನಾಯಕ ಅಣೆ ಅವರು. ಬೈಠಕ್ ನಂತರ ಅವರು ಬರೆದಿರಿಸಿದುದು ಹೀಗೆ: "ಡಾ. ಹೆಡಗೇವಾರರು ಕ್ರಾಂತಿಕಾರಿಗಳ ಕುರಿತಾದ ಟೀಕೆಯನ್ನು ಎಂದೂ ಒಪ್ಪುವವರಲ್ಲ. ಅವರೆಲ್ಲರೂ ಪ್ರಾಮಾಣಿಕ ದೇಶಭಕ್ತರು ಎಂಬುದು ಅವರ ಶ್ರದ್ಧೆಯಾಗಿದೆ. ಕ್ರಾಂತಿಕಾರಿಗಳ ಕಾರ್ಯಶೈಲಿಯ ಬಗ್ಗೆ ಕೆಲವರಿಗೆ ಭಿನ್ನಾಭಿಪ್ರಾಯವಿರಬಹುದು. ಆದರೆ ಅವರ ದೇಶಭಕ್ತಿ ಪ್ರಶ್ನಾತೀತವಾದುದು ಎಂಬುದು ಡಾ. ಹೆಡಗೇವಾರರ ಖಚಿತ ನಿಲುವಾಗಿದೆ". ಇಂತಹ ಹಲವಾರು ಪ್ರಸಂಗಗಳಿವೆ. ಹೀಗಾಗಿ ತಮ್ಮ ಮಟ್ಟಿಗೆ ಡಾ. ಹೆಡಗೇವಾರರು ತಿಲಕವಾದಿಯೂ ಅಲ್ಲ, ಗಾಂಧಿವಾದಿಯೂ ಅಲ್ಲ. ಯಾವುದೋ ವಾದಿ ಎಂದು ಅವರ ಕುರಿತು ಹೇಳುವುದೇ ಆದಲ್ಲಿ, ಅವರೋರ್ವ 'ಸ್ವಾತಂತ್ರ್ಯವಾದಿ' ಎನ್ನುವುದೇ ಸರ್ವೋಚಿತವಾದುದು.

ವ್ಯಕ್ತಿಯೊಬ್ಬ ಶುದ್ಧ ಮನಸ್ಸಿನಿಂದ, ನಿಸ್ವಾರ್ಥಭಾವದಿಂದ ಮತ್ತು ತನ್ನ ನಂಬಿಕೆಗಳಿಗೆ ಬದ್ಧನಾಗಿ ದೇಶಭಕ್ತಿಯನ್ನು ಸ್ವಜೀವನದಲ್ಲಿ ಮೈಗೂಡಿಸಿಕೊಂಡಿದ್ದೇ ಆದಲ್ಲಿ, ದೇಶದ ಇತಿಹಾಸವು ಯಾವುದೇ ತಿರುವು ತೆಗೆದುಕೊಂಡರೂ, ಅವನ ಗೌರವಕ್ಕೆಂದೂ ಚ್ಯುತಿ ಬರುವುದಿಲ್ಲ ಮತ್ತು ಮುಂದೆ ಬರಲಿರುವ ಪೀಳಿಗೆಗಳೂ ಅವನನ್ನು ಆದರ್ಶವಾಗಿಯೇ ಸ್ವೀಕರಿಸುತ್ತವೆ. ಡಾ. ಹೆಡಗೇವಾರರಿಗೆ ನಾಗಪುರ ಮತ್ತು ಮಧ್ಯಪ್ರಾಂತದ ಮರಾಠಿ ಪ್ರದೇಶದ ರಾಜಕೀಯ ಚಿತ್ರವನ್ನು ಬದಲಾಯಿಸಲು ಸಾಧ್ಯವಾದುದು ಈ ಕಾರಣಕ್ಕಾಗಿ.

## ನಾಗಪುರ ನ್ಯಾಶನಲ್ ಯೂನಿಯನ್

ಅಸಹಕಾರ ಆಂದೋಲನದಲ್ಲಿ ಡಾ. ಹೆಡಗೇವಾರರು ಸಹಭಾಗಿಯಾಗಿದ್ದುದು ಯಾವುದೋ ತಾತ್ಕಾಲಿಕ ಪರಿಸ್ಥಿತಿಯಿಂದ ಉತ್ತೇಜಿತರಾಗಿ ಎಂದೇನೂ ಅಲ್ಲ. ಅದರೆ ಸುದೀರ್ಘವಾಗಿ ಮತ್ತು ಆಳವಾಗಿ ಯೋಚಿಸಿದ ನಂತರವೇ ಅವರು ಕೈಗೊಂಡಿದ್ದ ನಿರ್ಧಾರ ಅದು. ಇಂಗ್ಲಿಷರ ಜತೆ ಅಸಹಕಾರದ ಕುರಿತು ನಾಗಪುರ ನ್ಯಾಷನಲ್ ಯೂನಿಯನ್‌ನಲ್ಲಿ ಅವರು ದೀರ್ಘವಾದ ಚರ್ಚೆ ನಡೆಸಿದ್ದರು. ಈ ನಿಟ್ಟಿನಲ್ಲಿ ಕಾರ್ಯಕ್ರಮ ನಿರ್ಧರಿಸುವ ಸಲುವಾಗಿ 1920ರ ಆಗಸ್ಟ್ 18ರಂದು ಅವರೊಂದು ಸಮಿತಿಯನ್ನು ರಚಿಸಿದರು. ಈ ಸಮಿತಿಯಲ್ಲಿ ಡಾ. ಚೋಳ್ಕರ್, ಮನೋಹರ ಪಂತ ಬೋಬಡೆ, ಆರ್.ಎನ್. ಪಾಂಡೆ ಮತ್ತು ವಿಶ್ವನಾಥರಾವ್ ಕೇಳ್ಕರ್ ಇದ್ದರು. ಈ ಸಮಿತಿಯು ಅಸಹಕಾರ ಆಂದೋಲನದ

ಒಟ್ಟು ಸ್ವರೂಪವನ್ನು ನಿರ್ಧರಿಸಿ ಯೂನಿಯನ್‌ನ ಮುಂದಿರಿಸಿತು. ಮುಂದೆ ಅದನ್ನೇ ಸೆಪ್ಟೆಂಬರ್‌ನಲ್ಲಿ ಕಲ್ಕತ್ತಾದಲ್ಲಿ ನಡೆದ ಕಾಂಗ್ರೆಸ್‌ನ ವಿಶೇಷ ಅಧಿವೇಶನದಲ್ಲೂ ಚರ್ಚೆಗಾಗಿ ಕಳುಹಿಸಲಾಯಿತು. ಮಧ್ಯಪ್ರಾಂತದ ಮರಾಠಿ ಪ್ರದೇಶದಿಂದ ಬಂದ ಅಸಹಕಾರ ಆಂದೋಳನದ ಸಮರ್ಥಕರಲ್ಲಿ ಒಬ್ಬರಾಗಿ ಸ್ವತಃ ಡಾ. ಹೆಡಗೇವಾರರು ಉಪಸ್ಥಿತರಿದ್ದರು. ಅರ್ಥಾತ್ ಆ ದಿನಗಳಲ್ಲಿ ಅಲ್ಲಲ್ಲಿನ ಸ್ಥಾನೀಯ ಮಟ್ಟದ ಸಣ್ಣಪುಟ್ಟ ಸಂಸ್ಥೆಗಳಲ್ಲೂ ವಸಾಹತುಶಾಹಿಯ ವಿರುದ್ಧ ಅಸಹಕಾರದ ಭಾವನೆ ತುಡಿಯುತ್ತಿತ್ತೆಂಬುದಕ್ಕೆ ಇದೊಂದು ಉದಾಹರಣೆ ಎನ್ನಬಹುದು. ಮಹಾತ್ಮಾ ಗಾಂಧೀಜಿಯವರ ವಿಶೇಷತೆಯಿದ್ದುದು ಅಲ್ಲಲ್ಲಿ ಮಿಡಿಯುತ್ತಿದ್ದ ಇಂತಹ ಎಲ್ಲ ಜನಮನದ ಭಾವನೆಗಳನ್ನು ಏಕಸೂತ್ರದಲ್ಲಿ ಪೋಣಿಸಿ ಅದನ್ನೊಂದು ಮಹಾನ್ ರಾಷ್ಟ್ರೀಯ ಆಂದೋಳನವಾಗಿ ರೂಪಿಸಿದುದರಲ್ಲಿ.

ಅಸಹಕಾರ ಆಂದೋಳನವನ್ನು ಕಾಂಗ್ರೆಸ್ಸು ವಿಧಿವತ್ತಾಗಿ ಘೋಷಿಸುವ ಮೊದಲೇ, ಮಧ್ಯಪ್ರಾಂತದ ಮರಾಠಿ ಪ್ರದೇಶದಲ್ಲಿ ಈ ರಾಷ್ಟ್ರೀಯ ವ್ರತ ಕಾವೇರಿತ್ತು. ಅಲ್ಲಿನ ನಾಯಕರು ವಿವಿಧೆಡೆ ಸಾರ್ವಜನಿಕ ಸಭೆಗಳನ್ನು ನಡೆಸಿ ಅಸಹಕಾರ ಆಂದೋಳನದ ಕಲ್ಪನೆಯನ್ನು ಜನತೆಗೆ ವಿವರಿಸುವ ಕೆಲಸದಲ್ಲಿ ಪೂರಾ ಕ್ರಿಯಾಶೀಲರಾಗಿದ್ದರು.[1]

**ಅಸಹಕಾರ ಆಂದೋಳನ ಸಮಿತಿ**

ಮರಾಠಿ ಮಧ್ಯಪ್ರಾಂತದಲ್ಲಿ ರಚಿತವಾಗಿದ್ದ ಅಸಹಕಾರ ಆಂದೋಳನ ಸಮಿತಿಗೆ ಡಾ. ಹೆಡಗೇವಾರರೇ ನಾಯಕರಾಗಿದ್ದರು. ಅಸಹಕಾರ ಆಂದೋಳನಕ್ಕಾಗಿ ಕಾರ್ಯಕರ್ತರನ್ನು ಬೌದ್ಧಿಕವಾಗಿ, ಮಾನಸಿಕವಾಗಿ ಮತ್ತು ಶಾರೀರಿಕವಾಗಿ ಸಿದ್ಧಗೊಳಿಸುವುದನ್ನು ಈ ಸಮಿತಿಯು ತನ್ನ ಗುರಿಯಾಗಿ ಮಾಡಿಕೊಂಡಿತು. ಅದಕ್ಕಾಗಿ ಸಮಿತಿಯ ವತಿಯಿಂದ ನಿಯಮಿತವಾಗಿ ತರಬೇತಿ ವರ್ಗಗಳನ್ನು ನಡೆಸಲಾಗುತಿತ್ತು. ಪ್ರಶಿಕ್ಷಣಕ್ಕಾಗಿ ಬರುವಂತಹ ಕಾರ್ಯಕರ್ತರು ತಮ್ಮ ಊಟ, ವಸತಿ ಇತ್ಯಾದಿಗಳಿಗೆ ಸ್ವತಃ ವೆಚ್ಚ ವಹಿಸಬೇಕೆಂದು ವಿಧಿಸಲಾಗಿತ್ತು. ಇಷ್ಟೆಲ್ಲಾ ಇದ್ದರೂ ಡಾ. ಹೆಡಗೇವಾರರ ಕರೆಗೆ ಓಗೊಟ್ಟು ಅನೇಕ ಕಾರ್ಯಕರ್ತರು ತರಬೇತಿಗಾಗಿ ಉತ್ಸಾಹದಿಂದ ಬಂದರು. ನಾಗಪುರದ ಅಸಹಕಾರ ಸಮಿತಿಯು 1920 ನವೆಂಬರ್ 11 ರಂದು ಒಂದು ವಾರ ಕಾಲಾವಧಿಯ 'ಅಸಹಕಾರ ಸಪ್ತಾಹ'ವನ್ನು ಆಚರಿಸಿತು. ಈ ಸಂದರ್ಭದಲ್ಲಿ ಡಾ. ಹೆಡಗೇವಾರರು ಹಲವಾರು ಊರುಗಳಿಗೆ ಪ್ರವಾಸ ನಡೆಸಿ ಅಲ್ಲಲ್ಲಿ ಸಭೆಗಳನ್ನುದ್ದೇಶಿಸಿ ಮಾತಾಡಿದರು. ಅಕ್ಷರಶಃ ಸಾವಿರಾರು ಮಂದಿ ಅವರ ಸಭೆಗಳಲ್ಲಿ ಭಾಗವಹಿಸುತ್ತಿದ್ದರು 1921ರ ಆರಂಭದಿಂದ ಅವರು ನಡೆಸುತಿದ್ದ ಸಭೆಗಳು, ಪ್ರದರ್ಶನಗಳು ಮತ್ತು ಆಂದೋಳನದ ಇತರ ಕಾರ್ಯಕ್ರಮಗಳಿಗೆ ಇನ್ನೂ ಹೆಚ್ಚಿನ ರಭಸ ಬಂದಿತು.

ಅಸಹಕಾರ ಆಂದೋಳನದ ಕಾರ್ಯಕ್ರಮಗಳ ಪೈಕಿ ನಾಗಪುರ ಸಮಿತಿಯು ಮದ್ಯಪಾನ ನಿಷೇಧಕ್ಕೆ ಹೆಚ್ಚಿನ ಮಹತ್ವ ನೀಡಿತು. 1921ರ ಜನವರಿ–ಫೆಬ್ರವರಿಗಳಲ್ಲಿ ನಡೆದ ಸಭೆಗಳಲ್ಲಿ ಡಾ. ಹೆಡಗೇವಾರರ ಭಾಷಣಗಳಲ್ಲಿ ಮುಖ್ಯವಾಗಿ ಇದ್ದುದು ಇದೇ ವಿಷಯ.[2]

---

1. ಮಹಾರಾಷ್ಟ್ರ 19 ಮೇ 1920 ಪು. 5
2. ಮಹಾರಾಷ್ಟ್ರ 2 ಫೆಬ್ರವರಿ 1021

ಈ ವಿಷಯಕ್ಕೆ ಹೆಚ್ಚಿನ ಮಹತ್ವ ನೀಡಲು ಇದ್ದ ಒಂದು ಕಾರಣವೆಂದರೆ, ಅದರಿಂದಾಗಿ ಮಧ್ಯಪ್ರಾಂತದ ಸರ್ಕಾರಕ್ಕೆ ಸಿಗುವ ಕಂದಾಯದಲ್ಲಿ ಭಾರೀ ಖೋತಾ ಆಗುವ ಸಾಧ್ಯತೆಯಿತ್ತು. ಮದ್ಯದಂಗಡಿಗಳನ್ನು ಮುಚ್ಚಿಸುವುದರಲ್ಲಿ ಮತ್ತು ಮದ್ಯಪಾನ ಮಾಡದಂತೆ ಜನರನ್ನು ಪ್ರೇರೇಪಿಸುವುದರಲ್ಲಿ ಸಾಕಷ್ಟು ಯಶಸ್ಸು ಲಭಿಸಿತು. ತನ್ನ ಆದಾಯದಲ್ಲಿ ಸರ್ಕಾರವು ಭಾರೀ ನಷ್ಟವನ್ನೆದುರಿಸಬೇಕಾಯಿತು.

1921ರ ಫೆಬ್ರವರಿ 22ರಂದು ನಡೆದ ಒಂದು ಸಾರ್ವಜನಿಕ ಸಭೆಯಲ್ಲಿ ಡಾ. ಹೆಡಗೇವಾರರು ನಾಗಪುರದಲ್ಲಿ ಶರಾಬಿನ ಒಂದೇ ಒಂದು ಅಂಗಡಿ ಸಹ ಇರಲು ಅವಕಾಶ ನೀಡಲಾಗುವುದಿಲ್ಲ ಮತ್ತು ಮದ್ಯಪಾನ ಮಾಡಲು ಒಬ್ಬ ವ್ಯಕ್ತಿಯನ್ನೂ ಬಿಡುವುದಿಲ್ಲ ಎಂದು ಘೋಷಿಸಿದರು. ಈ ಹಂತದಲ್ಲಿ ಆಂದೋಲನದ ವಿರುದ್ಧ ಸರ್ಕಾರವು ಉಗ್ರಕ್ರಮಗಳನ್ನು ಕೈಗೊಳ್ಳಲಾರಂಭಿಸಿತು. ಮೊದಲ ಹೆಜ್ಜೆಯಾಗಿ ನ್ಯಾಯಾಲಯದ ವತಿಯಿಂದ ಡಾ.ಹೆಡಗೇವಾರರಿಗೆ ಒಂದು ಎಚ್ಚರಿಕೆಯ ಪತ್ರವನ್ನು ಸರ್ಕಾರವು ನೀಡಿತು. ಜಿಲ್ಲಾಧಿಕಾರಿ ಸಿರಿಲ್ ಜೇಮ್ಸ್ ಇರ್ವಿನ್ ಅವರ ಹಸ್ತಾಕ್ಷರ ಸಹಿತ ಕಳುಹಿಸಲಾಗಿದ್ದ ಈ ಪತ್ರದಲ್ಲಿ "ಯಾವುದೇ ಸಭೆ ನಡೆಸಲು, ಅಥವಾ ಸಭೆಯಲ್ಲಿ ಭಾಗವಹಿಸಲು, ಮತ್ತು ಇನ್ನಾವುದೇ ವಿಧದ ಪಾತ್ರ ನಿರ್ವಹಿಸಲು, ಮುಂದಿನ ಒಂದು ತಿಂಗಳ ಕಾಲಾವಧಿಗಾಗಿ ನಿಮ್ಮ ಮೇಲೆ ನಿಷೇಧ ಹೇರಲಾಗಿದೆ" ಎಂದು ತಿಳಿಸಲಾಗಿತ್ತು. ಆದರೆ 'ಕಷ್ಟಗಳೆನಗೆ ತೂಗುಯ್ಯಾಲೆ, ಮೃತ್ಯುವಿನೊಡನೆ ಆಡುವೆ ಲೀಲೆ' ಎಂಬುದನ್ನೇ ತನ್ನ ಬದುಕಿನ ಶೈಲಿಯಾಗಿ ಮಾಡಿಕೊಂಡಿದ್ದರು ಡಾ. ಹೆಡಗೇವಾರರು. ಅವರು ಸರ್ಕಾರಿ ಆದೇಶವನ್ನು ಸಾರಾಸಗಟಾಗಿ ಧಿಕ್ಕರಿಸಿದರು.[3]

1921ರ ಮಾರ್ಚ್ 31ರಂದು ಸರ್ಕಾರವು ಪುನಃ ಎರಡು ತಿಂಗಳ ವರೆಗೆ ಸಭೆಗಳನ್ನು ನಡೆಸುವುದನ್ನು ನಿಷೇಧಿಸಿತು. ಈ ನಿಷೇಧವನ್ನು ಪ್ರತ್ಯಕ್ಷವಾಗಿ ಜಾರಿಗೊಳಿಸಲು ಸಹ ಅದು ಚುರುಕಿನ ಕ್ರಮಗಳಿಗೆ ಮುಂದಾಯಿತು.

## ಸಾಮಾಜಿಕ ಭೂಮಿಕೆ

ನಾಗಪುರದಲ್ಲಿ ಆಂದೋಲನದ ಯಶಸ್ಸಿಗೆ ಇನ್ನೂ ಒಂದು ಕಾರಣವಿತ್ತು. ಸಾಮಾನ್ಯವಾಗಿ ರಾಷ್ಟ್ರದ ರಾಜಕಾರಣದಿಂದ ದೂರವಿರುವ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿಯೂ ಹಿಂದುಳಿದಿರುವ ಹಾಗೂ ದಿನನಿತ್ಯದ ದುಡಿಮೆಯಿಂದಲೇ ಬದುಕುವಂತಹ ಸಮುದಾಯದವರು ಈ ಆಂದೋಲನದಲ್ಲಿ ವಿಶೇಷ ಲಕ್ಷ್ಯದ ಕೇಂದ್ರವಾದರು. ಡಾ. ಹೆಡಗೇವಾರ್ ಮತ್ತು ಯೂನಿಯನ್‌ನ ಸದಸ್ಯರು ಗೋಂಡ್ ಮತ್ತು ಕೋಷ್ಟಿ ಜಾತಿಯವರ ಸಾಮಾಜಿಕ, ಆರ್ಥಿಕ ವಿಷಯಗಳನ್ನು ಕೇಂದ್ರವಾಗಿಸಿ ರಾಷ್ಟ್ರೀಯ ಜಾಗೃತಿಗಾಗಿ ಪ್ರಯತ್ನಿಸಿದರು. ಈ ಸಮುದಾಯದ ಜನರನ್ನೆಲ್ಲ ವಿಶೇಷವಾಗಿ ಆಕರ್ಷಿಸಿದುದು ಮದ್ಯಪಾನ ನಿಷೇಧದ ವಿಷಯ. ಹೀಗಾಗಿ ಅವರು ಭಾರೀ ಸಂಖ್ಯೆಯಲ್ಲಿ ಆಂದೋಲನದಲ್ಲಿ ಸೇರಿಕೊಂಡರು. ಅದರಿಂದಾಗಿ ಡಾ. ಹೆಡಗೇವಾರರು ಯೋಜಿಸಿದ್ದ ಈ ಆಂದೋಲನದ ಸಾಮಾಜಿಕ ಭೂಮಿಕೆಯೂ ವಿಸ್ತಾರ ಮತ್ತು ದೃಢವೂ ಆಯಿತು. ನಾಗಪುರದಲ್ಲಿ ಮೇಲ್ವರ್ಗದವರು, ಓದುಬರಹ ಬಲ್ಲವರು ಮತ್ತು

3. ಮಹಾರಾಷ್ಟ್ರ 20 ಎಪ್ರಿಲ್ 1921 ಪು. 7

ಶ್ರೀಮಂತರ ಜತೆಯಲ್ಲಿ ಸಾಮಾಜಿಕವಾಗಿ ದುರ್ಬಲರಾದವರ ವಸತಿಕ್ಷೇತ್ರಗಳವರೆಗೂ ಆಂದೋಳನವು ವಿಸ್ತರಿಸಿತು. ಇದನ್ನು ಕಂಡು ನಾಗಪುರದಿಂದ ಪ್ರಕಟವಾಗುವ ಬ್ರಿಟಿಷ್ ಸಮರ್ಥಕ ಪತ್ರಿಕೆಯೊಂದು "ಈ ಆಂದೋಳನದಲ್ಲಿ ಎಂತೆಂತಹ ವರ್ಗದವರನ್ನು ಕಾರ್ಯಕರ್ತರಾಗಿ ಸೇರಿಸಲಾಗಿದೆಯೆಂದರೆ, ಅವರಿಂದ ಅದು ಶಾಂತಿಪೂರ್ಣವಾಗಿ ಉಳಿದೀತು ಎಂಬುದು ಕಠಿಣವೇ"[4] ಎಂದು ಬರೆಯಿತು.

ಶಾಲೆ ಕಾಲೇಜುಗಳ ಬಹಿಷ್ಕಾರದ ವಿಷಯದಲ್ಲಿ ನಾಗಪುರದ ಆಂದೋಳನವು ಅಪೇಕ್ಷಿತ ಪ್ರಮಾಣದಲ್ಲಿ ಯಶಸ್ಸು ಗಳಿಸಿತು. ನೀಲ್ ಸಿಟಿ ಸ್ಕೂಲ್‌ನ 72% ಮತ್ತು ಮೊರಿಸ್ ಕಾಲೇಜಿನ 27.5% ದಷ್ಟು ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿದರು. 1921ರ ಮೇನಲ್ಲಿ ನಾಗಪುರ ವಿಭಾಗದ 40 ವಕೀಲರು ನ್ಯಾಯಾಲಯಗಳನ್ನು ಪೂರ್ಣವಾಗಿ ಬಹಿಷ್ಕರಿಸಿದರು. ಅವರೆಲ್ಲರ ಸ್ವಾಗತಕ್ಕಾಗಿ ಡಾ. ಹೆಡಗೇವಾರರು ಒಂದು ಸಭೆಯನ್ನು ಏರ್ಪಡಿಸಿದರು. ಮಧ್ಯಪ್ರಾಂತದ 1920–21ರ ಆಡಳಿತಾತ್ಮಕ ವರದಿಯಲ್ಲಿ ಪ್ರಾಂತದ ರಾಜಕೀಯ ವಿದ್ಯಮಾನ ಕುರಿತು ಹೀಗೆ ಬರೆಯಲಾಗಿತ್ತು: "ಅಸಹಕಾರದ ಅಪಾಯಕಾರಿ ಮತ್ತು ಅರಾಜಕತೆಯ ವಿಚಾರವು ತೀವ್ರವೇಗದಲ್ಲಿ ಹರಡಿದೆ. ಇದರಿಂದಾಗಿ ಸರ್ಕಾರ ಮತ್ತು ಜನತೆಯ ನಡುವೆ ಇರುವ ಸೌಹಾರ್ದ- ಪೂರ್ಣ ಸಂಬಂಧಗಳು ಈ ಹಿಂದೆ ಹೇಳಲಾಗಿರುವುದಕ್ಕಿಂತ ಅಧಿಕ ಪ್ರಮಾಣದಲ್ಲಿ ಕೆಟ್ಟಿವೆ". ವಾಸ್ತವಿಕವಾಗಿ ಇದು ನಾಗಪುರ ಮತ್ತು ಮಧ್ಯಪ್ರಾಂತದಲ್ಲಿನ ಅಸಹಕಾರ ಆಂದೋಳನದ ಯಶಸ್ಸಿಗೆ ಸರ್ಕಾರವೇ ನೀಡಿದ್ದ ಪ್ರಮಾಣ ಪತ್ರವೆನ್ನಬಹುದು. 1921ರ ಜನವರಿಯಿಂದ 1922ರ ಜೂನ್ ವರೆಗಿನ ಕಾಲಾವಧಿಯಲ್ಲಿ ಸರ್ಕಾರವು 25 ಮಂದಿ ರಾಷ್ಟ್ರೀಯವಾದಿ ನಾಯಕರ ಮೇಲೆ ರಾಜದ್ರೋಹದ ಭಾಷಣ ಮಾಡಿದುದಕ್ಕಾಗಿ ಮೊಕದ್ದಮೆ ಹೂಡಿತು. ಅವರಲ್ಲಿ 11 ಮಂದಿ ಸಶ್ರಮ ಕಾರಾವಾಸ, ಇಬ್ಬರು ಸಾಮಾನ್ಯ ಸೆರೆಮನೆ ವಾಸ ಹಾಗೂ ಇನ್ನಿಬ್ಬರು ವಿಶೇಷ ರೀತಿಯ ಜೈಲುವಾಸದ ಶಿಕ್ಷೆಗೆ ಒಳಗಾದರು. 1921ರ ಮೇನಲ್ಲಿ ಡಾ. ಹೆಡಗೇವಾರರ ವಿರುದ್ಧ ರಾಜದ್ರೋಹಕರ ಭಾಷಣ ನೀಡಿರುವುದರ ಸಲುವಾಗಿ ಮೊಕದ್ದಮೆ ನಡೆಯಿತು. ಅವರು ಅದೇ ತಿಂಗಳಲ್ಲಿ ಪ್ರಾಂತೀಯ ಕಾಂಗ್ರೆಸ್ ಸಮಿತಿಗೆ ನಾಗಪುರದ ಸದಸ್ಯರಾಗಿ ಆಯ್ಕೆಯಾಗಿದ್ದರು. ಅಸಹಕಾರ ಆಂದೋಳನದ ಕಾರಣದಿಂದಾಗಿ ನಾಗಪುರದಲ್ಲಿ ಹಳೆಯ ಪೀಳಿಗೆಯ ಸ್ವರಾಜ್ಯವಾದಿ ಪಕ್ಷದ ನಾಯಕರು ಹಿನ್ನೆಲೆಗೆ ಸರಿದು, ಅವರ ಸ್ಥಾನದಲ್ಲಿ ಡಾ. ಹೆಡಗೇವಾರ್, ಡಾ. ಚೋಳ್ಕರ್ ಮತ್ತು ಸಮೀಉಲ್ಲಾಖಾನ್‌ರಂತಹ ತರುಣ ಕಾರ್ಯಕರ್ತರು ನಾಯಕರಾಗಿ ಜನತೆಯ ಮುಂದೆ ಬರಲಾರಂಭಿಸಿದರು. ಇವರಲ್ಲಿ ಡಾ. ಚೋಳ್ಕರ್ ಮತ್ತು ಸಮೀಉಲ್ಲಾಖಾನ್‌ರವರು ಚುನಾವಣಾ ರಾಜಕೀಯದಲ್ಲಿ ಸಕ್ರಿಯರಾಗಿದ್ದರೆ, ಡಾ. ಹೆಡಗೇವಾರರು ಚುನಾವಣಾ ರಾಜಕಾರಣದಿಂದ ಪೂರ್ಣವಾಗಿ ದೂರವಾಗಿ ಉಳಿದವರಾಗಿದ್ದರು.

4. ಹಿತವಾದ 26 ಫೆಬ್ರವರಿ 1921 ಪು. 4

# ರಾಜದ್ರೋಹದ ಖಟ್ಲೆ

ನಾಗಪುರದಲ್ಲಿ ಅಸಹಕಾರ ಆಂದೋಲನಕ್ಕೆ ದೊರೆತ ಯಶಸ್ಸಿನಿಂದಾಗಿ ಬ್ರಿಟಿಷ್ ಶಾಸನದ ಬುಡವೇ ಅಲುಗಾಡಿತು. ಆಂದೋಲನವನ್ನು ತುಳಿದುಹಾಕಲು ಸರ್ಕಾರವು ನಡೆಸಿದ್ದ ಪ್ರಯತ್ನಗಳೆಲ್ಲ ವ್ಯರ್ಥವಾದವು. ಸಭೆ, ಮೆರವಣಿಗೆ ಮತ್ತು ಭಾಷಣಗಳ ಮೇಲೆ ನಿಷೇಧ, ಸೆಕ್ಷನ್ 144, ಸತ್ಯಾಗ್ರಹಿಗಳ ಮೇಲೆ ಹಿಂಸಾಚಾರ ಇತ್ಯಾದಿ ದಮನಕಾರಿ ಕ್ರಮಗಳಿಂದ ಆಂದೋಲನವು ದುರ್ಬಲಗೊಳ್ಳುವ ಬದಲು ಇನ್ನಷ್ಟು ಬಲಗೊಳ್ಳುತ್ತಲೇ ಹೋಯಿತು. ಕೊನೆಯಲ್ಲಿ ಪ್ರಮುಖ ಹಾಗೂ ಜನಪ್ರಿಯ ನಾಯಕರ ಮೇಲೆ ರಾಜದ್ರೋಹದ ಆರೋಪ ಹೊರಿಸಿ ಅವರನ್ನು ಸೆರೆಮನೆಗೆ ಕಳುಹಿಸುವ ಕಾರ್ಯವನ್ನು ಸರ್ಕಾರವು ಆರಂಭಿಸಿತು. ಇದರ ನಿಜವಾದ ಉದ್ದೇಶವಿದ್ದುದೇನೆಂದರೆ, ಆಂದೋಲನಕಾರರಲ್ಲಿ ಭಯ ಹುಟ್ಟುಹಾಕುವುದು ಒಂದಾದರೆ, ಇಡೀ ಆಂದೋಲನದಲ್ಲೇ ಅನಾಯಕತ್ವವನ್ನುಂಟು ಮಾಡುವುದು ಇನ್ನೊಂದು. 1921ರ ಜನವರಿಯಿಂದ ಮೇ ವರೆಗೆ ಮಧ್ಯಪ್ರಾಂತದಲ್ಲಿ ಒಟ್ಟು ಏಳು ಮಂದಿಯ ಮೇಲೆ 'ರಾಜದ್ರೋಹ'ದ ಮೊಕದ್ದಮೆ ಹೂಡಲಾಯಿತು.[1] ಅವರಲ್ಲಿ ನಾಗಪುರದಿಂದ ಡಾ. ಹೆಡಗೇವಾರರೂ ಒಬ್ಬರು.

ಅವರ ಮೇಲೆ ಅಪರಾಧ ದಂಡ ಸಂಹಿತೆ (ಸೆಕ್ಷನ್ 108) ರೀತ್ಯಾ ಮೇ ತಿಂಗಳಲ್ಲಿ ಮೊಕದ್ದಮೆ ದಾಖಲಾಯಿತು. ಸರ್ಕಾರದ ವಿರುದ್ಧ ಚಟುವಟಿಕೆಗಳನ್ನು ನಡೆಸುತ್ತಿದ್ದಾರೆಂಬ ಆರೋಪದ ಮೇಲೆ ಅವರನ್ನು ಶಿಕ್ಷಿಸಲು ಸಾಮ್ರಾಜ್ಯವಾದಿ ಆಡಳಿತವು ಪೂರಾ ನಿರ್ಧರಿಸಿತ್ತೆಂಬುದು ಸ್ಪಷ್ಟವಿತ್ತು. ಆರು ತಿಂಗಳ ಹಿಂದೆ (1920 ಅಕ್ಟೋಬರನಲ್ಲಿ) ಕಾಟೋಲ ಮತ್ತು ಭರತವಾಡಾಗಳಲ್ಲಿ ನಡೆದಿದ್ದ ಎರಡು ಸಭೆಗಳಲ್ಲಿ ಅವರು ಮಾಡಿದ ಭಾಷಣಗಳನ್ನು ಅವರ ಮೇಲಿನ ಮೊಕದ್ದಮೆಗೆ ಆಧಾರವಾಗಿ ಮಾಡಲಾಗಿತ್ತು.[2] ಈ ಎರಡೂ ಸಭೆಗಳಲ್ಲಿ ಡಾ. ಹೆಡಗೇವಾರರು ಅಧ್ಯಕ್ಷತೆ ವಹಿಸಿದ್ದರು. ಆ ಸಭೆಗಳಲ್ಲಿ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಬ್ರಿಟಿಷ್ ಸರ್ಕಾರದ ವಿರುದ್ಧ ಪ್ರಚೋದನಕಾರಿ ಮಾತುಗಳ ಮೂಲಕ ಅಶಾಂತಿ ನಿರ್ಮಾಣಕ್ಕೆ ಮತ್ತು ಬಂಡಾಯಕ್ಕೆ ಕರೆ ನೀಡಿದ್ದಾರೆ ಎಂಬುದೇ ಅವರ ಮೇಲಿದ್ದ ಆಪಾದನೆ. 1908ರಲ್ಲಿ ಮಹಾರಾಷ್ಟ್ರದಲ್ಲಿ ಬಾಲಗಂಗಾಧರ ತಿಲಕರ ಮೇಲೂ ಇದರ ರೀತಿಯದ ಉಗ್ರತೆಯನ್ನು ಆಧರಿಸಿ ಮೊಕದ್ದಮೆ ನಡೆಸಲಾಗಿತ್ತು. ಈ ಖಟ್ಲೆಯಲ್ಲಿ ತಿಲಕರು ಸ್ವತಃ ಕೋರ್ಟಿನಲ್ಲಿ ತಮ್ಮ ಪರ ವಾದ ಮಂಡಿಸುವಾಗ ಸಾಮ್ರಾಜ್ಯವಾದಿ ಶಾಸನ ಮತ್ತು ಅದರ ನೀತಿಗಳ ಮೇಲೆ ಭಾರೀ ವಾಗ್ಬಾಣ

---

1. [illegible]
2. ಮಹಾರಾಷ್ಟ್ರ 15 ಜೂನ್ 1921 ಪು. 4

ನಡೆಸಿದ್ದರು. ಅವರ ಮೇಲಿನ ಈ ಮೊಕದ್ದಮೆಯು ಭಾರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಒಂದು ಸ್ಫೂರ್ತಿಪ್ರದ ಪ್ರಸಂಗವಾಗಿದೆ. ಡಾ. ಹೆಡಗೇವಾರರ ಮೇಲಿನ ಈ ಖಟ್ಲೆಯೂ ಅದರಂತೆಯೇ ಪ್ರೇರಣಾದಾಯಕವಾದುದು. ನ್ಯಾಯಾಲಯದಲ್ಲಿ ಅದರ ವಿಚಾರಣೆಯಾಗುತ್ತಿದ್ದ ಸಂದರ್ಭದಲ್ಲಿ ಅವರು ಕಟಕಟೆಯಲ್ಲಿ ನಿಂತು ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ನೀಡಿರುವ ಉಗ್ರವಾದ ಹೇಳಿಕೆ, ನಮ್ಮ ರಾಷ್ಟ್ರದ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಒಂದು ಅತ್ಯಂತ ಪ್ರಖರವಾದ ವಾದವಾಗಿ ನಮ್ಮ ಇತಿಹಾಸದ ಪುಟಗಳಲ್ಲಿ ಎಂದೆಂದಿಗೂ ಹಸಿರಾಗಿ ಉಳಿಯುವಂತಹದಾಗಿದೆ.

ನಮ್ಮ ಸ್ವಾತಂತ್ರ್ಯ ಹೋರಾಟದ ಇನ್ನೂ ಅನೇಕ ಜ್ವಲಂತ ಪ್ರಸಂಗಗಳಂತೆಯೇ ಇದನ್ನು ಸಹ ಹಲವಾರು ದಶಕಗಳಿಂದ ಅಭಿಲೇಖಾಗಾರದಲ್ಲಿ ಮುಚ್ಚಿರಿಸಲಾಗಿತ್ತು.

ಸಂಶೋಧನೆಯ ಸಲುವಾಗಿ ಇಂತಹ ಘಟನೆಗಳನ್ನು ಆಳವಾಗಿ ಹುಡುಕಲು ಪ್ರಯತ್ನಿಸಿದಾಗಲೆಲ್ಲ ಸಾಮ್ರಾಜ್ಯವಾದದ ವಿರುದ್ಧ ಹೋರಾಟಗಳ ಕಲ್ಪನೆ, ಸ್ವರೂಪ ಮತ್ತು ಯೋಜನೆ ಇತ್ಯಾದಿ ಸಂಗತಿಗಳಲ್ಲಿ ಹೊಸ ಹೊಸ ಅಂಶಗಳೂ ಬೆಳಕಿಗೆ ಬರುತ್ತವೆ. ಪ್ರಾಯಶಃ ಡಾ. ಹೆಡಗೇವಾರರಿಗೆ ಸಂಬಂಧಿಸಿದ ಈ ಮೊಕದ್ದಮೆಯೂ ಅಂತಹ ಒಂದು ಉಲ್ಲೇಖನೀಯ ದಾಖಲೆಯೇ ಆಗಬಹುದು.

ಈ ಮೊಕದ್ದಮೆ ನ್ಯಾಯಾಧೀಶ ಸಿರಾಜ್ ಅಹಮದ್ ಅವರ ಮುಂದೆ ನಾಗಪುರದ ನ್ಯಾಯಾಲಯದಲ್ಲಿ 1921ರ ಮೇ 31ರಂದು ಆರಂಭವಾಯಿತು. ಪ್ರಾಥಮಿಕ ವಿಧಿಗಳು ಮುಗಿದ ಮೇಲೆ ಮುಂದಿನ ವಿಚಾರಣೆ ಜೂನ್ 13ಕ್ಕೆ ಮುಂದೂಡಲ್ಪಟ್ಟಿತು. ಅಂದು ವಿಚಾರಣೆಯು ನ್ಯಾಯಾಧೀಶ ಸ್ಮೇಲಿ ಅವರ ಪೀಠದ ಮುಂದೆ ವರ್ಗಾಯಿಸಲ್ಪಟ್ಟಿತು. ಡಾ. ಹೆಡಗೇವಾರರ ಪರವಾಗಿ ವಾದಿಸುವ ಸಲುವಾಗಿ ನಾಗಪುರದ ಪ್ರಮುಖ ವಕೀಲರಾದ ಬೋಬಡೆ, ವಿಶ್ವನಾಥರಾವ್ ಕೇಳ್ಕರ್, ಬಾಬಾಸಾಹೇಬ ಪಾಧ್ಯೆ, ಬಲವಂತರಾವ್ ಮಂಡಲೇಕರ್ ಮತ್ತು ಬಾಬೂರಾವ್ ಹರಕರೆ ಅವರು ನ್ಯಾಯಾಲಯದಲ್ಲಿ ಹಾಜರಾದರು. ಜೂನ್ 13ರಂದು ಕಾಟೋಲ್‌ನ ಪೊಲೀಸ್ ಉಪನಿರೀಕ್ಷಕ ಆಬಾಜಿ ಅವರು ಸರ್ಕಾರದ ವತಿಯಿಂದ ಸಾಕ್ಷಿ ಹೇಳಿದರು. ಮರುದಿನ ಜೂನ್ 14ರಂದು ಬೋಬಡೆ ಅವರು ಪೊಲೀಸ್ ಉಪನಿರೀಕ್ಷಕರಿಗೆ ಪಾಟೀ ಸವಾಲು ನಡೆಸಿದರು.

ಡಾ. ಹೆಡಗೇವಾರರ ವಕೀಲರು ಕೇಳಿದ ಪ್ರಶ್ನೆಗಳಿಗೆಲ್ಲ ನ್ಯಾಯಾಧೀಶರು ಆಕ್ಷೇಪವೆತ್ತುತ್ತಿದ್ದರು. ಪಾಟೀ ಸವಾಲು ಆರಂಭಿಸುತ್ತ ಬೋಬಡೆ ಅವರು "ಡಾ. ಹೆಡಗೇವಾರರ ಮೇಲೆ ಆಪಾದನೆ ಹೊರಿಸುವುದು ಮೇಲಿನ ಅಧಿಕಾರಿಗಳ ಒತ್ತಡದ ಕಾರಣಕ್ಕಾಗಿಯೊ ಅಥವಾ ಸ್ವಂತದ ನಿರ್ಣಯದಿಂದಾಗಿಯೊ," ಎಂದು ತಿಳಿಯಲು ಅಪೇಕ್ಷೆಪಟ್ಟಾಗ, ಆಬಾಜಿಯವರು "ನಾನು ಸ್ವತಃ ಯಾವುದೇ ಆಪಾದನೆಯನ್ನು ಹೊರಿಸಲು ಶಕ್ತನಲ್ಲ. ನನಗೆ ಹಿರಿಯ ಅಧಿಕಾರಿಯೊಬ್ಬರಿಂದ ಒಂದು ತಿಂಗಳ ಪೂರ್ವದಲ್ಲೆ ಅನುಮತಿ ದೊರಕಿತ್ತು" ಎಂದು ಉತ್ತರಿಸಿದರು. ಈ ಹಂತದಲ್ಲಿ ನ್ಯಾಯಾಧೀಶರು ಇಲ್ಲಿಂದ ಮುಂದೆ ಈ ವಿಷಯದಲ್ಲಿ ಪೊಲೀಸ್ ಅಧಿಕಾರಿಯವರನ್ನು ಪ್ರಶ್ನಿಸಲು ಅವಕಾಶವಿಲ್ಲ ಎಂದು ಎಚ್ಚರಿಕೆ ನೀಡಿದರು. ಅನಂತರ ಬೋಬಡೆಯವರ ಇನ್ನೊಂದು ಪ್ರಶ್ನೆಗೆ ಉತ್ತರಿಸುತ್ತ ಆಬಾಜಿಯವರು ತಾನು ನಿಮಿಷಕ್ಕೆ 30 ರಿಂದ 40 ಪದಗಳನ್ನು ಬರೆಯಬಲ್ಲೆ ಎಂದು ತಿಳಿಸಿದರು. ಬೋಬಡೆಯವರ ಅಭಿಪ್ರಾಯವಿದ್ದುದು ಡಾ. ಹೆಡಗೇವಾರರ ಭಾಷಣವು ಆಯಾ ಕಾಲದ ರಾಜಕೀಯ ವಿದ್ಯಮಾನಗಳನ್ನು ಕೇಂದ್ರೀಕರಿಸಿ ಇರುತ್ತಿದ್ದ ಕಾರಣ,

ತದನ್ನು ತಿಳಿದು ಅರ್ಥಮಾಡಲು ಸಹ ಬರೆಯುವವರಿಗೆ ಕನಿಷ್ಠತಮ ರಾಜಕೀಯ ಜ್ಞಾನ ಮತ್ತು ಅರ್ಥಗ್ರಹಣದ ಸಾಮರ್ಥ್ಯ ಇರಬೇಕು ಎಂಬುದಾಗಿ. ಈ ನಿಟ್ಟಿನಲ್ಲಿ ಅವರು ಸರ್ಕಾರಿ ಸಾಕ್ಷಿಗೆ ಕೆಲವು ಪ್ರಶ್ನೆಗಳನ್ನು ಹಾಕಿದರು.

"ರಾಜಕೀಯ ವಿಷಯಗಳ ಕುರಿತು ಪತ್ರಿಕೆಗಳಲ್ಲಿ ಪ್ರಕಟವಾಗುವಂತಹ ಲೇಖನಗಳನ್ನು ಓದುವ ರೂಢಿ ನಿಮಗಿದೆಯೇ?"

"ಅಸಹಕಾರ ಆಂದೋಳನದ ಬಗ್ಗೆ ಕಾಂಗ್ರೆಸ್ ಸ್ವೀಕರಿಸಿರುವ ನಿರ್ಣಯವನ್ನು ನೀವು ಎಷ್ಟು ಬಾರಿ ಓದಿದ್ದೀರಿ?"

"ಗಾಂಧೀಜಿಯವರ ಲೇಖನಗಳನ್ನು ನೀವು ಓದಿರುವಿರಾ?"

ಇಂತಹ ಒಂದೊಂದು ಪ್ರಶ್ನೆಗೂ ನ್ಯಾಯಾಧೀಶರು ಆಕ್ಷೇಪವೆತ್ತುತ್ತಿದ್ದರು. ಆದರೆ ಬೋಬಡೆ ಅವರೂ ತಮ್ಮ ಪಟ್ಟು ಬಿಡಲಿಲ್ಲ. ಕೊನೆಯಲ್ಲಿ ನ್ಯಾಯಾಧೀಶರು ನಿರುಪಾಯವಾಗಿ ತಮ್ಮ ಆಕ್ಷೇಪಗಳನ್ನು ವಾಪಸ್ ಪಡೆಯಲೇಬೇಕಾಯಿತು. ಆಗ ಬೋಬಡೆಯವರು ಅಬಾಜಿಯವರ ಕಡೆ ತಿರುಗಿ "ಅಸಹಕಾರ ಆಂದೋಳನವನ್ನು ಶಾಂತಿಯುತವಾಗಿ ಹಾಗೂ ಯಾವುದೇ ವಿಧದ ಹಿಂಸಾಚಾರವಿಲ್ಲದೆ ನಡೆಸಬೇಕೆಂದು ಸಂಕಲ್ಪಿಸಿರುವುದು ನಿಮಗೆ ತಿಳಿದಿದೆಯೇ?" ಎಂದು ಪ್ರಶ್ನಿಸಿದರು. ಇದಕ್ಕೆ ಸರ್ಕಾರಿ ಸಾಕ್ಷಿಗೆ ಉತ್ತರಿಸಲಾಗಲಿಲ್ಲ. ಅತ ಸರ್ಕಾರಿ ವಕೀಲರಿಂದ ಸಹಾಯ ಅಪೇಕ್ಷಿಸಿದ. ಬೋಬಡೆ ತಮ್ಮ ಪಾಟೀ ಸವಾಲು ಮುಂದುವರಿಸಿ : "ಈ ಆಂದೋಳನದ ಮೂಲಕ ಏನನ್ನು ಸಾಧಿಸಬೇಕೆಂದು ಜನತೆ ಉದ್ದೇಶಿಸಿದೆ? ಜನತೆ ಎಂತಹ ಸ್ವರಾಜ್ಯವನ್ನು ಪಡೆಯಲು ಇಚ್ಛಿಸಿದೆ?" ನ್ಯಾಯಾಧೀಶರು ಪುನಃ ಈ ಪ್ರಶ್ನೆಯನ್ನು ಆಕ್ಷೇಪಿಸಿದರು. ಇದಕ್ಕೆ ಪೋಲೀಸ್ ಉಪ ನಿರೀಕ್ಷಕರು ನೀಡಿದ್ದ ಉತ್ತರ: "ಸ್ವರಾಜ್ಯದ ಅರ್ಥವೆಂದರೆ ಜನರದೇ ಆಡಳಿತ." ಬೋಬಡೆಯವರ ಪ್ರಶ್ನೆಗಳಿಂದ ತುಂಬ ಪೇಚಿಗೊಳಗಾಗಿ ನ್ಯಾಯಾಧೀಶರು, ಅಂತಹ ಒಂದೊಂದು ಪ್ರಶ್ನೆಯನ್ನು 'ಅಪ್ರಾಸಂಗಿಕ' 'ನಿರರ್ಥಕ' ಮತ್ತು 'ಉದ್ದೇಶರಹಿತ' ಇತ್ಯಾದಿ ಟಿಪ್ಪಣಿ ಹೇಳುತ್ತಾ ಜೂನ್ 20ರ ವರೆಗೆ ವಿಚಾರಣೆಯನ್ನೇ ನಿಲ್ಲಿಸಿದರು.

ದಿ. 20ರಂದು ವಿಚಾರಣೆಗೆ ಒಂದು ನಾಟಕೀಯ ತಿರುವು ಬಂತು. ಅಂದು ಬೋಬಡೆಯವರು ನ್ಯಾಯಾಧೀಶರನ್ನು ಇಕ್ಕಟ್ಟಿಗೆ ಸಿಲುಕಿಸಿದರು. ಪಾಟೀ ಸವಾಲು ಆರಂಭಿಸುತ್ತ ಅಬಾಜಿಯವರನ್ನೇ ಉದ್ದೇಶಿಸಿ "ಡಾ. ಹೆಡಗೇವಾರರು ತಮ್ಮ ಆ ಭಾಷಣದಲ್ಲಿ ಭಾರತವು ಕೇವಲ ಭಾರತೀಯರಿಗೆ ಮಾತ್ರ ಸೇರಿದುದು ಎಂದು ಪ್ರತಿಪಾದಿಸಿದುದು ಸತ್ಯವಲ್ಲವೇ?" ಎಂಬ ಪ್ರಶ್ನೆ ಎಸೆದರು. ಆಗ ನ್ಯಾಯಾಧೀಶರು ಈ ಮೊದಲಿನಂತೆ ಪುನಃ ಪ್ರಶ್ನೆಯನ್ನು 'ಅಪ್ರಾಸಂಗಿಕ' ಎಂದು ಆಕ್ಷೇಪಿಸಿ ಬರೆದುಕೊಳ್ಳುವುದನ್ನೇ ನಿಲ್ಲಿಸಿದರು. ಆ ಕೂಡಲೇ ಬೋಬಡೆಯವರು ಕೋಪದಿಂದ ಈ ನ್ಯಾಯಾಲಯವು ಪೂರ್ವಗ್ರಹ ಪೀಡಿತವಾಗಿರುವುದರಿಂದ ಇಲ್ಲಿ ಸ್ವತಂತ್ರವಾದ ವಿಚಾರಣೆ ನಡೆಯುವುದೇ ಇಲ್ಲವೆಂದು ತಮ್ಮದೇ ಆರೋಪ ಹೊರಿಸಿದರು. ಇಂತಹ ನ್ಯಾಯಾಲಯವನ್ನು ತಾನೇ ಬಹಿಷ್ಕರಿಸುವುದಾಗಿ ಹೇಳಿ ತಾವಿನ್ನು ವಿಚಾರಣೆಯಲ್ಲಿ ಭಾಗವಹಿಸುವುದಿಲ್ಲವೆಂಬ ನಿರ್ಣಯವನ್ನು ತಿಳಿಸಿದರು. ಬೋಬಡೆಯವರು ಕೈಗೊಂಡ ಈ ಕ್ರಮ ಸುಯೋಜಿತವಾಗಿ ಮಾಡಲಾಗಿತ್ತೆಂಬುದನ್ನು ಮುಂದಿನ ವಿದ್ಯಮಾನಗಳಿಂದ ತಿಳಿಯಬಹುದು.

ಮುಂದಿನ ವಿಚಾರಣೆಯ ಸೂತ್ರವನ್ನು ಸ್ವತಃ ತಮ್ಮ ಕೈಗಳಿಗೆ ವಹಿಸಿಕೊಂಡ ಡಾ. ಹೆಡಗೇವಾರರು ತಾವೇ ಪಾಟೀ ಸವಾಲು ನಡೆಸಲು ನಿರ್ಣಯಿಸಿದರು. ವಾಸ್ತವವಾಗಿ ಅವರು ಕಾನೂನು ಕಲಿತವರೇನಲ್ಲ. ನ್ಯಾಯಾಲಯದಲ್ಲಿ ಅವರ ಅನುಭವವೂ ಅದೇ ಮೊದಲಿನದು. ಆದರೆ ಅವರು ಹೆದರುವುದಾದರೂ ಯಾರಿಗೆ? ಬ್ರಿಟಿಷ್ ಶಾಸನ, ಅದರ ಸಾಮ್ರಾಜ್ಯವಾದ ಮತ್ತು ಅದು ರೂಪಿಸಿದ್ದ ಕುಟಿಲ ನ್ಯಾಯ ವ್ಯವಸ್ಥೆ ಇವುಗಳ ವಿರುದ್ಧ ನ್ಯಾಯಾಲಯವನ್ನೇ ಒಂದು ರಾಜಕೀಯ ವೇದಿಕೆಯಾಗಿ ಬಳಸಬೇಕೆಂಬುದು ಮಾತ್ರ ಅವರಿಗೆ ಬೇಕಾಗಿತ್ತು. ಅವರು ಮಾಡಿದುದು ಅದನ್ನೇ.

ನ್ಯಾಯಾಧೀಶರ ಲೇವಡಿ ಮಾಡುವ ಮೂಲಕವೇ ಅವರು ತಮ್ಮ ಪ್ರತಿಪಾದನೆಯನ್ನು ಆರಂಭಿಸಿದರು. ನ್ಯಾಯಾಧೀಶರೊಬ್ಬರನ್ನು ಅಯೋಗ್ಯ, ಅಜ್ಞಾನಿ ಮತ್ತು ಅಪಾತ್ರ ಇತ್ಯಾದಿ ಹೇಳಲು ಪ್ರಖರ ರಾಷ್ಟ್ರವಾದಿಯಾಗಿರುವವನಿಗೆ ಮಾತ್ರ ಸಾಧ್ಯ. ಡಾ. ಹೆಡಗೇವಾರರು ಅಂತಹ ನಿರ್ಭೀತತೆ ಹಾಗೂ ಪೂರಾ ಆತ್ಮವಿಶ್ವಾಸವನ್ನೇ ನ್ಯಾಯಾಲಯದಲ್ಲಿ ತೋರಿದರು. ತನ್ನ ವಿಚಾರಣೆ ನಡೆಸುತ್ತಿರುವ ನ್ಯಾಯಾಧೀಶರನ್ನು ಬದಲಿಸಬೇಕೆಂದು ತಾನು ಸಲ್ಲಿಸಿರುವ ಮನವಿಯ ಕುರಿತು ಅಂತಿಮ ನಿರ್ಣಯ ಬರುವವರೆಗೂ ಮುಂದಿನ ಕಲಾಪಗಳನ್ನೇ ನಿಲ್ಲಿಸಬೇಕೆಂದು ಅವರು ಸ್ಮೇಲಿಯವರನ್ನು ವಿನಂತಿಸಿದರು. ಇದನ್ನು ಕೇಳಿದ ನ್ಯಾಯಾಧೀಶ ಸ್ಮೇಲಿ ಅಪಮಾನದಿಂದ ತಪ್ತರಾಗಿ ಪೂರಾ ಸುಸ್ತಾದರು. ಡಾ. ಹೆಡಗೇವಾರರ ಮನವಿಗೆ ನ್ಯಾಯಾಲಯವು ಸಮ್ಮತಿಸಲೇಬೇಕಾಯಿತು.

ಜೂನ್ 25ರಂದು ಡಾ. ಹೆಡಗೇವಾರರು ಜಿಲ್ಲಾ ನ್ಯಾಯಾಧೀಶ ಇರ್ವಿನ್ ಅವರ ಬಳಿ ಈ ಸಂಬಂಧದ ಮನವಿಯೊಂದನ್ನು ಸಲ್ಲಿಸಿದರು. ಈ ಮನವಿ ಕೂಡ ಒಂದು ವಿಶೇಷವೇ. ಭಾರತೀಯನೊಬ್ಬನ ವಿಚಾರಣೆ ನಡೆಸುವ ಯೋಗ್ಯತೆ ಬ್ರಿಟಿಷ್ ನ್ಯಾಯಾಧೀಶನಿಗಿಲ್ಲ ಎಂಬ ಇಂಗಿತವಿದ್ದ ಮನವಿ ಅದು. ಜಿಲ್ಲಾ ನ್ಯಾಯಾಧೀಶ ಇರ್ವಿನ್ ಏನು ನಿರ್ಣಯ ನೀಡಬಹುದೆಂಬುದು ಎಲ್ಲರಿಗೂ ಗೊತ್ತಿದ್ದುದೇ. ಆದರೆ ಡಾ. ಹೆಡಗೇವಾರರ ಉದ್ದೇಶವಿದ್ದುದು ಸ್ಮೇಲಿಯ ಹೆಗಲ ಮೇಲೆ ಕೋವಿಯಿರಿಸಿ ಬ್ರಿಟಿಷರ ನ್ಯಾಯ ವ್ಯವಸ್ಥೆಯ ಮೇಲೆ ಗುಂಡೆಸೆಯಬೇಕೆಂಬುದೇ. ಅವರು ಸಲ್ಲಿಸಿದ್ದ ಮನವಿಯ ಸಾರಾಂಶ ಹೀಗಿತ್ತು:

"ಮಿ. ಸ್ಮೇಲಿ ಅವರಿಗೆ ಮರಾಠಿಯ ವ್ಯಾವಹಾರಿಕ ಜ್ಞಾನವೂ ಇಲ್ಲ. ಆದರೆ ಭಾಷಣ ಮತ್ತು ಹೇಳಿಕೆ ಇವೆಲ್ಲವೂ ಮರಾಠಿಯಲ್ಲಿವೆ. ಹೀಗಾಗಿ ವಿಚಾರಣೆಯನ್ನು ಅವರು ಅರ್ಥ ಸಹ ಮಾಡಿಕೊಳ್ಳಲಾರರು. ಈ ಹಿನ್ನೆಲೆಯಲ್ಲಿ ಅವರು ವಿಚಾರಣೆ ನಡೆಸಲು ಪೂರಾ ಅಸಮರ್ಥರಿದ್ದಾರೆ. ಇದಕ್ಕೆ ಪುರಾವೆಯೆಂದರೆ ಅವರು ಟಿಪ್ಪಣಿಯಾಗಿ ಏನೂ ಬರೆಯದಿರುವ ಕಾರಣ ಅಲ್ಲಿ ಬರಿಯ ಕಾಗದ ಮಾತ್ರವಿದೆ. ಜೂನ್ 14 ರಂದು ಸುದೀರ್ಘವಾದ ಪಾಟಿ ಸವಾಲು ನಡೆದಿದ್ದರೂ ಅವರು ಒಂದೇ ಒಂದು ಶಬ್ದವನ್ನೂ ಬರೆದಿಲ್ಲ. ಅಷ್ಟೇ ಅಲ್ಲ, ಮಿ. ಸ್ಮೇಲಿ ಅವರಿಗೆ ರಾಜಕೀಯದ ತಿಳಿವಳಿಕೆ ಮತ್ತು ಅರ್ಥಗ್ರಹಣ ಶಕ್ತಿ ಸಹ ಪೂರ್ತಿ ಸೊನ್ನೆಯೇ. ಅದಕ್ಕಾಗಿಯೇ ಆರೋಪಿಯ ವಕೀಲರು ಕೇಳುತ್ತಿದ್ದ ಪ್ರಶ್ನೆಗಳಿಗೆಲ್ಲ ಅವರು ಆಕ್ಷೇಪಿಸುತ್ತಲೇ ಇದ್ದರು. ಪ್ರತಿಯೊಂದು ಪ್ರಶ್ನೆಯ ಉದ್ದೇಶವನ್ನು ಮೊದಲು ಅವರಿಗೆ ವಿವರಿಸಿದ ನಂತರವೇ ನ್ಯಾಯಾಲಯದ ಕಲಾಪ ಮುಂದುವರಿಯುತ್ತಿತ್ತು. ತನ್ನ ತಿಳಿವಳಿಕೆ ಕಡಿಮೆಯಿದ್ದ ಕಾರಣವೇ ಆಪಾದಿತರ ಪರವಾಗಿ ಕೇಳಲಾಗುತ್ತಿದ್ದ ಪ್ರಶ್ನೆಗಳನ್ನು ಅವರು ಅಪ್ರಾಸಂಗಿಕ, ಅಸಂಗತ ಮತ್ತು

ಅಸಂಬದ್ಧ ಇತ್ಯಾದಿ ಹೇಳುತ್ತಲೇ ಬರುತ್ತಿದ್ದರು. ಆ ಪ್ರಶ್ನೆಗಳನ್ನು ದಾಖಲಿಸಿ, ಸರ್ಕಾರಿ ಸಾಕ್ಷಿಗೆ ಉತ್ತರಿಸಲು ಹೇಳಿದ್ದೇ ಆದಲ್ಲಿ ಭಾಷಣದಲ್ಲಿ 'ರಾಜದ್ರೋಹ'ದ ಅಂಶಗಳೇನೂ ಇರಲಿಲ್ಲವೆಂಬುದನ್ನು ಸಾಬೀತು ಪಡಿಸಬಹುದಾಗಿತ್ತು."

ಜೂನ್ 27 ರಂದು ಜಿಲ್ಲಾ ನ್ಯಾಯಾಧೀಶ ಇರ್ವಿನ್ ಅವರು ಈ ಮನವಿಯನ್ನು ತಿರಸ್ಕರಿಸಿ, "ವಿಚಾರಣೆ ನಡೆಸಲು ಮಿ. ಸ್ಮೆಲಿ ಪೂರ್ಣವಾಗಿ ಸಮರ್ಥರಿದ್ದಾರೆ" ಎಂಬ ನಿರ್ಣಯವನ್ನು ತಿಳಿಸಿದರು.[3]

ಜೂನ್ 28ರಂದು ಸ್ಮೆಲಿ ಅವರ ಮುಂದೆ ವಿಚಾರಣೆ ಪುನಃ ಆರಂಭವಾಯಿತು. ಅಪಮಾನದಿಂದ ಕೋಪಗೊಂಡಿದ್ದ ಸ್ಮೆಲಿ ಡಾ. ಹೆಡಗೇವಾರರಿಗೆ ಲಿಖಿತ ರೂಪದಲ್ಲಿ ಹೇಳಿಕೆ ನೀಡಲು ಆದೇಶಿಸಿದರು. ಆದರೆ ಡಾ. ಹೆಡಗೇವಾರರು ನ್ಯಾಯಾಧೀಶರ ಈ ಆದೇಶವನ್ನು ವಿರೋಧಿಸುತ್ತ ತನಗೆ ಸರ್ಕಾರಿ ಸಾಕ್ಷಿಗಳೆಲ್ಲರನ್ನೂ ವಿಚಾರಿಸುವ ಹಕ್ಕಿದೆ ಹಾಗೂ ಅದರ ನಂತರವೇ ತಾನು ಹೇಳಿಕೆ ನೀಡುವೆ ಎಂದರು. ನ್ಯಾಯಾಧೀಶರು ತಮ್ಮ ನಿಲುವನ್ನು ಬದಲಿಸದೆ ಅವರಿಂದ ಲಿಖಿತ ಹೇಳಿಕೆಯನ್ನು ಕೇಳಲು ನ್ಯಾಯಾಲಯಕ್ಕೆ ಅಧಿಕಾರವಿದೆ ಎಂದಾಗ, ಡಾ. ಹೆಡಗೇವಾರರು ಸಹ ಅದೇ ಭಾಷೆಯಲ್ಲಿ ಮುಖ ಮುರಿಯುವಂತೆ ಪ್ರತ್ಯುತ್ತರವಿತ್ತರು: "ನಾನು ಹೇಳಬೇಕೆಂದಿರುವುದನ್ನು ಹೇಳುವೆ. ನನ್ನ ನಿಲುವಿನಲ್ಲಿ ಯಾವುದೇ ಬದಲಾವಣೆಯಿಲ್ಲ. ನನ್ನ ಲಿಖಿತ ಹೇಳಿಕೆಯನ್ನು ನಾನು ಕೊನೆಯಲ್ಲಿ ನೀಡುವೆ." ಡಾ. ಹೆಡಗೇವಾರರ ಈ ದಿಟ್ಟ ನಿಲುವು, ಅವರ ಅಂತರ್ಯದ ಗಟ್ಟಿತನ ಹಾಗೂ ನಿರ್ಭೀತ ಮನೋವೃತ್ತಿಯನ್ನು ಪರಿಚಯಿಸುವಂತಿದೆ.

ಅವರ ನಿಲುವಿಗೆ ನ್ಯಾಯಾಲಯವು ಸಮ್ಮತಿಸಬೇಕಾಯಿತು. ವಿಚಾರಣೆ ಜುಲೈ 8ಕ್ಕೆ ಮುಂದೂಡಲ್ಪಟ್ಟಿತು.

ಜುಲೈ 8 ರಂದು ಪುನಃ ವಿಚಾರಣೆ ಆರಂಭವಾದಾಗ ಡಾ. ಹೆಡಗೇವಾರರು ಮುಂದಿನ ಸರ್ಕಾರಿ ಸಾಕ್ಷಿಯಾಗಿದ್ದ ಕಾಟೋಲ್ ಕ್ಷೇತ್ರದ ಸರ್ಕಲ್ ಇನ್ಸ್‌ಪೆಕ್ಟರ್ ಗಂಗಾಧರರಾವ್ ಅವರನ್ನು ಪಾಟೀಸವಾಲಿನಲ್ಲಿ ತೊಡಗಿಸಿದರು.

**ಡಾ. ಹೆಡಗೇವಾರ್** : ಸಭೆ ಎಷ್ಟು ಹೊತ್ತಿನವರೆಗೆ ನಡೆಯಿತು ಮತ್ತು ಭಾಷಣವನ್ನು ಹೇಗೆ ಬರೆದುಕೊಳ್ಳಲಾಗುತ್ತಿತ್ತು?

**ರಾವ್** : ಸಭೆ ರಾತ್ರಿ ಸುಮಾರು ಏಳು ಮುಕ್ಕಾಲರ ಹೊತ್ತಿಗೆ ಕೊನೆಗೊಂಡಿತು. ನಾವು ಟಾರ್ಚ್ ಲೈಟಿನ ಬೆಳಕಿನಲ್ಲಿ ಬರೆಯುತ್ತಿದ್ದೆವು.

**ಡಾ. ಹೆಡಗೇವಾರ್** : ಅವರು ಪೂರಾ ಕತ್ತಲೆಯಲ್ಲಿ ಕುಳಿತಿದ್ದರು. ಅವರ ಬಳಿ ಲಾಟೀನಾಗಲಿ, ಟಾರ್ಚ್ ಆಗಲಿ ಇರಲೇ ಇಲ್ಲ. ನಾನು ಶುದ್ಧವಾದ ಮರಾಠಿಯಲ್ಲಿ ಮಾತಾಡುತ್ತೇನೆ. ಆದರೆ ನನ್ನ ಬಾಯಿಯಿಂದ ಅವರು 'ಬಾಯಕೋಜಾಪೋರ್' ಎಂಬ ತೀರ ಅಶುದ್ಧ ಮರಾಠಿ ಶಬ್ದವನ್ನು ಹೇಳಿಸಿದ್ದಾರೆ. ಸಾಕ್ಷಿಯಾಗಿರುವವರು ಪೂರಾ ನಿರಕ್ಷರರು ಅನಿಸುತ್ತದೆ.

---

3 [illegible] 29 ಜೂನ್ 1921 [illegible]

**ರಾವ್** : ನನಗೆ ವ್ಯಾಕರಣ ತಿಳಿದಿಲ್ಲ. ನನ್ನ ತಾಯಿಯೊಡನೆ ನಾನು ತೆಲುಗು ಮತ್ತು ಪತ್ನಿಯೊಂದಿಗೆ ಮರಾಠಿಯಲ್ಲಿ ಮಾತಾಡುತ್ತಿರುವೆ. ನಾನು ಒಂದು ನಿಮಿಷದಲ್ಲಿ ಸರಾಸರಿ 25 ರಿಂದ 30 ಪದಗಳನ್ನು ಬರೆಯಬಲ್ಲೆ. ಕೆಲವೊಮ್ಮೆ ಪೂರ್ಣ ವಾಕ್ಯಗಳನ್ನು ಬರೆದಲ್ಲಿ, ಇನ್ನೂ ಕೆಲವೊಮ್ಮೆ ಹೇಳಿರುವುದರ ಸಾರಾಂಶ ಮಾತ್ರ ಬರೆಯಬಲ್ಲೆ. ಸಾರಾಂಶ ಬರೆಯ ಬೇಕಾದಲ್ಲಿ ಸಂಪೂರ್ಣ ವಾಕ್ಯವನ್ನು ಕೇಳಬೇಕಾದ ಅಗತ್ಯವೇನೂ ಇರುವುದಿಲ್ಲ. ನನಗೆ ಅರ್ಥವಾಗದ ಸಂಗತಿಗಳಲ್ಲಿ ನಾನು ತಪ್ಪುತ್ತಿದ್ದೆ ಮತ್ತು ಅವುಗಳನ್ನು ನಾನು ಬೇರೆಯವರ ಸಹಾಯ ಪಡೆದು ಬರೆಯುತ್ತಿದ್ದೆ. ಡಾಕ್ಟರ್ ಅವರು ಪ್ರತಿ ನಿಮಿಷಕ್ಕೆ 25 ರಿಂದ 30 ಶಬ್ದಗಳನ್ನಾಡುತ್ತಿದ್ದರು.

ಡಾ. ಹೆಡಗೇವಾರರು ಅವರ ಮಾತಿನ ನಡುವೆ ಪ್ರವೇಶಿಸಿ, ಸರ್ಕಲ್ ಇನ್ಸ್‌ಪೆಕ್ಟರ್ ಅವರು ಭಾಷಣವನ್ನು ಬರೆದುಕೊಳ್ಳುವುದರಲ್ಲಿ ಅದೆಷ್ಟು ಕುಶಲರು ಎಂಬುದನ್ನು ಪರೀಕ್ಷಿಸುವ ಸಲುವಾಗಿ ತನಗೊಂದು ಅವಕಾಶ ನೀಡಬೇಕಾಗಿ ನ್ಯಾಯಾಲಯವನ್ನು ವಿನಂತಿಸಿದರು. ಅವರ ಮನವಿಗೆ ನ್ಯಾಯಾಲಯವು ಒಪ್ಪಿಗೆ ನೀಡಲಿಲ್ಲ. ಆಗ ಡಾ. ಹೆಡಗೇವಾರರು ಅವರ ಶಿಕ್ಷಣದ ಕುರಿತು ತಿಳಿಯಲು ಇಚ್ಛಿಸಿದರು. ರಾವ್ ಹೇಳಿದರು:

"ನಾನು ಸರ್ಕಾರದ ಸೇವೆಯಲ್ಲಿ ಕಳೆದ 24 ವರ್ಷಗಳಿಂದ ಇರುವೆ. ಇಂಟರ್ ಪರೀಕ್ಷೆಯಲ್ಲಿ ನಾನು ತೇರ್ಗಡೆಹೊಂದಿಲ್ಲ. ಮೊದಲು ನಾನು ಹೆಡ್ ಕಾನ್‌ಸ್ಟೇಬಲ್ ಆಗಿ ನಿಯುಕ್ತನಾಗಿದ್ದೆ. ನಂತರ ನನಗೆ ಬಡ್ತಿ ಸಿಕ್ಕಿ ಉಪನಿರೀಕ್ಷಕನಾಗಿ, ಇದೀಗ ಸರ್ಕಲ್ ಇನ್ಸ್‌ಪೆಕ್ಟರ್ ಆಗಿ ಹೊಣೆ ನಿರ್ವಹಿಸುತ್ತಿರುವೆ. ಅಂದಿನ ಸಭೆಯಲ್ಲಿ ಡಾ. ಹೆಡಗೇವಾರರಲ್ಲದೆ ಅಲೇಕರ್, ಓಗ್ಲೆ ಅಥವಾ ಇನ್ನಾರಿದ್ದರು ಎಂಬುದು ನನಗೆ ಗೊತ್ತಿಲ್ಲ. ಅವರ ಭಾಷಣದಿಂದ ಮಿಕ್ಕವರಂತೆ ನಾನೂ ಕೂಡ ಪ್ರಭಾವಿತನಾಗಿದ್ದೆ ಎಂಬುದು ಸತ್ಯವೇ. ಆದರೆ ಭಾಷಣಕಾರರು ಪೂರಾ ಸುಳ್ಳಾಡುತ್ತಿದ್ದಾರೆ ಎಂಬುದೂ ನನಗರಿವಿತ್ತು."

**ಡಾ. ಹೆಡಗೇವಾರ್** : "ನ್ಯಾಯಾಲಯದ ಮುಂದೆ ಪ್ರಸ್ತುತಪಡಿಸಲಾಗಿರುವ ಭಾಷಣವು ನನ್ನದಲ್ಲ. ನಾನು ನಿಮಿಷವೊಂದಕ್ಕೆ ಸರಾಸರಿ 200 ಶಬ್ದಗಳನ್ನಾಡುತ್ತೇನೆ. ಹೀಗಾಗಿ ಈಗ ತಾನೇ 'ಲಾಂಗ್ ಹ್ಯಾಂಡ್' ನಲ್ಲಿ ಬರೆಯಲು ಕಲಿತಿರುವವರು, ನನ್ನ ಭಾಷಣದ ವರದಿ ತಯಾರಿಸಬೇಕೆಂದಿದ್ದಲ್ಲಿ, ಅವರು ಭಾಷಣದ ಎಂಟನೇ ಒಂದು ಭಾಗ ಬರೆದುಕೊಳ್ಳಲು ಸಹ ಅಸಮರ್ಥರೇ ಆಗಿರುತ್ತಾರೆ. ವಾದಿಯ ಕಡೆಯಿಂದ ಹಾಜರುಪಡಿಸಲಾದ ವರದಿಯು ಅರ್ಥಂಬರ್ಥ ವಾಕ್ಯಗಳಿಂದ, ಎಲ್ಲೆಲ್ಲಿಂದಲೋ ಎಳೆದು ತಂದಿದ್ದ ಶಬ್ದಗಳಿಂದ ಮತ್ತು ಅಪೂರ್ಣ ವಿಷಯಗಳಿಂದಲೇ ಕೂಡಿದೆ. ಇದಲ್ಲದೆ ಈ ವರದಿಯು ಪೂರ್ಣವಾಗಿ ಸುಳ್ಳಿನದೇ ಕಂತೆಯಲ್ಲದೆ ಇನ್ನೇನೂ ಅಲ್ಲ. ಯಾರೋ ಓರ್ವ ಅಯೋಗ್ಯನಾದ ಪೇದೆಯು ನನ್ನ ಭಾಷಣದ ವರದಿಯನ್ನು ತಯಾರಿಸುವುದರಲ್ಲಿ ತನ್ನ ಕಲ್ಪನಾಶಕ್ತಿಯನ್ನು ಮತ್ತು ತನಗೆ ನೆನಪಿರುವುದೆಲ್ಲವನ್ನೂ ಬಳಸಿದ್ದಾನೆಂಬುದರಲ್ಲಿ ಸಂದೇಹವೇ ಇಲ್ಲ. ಈ ವರದಿಯನ್ನು ಓದಿದವನು ಯಾರೇ ಇರಲಿ, ನಾನು ಹೇಗೆ ಮತ್ತು ಏನು ಹೇಳಿರುವೆನೆಂಬುದನ್ನು ಸ್ವಲ್ಪವೂ ಅಂದಾಜು ಸಹ ಮಾಡಲಾರ. ಇನ್ನು ಭರತವಾಡಾದಲ್ಲಿನ ನನ್ನ ಭಾಷಣಗಳನ್ನು ಬರೆದುಕೊಳ್ಳುವುದು ಸಾಧ್ಯವೇ ಇರಲಿಲ್ಲ. ಕಾರಣವೆಂದರೆ ರಾತ್ರಿಯ ಆ ಕತ್ತಲೆಯಲ್ಲಿ ಕಾಗದ ಮತ್ತು ಪೆನ್ಸಿಲ್ ಸಹ ಕಾಣುವಂತಿರಲಿಲ್ಲ. ಪೊಲೀಸರ ಬಳಿ ಬೆಳಕಿಗಾಗಿ ವ್ಯವಸ್ಥೆಯೂ ಇರಲಿಲ್ಲ. ಹೀಗಾಗಿ ನನ್ನ ಭಾಷಣದ ಯಾವ ವರದಿಯನ್ನು ಕೊಡಲಾಗಿದೆಯೊ ಅದು ಪೂರ್ಣವಾಗಿ

ಕಪೋಲಕಲ್ಪಿತವಾದುದು ಮತ್ತು ಜನತೆ ನಡೆಸುವಂತಹ ಆಂದೋಳನವನ್ನು ಪೂರಾ ತುಳಿದು ಹಾಕಲು ಪೋಲೀಸರು ಅದೆಷ್ಟು ಕಷ್ಟಪಡುತ್ತಿದ್ದಾರೆ ಎಂದು ತೋರಿಸಿಕೊಳ್ಳಲು ಮಾಡಿರುವಂತಹ ಪ್ರಯತ್ನ ಮಾತ್ರ ಅದು. ಓದು ಬರಹ ಬಲ್ಲವರು ಯಾರೇ ಆದರೂ ಬರಿಯ ಮೇಲ್ನೋಟ ಮಾತ್ರದಿಂದಲೇ ಈ ವರದಿ ಅದೆಷ್ಟು ಸುಳ್ಳೆಂಬುದನ್ನು ತಿಳಿಯಬಹುದು. ಪ್ರಾಯಶಃ ಈ ಭೀತಿಯ ಕಾರಣದಿಂದಲೇ ವರದಿಯ ತುಸು ಭಾಗವನ್ನು ಓದಿಯೂ ಇಲ್ಲ ಅನಿಸುತ್ತದೆ. ಹೀಗಾಗಿ ವಿಚಾರಣೆಯನ್ನು ಪ್ರಾಮಾಣಿಕವಾಗಿ ನಡೆಸಿದ್ದೇ ಆದಲ್ಲಿ, ವಾದಿಗಳು ಹೊರಿಸಿರುವ ಆಪಾದನೆಯ ಗುಟ್ಟೆಲ್ಲ ಬಯಲಾಗುತ್ತಿತ್ತು. ತಾನು ವರದಿಯನ್ನು ತೆಗೆದುಕೊಳ್ಳುವ ರೀತಿ ಮತ್ತು ನನ್ನ ಭಾಷಣದ ವೇಗ ಈ ಕುರಿತು ಗಂಗಾಧರರಾವ್ ಹೇಳಿರುವ ಹಾಸ್ಯಾಸ್ಪದ ಸಂಗತಿಗಳನ್ನು ಕೇಳಿದಾಗ, ಯಾವುದೇ ನ್ಯಾಯಪ್ರೇಮಿ ವ್ಯಕ್ತಿಗೆ ವಾದಿಗಳ ಆಪಾದನೆಯಲ್ಲಿ ಏನೂ ಹುರುಳಿಲ್ಲ ಎಂಬುದು ಸಹಜವಾಗಿಯೇ ಗೊತ್ತಾದೀತು. ಇಂತಹ ಸಭೆಗಳಲ್ಲಿ ನನ್ನ ಭಾಷಣದ ಸಾಮಾನ್ಯ ವೇಗಕ್ಕನುಗುಣವಾಗಿ ಸಾಕ್ಷಿಯಾಗಿರುವವರು ವರದಿ ಬರೆದುಕೊಳ್ಳಲು ಎಷ್ಟರ ಮಟ್ಟಿಗೆ ಸಮರ್ಥರು ಎಂಬುದನ್ನು ಪ್ರತ್ಯಕ್ಷವಾಗಿ ತೋರಿಸಿಕೊಡಲು ನನಗೊಂದು ಅವಕಾಶ ನೀಡಿದ್ದಲ್ಲಿ, ಪೋಲೀಸ್ ಅಧಿಕಾರಿಗಳ ಸತ್ಯನಿಷ್ಠೆ ಹಾಗೂ ಸಜ್ಜನತನ ಏನು ಎಂಬುದು ಎಲ್ಲರಿಗೂ ಗೊತ್ತಾಗುತ್ತಿತ್ತು. ಆದರೆ ಆಶ್ಚರ್ಯದ ಮತ್ತು ಖೇದದ ಸಂಗತಿಯೆಂದರೆ ನನಗೆ ಸಂಬಂಧಿಸಿದ ಈ ವಿಚಾರಣೆಯಲ್ಲಿ ಹೆಜ್ಜೆಹೆಜ್ಜೆಗೂ ತೊಡರುಗಾಲು ಹಾಕುವ ಪ್ರಯತ್ನವನ್ನೇ ಮಾಡಲಾಗಿದೆ. ಮಾತೃಭೂಮಿಯ ಭಕ್ತರನ್ನು ದಬಾಯಿಸಿ ಧೂಳೆಬ್ಬಿಸಲು ಹೊರಟಿರುವ ಈ ಸರ್ಕಾರದ ಮೇಲೆ, ನ್ಯಾಯಾಲಯದಲ್ಲಿ ನಾನು ಮಾಡಹೊರಟಿರುವ ವಿರೋಧದ ಪರಿಣಾಮವೇನೂ ಆಗದು ಎಂಬುದರ ಅರಿವು ನನಗೆ ಚೆನ್ನಾಗಿ ಇದೆ. ಹಿಂದೂಸ್ಥಾನವು ಹಿಂದೂಗಳದೇ ಮತ್ತು ನಮ್ಮ ಕಟ್ಟಕಡೆಯ ಗುರಿ ಸ್ವರಾಜ್ಯ ಪ್ರಾಪ್ತಿಯೇ ಎಂದು ನಾನು ಈಗಲೂ ಸಹ ಘೋಷಿಸುತ್ತೇನೆ. ಇಲ್ಲಿನ ತನಕ ಬ್ರಿಟಿಷ್ ಪ್ರಧಾನಿ ಮತ್ತು ಸರ್ಕಾರ ಸ್ವಯಂನಿರ್ಣಯದ ಕುರಿತು ಮಾಡುತ್ತಿದ್ದ ಘೋಷಣೆಗಳೆಲ್ಲವೂ ಬರಿಯ ಬೂಟಾಟಿಕೆಯೆಂದಾದಲ್ಲಿ ನನ್ನ ಭಾಷಣವನ್ನು ರಾಜದ್ರೋಹವಾಗಿ ತಿಳಿಯಲು ಅಭ್ಯಂತರವೇನಿಲ್ಲ. ಆದರೆ ನನಗೆ ಸರ್ವಶಕ್ತನಾದ ಪರಮೇಶ್ವರನ ನ್ಯಾಯದ ಮೇಲೆ ಅಚಲವಾದ ವಿಶ್ವಾಸವಿದೆ.”

ಜುಲೈ 9ರಂದು ಡಾ. ಹೆಡಗೇವಾರರು ಸರ್ಕಾರಿ ಸಾಕ್ಷಿಗಳನ್ನು ಪಾಟಿ ಸವಾಲಿಗಾಗಿ ಇನ್ನೊಮ್ಮೆ ಕರೆಸಬೇಕೆಂದು ನ್ಯಾಯಾಲಯದಲ್ಲಿ ಮನವಿ ಸಲ್ಲಿಸಿದರು. ತನ್ನ ವಕೀಲರು ನ್ಯಾಯಾಲಯವನ್ನು ಬಹಿಷ್ಕರಿಸಿರುವುದರಿಂದ ಆ ಸಾಕ್ಷಿಗಳ ಪಾಟಿ ಸವಾಲು ಸಾಧ್ಯವಾಗಲಿಲ್ಲ ಎಂಬುದು ಅವರ ವಾದವಾಗಿತ್ತು. ಆದರೆ 108ನೇ ವಿಧಿಯಂತೆ ತಾನು ಸಾಕ್ಷಿಗಳನ್ನು ಪುನಃ ಕರೆಯಲು ಸಾಧ್ಯವಿಲ್ಲ ಎಂದು ನ್ಯಾಯಾಧೀಶರು ತಿಳಿಸಿದರು. ಡಾ. ಹೆಡಗೇವಾರರು ಪಾಟಿಸವಾಲು ನಡೆಸಲು ತನಗೆ ನ್ಯಾಯಬದ್ಧ ಅಧಿಕಾರವಿದೆ ಎಂಬ ಸಲುವಾಗಿ ಹಲವಾರು ಪುರಾವೆಗಳ ಸಹ ವಾದಿಸಿದರು. ಈ ವಿಷಯದಲ್ಲಿ ಸರ್ಕಾರಿ ವಕೀಲರು ಆಕ್ಷೇಪವೆತ್ತಿದರು. ಕಾನೂನಿನ ಪುರಾವೆಗಳ ಬದಲು ನ್ಯಾಯಾಲಯದ ವ್ಯವಹಾರದ ಮೇಲೆ ಡಾ. ಹೆಡಗೇವಾರರು ಹೆಚ್ಚಿನ ಲಕ್ಷ್ಯ ವಹಿಸುವುದು ಅಗತ್ಯವೆಂಬುದು ಅವರ ವಾದವಾಗಿತ್ತು. ಜೂನ್ 13ರಂದು ನ್ಯಾಯಾಧೀಶರು ಇನ್ನೂ ಹೆಚ್ಚಿನ ಪಾಟಿ ಸವಾಲಿಗೆ ಅವಕಾಶವಿಲ್ಲವೆಂದರು. ಜುಲೈ 9ರಂದು ಡಾ. ಹೆಡಗೇವಾರರು ತಮ್ಮ ಲಿಖಿತ ಹೇಳಿಕೆಯನ್ನಿತ್ತರು.

(ಕ) "ನನ್ನ ಭಾಷಣವು ಕಾನೂನುಬದ್ಧವಾಗಿ ಸ್ಥಾಪಿತವಾಗಿರುವ ಬ್ರಿಟಿಷ್ ರಾಜ್ಯದ ವಿರುದ್ಧ ಅಸಂತೋಷ, ದ್ವೇಷ ಹಾಗೂ ದ್ರೋಹಕ್ಕೆ ಪ್ರಚೋದನೆ ಕೊಡುವಂತಹದಾಗಿತ್ತು ಮತ್ತು ಭಾರತೀಯರು ಹಾಗೂ ಐರೋಪ್ಯರ ನಡುವೆ ಶತ್ರುತ್ವ ಬೆಳೆಸುವಂತಹದಾಗಿತ್ತು ಎಂಬ ಬಗ್ಗೆ ಸ್ಪಷ್ಟೀಕರಣ ನೀಡಲು ನನಗೆ ತಿಳಿಸಲಾಗಿದೆ. ಭಾರತೀಯನೊಬ್ಬನು ಎಸಗಿರುವ ಕೃತ್ಯದ ವಿಚಾರಣೆ ಮತ್ತು ನ್ಯಾಯ ತೀರ್ಮಾನವನ್ನು ಮಾಡಲು ಒಂದು ವಿದೇಶಿ ಪ್ರಭುತ್ವವು ಕುಳಿತಿರುವುದನ್ನು, ನಾನು ಸ್ವತಃ ನನಗೆ ಮತ್ತು ನಮ್ಮ ಈ ಮಹಾನ್ ದೇಶಕ್ಕೂ ಅಪಮಾನವೆಂದೇ ತಿಳಿಯುತ್ತೇನೆ."

(ಖ) "ಹಿಂದೂಸ್ಥಾನದಲ್ಲಿ ಯಾವುದೇ ನ್ಯಾಯಸಮ್ಮತ ಆಡಳಿತವಿದೆ ಎಂದು ನನಗನಿಸುವುದಿಲ್ಲ. ಯಾರಾದರೂ ಹಾಗೆ ಹೇಳಿದಲ್ಲಿ ನನಗೆ ಆಶ್ಚರ್ಯವೂ ಆಗುತ್ತದೆ. ಇಂದು ನಮ್ಮಲ್ಲಿರುವುದು ಪಾಶವಿಕ ಶಕ್ತಿಯ ಬಲದ ಮೇಲೆ ಹೇರಲ್ಪಟ್ಟ ಭಯದ ಸಾಮ್ರಾಜ್ಯ ಮಾತ್ರವಾಗಿದೆ. ಕಾನೂನು ಅದರ ಗುಲಾಮನಾಗಿದ್ದು, ನ್ಯಾಯಾಲಯವು ಅದರ ಕೈಗೊಂಬೆ ಮಾತ್ರವಾಗಿದೆ. ವಿಶ್ವದ ಯಾವುದೇ ಪ್ರದೇಶದಲ್ಲಿ ಅಧಿಕಾರ ಚಲಾಯಿಸಿ ಇರಲು ಯಾರಿಗಾದರೂ ಅಧಿಕಾರವಿರುವುದೇ ಆದಲ್ಲಿ, ಅದು ಜನರಿಂದ, ಜನರಿಗಾಗಿ ಮತ್ತು ಜನರೇ ನಡೆಸುವ ಸರ್ಕಾರಕ್ಕೆ ಮಾತ್ರ. ಇದನ್ನು ಬಿಟ್ಟು ಮಿಕ್ಕೆಲ್ಲ ವಿಧದ ಶಾಸನಗಳು ರಾಷ್ಟ್ರಗಳನ್ನು ಶೋಷಣೆಗೊಳಿಸಲು ಧೂರ್ತ ಜನರು ಯೋಜನಾಪೂರ್ವಕವಾಗಿ ಚಲಾಯಿಸುವಂತಹ ವಂಚನೆಯ ಆಟಗಳ ಮಾದರಿಗಳಾಗಿವೆ."

(ಗ) "ನಾನು ನನ್ನ ದೇಶ ಬಾಂಧವರಲ್ಲಿ ಮಾತೃಭೂಮಿಯ ಬಗ್ಗೆ ಉತ್ಕಟವಾದ ಭಕ್ತಿಯ ಭಾವನೆಯನ್ನು ಎಚ್ಚರಿಸಲು ಪ್ರಯತ್ನ ಮಾತ್ರ ಮಾಡಿರುವೆ. 'ಹಿಂದೂಸ್ಥಾನವು ಹಿಂದೂಗಳದು' ಎಂಬ ವಿಚಾರವನ್ನು ಅವರ ಮನದಲ್ಲಿ ಅಂಕಿತಗೊಳಿಸಲು ನಾನು ಪ್ರಯತ್ನಿಸಿರುವೆ. ಭಾರತೀಯನೊಬ್ಬ ರಾಜದ್ರೋಹವೆಸಗದೆಯೇ ರಾಷ್ಟ್ರಭಕ್ತಿಯ ಈ ಭಾವನೆಯನ್ನು ಪ್ರತಿಪಾದಿಸಲಾರನೆಂದಾದಲ್ಲಿ ಮತ್ತು ಭಾರತೀಯರು ಹಾಗೂ ಐರೋಪ್ಯ ಜನರ ನಡುವೆ ಶತ್ರುತ್ವ ಬೆಳೆಸದೆಯೇ ಈ ಸತ್ಯದ ಹೇಳಿಕೆಯನ್ನು ನೀಡಲಾರನೆಂದಾದಲ್ಲಿ, ನಿಜಕ್ಕೂ ಪರಿಸ್ಥಿತಿ ಈ ಹಂತಕ್ಕೆ ಮುಟ್ಟಿದೆ ಎಂದಾದಲ್ಲಿ, ಐರೋಪ್ಯ ಜನರು ಮತ್ತು ಯಾರು ತಮ್ಮನ್ನು ತಾವು ಭಾರತ ಸರ್ಕಾರವೆಂದು ಹೇಳಿಕೊಳ್ಳುತ್ತಾರೋ ಅವರು, ತಮಗೀಗ ಗಂಟುಮೂಟೆ ಕಟ್ಟಿ ದೇಶಬಿಟ್ಟು ಹೊರಡಲು ಕಾಲ ಸನ್ನಿಹಿತವಾಗಿದೆ ಎಂದು ಎಚ್ಚರಗೊಳ್ಳುವ ಅಗತ್ಯವಿದೆ.

(ಘ) "ನನ್ನ ಭಾಷಣದ ಟಿಪ್ಪಣಿಯನ್ನು ಸರಿಯಾದ ರೀತಿಯಲ್ಲಿ ಬರೆದುಕೊಂಡಿಲ್ಲ. ನನ್ನ ಭಾಷಣದ ಅರ್ಧಂಬರ್ಧ, ತಲೆಬುಡವಿಲ್ಲದ ಹಾಗೂ ಪೂರಾ ತಿರುಗುಮುರುಗಾದ ವಿವರಣೆಯನ್ನು ಕೊಡಲಾಗಿದೆ. ಆದರೆ ನನಗದರ ಗೊಡವೆಯಿಲ್ಲ. ರಾಷ್ಟ್ರ ರಾಷ್ಟ್ರಗಳ ನಡುವೆ ಪರಸ್ಪರ ಸಂಬಂಧಗಳು ಯಾವ ಮೂಲ ಸಿದ್ಧಾಂತಗಳನ್ನು ಆಧರಿಸಿ ನಿರ್ಧರಿಸಲ್ಪಡುತ್ತವೊ, ಅದೇ ಆಧಾರದ ಮೇಲೆಯೇ ಬ್ರಿಟನ್ ಮತ್ತು ಯುರೋಪೀಯ ಜನರ ಜತೆ ನನಗೂ ಇದೆ. ನಾನೇನು ಹೇಳಿದ್ದೇನೋ ಅದು ನನ್ನ ದೇಶಬಾಂಧವರ ಹಕ್ಕುಗಳಿಗಾಗಿ ಮತ್ತು ಸ್ವಾತಂತ್ರ್ಯದ ಗಳಿಕೆಗಾಗಿ ಹೇಳಿರುವೆ. ನಾನು ಹೇಳಿರುವ ಒಂದೊಂದು ಶಬ್ದದ

"ಸರ್ವೆ ಸಾಮಾನ್ಯವಾಗಿ ನನ್ನ ಭಾಷಣದಲ್ಲಿ ಹಿಂದೂಸ್ಥಾನವು ಹಿಂದೂಗಳದು ಮತ್ತು ನಮಗೆ ಸ್ವರಾಜ್ಯ ಬೇಕಾಗಿದೆ ಎಂಬುದೇ ವಿಷಯವಾಗಿರುತ್ತದೆ. ಆದರೆ ಇಷ್ಟನ್ನು ಹೇಳಿದ ಮಾತ್ರದಿಂದ ಎಲ್ಲವೂ ಆಗುವುದಿಲ್ಲ. ಸ್ವರಾಜ್ಯವನ್ನು ಗಳಿಸುವುದು ಹೇಗೆ ಮತ್ತು ಅದನ್ನು ಗಳಿಸಿದ ನಂತರ ನಾವು ಹೇಗಿರುವ ಅಗತ್ಯವಿದೆ ಇದನ್ನು ಸಹ ಜನತೆಗೆ ವಿವರಿಸಬೇಕಾಗುತ್ತದೆ. ಇಲ್ಲವಾದಲ್ಲಿ 'ಯಥಾ ರಾಜಾ ತಥಾ ಪ್ರಜಾ' ಎಂಬಂತೆ ನಮ್ಮವರೂ ಬ್ರಿಟಿಷರ ಅನುಕರಣೆಯನ್ನು ಮಾಡಲಾರಂಭಿಸುವರು. ಇದೀಗ ನಡೆದಿರುವ ಜಾಗತಿಕ ಸಮರದಿಂದ ಬ್ರಿಟಿಷರು ತಮ್ಮದೇ ಆಗಿರುವ ದೇಶದಲ್ಲಿ ಮಾತ್ರ ತೃಪ್ತರಾಗದೆ, ಇತರ ದೇಶಗಳ ಮೇಲೂ ಆಕ್ರಮಣ ನಡೆಸಿ, ಅವುಗಳನ್ನು ತಮಗೆ ಅಧೀನಗೊಳಿಸಿ ಅಲ್ಲಿ ರಾಜ್ಯಭಾರ ನಡೆಸುತ್ತಿದ್ದಾರೆ ಎಂಬುದು ಎಲ್ಲರಿಗೂ ಗೊತ್ತಾಗಿದೆ. ಆದರೆ ತಮ್ಮದೇ ಸ್ವಾತಂತ್ರ್ಯಕ್ಕೆ ಅಪಾಯವೊದಗಿದಾಗ ಅವರು ಶಸ್ತ್ರ ಹಿರಿದು ರಕ್ತದ ಹೊಳೆ ಹರಿಸಲು ಹಿಂಜರಿಯುವುದಿಲ್ಲ. ಅದಕ್ಕಾಗಿ ಬ್ರಿಟನಿನ ಸೈತಾನಿ ನಾಗರಿಕತೆಯನ್ನು ನಮ್ಮದಾಗಿಸಿಕೊಳ್ಳಬಾರದೆಂಬುದನ್ನು ಸಹ ನಮ್ಮವರಿಗೆ ತಿಳಿಸಿ ಹೇಳಬೇಕಾಗುತ್ತದೆ. ನಾವು ನಮ್ಮ ದೇಶದಲ್ಲಿ ತೃಪ್ತಿಪಟ್ಟು ಇರುವ ಅಗತ್ಯವಿದೆ. ಒಂದು ದೇಶವು ಇನ್ನೊಂದರ ಮೇಲೆ ತನ್ನ ಶಾಸನ ನಡೆಸುವುದು ಅನ್ಯಾಯವೆಂಬುದನ್ನು ಜನರ ಮನದಾಳದಲ್ಲಿ ಕೂರಿಸಲು ಇವೆಲ್ಲ ಸಂಗತಿಗಳನ್ನು ಹೇಳಬೇಕಾಗುತ್ತದೆ. ಇದಕ್ಕಾಗಿ ಇಂದಿನ ರಾಜಕಾರಣದ ಕುರಿತು ಚರ್ಚೆ ಮಾಡುವುದು ನನಗೆ ಸಹಜವಾಗಿಯೇ ಬೇಕೆನಿಸುತ್ತದೆ.

"ದೌರ್ಭಾಗ್ಯವೆಂದರೆ ನಮ್ಮೀ ಪವಿತ್ರ ಮಾತೃಭೂಮಿಯನ್ನು ಈಗ ಆಳುತ್ತಿರುವವರು ಪರಕೀಯರು. ಸರ್ಕಾರಿ ವಕೀಲರೇ, ನಿಮಗೆ ನನ್ನದೊಂದು ನೇರ ಪ್ರಶ್ನೆ. ಒಂದು ದೇಶದವರಿಗೆ ಇನ್ನೊಂದು ದೇಶದ ಮೇಲೆ ರಾಜ್ಯಭಾರ ನಡೆಸಲು ಅಧಿಕಾರ ನೀಡುವಂತಹ ಯಾವುದಾದರೂ ಕಾನೂನು ಇದೆಯೇನು? ನನ್ನ ಈ ಪ್ರಶ್ನೆಗೆ ಉತ್ತರ ಕೊಡಬಲ್ಲಿರಾ? ಇಂತಹ ಸಂಗತಿ ಪ್ರಕೃತಿಯ ನಿಯಮಗಳ ವಿರುದ್ಧವಲ್ಲವೇನು? ಒಂದು ದೇಶದವರಿಗೆ ಇನ್ನೊಂದು ದೇಶದ ಮೇಲೆ ಶಾಸನ ಚಲಾಯಿಸಲು ಅಧಿಕಾರವಿಲ್ಲವೆಂಬುದು ನಿಜವೆಂದಾದಲ್ಲಿ, ಬ್ರಿಟಿಷರಿಗೆ ಭಾರತೀಯರನ್ನು ತಮ್ಮ ಕಾಲ್ಕೆಳಗೆ ತುಳಿದು ಆಡಳಿತ ನಡೆಸಲು ಅಧಿಕಾರವನ್ನು ಕೊಟ್ಟವರಾರು? ಬ್ರಿಟಿಷರು ಖಂಡಿತವಾಗಿಯೂ ನಮ್ಮ ದೇಶದವರಲ್ಲ. ಅಷ್ಟಾದರೂ ಭಾರತೀಯರನ್ನು ಅವರು ಗುಲಾಮರನ್ನಾಗಿಸಿ ಕಟ್ಟಿ ಹಾಕಿದ್ದಾರೆ ಹಾಗೂ ಬಲಾತ್ಕಾರಪೂರ್ವಕ ತಮ್ಮನ್ನು ತಾವೇ ಶಾಸಕರನ್ನಾಗಿ ಘೋಷಿಸಿಕೊಂಡಿದ್ದಾರೆ. ಇದು ನ್ಯಾಯ, ನೀತಿ ಮತ್ತು ಧರ್ಮ ಇವುಗಳ ಹತ್ಯೆ ಅಲ್ಲವೇನು?

"ಇಂಗ್ಲೆಂಡನ್ನು ಪರತಂತ್ರಗೊಳಿಸಿ ಅಲ್ಲಿ ರಾಜ್ಯಭಾರ ನಡೆಸಬೇಕೆಂಬ ಬಯಕೆ ಇಲ್ಲ. ಆದರೆ ಇಂಗ್ಲಿಷರು ಇಂಗ್ಲೆಂಡನ್ನು ಮತ್ತು ಜರ್ಮನರು ಜರ್ಮನಿಯನ್ನು ಆಳುವಂತೆ ನಾವೂ ಇಲ್ಲಿ ನಮ್ಮದೇ ಆಳುವಿಕೆ ಬೇಕು ಎಂದು ಅಪೇಕ್ಷಿಸುತ್ತೇವೆ. ನಮಗೆ ಪೂರ್ಣವಾದ ಸ್ವಾತಂತ್ರ್ಯಬೇಕು ಮತ್ತು ಈ ವಿಷಯದಲ್ಲಿ ನಾವು ಯಾವುದೇ ರಾಜಿಗೂ ಸಿದ್ಧರಿಲ್ಲ."

ಕೊನೆಯಲ್ಲಿ ಅವರು ಪುನಃ ಸರ್ಕಾರಿ ವಕೀಲರಿಗೆ ಒಂದು ಅರ್ಥವತ್ತಾದ ಪ್ರಶ್ನೆಯನ್ನು ಎಸೆದರು –"ಸ್ವಾತಂತ್ರ್ಯಕ್ಕಾಗಿ ಆಸೆ ಪಡುವುದು ನೀತಿ ಮತ್ತು ಕಾನೂನಿಗೆ ವಿರುದ್ಧವೇನು? ನನಗಂತೂ ಕಾನೂನು ಎಂಬುದು ನೀತಿಯ ಕೊಲೆಗಾಗಿ ಇರದೆ, ಅದರ ರಕ್ಷಣೆಗಾಗಿ ಇರುತ್ತದೆ ಎಂಬ ಬಗ್ಗೆ ಪೂರಾ ಭರವಸೆಯಿದೆ."[4]

4. ಮಹಾರಾಷ್ಟ್ರ 10 ಆಗಸ್ಟ್ 1921 ಪು. 5

ಅವರ ಭಾಷಣ ಕೊನೆಗೊಂಡ ಮೇಲೆ ಸರ್ಕಾರಿ ವಕೀಲರು ತಮ್ಮ ಟಿಪ್ಪಣಿಯಲ್ಲಿ, "ಡಾ. ಹೆಡಗೇವಾರರು ಮಾಡಿರುವ ಭಾಷಣವು ಅತ್ಯಂತ ನೇರ ಮತ್ತು ಸ್ಪಷ್ಟವೂ ಇದೆ. ಆದರೆ ಸಭೆಗಳಲ್ಲಿ ಅವರ ಭಾಷಣ ಬೇರೆ ರೀತಿಯದಾಗಿರಬಹುದು. ವರದಿ ಬರೆದುಕೊಂಡಿರುವ ಪೊಲೀಸ್ ಅಧಿಕಾರಿಗಳು ತಪ್ಪು ತಿಳಿವಳಿಕೆಯನ್ನು ಮಾಡಿರಬಹುದೆನ್ನಲು ಕಾರಣವೇನೂ ಇಲ್ಲ" ಎಂದರು.

ಈ ಖಟ್ಲೆಯಲ್ಲಿ ತೀರ್ಪು ಆಗಸ್ಟ್ 19ರಂದು ಹೊರಬೀಳುವುದಾಗಿ ತಿಳಿಸಲಾಯಿತು. ಅಂದು ನ್ಯಾಯಾಲಯದ ಒಳಗೆ ಹೊರಗೆ ಎಲ್ಲ ಕಡೆಗಳಲ್ಲೂ ದಟ್ಟ ಸಂದಣಿ. ಮಧ್ಯಾಹ್ನ ಹನ್ನೆರಡೂವರೆಗೆ ಸ್ಮೆಲಿ ತಮ್ಮ ತೀರ್ಪು ನೀಡಿದರು. ಡಾ. ಹೆಡಗೇವಾರರ ಹೇಳಿಕೆಯ ಕುರಿತು ಟಿಪ್ಪಣಿ ಮಾಡುತ್ತಾ ಸ್ಮೆಲಿ "ಅವರ ಮೂಲ ಭಾಷಣಕ್ಕಿಂತ ಈ ಸಮರ್ಥನೆಯೇ ಹೆಚ್ಚು ರಾಜದ್ರೋಹಕರವಾದುದು" ಎಂದು ಹೇಳಿದುದಲ್ಲದೆ, ಕೊನೆಯಲ್ಲಿ ತಮ್ಮ ತೀರ್ಪಿನ ರೂಪದಲ್ಲಿ ನಿಮ್ಮ ಭಾಷಣವು ರಾಜದ್ರೋಹಕರವಾಗಿದ್ದುದಂತೂ ನಿಸ್ಸಂದೇಹ. ಅದಕ್ಕಾಗಿ ಒಂದು ವರ್ಷದವರೆಗೆ ಇಂತಹ ಭಾಷಣವನ್ನು ಮಾಡಲಾಗದು. ಈ ಭರವಸೆಯನ್ನು ನೀಡುವುದರ ಜತೆಯಲ್ಲಿ ಒಂದೊಂದು ಸಾವಿರ ರೂಪಾಯಿಗಳ ಎರಡು ಜಾಮೀನು ಹಾಗೂ ಒಂದು ಸಾವಿರ ರೂಪಾಯಿಗಳ ಒಂದು ಮುಚ್ಚಳಿಕೆಯನ್ನು ಕೊಡಬೇಕು" ಎಂದು ತಿಳಿಸಿದರು.

ಡಾ. ಹೆಡಗೇವಾರರು ಇನ್ನೊಮ್ಮೆ ಸಾಮ್ರಾಜ್ಯವಾದಿ ಶಾಸನದ ಮುಂದೆ ಸವಾಲು ಹಾಕಿ, "ನೀವೇನು ತೀರ್ಪು ನೀಡಬೇಕೆಂದಿರುವಿರೋ ಅದನ್ನು ನೀಡಿ. ನಾನಂತೂ ಅಪರಾಧಿಯಲ್ಲ. ನಾನು ನಿರ್ದೋಷಿಯೆಂದು ನನ್ನ ಅಂತರಂಗವು ಘೋಷಿಸುತ್ತಿದೆ. ತನ್ನ ಈ ವಿಧದ ದಮನಕಾರಿ ನೀತಿಯ ಮೂಲಕ ಸರ್ಕಾರವು ಮೊದಲೇ ಉರಿಯುತ್ತಿರುವ ಬೆಂಕಿಗೆ ಇನ್ನಷ್ಟು ತುಪ್ಪವೆರೆಯುವ ಕೆಲಸ ಮಾಡುತ್ತಿದೆ. ತನ್ನ ಈ ತಪ್ಪಿಗಾಗಿ ಪ್ರಾಯಶ್ಚಿತ್ತಪಡಬೇಕಾದ ಕಾಲ ಈ ವಿದೇಶಿ ಪ್ರಭುತ್ವಕ್ಕೆ ಬಹುಬೇಗನೆ ಬರಲಿದೆ ಎಂಬ ವಿಶ್ವಾಸ ನನಗಿದೆ. ನನಗೆ ಸರ್ವಶಕ್ತಿವಂತನಾದ ಭಗವಂತನ ನ್ಯಾಯದ ಮೇಲೆ ಭರವಸೆಯಿದೆ. ಅದಕ್ಕಾಗಿ ಜಾಮೀನು ನೀಡಲು ನಾನು ಸಿದ್ಧನಿಲ್ಲ."

ಅದರ ನಂತರ ನ್ಯಾಯಾಧೀಶರು ಅವರಿಗೆ ಒಂದು ವರ್ಷದ ಕಾಲ ಸಶ್ರಮ ಸೆರೆಮನೆ ವಾಸದ ಶಿಕ್ಷೆಯನ್ನು ವಿಧಿಸಿದರು.[5]

ಡಾ. ಹೆಡಗೇವಾರರು ನ್ಯಾಯಾಲಯದಿಂದ ಹೊರಬಂದಂತೆಯೇ ನಾಗಪುರ ಕಾಂಗ್ರೆಸ್‌ನ ಎಲ್ಲ ಮುಖಂಡರೂ ಅವರಿಗೆ ಹೂಹಾರ ಹಾಕಿ ಸ್ವಾಗತಿಸಿದರು. ಅಲ್ಲಿ ನೆರೆದಿದ್ದ ಸಾವಿರಾರು ಜನರು ಅವರ ಹೆಸರಿನಲ್ಲಿ ಜಯಘೋಷ ಹಾಕಿದರು. ಅವರ ಸ್ವಾಗತಕ್ಕಾಗಿ ನಗರ ಕಾಂಗ್ರೆಸ್‌ವತಿಯಿಂದ ಗೋಖಲೆ, ಡಾ. ಮುಂಜೆ, ವಿಶ್ವನಾಥರಾವ್ ಕೇಳ್ಕರ್, ದಾ.ಮೂ. ದೇಶಮುಖ, ಹರಕರೆ, ಸಮೀಉಲ್ಲಾಖಾನ್, ಅಲೇಕರ್, ವೈದ್ಯ, ಮಂಡಲೇಕರ್ ಮೊದಲಾದವರು ಬಂದಿದ್ದರು. ಅವರ ಚಿಕ್ಕಪ್ಪ ಮೋರೇಶ್ವರ ಹೆಡಗೇವಾರ್, ಅಣ್ಣ ಸೀತಾರಾಮ ಪಂತ್ ಸಹ ಇದ್ದರು. ಡಾ. ಹೆಡಗೇವಾರರು ಜನರನ್ನುದ್ದೇಶಿಸಿ ನಾಲ್ಕು ಮಾತುಗಳನ್ನಾಡಿ ಸೆರೆಮನೆಗೆ ತೆರಳಿದರು. ಅಂದಿನ ತಮ್ಮ ಪುಟ್ಟ ಭಾಷಣದಲ್ಲಿ

5. ಕೇಸರಿ 23 ಮತ್ತು 30 ಆಗಸ್ಟ್ 1921, ಪು.7.

ಆಗ ರಾಜಕೀಯ ವಲಯದಲ್ಲಿ ಬಲವಾಗಿ ಬೇರು ಬಿಟ್ಟಿದ್ದ ಎರಡು ವಿಧ ಭ್ರಾಂತಿಗಳ ಮೇಲೆ ಅವರು ವಾಕ್ಪ್ರಹಾರ ಮಾಡಿದರು. ಮೊದಲನೆಯದಾಗಿ ಸೆರೆಮನೆಗೆ ಹೋಗುವುದೇ ಸ್ವಾತಂತ್ರ್ಯ ಆಂದೋಳನದ ಒಂದು ಪರ್ಯಾಯ ಮಾರ್ಗವಾಗಿ ತಿಳಿಯಲಾಗುತ್ತಿದ್ದುದು. ಅವರು ತಮ್ಮ ಭಾಷಣದಲ್ಲಿ ಈ ಮುಂದಿನಂತೆ ಹೇಳಿದರು:

"ರಾಜದ್ರೋಹದ ಕುರಿತ ಈ ಮೊಕದ್ದಮೆಯಲ್ಲಿ ನಾನು ನನ್ನ ಚಿಂತನೆಯನ್ನು ಪ್ರತಿಪಾದಿಸಿದ್ದೇನೆ. ಇಂದು ನ್ಯಾಯಾಲಯದಲ್ಲಿ ಸ್ವಸಮರ್ಥನೆಗಾಗಿ ಮಂಡಿಸಲಾಗುವ ವಾದವನ್ನು ದೇಶದ್ರೋಹವೆಂಬುದಾಗಿ ತಿಳಿಯಲಾಗುತ್ತದೆ. ಆದರೆ ಸ್ವಸಮರ್ಥನೆಗೆ ಪ್ರಯತ್ನ ಮಾಡದೆ ತಿಗಣೆಯಂತೆ ಅಪ್ಪಚ್ಚಿಯಾಗುವುದು ಸರಿಯೆಂದು ನನಗನಿಸುವುದಿಲ್ಲ. ನಾವು ಸರ್ಕಾರದ ನೀಚತನವನ್ನು ಬಯಲಿಗೆಳೆಯಬೇಕಾದುದು ಅತ್ಯಗತ್ಯ. ಅದೂ ಒಂದು ರೀತಿಯಲ್ಲಿ ದೇಶಸೇವೆಯೇ. ತದ್ವಿರುದ್ಧವಾಗಿ, ಸ್ವಸಮರ್ಥನೆಗೆ ಪ್ರಯತ್ನ ಮಾಡದೇ ಇರುವುದು ಆತ್ಮಘಾತುಕವೇ ಆದೀತು. ಯಾರಿಗಾದರೂ ಇಂತಹ ಆತ್ಮಸಮರ್ಥನೆ ಸರಿಯಲ್ಲ ಅನಿಸಿದಲ್ಲಿ ಅವರು ಬೇಕಾದರೆ ಮಾಡದೆ ಇರಲಿ, ಆದರೆ ಅದನ್ನು ಮಾಡುವವರನ್ನು ಏನೋ ತಪ್ಪಿತಸ್ಥರೆಂಬಂತೆ ನೋಡುವುದು ಸರಿಯಲ್ಲ.

"ತಾಯಿನಾಡಿನ ರಕ್ಷಣೆಗಾಗಿ ಸೆರೆಮನೆಗೆ ಹೋಗುವುದಷ್ಟೇ ಏನು, ಸಂದರ್ಭ ಒದಗಿ ಬಂದಲ್ಲಿ ಕರಿನೀರಿನ ಶಿಕ್ಷೆ ಅಥವಾ ನೇಣುಗಂಬ ಏರಲು ಸಹ ನಾವು ತಯಾರಿರಬೇಕು. ಆದರೆ ಸೆರೆಮನೆಗೆ ಹೋಗುವುದೇ ಸ್ವರ್ಗ ಪ್ರವೇಶಮಾಡಿದಂತೆ, ಅದರಿಂದಲೇ ಸ್ವಾತಂತ್ರ್ಯ ಪ್ರಾಪ್ತಿಯಾಗುತ್ತದೆ ಎಂಬ ಭ್ರಮೆಯನ್ನೂ ನಾವು ಬಿಟ್ಟು ಬಿಡಬೇಕು. ಸೆರೆಮನೆಗೆ ಹೋಗದೆಯೇ, ಹೊರಗೆ ಉಳಿದುಕೊಂಡಾದರೂ ರಾಷ್ಟ್ರದ ಸೇವೆ ಮಾಡಲು ಹಲವಾರು ವಿಧಗಳಿವೆ. ನಾನು ಒಂದು ವರ್ಷ ಕಳೆದು ಮರಳಿ ಬರುವೆ. ಅಲ್ಲಿನ ತನಕ ದೇಶದ ಸ್ಥಿತಿಗತಿ ಬಗ್ಗೆ ನನಗೇನೂ ಗೊತ್ತಾಗದು. ಆದರೆ ಹಿಂದೂಸ್ಥಾನದ ಪೂರ್ಣ ಸ್ವಾತಂತ್ರ್ಯದ ಪ್ರಾಪ್ತಿಗಾಗಿ ಆಂದೋಳನ ಆರಂಭವಾಗುವುದೆಂದು ನಾನು ವಿಶ್ವಾಸವಿರಿಸಿರುವೆ. ಹಿಂದೂಸ್ಥಾನವನ್ನು ಇನ್ನೂ ದೀರ್ಘ ಕಾಲದವರೆಗೆ ವಿದೇಶಿಯರ ಆಳ್ವಿಕೆಯಲ್ಲಿ ಉಳಿಯಗೊಡುವ ಸಾಧ್ಯತೆಗಳಿಲ್ಲ. ಅದಿನ್ನು ಗುಲಾಮ ದೇಶವಾಗಿ ಉಳಿಯಲಾರದು. ನಿಮ್ಮೆಲ್ಲರಿಗೂ ಹೃತ್ಪೂರ್ವಕವಾಗಿ ಆಭಾರವನ್ನು ಸಲ್ಲಿಸಿ ಮುಂದಿನ ಒಂದು ವರ್ಷಕ್ಕಾಗಿ ನಿಮ್ಮ ಬಳಿ ಅನುಮತಿಯನ್ನು ಪಡೆಯುತ್ತಿರುವೆ."

ಡಾ. ಹೆಡಗೇವಾರರ ಬಂಧನದಿಂದ ಮಧ್ಯಪ್ರಾಂತದ ರಾಜಕೀಯ ವಾತಾವರಣದಲ್ಲಿ ಒಂದು ಅತ್ಯಂತ ಪ್ರೇರಣಾದಾಯಕ ಅಲೆಯ ಸಂಚಾರವಾಯಿತು. ಆಗಸ್ಟ್ 19ರಂದು ನಾಗಪುರದಲ್ಲಿ ಅವರನ್ನು ಸಮರ್ಥಿಸಿ ಒಂದು ವಿಶಾಲ ಸಭೆ ನಡೆಯಿತು. ಪ್ರಾಂತದ ಎಲ್ಲ ಪ್ರಮುಖ ಕಾಂಗ್ರೆಸ್ ನಾಯಕರು ಸೇರಿದ್ದ ಈ ಸಭೆಯ ಅಧ್ಯಕ್ಷತೆ ವಹಿಸಿದವರು ಗೋವಿಂದರಾವ್ ದೇಶಮುಖ್ ಅವರು. ಈ ಸಭೆಯಲ್ಲಿ ಡಾ. ಹೆಡಗೇವಾರರ ತ್ಯಾಗಮಯ ಜೀವನದ ಪ್ರಶಂಸೆಯನ್ನು ಮಾಡಿದ ಅಳೇಕರ್ ಅವರು 'ತರುಣರ ನಿಜವಾದ ನಾಯಕ' ಎಂದು ಅವರನ್ನು ಬಣ್ಣಿಸಿದರು. ನ್ಯಾಯಾಲಯದಲ್ಲಿ ಡಾ. ಹೆಡಗೇವಾರರು ನೀಡಿದ್ದ ಪೌರುಷಯುಕ್ತ ಹಾಗೂ ಉಚ್ಚಸ್ತರದ ವಾದ ಮತ್ತು ಭಾಷಣದ ಬಗ್ಗೆ 'ಕೇಸರಿ', 'ಮಹಾರಾಷ್ಟ್ರ', 'ಯಂಗ್ ಪೇಟ್ರಿಯಟ್' ಮತ್ತು 'ಉದಯ್' ಮೊದಲಾದ ಪ್ರಾಂತದ ಪ್ರಮುಖ ಪತ್ರಿಕೆಗಳು ಪ್ರಶಂಸೆಯಿಂದ ಕೂಡಿದ ಸಂಪಾದಕೀಯಗಳನ್ನು

# ಸತ್ಯನಿಷ್ಠ ಹೆಡಗೇವಾರ್

ಡಾಕ್ಟರ್ ಹೆಡಗೇವಾರರನ್ನು 1921ರ ಆಗಸ್ಟ್ 19ರಂದು ನಾಗಪುರದ ಅಜನಿ ಸೆರೆಮನೆಗೆ ಕರೆತರಲಾಯಿತು. ಅವರಿಗೆ ವಿಧಿಸಲಾಗಿದ್ದುದು ಒಂದು ವರ್ಷದ ಸಶ್ರಮ ಸೆರೆವಾಸದ ಶಿಕ್ಷೆ. ಆದರೆ ಅವರ ಉಗ್ರ ರಾಷ್ಟ್ರೀಯತೆಯ ವಾದದ ಕಾರಣಕ್ಕಾಗಿ, ಅವರ ಮೇಲೆ ಸೂಕ್ಷ್ಮವಾದ ಹದ್ದುಗಣ್ಣು ಇರಿಸಲು ಸಹ ಬ್ರಿಟಿಷ್ ಆಳರಸರಿಂದ ಸೆರೆಮನೆಯ ಅಧಿಕಾರಿಗೆ ವಿಶೇಷ ಸೂಚನೆ ಬಂದಿತ್ತು. ಅಜನಿ ಸೆರೆಮನೆಯಲ್ಲಿ ಡಾ. ಹೆಡಗೇವಾರರ ಜತೆಯಲ್ಲಿ ರಘುನಾಥ ರಾಮಚಂದ್ರ ಪಾಠಕ್, ಪಂಡಿತ ರಾಧಾಮೋಹನ ಗೋಕುಲಜೀ, ವೀರ ಹರಕರೆ ಮತ್ತು ಇನಾಮುಲ್ಲಾ ಖಾನ್ ಎಂಬ ಇನ್ನೂ ನಾಲ್ವರು ಹೋರಾಟಗಾರರು ಸಶ್ರಮ ಸೆರೆವಾಸದ ಶಿಕ್ಷೆಗೆ ಒಳಗಾಗಿ ಇದ್ದರು.

ಸೆರೆಮನೆ ಸೇರುವ ಸಂದರ್ಭದಲ್ಲಿ ತನ್ನನ್ನು ಬೀಳ್ಕೊಡಲು ಬಂದಿದ್ದ ಜನರ ಮುಂದೆ ಡಾ. ಹೆಡಗೇವಾರರು ಹೇಳಿದ ವಿಚಾರವೊಂದು ಅಂದಿನ ಬಹುತೇಕ ದೇಶಕ್ಕಾಗಿ ಹೋರಾಟ ಮಾಡುತ್ತಿರುವೆವು ಎಂದುಕೊಂಡಿರುವವರ ಮತ್ತು ರಾಜಕಾರಣಿಗಳ ಮನೋಧರ್ಮದ ಮೇಲೆ ಕಠಿಣವಾದ ಪ್ರಹಾರ ಎಸಗುವಂತಿತ್ತು. ತಮ್ಮ ಚಿಕ್ಕ ಭಾಷಣದಲ್ಲಿ ಅವರು ಸೆರೆಮನೆಗೆ ಹೋಗುವುದೇ ಒಂದು ಗೌರವದ ಹಾಗೂ ಸಮ್ಮಾನದ ಕಾರ್ಯ ಮತ್ತು ನೈಜ ರಾಷ್ಟ್ರೀಯ ಹೋರಾಟವೂ ಅದೇ ಎಂದು ತಿಳಿಯಲಾಗುತ್ತಿದ್ದ ಭ್ರಮೆಯನ್ನು ಅತ್ಯಂತ ವಿವೇಕಪೂರ್ವ ರೀತಿಯಲ್ಲಿ ಖಂಡಿಸಿದರು. ಅಗತ್ಯವೆನಿಸಿದಲ್ಲಿ ಸೆರೆಮನೆ ಸೇರಲು ಹಿಂಜರಿಯಬೇಕಾಗಿಲ್ಲ, ಆದರೆ ಸೆರೆಮನೆ ಸೇರದೆ, ಹೊರಗಿದ್ದುಕೊಂಡೇ ಹೋರಾಟ ನಡೆಸುವುದು ಸಾಮ್ರಾಜ್ಯವಾದದ ವಿರುದ್ಧದ ಹೋರಾಟದಲ್ಲಿ ಕಡಿಮೆ ಸ್ತರದ ದೇಶಭಕ್ತಿಯೆಂಬಂತೆ ತಿಳಿಯಬೇಕಾಗಿಲ್ಲ ಎಂಬುದು ಅವರ ಅಭಿಪ್ರಾಯವಾಗಿತ್ತು. ಸೆರೆಮನೆಯ ಹೊರಗಿದ್ದುಕೊಂಡು ಸಹ ಗಣನೀಯವಾದ ರೀತಿಯಲ್ಲಿ ಹೋರಾಡಲು ಸಾಧ್ಯವಿದೆ ಎಂದಿದ್ದರು ಅವರು, ಈ ಭಾಷಣದಲ್ಲಿ. ಅವರು ಹೇಳಿದ ಈ ಸಣ್ಣ, ಆದರೆ ಅರ್ಥಗರ್ಭಿತ ವಿಚಾರವು ಹೋರಾಟಗಾರರಲ್ಲಿ ಒಂದು ಬೌದ್ಧಿಕ ಚರ್ಚೆಯನ್ನೇ ಹುಟ್ಟುಹಾಕಿತು. ಕೆಲವರಿಗಂತೂ ಡಾ. ಹೆಡಗೇವಾರರ ಮಾತು ಮತ್ತು ಆಚರಣೆ ಇವುಗಳಲ್ಲೆ ಪರಸ್ಪರ ವಿರೋಧಾಭಾಸವಿರುವಂತೆ ಸಹ ಅನಿಸಿತು. ಅವರು ಜಾಮೀನು ಪಡೆದು, ಸೆರೆಮನೆಯ ಹೊರಗೆ ಉಳಿದೇ ಈ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬಹುದಾಗಿತ್ತಲ್ಲ ಎಂಬ ಪ್ರಶ್ನೆಯೂ ಆಗ ಎದ್ದು ನಿಂತಿತ್ತು. ಆದರೆ ಈ ಚರ್ಚೆಗೆ ನಾಗಪುರದ 'ಮಹಾರಾಷ್ಟ್ರ' ಸಾಪ್ತಾಹಿಕವು ಸಮರ್ಪಕವಾದ ಉತ್ತರವನ್ನು ನೀಡಿತು. ಅದರ ಸಂಪಾದಕ ಗೋಪಾಲರಾವ್ ಓಗ್ಲೆ ಸಾಮ್ರಾಜ್ಯವಾದದ ವಿರುದ್ಧದ ಹೋರಾಟದಲ್ಲಿ ಡಾ. ಹೆಡಗೇವಾರರ ರಾಜಿಯೇ ಇಲ್ಲದ ನೀತಿಯ ಬಗ್ಗೆ ಅವರನ್ನು ಅಭಿನಂದಿಸುತ್ತ ಹೀಗೆ ಬರೆದಿದ್ದರು :

"ಡಾ. ಹೆಡಗೇವಾರರು ತಾವು ಸ್ವತಃ ಪ್ರತಿಪಾದಿಸಿದ್ದ ಸಿದ್ಧಾಂತದ ವಿರುದ್ಧ ಉದ್ದೇಶಪೂರ್ವಕವಾಗಿಯೇ ಸೆರೆಮನೆ ಸೇರಿದ್ದಾರೆ. 'ಸೆರೆಮನೆ ಸೇರಲು ಹೆದರಿದರು' ಎಂಬ ಲೋಕಾಪವಾದ ತನ್ನ ಮೇಲೆ ಬರದಿರಲಿ ಎಂಬುದಕ್ಕಾಗಿ ಅವರಿಗೆ ಹಾಗೆ ಮಾಡುವುದು ಅಗತ್ಯವೆನಿಸಿತು. ಲೋಕಾಪವಾದವೆಂಬುದು ದುರ್ವಾಸ ಮುನಿಯ ಶಾಪದಂತೆ ಎಂತಹವರನ್ನೂ ತಟ್ಟಬಲ್ಲದು. ದೊಡ್ಡವರೆನಿಸಿಕೊಂಡವರನ್ನೂ ಅದು ಬಿಡುವುದಿಲ್ಲ. ಭಗವಾನ್ ರಾಮಚಂದ್ರನು ಸಹ ಸೀತಾದೇವಿಯು ಪರಿಶುದ್ಧಳು ಎಂದು ಸ್ವತಃ ತಿಳಿದಿದ್ದರೂ ಲೋಕಾಪವಾದದ ಭೀತಿಯ ಕಾರಣವೇ ಆಕೆಯನ್ನು ಕಾಡಿನಲ್ಲಿ ತ್ಯಜಿಸುವಂತೆ ಮಾಡಿತು. ಅದೇ ರೀತಿಯಲ್ಲಿ ಸೆರೆಮನೆ ಸೇರಿ ಹೊರ ಜಗತ್ತಿನ ವ್ಯವಹಾರಗಳಿಂದ ದೂರವಾಗಿ ಮತ್ತು ನಿಷ್ಕ್ರಿಯನಾಗಿ ಉಳಿಯುವುದಕ್ಕಿಂತ ಹೊರಗೆ ಇದ್ದುಕೊಂಡು ಸ್ವರಾಜ್ಯದ ಹೋರಾಟದಲ್ಲಿ ತಾನು ಹೆಚ್ಚು ಕ್ರಿಯಾಶೀಲವಾಗಿ ಇರಬಹುದು ಎಂಬುದು ಗೊತ್ತಿದ್ದರೂ, ಡಾಕ್ಟರ್‌ಜಿ ಲೋಕಾಪವಾದಕ್ಕೆ ತಾನು ಗುರಿಯಾಗದಿರೋಣ ಎಂಬುದಕ್ಕಾಗಿ ಸೆರೆಮನೆಗೆ ಹೋಗುವುದನ್ನೇ ಸಹರ್ಷ ಸ್ವೀಕರಿಸಿದರು. 'ಲೋಕಾಪವಾದೋ ಬಲವಾನ್ಮತೋ ಮೇ' ಎಂಬ ಭಗವಾನ್ ಶ್ರೀರಾಮನ ಮಾತನ್ನು ಯಾರೇ ಆದರೂ ತಮ್ಮ ಸಾರ್ವಜನಿಕ ಜೀವನದಲ್ಲಿ ಆಚರಣೆಗೆ ತರಲೇಬೇಕಾಗುತ್ತದೆ. ಈಗ ಸ್ವಇಚ್ಛೆಯಿಂದ ಕಾರಾಗೃಹ ಸೇರಿರುವ ಡಾ. ಹೆಡಗೇವಾರರು ಸಹ ಆ ಮೂಲಕ ಸ್ವಾರ್ಥತ್ಯಾಗದ ಶ್ರೇಷ್ಠ ಆದರ್ಶವನ್ನು ಎಲ್ಲರ ಮುಂದಿರಿಸಿದ್ದಾರೆ. ಮುಂದೆ ನಾಗಪುರದ ಹೊಸ ಪೀಳಿಗೆಗೆ ಅವರು ಇನ್ನಷ್ಟು ಉಜ್ವಲ ಆದರ್ಶವಾದದ ನಾಯಕತ್ವ ನೀಡುವಂತಹವರಾಗುತ್ತಾರೆ. ಆಗ ನಮ್ಮ ನಡುವೆ ಇದ್ದು ಶುದ್ಧ ರಾಷ್ಟ್ರೀಯ ಸ್ವಾತಂತ್ರ್ಯದ ಧ್ಯೇಯವನ್ನು ನಮಗೆಲ್ಲ ಅವರು ತಿಳಿಸುವವರಾಗುತ್ತಾರೆ. ಈ ಬಗ್ಗೆ ನಮಗಂತೂ ಪೂರಾ ವಿಶ್ವಾಸವಿದೆ".[1]

## ಸೆರೆಮನೆಯ ಬದುಕು

ಸೆರೆಮನೆಯಲ್ಲಿ ಡಾ. ಹೆಡಗೇವಾರರ ಜತೆಯಲ್ಲಿದ್ದವರು ಒಂದೇ ರೀತಿಯ ಸ್ವಭಾವದವರಾಗಿರಲಿಲ್ಲ. ವೃತ್ತಿಯಿಂದ ವಕೀಲರಾಗಿದ್ದ ಪಾಠಕ್ ಸ್ವಭಾವದಿಂದ ತೀರಾ ಸರಳ ವ್ಯಕ್ತಿ. ವೀರ ಹರಕರೆಯದು ಉಗ್ರ ರಾಷ್ಟ್ರವಾದಿ ವಿಚಾರ. ಪಂಡಿತ ಗೋಕುಲಜೀ ಅವರು ಕಡು ಆರ್ಯಸಮಾಜಿ ಮತ್ತು ಹಿಂದುತ್ವವನ್ನು ಉತ್ಕಟವಾಗಿ ಪ್ರತಿಪಾದಿಸುವವರು. ಇನಾಮುಲ್ಲಾ ಮುಸಲ್ಮಾನ ಮತ್ತು ಖಿಲಾಫತ್‌ವಾದಿ. ಸೆರೆಮನೆಯಲ್ಲಿ ಪಂಡಿತ ಗೋಕುಲಜೀ ಮತ್ತು ಇನಾಮುಲ್ಲಾ ಅವರ ನಡುವೆ ಧರ್ಮ ಸಂಬಂಧದ ವಾದವಿವಾದ ನಿತ್ಯದ ವಿದ್ಯಮಾನವಾಗಿರುತ್ತಿತ್ತು. ಕೆಲವೊಮ್ಮೆ ಅದು ತೀರಾ ವಿಕೋಪಕ್ಕೆ ತಿರುಗಿ ಪರಸ್ಪರ ಹೊಡೆದಾಟಗಳಾಗುತ್ತಿದ್ದುದೂ ಉಂಟು. ಅಂತಹ ಸಂದರ್ಭಗಳಲ್ಲಿ ಅವರಿಬ್ಬರ ನಡುವೆ ಪ್ರವೇಶಿಸಿ ಪರಿಸ್ಥಿತಿಯನ್ನು ತಿಳಿಗೊಳಿಸುತ್ತಿದ್ದವರು ಡಾ. ಹೆಡಗೇವಾರರು. ಇನಾಮುಲ್ಲಾಗೆ ಹಿಂದೂ ಧರ್ಮದ ಬಗ್ಗೆ ಸರಿಯಾದ ತಿಳಿವಳಿಕೆಯಿಲ್ಲ ಎಂಬುದು ಡಾ. ಹೆಡಗೇವಾರರಿಗೆ ಅರಿವಿತ್ತು. ಅದಕ್ಕಾಗಿ ಇನಾಮುಲ್ಲಾ ತನ್ನ ಮನದಲ್ಲಿ ಆಳವಾಗಿ ನೆಟ್ಟುಕೊಂಡಿದ್ದ ತಪ್ಪು ಕಲ್ಪನೆಗಳನ್ನು ದೂರಗೊಳಿಸುವ ಮತ್ತು ಹಿಂದೂಧರ್ಮದ ಕುರಿತು ಆತನ ಅಜ್ಞಾನವನ್ನು ಸರಿಪಡಿಸುವ ಪ್ರಯತ್ನವನ್ನು ಡಾ. ಹೆಡಗೇವಾರರು ಮಾಡುತ್ತಿದ್ದರು.

---

1 ಮಹಾರಾಷ್ಟ್ರ, 24 ಆಗಸ್ಟ್ 1921, ಸಂಪಾದಕೀಯ – [illegible]

ತಮ್ಮ ಸಹಬಂದಿಗಳಿಗೆ ಪ್ರತಿನಿತ್ಯ ಮಹಾಭಾರತದಿಂದ ಒಂದು ಕಥೆಯನ್ನು ಡಾ.ಹೆಡಗೇವಾರರು ಹೇಳುತ್ತಿದ್ದರು. ಅವರ ಮೇಲೆ ಸಶ್ರಮ ಸೆರೆವಾಸದ ಪ್ರಭಾವ ಏನೂ ಆದಂತೆ ಅನಿಸುತ್ತಿರಲಿಲ್ಲ. ಅವರು ಎಂದೂ ತಮ್ಮ ಮುಖದಲ್ಲಿ ಬೇಸರವನ್ನು ತೋರುತ್ತಿದ್ದವರೂ ಅಲ್ಲ. ಮಹಾಭಾರತದಲ್ಲಿನ ಪ್ರಸಂಗಗಳು, ಉದಾಹರಣೆಗಳು ಮತ್ತು ಪಾತ್ರಗಳ ಕುರಿತು ಅವರು ಹೇಳುತ್ತಿದ್ದ ಸರಳ ಹಾಗೂ ಮನಮುಟ್ಟುವ ಶೈಲಿಯಿಂದಾಗಿ ಮಿಕ್ಕವರಿಗೆ ಅವರೋರ್ವ ಸಾಧುವೇನೋ ಎಂಬಂತೆ ಅನಿಸುತ್ತಿತ್ತು. ಅವರ ಸರಳತೆ ಮತ್ತು ಸಾತ್ವಿಕ ಗುಣಗಳಿಂದ ಸೆರೆಮನೆಯ ಅಧಿಕಾರಿ ನೀಲಕಂಠರಾವ್ ಜಠಾರ್ ಅವರು ಸಹ ಪ್ರಭಾವಿತರಾಗಿದ್ದರು. 'ನೀವು ಓರ್ವ ರಾಜಕೀಯ ಕೈದಿಯಲ್ಲ. ಆದರೆ ಧಾರ್ಮಿಕ ಮನೋಭಾವದ ಮಹರ್ಷಿಯೇನೋ ಅನಿಸುತ್ತದೆ' ಎಂದು ಡಾ. ಹೆಡಗೇವಾರರ ಬಳಿ ಅವರೊಮ್ಮೊಮ್ಮೆ ಹೇಳುತ್ತಿದ್ದುದೂ ಉಂಟು.

ಜಠಾರ್ ಅವರು ಕ್ರೂರತೆಗೆ ಇನ್ನೊಂದು ಹೆಸರಾಗಿದ್ದವರು. ಆದರೆ ಒಂದು ವರ್ಷದ ಕಾಲ ಡಾ. ಹೆಡಗೇವಾರರ ಶುದ್ಧ ನಡವಳಿಕೆ ಮತ್ತು ಉತ್ಕಟ ದೇಶಭಕ್ತಿಯನ್ನು ಸಮೀಪದಿಂದ ನೋಡಿದ ಅವರು ಸ್ವತಃ ಅತ್ಯಂತ ಪ್ರಭಾವಿತರಾದರು. ಕ್ರಮೇಣ ಅವರಲ್ಲಿ ಸ್ವಾತಂತ್ರ್ಯ ಹೋರಾಟದ ಬಗ್ಗೆ ಸದ್ಭಾವನೆಯೂ ಬೆಳೆಯತೊಡಗಿತು. ಅವರು ಡಾ. ಹೆಡಗೇವಾರರ ಓರ್ವ ಅಭಿಮಾನಿಯೂ ಆದರು. ಸೆರೆಮನೆಯಿಂದ ಬಿಡುಗಡೆಯ ನಂತರವೂ ಅವರು ಡಾ. ಹೆಡಗೇವಾರರನ್ನು ಭೇಟಿಯಾಗಲು ಆಗಾಗ ಬರುತ್ತಿದ್ದರು. ಇತ್ತ ಇನಾಮುಲ್ಲಾ ಅವರ ಕಠಿಣತೆಯೂ ಡಾ. ಹೆಡಗೇವಾರರ ಪ್ರಭಾವದಿಂದ ಕ್ರಮೇಣ ಕಡಿಮೆಗೊಂಡಿತು. ಸಾಕಷ್ಟು ವಾದವಿವಾದ ನಡೆದ ನಂತರ ಅವರೂ ಮಹಾಭಾರತದ ಕತೆಯಲ್ಲಿ ಆಸಕ್ತಿ ಬೆಳೆಸಿಕೊಂಡರು.

## ಜಲಿಯನ್‌ವಾಲಾ ಬಾಗ್ ದಿನ

ಡಾ. ಹೆಡಗೇವಾರರ ಸಲಹೆಯಂತೆ 1922ರ ಏಪ್ರಿಲ್ 13ರಂದು ಸೆರೆಮನೆಯಲ್ಲಿ 'ಜಲಿಯನ್‌ವಾಲಾ ಬಾಗ್ ದಿನ'ವನ್ನು ಆಚರಿಸಲು ನಿರ್ಧರಿಸಲಾಯಿತು. ಇನಾಮುಲ್ಲಾ ಒಬ್ಬರನ್ನು ಹೊರತುಪಡಿಸಿ ಮಿಕ್ಕವರೆಲ್ಲರೂ ಅದರಲ್ಲಿ ಪಾಲ್ಗೊಂಡರು. ಸಶ್ರಮ ಸೆರೆವಾಸದ ಶಿಕ್ಷೆಗೊಳಗಾಗಿದ್ದ ಎಲ್ಲ ರಾಜಕೀಯ ಕೈದಿಗಳು ಅಂದು ಕೆಲಸ ಮಾಡಬಾರದಾಗಿ ನಿರ್ಧರಿಸಿದ್ದರು. ಕೊನೆಯಲ್ಲಿ ಇನಾಮುಲ್ಲಾ ಡಾ. ಹೆಡಗೇವಾರರು ಏನು ಮಾಡುತ್ತಾರೋ ಅದನ್ನೇ ತಾನೂ ಮಾಡುವೆ ಎಂದು ರಾಜಿಯಾದರು. ಹೀಗಾಗಿ ಅಂದು ಡಾ. ಹೆಡಗೇವಾರರ ಜತೆಯಲ್ಲಿ ಅವರೂ ಕೆಲಸ ಮಾಡಲಿಲ್ಲ. ಅಂದು ಸೆರೆಮನೆಯಲ್ಲಿ ಒಂದು ಸಣ್ಣ ಸಭೆಯೂ ನಡೆಯಿತು. ಅದರಲ್ಲಿ ಡಾ. ಹೆಡಗೇವಾರರಿಂದ ಭಾರತದ ರಾಷ್ಟ್ರೀಯತೆಯ ಕುರಿತು ಸಣ್ಣ ಭಾಷಣ ಕಲಾಪ ನಡೆಯಿತು. ಇದೆಲ್ಲವೂ ಸಾಧ್ಯವಾದುದು ಜಠಾರ್ ಅವರ ಮನದಲ್ಲಿ ಸ್ವಾತಂತ್ರ್ಯ ಹೋರಾಟದ ಕುರಿತು ಮೂಡಿದ್ದ ಸಹಾನುಭೂತಿಯ ಕಾರಣದಿಂದಾಗಿಯೇ. ನಿರ್ಧಾರಿತ ಎಲ್ಲ ಕಾರ್ಯಕ್ರಮಗಳೂ ಯಾವುದೇ ಅಡ್ಡಿ ಆತಂಕಗಳಿಲ್ಲದೆ ನಡೆದವು.

ಸಶ್ರಮ ಸೆರೆವಾಸದ ಶಿಕ್ಷೆಯ ನಿಟ್ಟಿನಲ್ಲಿ ಈ ಐವರಿಗೆ ನೀಡಲಾಗಿದ್ದ ಕೆಲಸ ಒಂದೇ ರೀತಿಯದಾಗಿರಲಿಲ್ಲ. ಪಾಠಕ್‌ಜೀ ಅವರಿಗೆ ನೀಡಲಾಗಿದ್ದುದು ಬೀಸುವ ಕಲ್ಲು ತಿರುಗಿಸುವ ಕೆಲಸ. ಡಾ. ಹೆಡಗೇವಾರರು ಮಾಡಬೇಕಾಗಿದ್ದುದು ಸಿದ್ಧಪಡಿಸಲಾದ ಕಾಗದವನ್ನು ತಿಕ್ಕಿ ಸ್ವಚ್ಛ ಹಾಗೂ ಹೊಳಪುಗೊಳಿಸುವ ಕೆಲಸ. ಈ ಕೆಲಸದಿಂದಾಗಿ ಡಾ. ಹೆಡಗೇವಾರರ

ಅವರನ್ನು ಸನ್ಮಾನಿಸಲಿಕ್ಕಾಗಿ ಪ್ರಾಂತೀಯ ಕಾಂಗ್ರೆಸ್ ನಾಯಕರ ಜತೆಯಲ್ಲಿ ಹಕೀಂ ಅಜಮಲ್ ಖಾನ್, ಪಂ. ಮೋತಿಲಾಲ್ ನೆಹರು, ರಾಜಗೋಪಾಲಾಚಾರಿ, ಡಾ.ಅನ್ಸಾರಿ ಮತ್ತು ವಿಠ್ಠಲಭಾಯ್ ಪಟೇಲ್ ಮೊದಲಾದ ರಾಷ್ಟ್ರೀಯ ಸ್ತರದ ಕಾಂಗ್ರೆಸ್ ನಾಯಕರು ಸಹ ಉಪಸ್ಥಿತರಿದ್ದರು.

ನಾಗಪುರದಲ್ಲಿ ಅಂದು ಸಹ ಧಾರಾಕಾರ ಮಳೆ. ಹೀಗಾಗಿ ಕೊನೆಯ ಕ್ಷಣದಲ್ಲಿ ಸಭಾಸ್ಥಾನವನ್ನು ವೆಂಕಟೇಶ ಥಿಯೇಟರ್‌ಗೆ ಬದಲಿಸಲಾಯಿತು. ಅಷ್ಟಾದರೂ ಸಮಯದ ಮೊದಲೇ ಥಿಯೇಟರ್ ಭರ್ತಿ ಆಗಿತ್ತು. ಜಾಗಸಾಲದೆ ಬಂದುದರಿಂದಾಗಿ ಕೊನೆಯಲ್ಲಿ ಥಿಯೇಟರ್‌ನ ಬಾಗಿಲು ಮುಚ್ಚಬೇಕಾದುದು ಅನಿವಾರ್ಯವಾಯಿತು. ಗುಂಪುಗುಂಪಾಗಿ ಬರುತ್ತಲೇ ಇದ್ದ ಜನರು ಕೊನೆಯಲ್ಲಿ ಥಿಯೇಟರ್ ಹೊರಗಡೆಯೇ ನಿಂತರು. ಅಂದು ಒಂದು ರೀತಿಯಲ್ಲಿ ಡಾ. ಹೆಡಗೇವಾರರ ಸನ್ಮಾನದ ಎರಡು ಸಭೆಗಳು ಏಕಕಾಲದಲ್ಲಿ ಸಮಾನಾಂತರವಾಗಿ – ಒಂದು ಥಿಯೇಟರ್ ಒಳಗೆ, ಇನ್ನೊಂದು ಹೊರಗಡೆ ತೆರೆದ ಬಯಲಲ್ಲಿ – ನಡೆದಂತಾಯಿತು. ಥಿಯೇಟರ್ ಒಳಗೆ ಮತ್ತು ಹೊರಗೆ ಕಿಕ್ಕಿರಿದು ಸೇರಿದ್ದ ಜನತೆ ಡಾ. ಹೆಡಗೇವಾರರ ಜನಪ್ರಿಯತೆ, ಜನರ ಮೇಲೆ ಅವರ ಮಾತು ಮತ್ತು ವ್ಯಕ್ತಿತ್ವದ ಮೋಡಿ ಇವುಗಳಿಗೆ ಸಾಕ್ಷಿ ಹೇಳುವಂತಿತ್ತು. ಓರ್ವ ಸಾಮಾನ್ಯ ಕಾರ್ಯಕರ್ತನ ಇಂತಹ ಜನಪ್ರಿಯತೆ ಕಂಡು ಅಲ್ಲಿಗೆ ಬಂದಿದ್ದ ರಾಷ್ಟ್ರೀಯ ನಾಯಕರೆಲ್ಲ ದಂಗಾದರು.

ಅಂದಿನ ಸಭೆಯ ಅಧ್ಯಕ್ಷತೆ ವಹಿಸಿದ್ದವರು ಡಾ. ಖರೆ ಅವರು. ಸಭೆಯಲ್ಲಿ ಮೊಟ್ಟಮೊದಲು ಡಾ. ಹೆಡಗೇವಾರರನ್ನು ಅಭಿನಂದಿಸುವ ಠರಾವನ್ನು ಸ್ವೀಕರಿಸಲಾಯಿತು. ಅದರ ನಂತರ ಅವರಿಗೆ ಹೂಮಾಲೆಗಳು ರಾಶಿರಾಶಿಯಾಗಿ ಅರ್ಪಿತವಾದವು. ಒಬ್ಬೊಬ್ಬ ಭಾಷಣಕಾರರೂ ಅವರ ನಿಃಸ್ವಾರ್ಥ ದೇಶಭಕ್ತಿಯ ಕುರಿತು ಉಲ್ಲೇಖಿಸಿದಾಗಲೆಲ್ಲ ಸಭಾಂಗಣದಲ್ಲಿ ಚಪ್ಪಾಳೆಗಳು ಗಡಚಿಕ್ಕುತಿದ್ದುವು. ಈ ಸಭೆಯಲ್ಲಿ ಡಾ. ಹೆಡಗೇವಾರರು ತನ್ನನ್ನು ಸನ್ಮಾನಿಸಿದುದಕ್ಕಾಗಿ – ಒಂದಿಷ್ಟು ವ್ಯಂಗ್ಯವನ್ನು ಸೇರಿಸಿಕೊಂಡೇ ಒಂದು ಚಿಕ್ಕ ಭಾಷಣವನ್ನು ಮಾಡಿದರು. "ಒಂದು ವರ್ಷದ ಕಾಲ ಸರ್ಕಾರದ ಅತಿಥಿಯಾಗಿ ಇದ್ದ ಕಾರಣದಿಂದಾಗಿ ನನ್ನ ಯೋಗ್ಯತೆಯಾಗಲಿ, ವ್ಯಕ್ತಿತ್ವವಾಗಲಿ ಹೆಚ್ಚಿಲ್ಲ. ಹಾಗೇನಾದರೂ ಆಗಿದ್ದಲ್ಲಿ ಅದರ ಶ್ರೇಯಸ್ಸು ಸರ್ಕಾರಕ್ಕೆ ಸೇರಿದುದು. ನಾವೆಲ್ಲ ಸೇರಿ ಸರ್ಕಾರಕ್ಕೆ ಆಗ ಅಭಿನಂದನೆ ಸಲ್ಲಿಸಬೇಕಾಗುತ್ತದೆ" – ಎಂದಿದ್ದರು ಅವರು.

ವಾಸ್ತವಿಕವಾಗಿ ಇಂತಹ ವ್ಯಕ್ತಿ ಕೇಂದ್ರಿತ ಸಮಾರಂಭ ಮತ್ತು ಮಾಲಾರ್ಪಣೆ ಇತ್ಯಾದಿಗಳನ್ನು ಅವರು ಸ್ವಭಾವತಃ ಒಪ್ಪುತ್ತಿದ್ದವರಲ್ಲ. ಅವರ ಮುಂದಿನ ಜೀವನದಲ್ಲೂ ಈ ವಿಶೇಷತೆ ಚೆನ್ನಾಗಿ ಗೋಚರಿಸುತ್ತದೆ. ತ್ಯಾಗ, ಬಲಿದಾನ ಮತ್ತು ದೇಶಭಕ್ತಿ ಇತ್ಯಾದಿ ಸಂಗತಿಗಳು ಪ್ರತಿಯೊಬ್ಬ ಭಾರತೀಯನಿಗೂ ಸ್ವಭಾವದಲ್ಲೆ ಇರಬೇಕು ಎನ್ನುವುದು ಅವರ ನಂಬಿಕೆಯಾಗಿತ್ತು.

ತಮ್ಮ ಭಾಷಣದ ಮುಂದಿನ ಭಾಗದಲ್ಲಿ ಅವರು ಪೂರ್ಣ ಸ್ವಾತಂತ್ರ್ಯದ ಬಗ್ಗೆ ಪ್ರತಿಪಾದಿಸಿದರು: "ರಾಷ್ಟ್ರದ ಮುಂದೆ ಸದಾ ಅತ್ಯಂತ ಶುದ್ಧ ಹಾಗೂ ಉನ್ನತವಾದ ಧ್ಯೇಯವನ್ನೇ ಇರಿಸಬೇಕು. ಸಂಪೂರ್ಣ ಸ್ವಾತಂತ್ರ್ಯಕ್ಕಿಂತ ಕಡಿಮೆಯಾದ ಇನ್ನಾವುದೇ ಗುರಿಯಿಂದ ನಮಗೆ ಲಾಭವಾಗದು. ಸ್ವಾತಂತ್ರ್ಯದ ಹೋರಾಟಕ್ಕಾಗಿ ನಾವು ಅನುಸರಿಸಬೇಕಾದ ಮಾರ್ಗ ಯಾವುದು ಎಂಬುದರ ಬಗ್ಗೆ, ನಮ್ಮ ಸ್ವರಾಜ್ಯಪ್ರಾಪ್ತಿಯ

ಹೋರಾಟದ ದೀರ್ಘ ಇತಿಹಾಸವನ್ನು ಚೆನ್ನಾಗಿ ಬಲ್ಲ ಇಂದಿನ ನಾಯಕರಿಗೆ ನಾವು ಏನಾದರೂ ತಿಳಿಸುವುದು ಉದ್ಧಟತನವಾದೀತು. ಈ ಹೋರಾಟದಲ್ಲಿ ತೊಡಗಿದ್ದಾಗ ಆಕಸ್ಮಾತ್ ಸಾವನ್ನು ಎದುರಿಸಬೇಕಾಗಿ ಬಂದಲ್ಲಿ ಅದಕ್ಕೆ ಹೆದರಿ ಹೋರಾಟದಿಂದ ಹಿಮ್ಮೆಟ್ಟಬೇಕಾಗಿಲ್ಲ ಎಂಬುದೇನೋ ನಿಜವೇ. ಹೋರಾಟದ ಪ್ರಸಂಗದಲ್ಲಿ ನಮ್ಮ ಗುರಿ ಮಾತ್ರ ಅತ್ಯಂತ ಉನ್ನತವಾದುದೇ ಆಗಿರಬೇಕು. ಅದೇ ಪ್ರಸಂಗದಲ್ಲಿ ನಮ್ಮ ಬುದ್ಧಿಯನ್ನು ಸಂತುಲಿತವಾಗಿರಿಸಬೇಕಾದುದೂ ಅಗತ್ಯವೇ"– ಇದು ಅವರ ಅಂದಿನ ಭಾಷಣದ ಸಾರವಾಗಿತ್ತು.[3]

ಈ ಭಾಷಣದಲ್ಲಿ ಅವರು ತಮ್ಮ ರಾಜಕೀಯ ಗುರಿ ಸಾಂಸದಿಕ ವ್ಯವಸ್ಥೆ ಎಂಬುದನ್ನು ತಿಳಿಸುವುದರೊಂದಿಗೆ 'ಸಾಮ್ರಾಜ್ಯಾಂತರ್ಗತ ಸ್ಥಾನಮಾನ'ದ ಬೇಡಿಕೆಯನ್ನು ಪರೋಕ್ಷವಾಗಿ ಟೀಕಿಸಿದರು.

ನಾಗಪುರದ ನಂತರ ವರ್ಧಾ, ಅರ್ವಿ, ಯವತಮಾಳ, ಅಕೋಲಾ, ಚಾಂದಾ, ಮಹೊಪಾ ಮತ್ತು ವಾಣಿ ಮೊದಲಾದ ಕಡೆಗಳಲ್ಲೂ ಅವರ ಸನ್ಮಾನ ಸಮಾರಂಭಗಳು ನಡೆದವು.

## ಬದಲಾದ ರಾಜಕೀಯ ಸ್ವರೂಪ

ಸೆರೆಮನೆಯಿಂದ ಬಿಡುಗಡೆಯಾಗಿ ಬಂದ ಮೇಲೆ ಡಾ. ಹೆಡಗೇವಾರರು ರಾಷ್ಟ್ರೀಯ ಹೋರಾಟದಲ್ಲಿ ಪುನಃ ಸಕ್ರಿಯರಾದರು. ಈ ಒಂದು ವರ್ಷದ ಕಾಲಾವಧಿಯಲ್ಲಿ ರಾಷ್ಟ್ರದ ರಾಜಕೀಯ ಸ್ವರೂಪ ಸಹ ಬದಲಾಗಿದ್ದುದು ಆಗ ಅವರ ಲಕ್ಷ್ಯಕ್ಕೆ ಬಂತು. 1922ರ ಫೆಬ್ರವರಿ 12ರಂದು ಅಸಹಕಾರ ಆಂದೋಳನವನ್ನು ಹಿಂತೆಗೆದುಕೊಳ್ಳಲಾಗಿತ್ತು. ಸಂಯುಕ್ತ ಪ್ರಾಂತದ (ಉ.ಪ್ರ) ಚೌರಿಚೌರಾ ಎಂಬಲ್ಲಿ ಆಂದೋಳನಕಾರಿಗಳಿಂದ ಕೆಲವು ಹಿಂಸಾಕೃತ್ಯಗಳು ನಡೆದಿದ್ದವು. ಅದರಿಂದಾಗಿ ನೊಂದ ಮಹಾತ್ಮಾಗಾಂಧೀಯವರು ಆಂದೋಳನವನ್ನು ಹಿಂತೆಗೆದುಕೊಂಡಿದ್ದರು. ಗಾಂಧೀಜಿಯವರ ಈ ಕ್ರಮದಿಂದಾಗಿ ಪ್ರತ್ಯಕ್ಷ ಹೋರಾಟದಲ್ಲಿ ತೊಡಗಿದ್ದವರಿಗೆ ಭಾರೀ ನಿರಾಶೆಯುಂಟಾಯಿತು.

ಇನ್ನೊಂದು ಕಡೆ ವಿಧಾನ ಪರಿಷತ್ತುಗಳ ಚುನಾವಣೆಯಲ್ಲಿ ಕಾಂಗ್ರೆಸ್ ಪಾಲ್ಗೊಳ್ಳಬೇಕೆಂಬ ವಿಚಾರದಲ್ಲಿ ಚರ್ಚೆ ಆರಂಭವಾಯಿತು. ಕಾಂಗ್ರೆಸ್‌ನಲ್ಲಿನ ಒಂದು ಗುಂಪು – ವಿಶೇಷವಾಗಿ ಚಿತ್ತರಂಜನದಾಸ ಮತ್ತು ಮೋತಿಲಾಲ್ ನೆಹರು ಅವರ ಅನುಯಾಯಿಗಳದು – ಗಾಂಧೀಜಿಯವರ ನೀತಿಗಳನ್ನು ಅವ್ಯಾವಹಾರಿಕವೆಂದು ತಿಳಿಯುತ್ತಿದ್ದವರು. ಈ ಗುಂಪಿನಲ್ಲಿದ್ದವರು ಕಾಂಗ್ರೆಸ್‌ನಲ್ಲಿದ್ದೂ ಸಹ, ವಿಧಾನ ಪರಿಷತ್ತುಗಳ ಚುನಾವಣೆಯಲ್ಲಿ ಸ್ಪರ್ಧಿಸಬೇಕೆಂಬ ವಿಚಾರದವರಾಗಿದ್ದರು. ಮಧ್ಯಪ್ರಾಂತದ ಮರಾಠಿ ಪ್ರದೇಶದಲ್ಲಂತೂ ದಾಸ–ನೆಹರೂ ಅವರ ವಿಚಾರಕ್ಕೆ ಒಲವು ಇದ್ದವರೇ ಹೆಚ್ಚು. ಮುಖ್ಯವಾಗಿ ಬಿ.ಜಿ. ಖಾಪರ್ಡೆ, ಡಾ.ಮುಂಜೆ, ವಾಮನರಾವ್ ಜೋಶಿ ಮೊದಲಾದವರು ವಿಧಾನ ಪರಿಷತ್ತುಗಳನ್ನು ಪ್ರವೇಶಿಸುವ ವಿಚಾರಕ್ಕೆ ಪರವಾಗಿದ್ದವರು. ಅವರಾರಿಗೂ ಮಹಾತ್ಮಾಗಾಂಧಿಯವರ ಚಿಂತನೆ ಮತ್ತು ಕಾರ್ಯಕ್ರಮ ಇವೆರಡರ ಬಗ್ಗೆಯೂ ಸಹಮತವಿರಲಿಲ್ಲ. ಹೀಗಾಗಿ ಸ್ವರಾಜ್ಯ ಪಕ್ಷ ಆರಂಭವಾದಾಗ ಅವರ ಮರಾಠಿ

3. ಮಹಾರಾಷ್ಟ್ರ, 19 ಜುಲೈ 1922, ಪು. 11

ಮಧ್ಯಪ್ರಾಂತದ ಘಟಕವೇ ದೇಶದಲ್ಲಿ ಆ ಪಕ್ಷದ ಅತಿ ದೊಡ್ಡ ಶಕ್ತಿಕೇಂದ್ರವಾಗಿ ಮೂಡಿ ಬಂತು.

ಡಾ. ಹೆಡಗೇವಾರರು ಸರ್ಕಾರದೊಂದಿಗೆ ಸಹಕಾರದ ವಿಚಾರದವರಾಗಿರಲಿಲ್ಲ. ಜನಾಂದೋಳನದ ಮಾರ್ಗ ಬಿಟ್ಟು, ವಿಧಾನ ಪರಿಷತ್ತುಗಳ ಮಾಧ್ಯಮದ ಮೂಲಕ ಸಾಮ್ರಾಜ್ಯವಾದದ ವಿರುದ್ಧದ ಹೋರಾಡುವುದು ಅವರಿಗೆ ಸುತರಾಂ ಒಪ್ಪಿಗೆಯಾಗಲಿಲ್ಲ. 'ಅವರು ಸಾಂಸದಿಕ ರಾಜಕಾರಣಿಯಾಗಿರದೆ ಓರ್ವ ಕ್ರಾಂತಿಕಾರಿಯಾಗಿದ್ದವರು. ಸಾಮ್ರಾಜ್ಯಾಂತರ್ಗತ ಸ್ಥಾನಮಾನದ ಹೆಸರಲ್ಲಿ ಪೂರ್ಣ ಸ್ವಾತಂತ್ರ್ಯದ ಗುರಿಯನ್ನು ಬಲಿಕೊಡಲು ಸಾಧ್ಯವಿಲ್ಲ ಎಂಬುದು ಅವರ ಸ್ಪಷ್ಟವಾದ ನಿಲುವಾಗಿತ್ತು" – ಏಕನಾಥ ರಾನಡೆಯವರು ಡಾ. ಹೆಡಗೇವಾರರ ಕುರಿತು ಬರೆದಿಟ್ಟಿರುವ ಅಭಿಪ್ರಾಯ ಇದು.[4]

ಆ ದಿನಗಳಲ್ಲಿ ಹತಾಶರಾಗಿದ್ದ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಉತ್ಸಾಹ ತುಂಬಲು ತನ್ನನ್ನು ಸನ್ಮಾನಿಸಲು ವಿವಿಧ ಕಡೆಗಳಲ್ಲಿ ಏರ್ಪಡಿಸಲಾಗುತ್ತಿದ್ದ ಸಮಾರಂಭಗಳನ್ನು ಡಾ. ಹೆಡಗೇವಾರರು ಬಳಸಿಕೊಂಡರು. ಅವರ ಎಲ್ಲ ಭಾಷಣಗಳಲ್ಲಿ ಆಗ ಇರುತ್ತಿದ್ದುದು ಒಂದೇ ಲಕ್ಷ್ಯ – ಪಕ್ಷದ ಸರ್ವಸಾಮಾನ್ಯ ಕಾರ್ಯಕರ್ತರನ್ನು ತಮ್ಮ ಮೇಲಿರುವ ನಾಯಕರ ಗುಂಪುಗಾರಿಕೆಯಿಂದ ದೂರವಿರಿಸಿ ಕೇವಲ ಪೂರ್ಣ ಸ್ವಾತಂತ್ರ್ಯದ ಸಲುವಾಗಿ ಅವರನ್ನು ಉತ್ಸಾಹಿತಗೊಳಿಸುವಂತಹುದಾಗಿತ್ತು. ಚುನಾವಣೆಗಳಲ್ಲಿ ಸ್ಪರ್ಧೆ ಎಂದರೆ ಅದು ನಿಜವಾದ ಗುರಿಯಿಂದ ದೂರ ಸರಿದಂತೆಯೇ ಎಂಬುದನ್ನು ದೃಢವಾಗಿ ನಂಬಿದ್ದವರು ಅವರು. ಹೀಗೆ ಖಚಿತವಾದ ರಾಷ್ಟ್ರೀಯ ದೃಷ್ಟಿಕೋನವನ್ನು ಹೊಂದಿದವರಾಗಿ, ಓರ್ವ ಜನಪ್ರಿಯ ನಾಯಕರೂ ಆಗಿ ಸಂಪೂರ್ಣ ಮಧ್ಯಪ್ರಾಂತದಲ್ಲೇ ಇದ್ದವರು ಪ್ರಾಯಶಃ ಅವರೊಬ್ಬರೇ. ಹಿರಿಯ ನಾಯಕರೆನ್ನಿಸಿಕೊಂಡ ಇನ್ನಿತರರೆಲ್ಲ ಗಾಂಧೀ ಮತ್ತು ದಾಸ-ನೆಹರೂ ಈ ಎರಡು ಗುಂಪುಗಳಲ್ಲಿ ಹಂಚಿಹೋಗಿದ್ದರು.

ಇಂತಹ ವಿದ್ಯಮಾನ ದೌರ್ಭಾಗ್ಯಕರ ಎಂದು ಡಾ. ಹೆಡಗೇವಾರರಿಗೆ ಅನಿಸಿತ್ತು. ಆದರೂ ಅವರು ಅತ್ಯಂತ ಸಂಯಮ ಹಾಗೂ ವಿವೇಚನೆ ಸಹಿತ ಅದನ್ನು ಎದುರಿಸಲು ನಿರ್ಧರಿಸಿದರು. ತಾವು ಸ್ವತಃ ಯಾವುದೇ ಗುಂಪಿನ ಜತೆ ಸೇರದೆ ಮತ್ತು ಯಾರನ್ನೂ ಟೀಕಿಸದೆಯೂ ಇರಲು ಅವರು ಎಚ್ಚರ ವಹಿಸಿದರು. ಆ ದಿನಗಳಲ್ಲಿ ರಾಜಕೀಯ ಸಮ್ಮೇಳನಗಳಲ್ಲಿ ಅಧ್ಯಕ್ಷತೆ ವಹಿಸಲು ಮಿಕ್ಕೆಲ್ಲರಿಗಿಂತ ಹೆಚ್ಚಾಗಿ ಆಹ್ವಾನಿಸಲಾಗುತ್ತಿದ್ದುದು ಅವರನ್ನೇ. ಬಾಲಾಘಾಟ್‌ನಲ್ಲಿ ಅವರ ಅಧ್ಯಕ್ಷತೆಯಲ್ಲಿ ಎರಡು ದಿನಗಳ ಕಾಂಗ್ರೆಸ್ ಸಮ್ಮೇಳನವೊಂದು ನಡೆಯಿತು. 1922 ಡಿಸೆಂಬರ್ 16ರಂದು ಆರಂಭವಾದ ಅದರಲ್ಲಿ ಮೊದಲ ದಿನವೇ ಅಂದಿನ ರಾಜಕೀಯ ಪರಿಸ್ಥಿತಿಯ ಕುರಿತು ಚರ್ಚೆ. ಡಾ. ಹೆಡಗೇವಾರರಲ್ಲದೆ ಸೋಮಾಜಿ ಪಾಟೀಲ್, ಮೋರೇಶ್ವರ ಹೆಡಗೇವಾರ್, ಠಾಕೂರ್ ನರಹರಿ ಸಿಂಹ, ಬಲವಂತರಾವ್ ದೀಕ್ಷಿತ್ ಹಾಗೂ ಪಂಡಿತ ನರ್ಮದಾ ಪ್ರಸಾದ್ ಮೊದಲಾದವರಿಂದ ಹಲವು ಮುಖಗಳಲ್ಲಿ ವಿಚಾರಗಳ ಮಂಡನೆಯಾದವು. ಡಾ. ಹೆಡಗೇವಾರರು ಅಲ್ಲಿಗೆ ಬಂದಿದ್ದ ಪ್ರತಿನಿಧಿಗಳಿಗೆ ಕೇವಲ 'ವ್ಯಕ್ತಿನಿಷ್ಠ'ರಾಗದೆ 'ತತ್ವನಿಷ್ಠ'ರಾಗಿರುವ ಅಗತ್ಯವನ್ನು ವಿಶೇಷವಾಗಿ ಒತ್ತಿ ಹೇಳಿದರು. ಅವರ ಪ್ರಭಾವ-ದಿಂದಾಗಿಯೇ ಮರುದಿನ "ಖಾದಿ, ಸ್ವದೇಶಿ, ಗ್ರಾಮ ಪಂಚಾಯತ್ ಮತ್ತು ಗೋರಕ್ಷೆ"

---

4. ಏಕನಾಥ ರಾನಡೆ, ಗ್ರೇಟೆಸ್ಟ್ ಹಿಂದೂ ಆಫ್ ದಿ ಏಜ್, ಆರ್ಗನೈಜರ್, 23 ಜುಲೈ 1950

ಇತ್ಯಾದಿಗಳ ಪ್ರಚಾರಕ್ಕೆ ಸಂಬಂಧಿಸಿದ ಠರಾವುಗಳು ಸ್ವೀಕರಿಸಲ್ಪಟ್ಟವು. ಇಲ್ಲಿ ಮೇಲೆ ಹೇಳಲಾಗಿರುವ ಪ್ರಾಂತ ಮಟ್ಟದ ಈ ನಾಯಕರೆಲ್ಲರೂ ಗಾಂಧಿವಾದಿ ಕಾರ್ಯಕ್ರಮಗಳನ್ನು ಸಾರ್ವಜನಿಕವಾಗಿ ತಿರಸ್ಕರಿಸಿದವರೇ. ಅಷ್ಟಾದರೂ ಈ ಸಮ್ಮೇಳನದಲ್ಲಿ ಗಾಂಧಿ ವಿಚಾರದ ಠರಾವುಗಳು ಸ್ವೀಕರಿಸಲ್ಪಟ್ಟುದು ಒಂದು ವಿಶೇಷವೇ.

ತದನಂತರ 'ವಿಧಾನ ಪರಿಷತ್ತನ್ನು ಪ್ರವೇಶಿಸುವ ವಿಚಾರವನ್ನು ಈ ಸಮ್ಮೇಳನವು ವಿರೋಧಿಸುತ್ತದೆ' ಎಂಬ ಠರಾವು ಚರ್ಚೆಗಾಗಿ ಮಂಡಿಸಲ್ಪಟ್ಟಿತು. ಈ ಹಂತದಲ್ಲಿ ಸಮ್ಮೇಳನದಲ್ಲಿ ಒಂದಿಷ್ಟು ಗಲಿಬಿಲಿ ಕಾಣಿಸಿತು. ಈ ಠರಾವನ್ನು ಅನುಮೋದಿಸಿ ಐದು ಭಾಷಣಗಳಾದವು. ಕೊನೆಯಲ್ಲಿ ತಿದ್ದುಪಡಿಗಳೊಂದಿಗೆ ಪರಿಷ್ಕರಿಸಿ ಇದೇ ಠರಾವನ್ನು ಪುನಃ ಮಂಡಿಸಲಾಯಿತು. ಈ ಸಂಬಂಧದಲ್ಲಿ ಸ್ವತಃ ಡಾ. ಹೆಡಗೇವಾರರು ಸಮ್ಮೇಳನದಲ್ಲಿ ಭಾಗವಹಿಸಿದ್ದ ಪ್ರತಿನಿಧಿಗಳಿಗೆ ತುಸು ವಿವರಿಸಿ ತಿಳಿಸಲು ಸಹ ಪ್ರಯತ್ನಿಸಿದರು. ಅಷ್ಟಾದರೂ ಪ್ರತಿನಿಧಿಗಳಲ್ಲಿ ಒಂದು ಗುಂಪು ತನ್ನ ಅಭಿಪ್ರಾಯಕ್ಕೆ ಬಲವಾಗಿ ಅಂಟಿಕೊಂಡು ನಿಂತಿತ್ತು. ಹೀಗಾಗಿ ಕೊನೆಯಲ್ಲಿ ಡಾ. ಹೆಡಗೇವಾರರು ಮತಗಳೆಣಿಕೆಗೆ ಅವಕಾಶ ನೀಡುವುದು ಅನಿವಾರ್ಯವಾಯಿತು. ಎಣಿಕೆಯಲ್ಲಿ ಪರಿಷತ್ತಿಗೆ ಪ್ರವೇಶದ ಪರವಾಗಿರುವವರದೇ ಮೇಲ್ಗೈಯಾಯಿತು.[5]

ಡಾ. ಹೆಡಗೇವಾರರು ತಮ್ಮ ಅಭಿಪ್ರಾಯವನ್ನು ಪ್ರತಿನಿಧಿಗಳ ಮೇಲೆ ಹೇರಲು ಇಷ್ಟಪಡಲಿಲ್ಲ. ಬದಲಾಗಿ ಪ್ರಜಾಸತ್ತಾತ್ಮಕವಾಗಿ ನಿರ್ಣಯವಾಗುವುದೇ ಸೂಕ್ತವೆಂದು ಭಾವಿಸಿದರು. ಈ ಕಾರಣದಿಂದಾಗಿ ಬಾಲಾಘಾಟ್‌ನ ಈ ಸಮ್ಮೇಳನವು ನಾಗಪುರ ಪ್ರಾಂತದಲ್ಲೆಲ್ಲ ಚರ್ಚೆಯ ವಸ್ತುವಾಯಿತು. ಅಲ್ಲಿ ಪ್ರಜಾಸತ್ತಾತ್ಮಕವಾಗಿ ನಿರ್ಧಾರವನ್ನು ಕೈಗೊಳ್ಳುವ ನಿಲುವು ವಹಿಸಿದ ಪರಿಣಾಮವಾಗಿ ಡಾ. ಹೆಡಗೇವಾರರು ಪ್ರಾಂತದ ರಾಜಕೀಯದಲ್ಲಿ ಎಲ್ಲರಿಗೂ ಬೇಕಾದ ನಾಯಕರಾಗಿ ಮೂಡಿ ಬಂದರು.

1922ರಲ್ಲಿ ಪ್ರಾಂತೀಯ ಕಾಂಗ್ರೆಸ್ಸಿನ ಸಹ ಕಾರ್ಯದರ್ಶಿತ್ವದ ಹೊಣೆ ಅವರ ಹೆಗಲಿಗೇರಿತು. ಅಲ್ಲಲ್ಲಿನ ಸ್ಥಾನೀಯ ಘಟಕಗಳಲ್ಲಿ ಸದಸ್ಯರನ್ನು ಹೆಚ್ಚಿಸುವ ಮತ್ತು ಚುನಾವಣೆಗಳನ್ನು ನಡೆಸುವುದೇ ಅವರಿಗೆ ವಹಿಸಲಾಗಿದ್ದ ಮುಖ್ಯ ಹೊಣೆ. ಪ್ರಾಂತೀಯ ಕಾಂಗ್ರೆಸ್ ಆಗ ಎರಡು ಗುಂಪುಗಳಾಗಿ ಒಡೆದ ಮನೆ. ಅಂತಹ ಸ್ಥಿತಿಯಲ್ಲಿ ಯಾವುದೇ ಗುಂಪಿಗೆ ಸೇರದ ಬಟ್ಟು ನಾಯಕರಾಗಿ ಉಳಿದಿದ್ದವರು ಅವರೊಬ್ಬರೇ. 1923ರ ಏಪ್ರಿಲ್ 13ರಂದು ನಾಗಪುರದಲ್ಲಿ 'ಝಂಡಾ ಸತ್ಯಾಗ್ರಹ' ಆಯೋಜಿತವಾಗಿದ್ದಾಗ, ಎರಡೂ ಗುಂಪುಗಳು ಪರಸ್ಪರ ಆರೋಪಗಳ ಅಭಿಯಾನದಲ್ಲಿ ತೊಡಗಿದ್ದವು. ತಿಲಕವಾದಿಗಳಾದ ತಮ್ಮನ್ನು ಅಲಕ್ಷಿಸಲಾಗಿದೆ ಎಂಬುದೇ ಮುಂಜೆ ಗುಂಪಿನವರು ಬೇರೆ ಗುಂಪಿನವರ ಮೇಲೆ ಹೊರಿಸಿದ್ದ ಆರೋಪ. ಒಟ್ಟಿನಲ್ಲಿ ಪಕ್ಷದ ಮೇಲೆ ಹಿಡಿತಕ್ಕಾಗಿ ಪರಸ್ಪರ ನಡೆಯುತ್ತಿದ್ದ ಜಗಳ ಅದು. ಆದರೆ ಡಾ. ಹೆಡಗೇವಾರರು ಸ್ವತಃ ಈ ಎರಡು ಗುಂಪುಗಳಿಂದ ಪ್ರತ್ಯೇಕವಾಗಿ ದೂರವೇ ಉಳಿದರು. ಸತ್ಯಾಗ್ರಹಕ್ಕಾಗಿ ಸ್ವಯಂಸೇವಕರನ್ನು ತರಬೇತುಗೊಳಿಸುವ ಕೆಲಸಕ್ಕೆ ಮಾತ್ರ ಅವರು ತಮ್ಮ ಹೆಚ್ಚಿನ ಲಕ್ಷ್ಯ ವಹಿಸಿದರು.

ರಾಜಕೀಯ ನಾಯಕರ ಗುಂಪುಗಾರಿಕೆಯಿಂದಾಗಿ ಪ್ರಾಂತದಲ್ಲಿ ಪೂರಾ ಅಲಕ್ಷ್ಯಕ್ಕೆ ಒಳಗಾಗಿದ್ದವರು ಅಸಹಕಾರ ಆಂದೋಳನದ ಸರ್ವ ಸಾಮಾನ್ಯ ಕಾರ್ಯಕರ್ತರು.

5. ಮಹಾರಾಷ್ಟ್ರ, 20 ಡಿಸೆಂಬರ್ 1922 ಪು.4

ಪರಿಣಾಮವಾಗಿ ಅವರೆಲ್ಲ ನಿಷ್ಕ್ರಿಯರಾಗಿ ತಂತಮ್ಮ ದೈನಂದಿನ ಕೆಲಸಗಳಲ್ಲಿ ನಿರತರಾದರು. ಡಾ. ಹೆಡಗೇವಾರರ ಮನಸ್ಸನ್ನು ಪೀಡಿಸುತ್ತಿದ್ದುದು ಇದು. ತಾನು ನಾಯಕನಂತಿರುವುದಕ್ಕಿಂತ ಸರ್ವಸಾಮಾನ್ಯ ಕಾರ್ಯಕರ್ತನಂತಿರುವುದು ಹೆಚ್ಚು ಉಪಯುಕ್ತ ಎಂದು ಆಗ ಅವರಿಗನಿಸಿತು. ಅದಕ್ಕಾಗಿ ರಾಷ್ಟ್ರೀಯ ಹೋರಾಟದಲ್ಲಿ ಭಾಗಿಯಾಗಿದ್ದ ಕಾರ್ಯಕರ್ತರನ್ನು ಪುನಃ ಕ್ರಿಯಾಶೀಲಗೊಳಿಸುವ ಪ್ರಯತ್ನಗಳಿಗೆ ಅವರು ಆದ್ಯತೆ ನೀಡಿದರು. ಈ ನಿಟ್ಟಿನಲ್ಲಿ ಸೇಟ್ ಜಮನಾಲಾಲ್ ಬಜಾಜ್, ನೀಲಕಂಠರಾವ್ ದೇಶಮುಖ್, ಎಂ.ಎಸ್. ಅಣೆ, ಬಾಬಾಸಾಹೇಬ ಖಾಪರ್ಡೆ ಮೊದಲಾದವರ ಸಹಕಾರದಿಂದ 'ವರ್ಧಾ ಪರಿಷತ್' ಎಂಬ ಹೊಸ ಸಂಘಟನೆಯನ್ನು ಅವರು ಹುಟ್ಟುಹಾಕಿದರು. 1923ರ ಅಕ್ಟೋಬರ್‌ನಲ್ಲಿ ನಾಗಪುರದಲ್ಲಿ ಅದರ ಸಮ್ಮೇಳನವೊಂದು ನಡೆಯಿತು. ಈ ಸಮ್ಮೇಳನದಲ್ಲಿ ಸ್ವೀಕರಿಸಲ್ಪಟ್ಟ ಒಂದು ಠರಾವಿನಲ್ಲಿ, ರಾಷ್ಟ್ರದ ರಾಜಕಾರಣವು ದಿಕ್ಕುಗೆಡುತ್ತಿದೆ ಎಂಬ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಾ, "ಈಗೀಗ ಜನರು ಭಾರತದ ಸ್ವಾತಂತ್ರ್ಯದ ಹೋರಾಟಕ್ಕಿಂತಲೂ ಇನ್ನಿತರ ವಿಷಯಗಳಿಗೆ ಹೆಚ್ಚಿನ ಮಹತ್ವ ನೀಡುತಿದ್ದಾರೆ" ಎಂದು ಹೇಳಲಾಗಿದೆ.

ಈ ಸಮ್ಮೇಳನದಲ್ಲಿ ಆರು ಠರಾವುಗಳು ಸ್ವೀಕೃತವಾದವು. ಅವುಗಳಲ್ಲಿ, ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ಅನುಭವಿಸಿದ್ದ ಹೋರಾಟಗಾರರನ್ನು ಸನ್ಮಾನಿಸುವ, ಅಂತಹವರಿಗೆ ಇನ್ನಿತರ ವಿಧ ನೆರವು ನೀಡುವ, ಪ್ರಾಂತ ಮಟ್ಟದಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಸಂಘಟನೆ ಕಟ್ಟುವ ಮತ್ತು ಇಂತಹ ಹಲವು ರೀತಿಯ ಕಾರ್ಯಗಳಿಗಾಗಿ ಸಾರ್ವಜನಿಕರಿಂದ ಹಣ ಸಂಗ್ರಹಿಸುವ ಬಗ್ಗೆ ಚಿಂತನೆ ಮತ್ತು ನಿರ್ಧಾರವಾಗಿರುವುದು ಬೆಳಕಿಗೆ ಬಂದಿದೆ.[6] ಸೆರೆಮನೆಯಿಂದ ಬಿಡುಗಡೆ ಹೊಂದಿ ಹೊರಬಂದ ಮೇಲೆ ಸುಮಾರು ಒಂದೂವರೆ ವರ್ಷಗಳ ಕಾಲ ಡಾ. ಹೆಡಗೇವಾರರು ತಮ್ಮೆಲ್ಲ ಲಕ್ಷ್ಯವನ್ನು ಇಂತಹ ಕೆಲಸಗಳಿಗಾಗಿಯೇ ಕೇಂದ್ರೀಕರಿಸಿದರು. ಮುಖ್ಯವಾಗಿ ಪ್ರಾಂತೀಯ ಕಾಂಗ್ರೆಸ್ಸನ್ನು ದೃಢಗೊಳಿಸುವ, ಪಕ್ಷದ ನಾಯಕರು ಮತ್ತು ಕಾರ್ಯಕರ್ತರಲ್ಲಿ ತಲೆಯೆತ್ತಿದ್ದ ಸಡಿಲತೆ ಮತ್ತು ಪರಸ್ಪರ ಕಚ್ಚಾಟವನ್ನು ನಿವಾರಿಸುವ ಹಾಗೂ ಪೂರಾ ದಿಕ್ಕೆಟ್ಟಿರುವ ರಾಜಕಾರಣವನ್ನು ಸರಿಪಡಿಸುವ ಸಲುವಾಗಿ ಅವರು ವಿಶೇಷವಾಗಿ ಪರಿಶ್ರಮಿಸಿದರು. ಆ ದಿನಗಳಲ್ಲಿ ತಾವು ಭಾಗವಹಿಸಿದ್ದ ಪ್ರತಿಯೊಂದು ಸಭೆಯಲ್ಲೂ ಅವರು ಆಗ್ರಹಪೂರ್ವಕ ಹೇಳುತ್ತಿದ್ದುದು ಈ ವಿಷಯಗಳನ್ನೇ.

ಡಾ. ಹೆಡಗೇವಾರರಿಗೆ ಪ್ರಾಂತದಾದ್ಯಂತ ಅಸಂಖ್ಯ ಅಭಿಮಾನಿಗಳಿದ್ದರು. ಆದರೆ ಸ್ವಂತದ ಸ್ಥಾನಮಾನ ಅಥವಾ ಸ್ವಪ್ರತಿಷ್ಠೆಯ ಮಹತ್ವಾಕಾಂಕ್ಷೆ ಇವುಗಳಿಂದ ಅವರು ದೂರವಿದ್ದರು. ತಮ್ಮ ಹೆಸರಲ್ಲಿ ಜಯಕಾರವನ್ನು ಸಹ ಅವರು ಎಂದೂ ಮೆಚ್ಚುತ್ತಿದ್ದವರಲ್ಲ. ಹೀಗಾಗಿ ಅವರ ಅನುಯಾಯಿಗಳೆಂದು ಯಾರನ್ನೂ ಗುರುತಿಸುವುದೂ ಸಾಧ್ಯವಿರಲಿಲ್ಲ. ಅವರ ಮಾತು ಮತ್ತು ಕೃತಿ ಇವೆರಡರಲ್ಲಿ ಪರಸ್ಪರ ವೈರುಧ್ಯವಿರದಿದ್ದುದು ಅವರ ಇನ್ನೊಂದು ವಿಶೇಷತೆಯಾಗಿತ್ತು. ಇವೆಲ್ಲ ಕಾರಣಗಳಿಂದಾಗಿ ಕಾಂಗ್ರೆಸ್‌ನ ಪ್ರಾಂತೀಯ ನಾಯಕರ ಪೈಕಿ ಅವರ ವ್ಯಕ್ತಿತ್ವ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿರುತ್ತಿದ್ದುದು ಸಹಜವೇ ಆಗಿತ್ತು. ಅಂದಿನ ರಾಜಕಾರಣದಲ್ಲಿ ನಿಷ್ಕ್ರಿಯತೆ ಬಂದುದಂತೂ ಅವರ ಮನಸ್ಸಿಗೆ

---

6. ಮಹಾರಾಷ್ಟ್ರ, 24 ಅಕ್ಟೋಬರ್ 1923, 'ವರ್ಧಾ ಸ್ವಯಂಸೇವಕ ಪರಿಷದ್'

ಅತೀವ ವೇದನೆಯ ಸಂಗತಿಯಾಗಿತ್ತು. ಆದರೆ ಅದಕ್ಕಿಂತಲೂ ಹೆಚ್ಚಾಗಿ ಅವರನ್ನು ಪೀಡಿಸುತ್ತಿದ್ದುದು ಕಾಂಗ್ರೆಸ್ ನಾಯಕರ ನಡುವಿನ ಗುಂಪುಗಾರಿಕೆ, ಪರಸ್ಪರ ಆರೋಪ-ಪ್ರತ್ಯಾರೋಪಗಳ ಪ್ರವೃತ್ತಿ, ಸಿದ್ಧಾಂತಗಳ ಹೆಸರಲ್ಲಿ ಸ್ವಪ್ರತಿಷ್ಠೆಯನ್ನು ಬೆಳೆಸಿಕೊಳ್ಳುವುದರಲ್ಲೆ ಹೆಚ್ಚಿನ ಆಸಕ್ತಿ, ಮತ್ತು ಒಟ್ಟಿನಲ್ಲಿ ಸಾರ್ವಜನಿಕ ಜೀವನದಲ್ಲಿ ಕಾಣಿಸತೊಡಗಿದ್ದ ಘೋರ ಅಧಃಪತನ.

ಇವೆಲ್ಲದರ ನಡುವೆಯೂ ತಮ್ಮ ಮನದಲ್ಲಿ ಆಶಾವಾದಿತನ ಮತ್ತು ಹೋರಾಟದ ಕೆಚ್ಚು ಇವುಗಳನ್ನು ಅವರು ಉಳಿಸಿಕೊಂಡಿದ್ದವರು. ಅತ್ಯಂತ ನಿರಾಶಾದಾಯಕ ಪರಿಸ್ಥಿತಿಯಲ್ಲೂ ಹೋರಾಡುವ ಮತ್ತು ಅದರ ನಡುವೆಯೂ ಇನ್ನಷ್ಟು ಶಕ್ತಿ ತುಂಬಿಕೊಂಡು ಎದ್ದು ನಿಲ್ಲುವ ಸ್ವಭಾವ ಅವರಿಗೆ ಮೈಗೂಡಿತ್ತು. ಹೋರಾಟದ ರಂಗ ಕ್ರಾಂತಿಕಾರಿ ಮಾರ್ಗವಿರಲಿ ಅಥವಾ ಅಹಿಂಸಾತ್ಮಕ ಸತ್ಯಾಗ್ರಹದ ರೀತಿಯದಾಗಿರಲಿ, ತಮ್ಮ ಸುತ್ತ ಪರಿಸ್ಥಿತಿ ಅದೆಷ್ಟೇ ನಿರಾಶಾದಾಯಕವಾಗಿ ರೂಪುಗೊಂಡರೂ, ಅದನ್ನೇ ಆಶಾಪ್ರದವನ್ನಾಗಿ ಪರಿವರ್ತಿಸುವಂತಹ ರೀತಿಯ ವ್ಯಕ್ತಿತ್ವವನ್ನು ಅವರು ಸ್ವಪ್ರಯತ್ನದಿಂದ ವಿಕಾಸಗೊಳಿಸಿಕೊಂಡಿದ್ದರು. ತಮ್ಮ ಸಮಕಾಲೀನ ಅನ್ಯ ದಿಗ್ಗಜಗಳಂತೆ ಅವರು ವಾದಗಳ ಚಕ್ರವ್ಯೂಹದಲ್ಲಿ ದಿಕ್ಕೆಡಲಿಲ್ಲ.

ಅಂದಿನ ರಾಜಕೀಯ ಸನ್ನಿವೇಶದಲ್ಲಿ ಅವರು ಸಾಮ್ರಾಜ್ಯವಾದದ ಪರವಾಗಿದ್ದವರ ವಿರುದ್ಧವಾಗಿದ್ದಂತೆಯೇ ವಿಧಾನ ಪರಿಷತ್ತನ್ನು ಪ್ರವೇಶಿಸಬೇಕೆನ್ನುತ್ತಿದ್ದ ರಾಜಿವಾದಿಗಳ ವಿರುದ್ಧವೂ ಜನರನ್ನು ಎಚ್ಚರಗೊಳಿಸುವ ಅಗತ್ಯವನ್ನು ಮನಗಂಡಿದ್ದರು. ಅದಕ್ಕಾಗಿ 1924ರಲ್ಲಿ ಅವರು ಪೂರ್ಣ ಸ್ವಾತಂತ್ರ್ಯದ ಧ್ಯೇಯದ ಪ್ರಚಾರದ ಸಲುವಾಗಿ ಪತ್ರಿಕಾ ಮಾಧ್ಯಮವನ್ನು ಅವಲಂಬಿಸಿದರು. ಕೆಲಕಾಲ ಅವರೋರ್ವ ಹೋರಾಟಗಾರ ಸಂಪಾದಕರಾಗಿಯೂ ಪಾತ್ರ ನಿರ್ವಹಿಸಿದರು. ಅಂತಹ ಕಾಲಾವಧಿ ಅತಿ ಚಿಕ್ಕದಾಗಿದ್ದುದೇನೋ ನಿಜವೇ. ಆದರೆ ಮಧ್ಯಪ್ರಾಂತದ ಇತಿಹಾಸದಲ್ಲಿ ಇದು ಸಹ ಒಂದು ಅತಿ ಮಹತ್ವದ ಸಂಗತಿಯೆಂಬುದನ್ನು ಅಲಕ್ಷಿಸಲಾಗದು. ಒಟ್ಟಿನಲ್ಲಿ ಅವರು ಅಪ್ಪಟ ರಾಷ್ಟ್ರೀಯತೆಯ ಪರವಾಗಿದ್ದವರು. ಅದಕ್ಕಾಗಿ ವಿವಿಧ ಸನ್ನಿವೇಶಗಳಲ್ಲಿ ಆಯಾ ಸಮಯದ ಹಾಗೂ ಪರಿಸ್ಥಿತಿಗನುಗುಣವಾಗಿ ಅವರು ಹಲವಾರು ವಿಧ ವೇದಿಕೆಗಳು ಮತ್ತು ಸಂಸ್ಥೆಗಳ ಮೂಲಕ ರಾಷ್ಟ್ರೀಯತೆಯ ಈ ಮಹಾನ್ ಧ್ಯೇಯವನ್ನು ಪ್ರತಿಪಾದಿಸುವ ಪ್ರಯತ್ನ ಮಾಡುತ್ತಿದ್ದರು. ಒಂದು ರೀತಿಯಲ್ಲಿ ಅವರು ನಮ್ಮ ರಾಷ್ಟ್ರಜೀವನದ ಸತ್ವದ ಶೋಧನೆಗಾಗಿ ಪ್ರಯೋಗ ನಡೆಸುತ್ತಿದ್ದರು ಎನ್ನುವುದೇ ಹೆಚ್ಚು ಸಮಂಜಸವಾದೀತೇನೋ. ಆದರೆ ತನ್ನ ಈ ಪ್ರಯೋಗದ ಬಗ್ಗೆ ಹೇಳುವ ಅಥವಾ ಬರೆದಿಡುವ ಮೂಲಕ ತಾನೋರ್ವ ಮಹಾಪುರುಷನಂತೆ ತೋರಿಸಿಕೊಳ್ಳುವ ಆತ್ಮವಂಚನೆಗೂ ಅವರು ಮುಂದಾಗಲಿಲ್ಲ. ಸ್ವಪ್ರತಿಷ್ಠೆಯ ಹಿನ್ನೆಲೆಯಲ್ಲಿ ರಾಷ್ಟ್ರದ ಮತ್ತು ಸಮಾಜದ ಮೇಲೆ ತನ್ನ ವ್ಯಕ್ತಿತ್ವವನ್ನು ಹೇರಲು ಅವರು ಇಚ್ಛಿಸಲಿಲ್ಲ. ಬದಲಾಗಿ ಓರ್ವ ಪತ್ರಿಕಾ ಸಂಪಾದಕರಾಗಿ ಭಾರತೀಯ ಸಮಾಜವನ್ನು ಮತ್ತು ನಮ್ಮ ಸ್ವಾತಂತ್ರ್ಯದ ಹೋರಾಟವನ್ನು ಪರಿಶುದ್ಧ ಹಾಗೂ ನಿರ್ದೋಷವಾಗಿರಿಸಲು ದರ್ಷವಿಡೀ ಪ್ರಯತ್ನಿಸಿದರು. ತನ್ನ ವಾಣಿ ಮತ್ತು ವ್ಯವಹಾರ ಇವೆರಡನ್ನೂ ಸಂಪೂರ್ಣ ರಾಷ್ಟ್ರದ ಹಿತಕ್ಕಾಗಿ ಮೀಸಲಾಗಿರಿಸಿ, ಜೊತೆಗೆ ಇದೇ ಕಾಲದಲ್ಲಿ ತನಗೆ ಸರಿಯೆನಿಸಿದುದನ್ನು ಸ್ಪಷ್ಟ ಹಾಗೂ ಯಥಾರ್ಥವಾಗಿ ಹೇಳುವುದಕ್ಕೂ ಹಿಂಜರಿಯದೆ, ಅಭಿನವ ಸಂತ ಕಬೀರನಂತೆ ತನ್ನ ಸಾಮಾಜಿಕ ಪಾತ್ರವನ್ನು ಅವರು ನಿರ್ವಹಿಸಿದರು.

# 'ಸ್ವಾತಂತ್ರ್ಯ' ಪತ್ರಿಕೆಯ ಸಂಪಾದಕತ್ವ

ನಾಗಪುರದಲ್ಲಿ 1924ರಲ್ಲಿ ಇದ್ದ ಪತ್ರಿಕೆಗಳ ಪೈಕಿ ಮರಾಠಿಯಲ್ಲಿ ಪ್ರಕಟವಾಗುತ್ತಿದ್ದ 'ಮಹಾರಾಷ್ಟ್ರ', ಹಿಂದಿಯ 'ಸಂಕಲ್ಪ' ಮತ್ತು 'ಪ್ರಾಣವೀರ' ಹಾಗೂ ಇಂಗ್ಲಿಷ್‌ನ 'ಹಿತವಾದ' ಇವೇ ಪ್ರಮುಖವಾದವು. ಇವುಗಳಲ್ಲಿ 'ಹಿತವಾದ' ಬಿಟ್ಟಲ್ಲಿ ಉಳಿದವು ಉಗ್ರ ರಾಷ್ಟ್ರೀಯತೆಯನ್ನು ಪ್ರತಿಪಾದಿಸುವಂತಹವು. ರಾಷ್ಟ್ರೀಯತೆಯ ಪರವಾಗಿ ಆ ಪ್ರಾಂತ್ಯದಲ್ಲಿ ಇದ್ದ ಅನ್ಯ ಪತ್ರಿಕೆಗಳೆಂದರೆ ಅಕೋಲದ 'ಪ್ರಜಾಪಕ್ಷ', ಅಮರಾವತಿಯ 'ಸ್ವಾತಂತ್ರ್ಯ ಹಿಂದೂಸ್ಥಾನ' ಮತ್ತು 'ಉದಯ' ಹಾಗೂ 'ಯಂಗ್ ಪೇಟ್ರಿಯಟ್' ಎಂಬ ಇನ್ನೊಂದು – ಇವು ಉಲ್ಲೇಖಿಸಬಹುದಾದಂತಹವು. 'ಮಹಾರಾಷ್ಟ್ರ' ಪತ್ರಿಕೆಯ ಸಂಪಾದಕ ಗೋಪಾಲರಾವ್ ಓಗ್ಲೆ ಅವರು ಡಾ. ಹೆಡಗೇವಾರರ ಮಿತ್ರರಷ್ಟೇ ಅಲ್ಲ ಪ್ರಶಂಸಕರೂ ಆಗಿದ್ದವರು. 1924ರಲ್ಲಿ ಅದರ ಪ್ರಸಾರ ಸಂಖ್ಯೆ 6000ದಷ್ಟಿತ್ತು. ಬ್ರಿಟಿಷರ ಪರವಾಗಿದ್ದ 'ಹಿತವಾದ'ದ ಪ್ರಸರಣ 1000ದ ಸಮೀಪವಿತ್ತು. ಅದಕ್ಕೆ ಸಂಪಾದಕರಾಗಿದ್ದವರು ಎಚ್.ಎನ್. ನಾವಸರಕರ್ ಅವರು. 'ಮಹಾರಾಷ್ಟ್ರ' ಮತ್ತು 'ಹಿತವಾದ' ಇವೆರಡೂ ಸಾಪ್ತಾಹಿಕವಾಗಿದ್ದು, 800ರಷ್ಟು ಪ್ರಸರಣವಿದ್ದ 'ಪ್ರಾಣವೀರ' ಪಾಕ್ಷಿಕವಾಗಿತ್ತು. 'ಸಂಕಲ್ಪ'ದ ಹಿಂದಿ ಮತ್ತು ಮರಾಠಿ ಎರಡೂ ಆವೃತ್ತಿಗಳ ಒಟ್ಟು ಸೇರಿ ಪ್ರಸರಣವಿದ್ದುದು 500 ರಷ್ಟು.

ಅಸಹಕಾರ ಆಂದೋಳನದ ನಂತರ ಅಂದಿನ ಪತ್ರಿಕೆಗಳೂ ಸಮಕಾಲೀನ ರಾಜಕಾರಣದ ಪ್ರಭಾವದಿಂದ ಹೊರತಾಗಿರಲಿಲ್ಲ. ಮಧ್ಯಪ್ರಾಂತದ ರಾಜಕಾರಣದ ರೀತಿಯಲ್ಲೆ ಹೆಚ್ಚಿನ ಪತ್ರಿಕೆಗಳ ಒಲವು ಸಹ ಸ್ವರಾಜ್ಯ ಪಕ್ಷ ಮತ್ತು ಸರ್ಕಾರದೊಂದಿಗೆ ಸಹಕಾರ ಇವುಗಳ ನಡುವೆ ಹಂಚಿಹೋಗಿತ್ತು. ಅವರವರ ವೈಯಕ್ತಿಕ ಹಾಗೂ ವೈಚಾರಿಕ ಪೂರ್ವಾಗ್ರಹಗಳಿಗನುಗುಣವಾಗಿ ಪತ್ರಿಕೆಗಳಿಂದಲೂ ಜನರಿಗೆ ಆಗ ಹೆಚ್ಚಾಗಿ ಲಭಿಸುತ್ತಿದ್ದುದು ಪಕ್ಷದ ಸಮಾಚಾರಗಳೇ. ಸ್ವಾತಂತ್ರ್ಯದ ಹೋರಾಟಕ್ಕೆ ಸಂಬಂಧಿಸಿದ ಗುರಿ ಆಗ ಪೂರಾ ಹಿನ್ನೆಲೆಗೆ ಸೇರಿತ್ತೆಂದರೂ ತಪ್ಪಲ್ಲ.

ರಾಷ್ಟ್ರೀಯ ವಿಚಾರದ ಪತ್ರಿಕೆಗಳ ಅಂದಿನ ಈ ಸ್ಥಿತಿಯ ಹಿನ್ನೆಲೆಯಲ್ಲಿ ನಾರಾಯಣರಾವ್ ವೈದ್ಯ, ಎ.ಬಿ.ಕೋಲ್ಹಟಕರ್ ಮತ್ತು ಡಾ. ಹೆಡಗೇವಾರರು 'ಸ್ವಾತಂತ್ರ್ಯ' ಎಂಬ ಹೆಸರಿನಲ್ಲಿ ಹೊಸ ದೈನಿಕವೊಂದನ್ನು ಆರಂಭಿಸಿದರು. ಮುಂದೆ ಕೆಲವೇ ದಿನಗಳಲ್ಲಿ ಕೋಲ್ಹಟಕರ್ ಅವರು 'ರಣಸಂಗ್ರಾಮ'ವೆಂಬ ತಮ್ಮದೇ ಪತ್ರಿಕೆಯೊಂದನ್ನು ಆರಂಭಿಸಿದ ಕಾರಣ, 'ಸ್ವಾತಂತ್ರ್ಯ'ದ ಸಂಪಾದಕತ್ವವನ್ನು ಡಾ. ಹೆಡಗೇವಾರರೇ ವಹಿಸಿಕೊಳ್ಳಬೇಕಾಯಿತು. ಕೋಲ್ಹಟಕರ್‌ರು 'ಸ್ವಾತಂತ್ರ್ಯ'ವನ್ನು ಬಿಡಲು ಒಂದು ಕಾರಣವಿದ್ದುದು ಅದರ ಸಂಪಾದಕೀಯ ನೀತಿಯ ಬಗ್ಗೆ ಅವರಿಗಿದ್ದ ಅಸಮ್ಮತಿಯದು. 'ಸ್ವಾತಂತ್ರ್ಯ'ಪತ್ರಿಕೆಯು ಕ್ರಾಂತಿಕಾರಿಗಳನ್ನು ನಿಂದಿಸುತ್ತಿರಲಿಲ್ಲ; ಬದಲಾಗಿ ಅವರ

ದೇಶಭಕ್ತಿಯನ್ನು ಮೆಚ್ಚಿ ಬರೆಯುತ್ತಿತ್ತು. ಕೋಲ್ಹಟಕರ್‌ರಿಗೆ ಒಟ್ಟಿಗೆಯಾಗದಿದ್ದುದು ಇದೇ. ಡಾ. ಹೆಡಗೇವಾರರು ರೂಪಿಸಿದ್ದ ಈ ಸಂಪಾದಕೀಯ ನೀತಿಗೆ ಸಂಪಾದಕ ಮಂಡಲಿಯಲ್ಲಿನ ಇತರರಿಂದ ಮತ್ತು ಸ್ವತಃ ವೈದ್ಯರಿಂದ ಸಂಪೂರ್ಣ ಸಮರ್ಥನೆಯಿತ್ತು. 'ಸ್ವಾತಂತ್ರ್ಯ'ದ ಮೊದಲ ಸಂಚಿಕೆ 1924ರ ಜನವರಿಯ ಎರಡನೇ ವಾರದಲ್ಲಿ ಹೊರಬಿತ್ತು. ಈ ಸಂಚಿಕೆಯಲ್ಲಿ ಅದರ ಗುರಿ ಘೋಷಿತವಾಗಿದ್ದುದು ಹೀಗೆ– "ಭಾರತದ ಸ್ವಾತಂತ್ರ್ಯ ಪ್ರಾಪ್ತಿಯ ರಾಜಕೀಯ ಉದ್ದೇಶದ ಸಾಧನೆಗಾಗಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಕಳೆದ ಮೂರು ವರ್ಷಗಳಿಂದಲೂ ನಿರಂತರವಾಗಿಯೇ ದುಡಿಯುತ್ತಾ ಇದೆ. ಅಷ್ಟಾದರೂ ಸ್ವಾತಂತ್ರ್ಯದ ಪ್ರಾಪ್ತಿ ಹೇಗೆ ಎಂಬುದು ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ. ಈಗ ಈ ದೈನಿಕವನ್ನು ಆರಂಭಿಸಲಾಗಿರುವುದು ಭಾರತದ ರಾಜಕೀಯ ಉದ್ದೇಶವನ್ನು ಯಾವುದೇ ರೀತಿಯಲ್ಲಿ ಆತ್ಮವಂಚನೆಗೆ ಅವಕಾಶವಿಲ್ಲದೆ ಸ್ಪಷ್ಟಗೊಳಿಸುವ ಸಲುವಾಗಿಯೇ. ಇದರ ಹೆಸರೇ 'ಸ್ವಾತಂತ್ರ್ಯ'. ಅದರಲ್ಲೇ ಉದ್ದೇಶವೂ ಸೂಚ್ಯವಾಗಿ ಇದೆ. ಸ್ವಾತಂತ್ರ್ಯದ ಪ್ರಾಪ್ತಿಗಾಗಿ ಈ ಹಿಂದಿನ ಬೇಡುವ ಕಾರ್ಯನೀತಿಯನ್ನು (Policy of Mendicancy) ಪೂರಾ ಬಿಟ್ಟು, ಅದಕ್ಕೆ ವ್ಯತಿರಿಕ್ತವಾಗಿ ಸ್ವಾವಲಂಬಿಯಾಗಿ ಅದನ್ನು ಗಿಟ್ಟಿಸಬೇಕಾದ ಕಾಲವೀಗ ಬಂದಿದೆ. ಭಾರತಮಾತೆಯ ಗೌರವ ಹಾಗೂ ಇಲ್ಲಿನ ಪರಂಪರೆಯನ್ನು ಲಕ್ಷ್ಯದಲ್ಲಿರಿಸಿ, ಜನರ ಮುಂದೆ ಒಂದು ಹಿರಿಯ ಆದರ್ಶವನ್ನು ಇರಿಸುವ ಸಲುವಾಗಿಯೇ ಈ ದೈನಿಕವು ಹೆಚ್ಚಾಗಿ ಪರಿಶ್ರಮಿಸಲಿದೆ." ಮುಂದೆ ಅದು ತನ್ನ ಕಾರ್ಯನೀತಿಯನ್ನು ಸ್ಪಷ್ಟೀಕರಿಸುತ್ತ, ಅಂದಿನ ದಿನಗಳ ರಾಜಕಾರಣವನ್ನು ಕಟುವಾಗಿ ಟೀಕಿಸಿದೆ. ವಿವಿಧ ಗುಂಪುಗಳ ನಡುವಿನ ಪರಸ್ಪರ ಕಿತ್ತಾಟ ಮತ್ತು ಸ್ವಾತಂತ್ರ್ಯದ ಬೇಡಿಕೆಗಿಂತ ಹೆಚ್ಚಾಗಿ ವೈಯಕ್ತಿಕ ಅಥವಾ ತಮ್ಮ ಗುಂಪಿನ ಸರ್ವಾಧಿಕಾರದ ಮನೋಭಾವ ಇತ್ಯಾದಿ ಸಂಗತಿಗಳೇ ಮಹತ್ವ ಪಡೆದಿದ್ದ ಅಂದಿನ ಹಿನ್ನೆಲೆಯಲ್ಲಿ "ನಮ್ಮ ಸ್ವಾತಂತ್ರ್ಯದ ಗುರಿ ಯಾವುದೊ ಒಂದು ಗುಂಪಿಗೆ ಮಾತ್ರ ಸೇರಿದುದಲ್ಲ. ಬದಲಾಗಿ ಅದು ಸಂಪೂರ್ಣ ರಾಷ್ಟ್ರಕ್ಕೆ ಸಂಬಂಧಿಸಿದುದು. ಅದಕ್ಕಾಗಿ ಎಲ್ಲ ಗುಂಪುಗಳು ತಮ್ಮ ಸ್ವಂತದ ಅಭಿಪ್ರಾಯಭೇದಗಳನ್ನು ಮರೆತು, ಈ ಸಮಾನವಾದ ಗುರಿಯ ಪ್ರಾಪ್ತಿಗಾಗಿ ಒಂದುಗೂಡಿ ಕೆಲಸ ಮಾಡುತ್ತಾರೆಂದು ನಿರೀಕ್ಷಿಸಲಾಗಿದೆ"[1] ಎಂದು ಬರೆಯಲಾಗಿತ್ತು.

'ಸ್ವಾತಂತ್ರ್ಯ'ವು ಪ್ರಕಟಗೊಳ್ಳಲಾರಂಭವಾಗುತ್ತಿದ್ದಂತೆಯೇ ಒಂದು ಜನಪ್ರಿಯ ಪತ್ರಿಕೆಯಾಯಿತು. ಡಾ. ಹೆಡಗೇವಾರರ ಸಂಪಾದಕತ್ವದಲ್ಲಿ ಇದ್ದ ಈ ಪತ್ರಿಕೆಯ ಪ್ರಸರಣ, ಸರ್ಕಾರಿ ದಾಖಲೆಗಳು ಹೇಳುವಂತೆ 1200ರಷ್ಟಿತ್ತು. ಇದರ ನೇರ ಪರಿಣಾಮ ಕಂಡಿದ್ದುದು 'ಮಹಾರಾಷ್ಟ್ರ' ಪತ್ರಿಕೆಯ ಮೇಲೆ. ಅದರ ಪ್ರಸರಣ 6000 ದಿಂದ 5000ಕ್ಕೆ ಜರ್ರನೆ ಇಳಿಯಿತು.

ಈ ಪತ್ರಿಕೆಯು ಯಾವುದೇ ವ್ಯಕ್ತಿಗೆ ಅಥವಾ ಗುಂಪಿಗೆ ಅಥವಾ ಒಂದು ಸಿದ್ಧಾಂತಕ್ಕೂ ಅಂಟಿಕೊಂಡಿರದೆ, ಕೇವಲ ಪೂರ್ಣ ಸ್ವಾತಂತ್ರ್ಯದ ಗುರಿಯನ್ನು ಮಾತ್ರ ಪ್ರತಿಪಾದಿಸುವಂತಹುದಾಗಿತ್ತು. ಎಲ್ಲೇ ಒಂದಿಷ್ಟು ದೋಷ ಕಂಡರೂ, ಅದರ ಕುರಿತು ಕಿಡಿಕಾರಲು ಡಾ. ಹೆಡಗೇವಾರರು ಸ್ವಲ್ಪವೂ ಹಿಂಜರಿಯುತ್ತಿರಲಿಲ್ಲ. 'ಸ್ವಾತಂತ್ರ್ಯ'ದ ಸಂಪಾದಕರಾಗಿ ಕಾರ್ಯ ನಿರ್ವಹಿಸುವಾಗ ಅವರು ತನ್ನವರು, ಪರಕೀಯರು

1. ಭಾರತೀಯ ಸಮಾಚಾರ ಪತ್ರಿಕೆಗಳ ಕುರಿತ ವರದಿ – ಮಧ್ಯಪ್ರಾಂತ ಮತ್ತು ಬಿರಾರ್, [illegible] ಮಾರ್ಚ್ 1924 ರಾಷ್ಟ್ರೀಯ ಅಭಿಲೇಖಾಗಾರ ನವದೆಹಲಿ.

ಎಂಬಂತೆ ಯೋಚಿಸುತ್ತಿದ್ದವರೂ ಅಲ್ಲ. ಬ್ರಿಟನ್‌ನ ಪ್ರಧಾನಿ ಭಾರತದ ಪ್ರವಾಸಕ್ಕಾಗಿ ಬಂದಾಗ ಮಧ್ಯಪ್ರಾಂತದ ವಿಧಾನ ಪರಿಷತ್ತಿನಲ್ಲಿ ಡಾ. ಮುಂಜೆಯವರು ಅವರ ಸ್ವಾಗತಕ್ಕಾಗಿ ಒಂದು ನಿರ್ಣಯವನ್ನು ಮಂಡಿಸಿದ್ದರು. ಈ ಸಂಬಂಧದಲ್ಲಿ 'ಸ್ವಾತಂತ್ರ್ಯ'ದ ಸಂಪಾದಕೀಯವು ಅವರ ಕ್ರಮವನ್ನು ಕಟುವಾಗಿ ಟೀಕಿಸಿತು. 1924ರ ಫೆಬ್ರವರಿ 22ರ ಸಂಚಿಕೆಯಲ್ಲಿ "ನಮ್ಮ ಅಭಿಪ್ರಾಯದಂತೆ ಇದು ಸ್ವರಾಜ್ಯ ಪಕ್ಷದ ಘೋಷಿತ ನೀತಿಗೆ ಪೂರಾ ವಿರುದ್ಧವಾದುದು" ಎಂಬ ಸಂಪಾದಕೀಯ ಟಿಪ್ಪಣಿಯನ್ನು ಬರೆಯಿತು.

ಮಧ್ಯಪ್ರಾಂತದ ಓರ್ವ ಪ್ರಮುಖ ನಾಯಕರಾಗಿದ್ದ ಸರ್ ಮೋರೊ ಪಂತ ಜೋಶಿ ಅವರು ಆ ಪ್ರಾಂತದ ಗೃಹಸದಸ್ಯ ಜವಾಬ್ದಾರಿಯನ್ನು ಸ್ವೀಕರಿಸಿದ್ದ ಸಂದರ್ಭದಲ್ಲಿ ಸೆಪ್ಟೆಂಬರ್ 27, 1924 ರಂದು ಡಾ. ಹೆಡಗೇವಾರರು 'ಸ್ವಾತಂತ್ರ್ಯ'ದ ಸಂಪಾದಕೀಯದಲ್ಲಿ "ಸನ್ಮಾನ್ಯ ಗೃಹಸದಸ್ಯರು ಶ್ರೀಯುತ (ಗೋಪಾಲಕೃಷ್ಣ) ಗೋಖಲೆಯವರನ್ನು ತನ್ನ ಗುರುವಾಗಿ ತಿಳಿಯುತ್ತಾರೆ ತಾನೇ? ಗೋಖಲೆ ಅವರು ತಮ್ಮ ವೈಯಕ್ತಿಕ ಸ್ವಾತಂತ್ರ್ಯವನ್ನು ಕಾಪಾಡುವ ನಿಟ್ಟಿನಲ್ಲಿ ವೈಸರಾಯ್ ಅವರ ಕಾರ್ಯಕಾರಿ ಪರಿಷತ್ತಿನ ಸದಸ್ಯತ್ವ ಮತ್ತು ನೈಟ್‌ಹುಡ್ ಸನ್ಮಾನವನ್ನು ಬೇಡವೆಂದುದು ನಮ್ಮ ಗೃಹಸದಸ್ಯರಿಗೆ ಗೊತ್ತಿದೆಯೇ? ಮತ್ತು ಶ್ರೀಯುತರು ಬ್ರಿಟಿಷ್ ರಾಜ್ಯದ ಪರಂಪರಾಗತ ಭಕ್ತರೂ ಸಮರ್ಥಕರೂ ಆಗಿರುವ ಪರಾಂಜಪೆಗಳು ಮತ್ತು ಶಾಸ್ತ್ರಿಗಳು ಇವರ ಶ್ರೇಣಿಗೆ ಬರುವುದಿಲ್ಲ ಎಂಬುದು ಸಹ ತಿಳಿದಿದೆಯೇ?" ಎಂದು ಬರೆದಿದ್ದರು. ಒಂದೆಡೆ, ತಾನು ಬದುಕಿನುದ್ದಕ್ಕೂ ಅತ್ಯಂತ ಗೌರವದಿಂದ ಕಾಣುತ್ತಿದ್ದ ಡಾ. ಮುಂಜೆ ಬ್ರಿಟಿಷ್ ಪ್ರಧಾನಿಗೆ ಅಭಿವಂದನೆ ಸಲ್ಲಿಸುತ್ತಿದ್ದರೆ, ಇನ್ನೊಂದೆಡೆ ರಾಷ್ಟ್ರೀಯವಾದಿ ಎನಿಸಿಕೊಂಡಿದ್ದ ಜೋಶಿ ಅವರು ಸಾಮ್ರಾಜ್ಯವಾದಿ ಆಡಳಿತದ ಒಂದು ಅಂಗವಾಗುವುದರಲ್ಲಿ ಸಾರ್ಥಕತೆಯನ್ನು ಕಾಣುವವರಾಗಿದ್ದರು. ಡಾ. ಹೆಡಗೇವಾರರ ಮನಸ್ಸನ್ನು ಪೀಡಿಸುತ್ತಿದ್ದುದು ಇಂತಹ ವಿದ್ಯಮಾನಗಳು. ಈ ಹಿನ್ನೆಲೆಯಲ್ಲಿ ಅವರ ಸಂಪಾದಕೀಯ ನೀತಿಯು ಪ್ರಾಂತ್ಯದ ರಾಜಕಾರಣಿಗಳಿಗೆ ಸರಿಹೊಂದುವ ಸಾಧ್ಯತೆಯಾದರೂ ಎಲ್ಲಿಂದ?

ಡಾ. ಹೆಡಗೇವಾರರು ಅಂದಿನ ಪತ್ರಿಕಾರಂಗದ ಇನ್ನೊಂದು ಪರಂಪರೆಯನ್ನು ಭಂಗಗೊಳಿಸಿದರು. ಅದು, ಕ್ರಾಂತಿಕಾರಿ ಆಂದೋಳನದ ಸಮರ್ಥಕರಾಗಿರುವ ಪತ್ರಿಕೆಗಳು ಗಾಂಧೀವಾದದ ಆದರ್ಶಗಳನ್ನು ಟೀಕಿಸುವಂತಹದು ಮತ್ತು ಅದರ ಪ್ರತಿಪಾದಕರಾಗಿರುವವರು ಕ್ರಾಂತಿಕಾರಿಗಳ ವಿರುದ್ಧ ಬರೆಯುವಂತಹದು – ಇವೆರಡೂ ರೀತಿಯ ಬರವಣಿಗೆಗಳು ಅವರಿಗೆ ಒಪ್ಪಿಗೆಯಾಗುತ್ತಿರಲಿಲ್ಲ. ಗೋಪಿನಾಥ ಸಹಾ ಎಂಬೋರ್ವ ಬಂಗಾಲಿ ತರುಣ ಅರ್ನೆಸ್ಟ್ ಡೇ ಎಂಬ ಬ್ರಿಟಿಷ್ ಅಧಿಕಾರಿಯೊಬ್ಬನನ್ನು ಕೊಂದಿದ್ದ. ಈ ಕೃತ್ಯವು, ಬ್ರಿಟಿಷರು ಈ ದೇಶದಲ್ಲಿ ನಡೆಸುತ್ತಿರುವ ದಬ್ಬಾಳಿಕೆ ಮತ್ತು ಶೋಷಣೆಗಳ ವಿರುದ್ಧ ಉಂಟಾದ ಆಕ್ರೋಶದ ಪರಿಣಾಮ ಎಂದು ಪ್ರತಿಪಾದಿಸಿ, ಸಹಾ ಮಾಡಿದ್ದುದು ಸರಿ ಎಂಬ ಸಂಪಾದಕೀಯವನ್ನು ಅವರು ಬರೆದರು. ತಮ್ಮ ಸಂಪಾದಕೀಯದಲ್ಲಿ "ಸತ್ತವನ ಕುಟುಂಬದ ಜತೆಯಲ್ಲಿ ಯುರೋಪಿಯನ್ ಅಸೋಸಿಯೇಶನ್ ತನ್ನ ಭಾವಪೂರ್ಣ ಸಹಾನುಭೂತಿಯನ್ನು ಪ್ರಕಟಿಸಿದೆ. ನಮಗರ್ಥವಾಗದ ಸಂಗತಿಯೆಂದರೆ ಇದೇ ಅಸೋಸಿಯೇಶನ್ ಜಲಿಯನ್‌ವಾಲಾ ಬಾಗ್‌ದಲ್ಲಿ ಅತ್ಯಂತ ದುಃಖದಾಯಕ ಘಟನೆಯೊಂದಾಯಿತಲ್ಲ, ಆಗ ಮಾರ್ಶಲ್ ಲಾ ಹೆಸರಲ್ಲಿ ಅಮಾಯಕ ಜನರ ನಿರ್ದಯ ಹತ್ಯೆಯಾದಾಗ, ದುಃಖಪಡಲಿಲ್ಲವೇಕೆ?

ವಾಸ್ತವಿಕವಾಗಿ ಇಂತಹ ಹತ್ಯೆಯಾಗುವುದು ದಬ್ಬಾಳಿಕೆಯ ಪರಿಣಾಮವಾಗಿಯೇ" ಎಂದು ಡಾ. ಹೆಡಗೇವಾರ್ ಬರೆದಿದ್ದರು.[2]

ಬಂಗಾಳದ 'ಯುಗಾಂತರ'ದಂತೆಯೇ ಮಧ್ಯಪ್ರಾಂತ್ಯದಲ್ಲಿ ಈ ಪತ್ರಿಕೆಯ ಕಟುಟೀಕೆಯ ಭಾಷೆಯಿಂದ ಸಾಮ್ರಾಜ್ಯವಾದಿ ಆಡಳಿತದ ನಿದ್ದೆಯೆಲ್ಲ ಹಾರಿಹೋಗಿತ್ತು. ಆದರೆ ಅಲ್ಲಿದ್ದಂತೆ ಇಲ್ಲಿ 'ಸ್ವಾತಂತ್ರ್ಯ'ಕ್ಕೆ ಬೆಂಬಲ ನೀಡುವಂತಹ ಗುಂಪು ಇರಲಿಲ್ಲ. ವ್ಯಕ್ತಿಗತ ರೂಪದಲ್ಲೂ ಇದಕ್ಕೆ ಬೆನ್ನೆಲೆಯ ಶಕ್ತಿಯಾಗಿ ಸಮರ್ಥಿಸುವವರಿರಲಿಲ್ಲ. ಈ ಪತ್ರಿಕೆ ಬದುಕಿದ್ದುದೇ ತನ್ನ ವ್ಯಾಪಕವಾದ ಪ್ರಸರಣದ ಬೆಂಬಲದಿಂದ. ಅದಕ್ಕೆ ತನ್ನ ನಿಲುವಿನ ಕಾರಣದಿಂದಾಗಿ ಸರ್ಕಾರಿ ಜಾಹಿರಾತಂತೂ ಸಿಗುತ್ತಿರಲಿಲ್ಲ. ಇತ್ತ ಸರ್ಕಾರದ ಭೀತಿಯಿಂದಾಗಿ ಖಾಸಗಿಯವರ ಜಾಹಿರಾತುಗಳೂ ನಿಂತುಹೋದವು. ಆಗ ಬೇಡಿಕೆಗನುಗುಣವಾಗಿ ಪತ್ರಿಕೆಯನ್ನು ಮುದ್ರಿಸಲು ಸಹ ಆರ್ಥಿಕ ಕಾರಣಗಳಿಂದಾಗಿ ಆಗದಂತಹ ಸ್ಥಿತಿಗೆ ಅದು ತಲುಪಿತು. ಕ್ರಮೇಣ 1200 ಕ್ಕಿಂತ ಹೆಚ್ಚು ಪ್ರತಿಗಳನ್ನು ಪ್ರಕಟಿಸಬಹುದಾದ ಸ್ಥಿತಿಯೂ ಅಸಾಧ್ಯವಾಯಿತು. ಹೀಗೆ ನಿರಂತರವಾಗಿ ಹೆಚ್ಚುತ್ತಿದ್ದ ನಷ್ಟದ ಕಾರಣದಿಂದಾಗಿ ಆರ್ಥಿಕ ಮುಗ್ಗಟ್ಟು ಉಂಟಾದಾಗ ಪತ್ರಿಕೆಯನ್ನು ಮೊದಲು ವಾರಕ್ಕೆ ಎರಡು ಬಾರಿ, ತದನಂತರ ಸಾಪ್ತಾಹಿಕವಾಗಿ ಹೊರತರಬಹುದಾದ ಸ್ಥಿತಿ ಏರ್ಪಟ್ಟಿತು. ನಂತರದ ದಿನಗಳಲ್ಲಿ ಪುಟಗಳ ಸಂಖ್ಯೆಯನ್ನು ಎಂಟರಿಂದ ನಾಲ್ಕಕ್ಕೆ ಇಳಿಸಲಾಯಿತು. ಕಟ್ಟಕಡೆಯಲ್ಲಿ 1925ರ ಜನವರಿ ಕೊನೆಯಲ್ಲಿ ಅದರ ಪ್ರಕಾಶನವನ್ನೇ ನಿಲ್ಲಿಸಬೇಕಾಯಿತು. ಡಾ.ಹೆಡಗೇವಾರರು ಸ್ವತಃ ಯಾವುದೇ ವೇತನ ಪಡೆಯದೆ ಕೆಲಸ ಮಾಡುತ್ತಿದ್ದರು. ಅಷ್ಟಾದರೂ 1924ರ ಕೊನೆಯ ಹೊತ್ತಿಗೆ ಪತ್ರಿಕೆಯ ಒಟ್ಟು ನಷ್ಟ ರೂ. 11,000ದಷ್ಟಾಗಿತ್ತು.

ಹೇಗಾದರೂ ಮಾಡಿ ಅಸ್ತಿತ್ವ ಉಳಿಸುವ ಸಲುವಾಗಿ ಜಾಹಿರಾತುಗಳನ್ನು ಪಡೆಯಬೇಕೆಂಬ ಉದ್ದೇಶ 'ಸ್ವಾತಂತ್ರ್ಯ'ಕ್ಕಿರಲಿಲ್ಲ ಹೀಗಾಗಿ ಅಂದಿನ ವಿವಿಧ ರಾಜಕೀಯ ಸ್ವಾರ್ಥಗಳ ಮತ್ತು ಇನ್ನಿತರ ಯಾವುದೇ ವಿಧ ಶಕ್ತಿಗಳ ಜತೆ ರಾಜಿಯಾಗಲಿಲ್ಲ. ಜಾಹಿರಾತುಗಳನ್ನು ದೊರಕದಿದ್ದರೂ ಸರಿ, ರಾಜಿಯಾಗುವುದಂತೂ ಬೇಡವೆಂದು ನಿರ್ಧರಿಸಲಾಯಿತು. ಅದರ ಪ್ರಕಟಣೆಗೆ ಹೇಗೆ ಮುಂದಾದರೋ ಹಾಗೆ ಕೊನೆಯಲ್ಲಿ ಅದರ ನಿಲ್ಲಿಸುವಿಕೆಗೂ ಡಾ. ಹೆಡಗೇವಾರರು ತಾವೇ ಹೊಣೆ ಹೊತ್ತರು. ಅವರ ಪಾಲಿಗೆ 'ಸ್ವಾತಂತ್ರ್ಯ'ವು ತಮ್ಮ ವೈಚಾರಿಕ ನಿಲುವನ್ನು ಜನರ ಬಳಿ ಒಯ್ಯುವ ಮಾಧ್ಯಮವಾಗಿತ್ತು. ಅಷ್ಟರಮಟ್ಟಿಗೆ ಅದು ತನ್ನ ಪಾತ್ರವನ್ನೂ ವಹಿಸಿತು. ಆದರೆ ಇನ್ನೊಂದು ಕಡೆ ಈ ನಿಲುವಿನಲ್ಲಿ ಸ್ವಲ್ಪವೂ ರಾಜಿಗೆ ಒಪ್ಪದ ಅವರ ಮನೋವೃತ್ತಿಯಿಂದಾಗಿ ಅದಕ್ಕೆ ಆರ್ಥಿಕ ನೆರವು ಲಭಿಸುವುದು ಕಠಿಣವಾಯಿತು. ಹೀಗಾಗಿ ಅದು ಕೊನೆಯಲ್ಲಿ ನಿಲ್ಲುವಂತಾದುದು ಸಹ ಸಹಜವೇ.

'ಸ್ವಾತಂತ್ರ್ಯ'ದ ಸಂಚಿಕೆಗಳಲ್ಲಿ ಕ್ರಾಂತಿಕಾರಿ ವಿಚಾರಗಳು ಮತ್ತು ಗಾಂಧಿವಾದ ಇವೆರಡಕ್ಕೂ ಸಮರ್ಥನೆ ಇರುತ್ತಿದ್ದುದೇ ಅದರ ವಿಶೇಷತೆ. ಅದಕ್ಕಾಗಿ ಭಾರತದ ಸ್ವಾತಂತ್ರ್ಯ ಹೋರಾಟದ ಪತ್ರಿಕೆಗಳಲ್ಲಿ ಅದು ಒಂದು ವಿಶೇಷ ರೀತಿಯ ಆದರ್ಶಕ್ಕೆ ಮುಡಿಪಾಗಿದ್ದ ವಿನೂತನ ಪ್ರಯೋಗವಾಯಿತು."

---

2. ಸ್ವಾತಂತ್ರ್ಯ 18 ಜನವರಿ 1924

ಹೆಡಗೇವಾರರು ಪತ್ರಿಕೆಯನ್ನು ತಮ್ಮ ಸ್ವಂತದ ಪ್ರಚಾರಕ್ಕಾಗಿ ಎಂದೂ ಬಳಸಲಿಲ್ಲ. ತಮ್ಮೆಲ್ಲ ಲೇಖನಗಳನ್ನು ಅವರು ಬರೆಯುತ್ತಿದ್ದುದು ಬಹುಪಾಲು ಹೆಸರಿಲ್ಲದೆಯೇ. ಒಮ್ಮೆ 'ಸ್ವಾತಂತ್ರ್ಯ'ದ ಮೇಲೆ ಮಾನಹಾನಿಯ ಮೊಕದ್ದಮೆಯೊಂದನ್ನು ಹೂಡಲಾಗಿತ್ತು. ಈ ಸಂದರ್ಭದಲ್ಲಿ ಚಾಂದಾದ ನ್ಯಾಯಾಧೀಶ ಚಮನ್‌ಲಾಲ್ ಅವರು ಲೇಖಕರ ಹೆಸರನ್ನು ಕೇಳಿದಾಗ ಡಾ. ಹೆಡಗೇವಾರರು ಅದನ್ನು ಹೇಳಲು ನಿರಾಕರಿಸಿದರು. ನ್ಯಾಯಾಧೀಶರು ಕನಿಷ್ಠ ಪಕ್ಷ ಲೇಖನದ ಹಸ್ತಲಿಖಿತ ಪ್ರತಿಯನ್ನಾದರೂ ನ್ಯಾಯಾಲಯದಲ್ಲಿ ಪ್ರಸ್ತುತಪಡಿಸುವಂತೆ ಕೇಳಿದಾಗ ಅದಕ್ಕೂ ಅವರು ಒಪ್ಪಲಿಲ್ಲ. 1938ರಲ್ಲಿ ಪುಣೆಯಲ್ಲಿ ನಡೆದ ಹಿಂದೂ ಯುವಕ ಪರಿಷತ್ತಿನ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಡಾ. ಹೆಡಗೇವಾರರು ಏನನ್ನು ಹೇಳಿದ್ದರೋ, ಅದನ್ನೇ ಅವರು ಹದಿನಾಲ್ಕು ವರ್ಷಗಳ ಮುನ್ನ 1924ರ ಮೇ 1ರಂದು 'ಸ್ವಾತಂತ್ರ್ಯ'ದ ಸಂಪಾದಕೀಯದಲ್ಲಿ ಬರೆದಿದ್ದರು. ಆಗ ಅವರು ಹೇಳಿದ್ದುದು: "ಈಗ ಭಾರತದ ಮುಂದಿರುವ ಗಂಭೀರವಾದ ಸವಾಲೆಂದರೆ ತಾನು ವಿದೇಶಿಯರ ದಾಸ್ಯದಿಂದ ಪಾರಾಗುವುದು ಹೇಗೆ ಎಂಬುದೇ. ನಮ್ಮ ವೈರಿಗಳಾಗಿರುವ ಇಂಗ್ಲಿಷರು ನಮಗಿಂತ ಹೆಚ್ಚು ಶಕ್ತಿಶಾಲಿಗಳು ಮತ್ತು ಚತುರರು ಎಂಬ ಹಿನ್ನೆಲೆಯಲ್ಲಿ ಈ ಸವಾಲು ಇನ್ನಷ್ಟು ಕಠಿಣ ಎನಿಸಬಹುದು. ಕೆಲವರು ಈ ವಾಸ್ತವಿಕತೆಯ ಕಾರಣಕ್ಕಾಗಿ ಪೌರ್ವಾತ್ಯ ದೇಶಗಳ ರಾಜಕಾರಣವು ಇಂತಹ ಪರಿಸ್ಥಿತಿಯನ್ನು ಎದುರಿಸುವಲ್ಲಿ ಅಸಮರ್ಥ ಎಂದು ಸಹ ಭಾವಿಸುತ್ತಾರೆ. ಆದರೆ ಚಂದ್ರಗುಪ್ತನಿಂದ ಆರಂಭಿಸಿ ಶಿವಾಜಿಯ ವರೆಗಿನ ಭಾರತದ ಇತಿಹಾಸದ ಅಧ್ಯಯನ ಮಾಡಿರುವವರಿಗೆ, ಬ್ರಿಟಿಷರ ಆಳ್ವಿಕೆಯನ್ನು ಸೋಲಿಸುವುದರಲ್ಲಿ ನಮ್ಮ ರಾಜಕಾರಣವು ಸಂಪೂರ್ಣ ಸಮರ್ಥವಿದೆ ಎಂಬುದು ಸ್ಪಷ್ಟವಾಗಿ ಗೋಚರಿಸದೆ ಇರದು." ಹಿಂದೂ ಯುವಕ ಪರಿಷತ್ತಿನಲ್ಲಿ ತಮ್ಮ ಸುವಿಖ್ಯಾತ ಭಾಷಣದಲ್ಲಿ ಅವರು ಹೇಳಿದ್ದುದು ಇದನ್ನೇ.

ಭಾರತದ ಸ್ವಾತಂತ್ರ್ಯ ಹೋರಾಟದ ದಿನಗಳಲ್ಲಿನ ಪತ್ರಿಕೆಗಳ ಪೈಕಿ 'ಸ್ವಾತಂತ್ರ್ಯ'ದ ಪಾತ್ರ ಅತ್ಯುನ್ನತ ಶ್ರೇಣಿಯದು. ಅತ್ಯಲ್ಪ ಸಮಯದಲ್ಲಿ ಅದು ಸಾಧಿಸಿದ್ದ ಜನಜಾಗೃತಿ ಮತ್ತು ಬೆಳೆಸಿಕೊಂಡಿದ್ದ ವ್ಯಾಪಕವಾದ ಪ್ರಭಾವವಂತೂ ವಿಶೇಷವೇ. ಜತೆಯಲ್ಲಿ ರಾಜಿಗೆ ಸ್ವಲ್ಪವೂ ಒಪ್ಪದ ಮತ್ತು ವಸಾಹತುಶಾಹಿಯ ಕಡು ವಿರೋಧಕ್ಕಾಗಿ ಅಂತಿಮವಾಗಿ ನಿಂತುಹೋಗುವ ಮೂಲಕವೂ ಅದು ತನ್ನ ಆದರ್ಶಕ್ಕೆ ಬದ್ಧವಾಗಿ ಶುದ್ಧ ರಾಷ್ಟ್ರೀಯತೆಯನ್ನೇ ಪ್ರತಿಪಾದಿಸಿತು. ಡಾ. ಹೆಡಗೇವಾರರು ಪತ್ರಿಕೋದ್ಯಮವನ್ನು ತನ್ನ ಜೀವನದ ಗುರಿಯಾದ ರಾಷ್ಟ್ರಹಿತ ಸಾಧನೆಗಾಗಿ, ಸ್ವಾತಂತ್ರ್ಯದ ಹೋರಾಟಕ್ಕಾಗಿ ಮತ್ತು ರಾಜಕಾರಣದಲ್ಲಿ ವಿಚಾರ ಮತ್ತು ಮೌಲ್ಯ ಇವುಗಳ ಪ್ರತಿಷ್ಠಾಪನೆಗಾಗಿ ಒಂದು ಸಾಧನವಾಗಿ ಮಾಡಿಕೊಂಡಿದ್ದರು. ಅದಕ್ಕಾಗಿ ಯಾವ ಕೈಗಳಿಂದ ಉತ್ಸಾಹ ಪೂರ್ವಕವಾಗಿ ಅವರು ಪತ್ರಿಕೆಯೊಂದನ್ನು ಆರಂಭಿಸಿದ್ದರೋ, ಮುಂದೆ ಅದನ್ನು ನಿಲ್ಲಿಸಬೇಕಾಗಿ ಬಂದಾಗಲೂ ತನ್ನ ಅದೇ ಕೈಗಳನ್ನು ಬಳಸಿಕೊಳ್ಳಲು ಸಹ ಅವರು ಸ್ವಲ್ಪವೂ ಕಸಿವಿಸಿಗೊಳ್ಳಲಿಲ್ಲ.

# ರಾಷ್ಟ್ರೀಯ ಸ್ವಯಂಸೇವಕ ಸಂಘ

'ವಂದೇಮಾತರಂ' ಆಂದೋಲನದಿಂದ ಆರಂಭಿಸಿ ಕ್ರಾಂತಿಕಾರಿ ಚಟುವಟಿಕೆಗಳು, ಗಾಂಧೀವಾದಿ ಮಾರ್ಗ ಹಾಗೂ ಮುಂದೆ 'ಸ್ವಾತಂತ್ರ್ಯ' ಪತ್ರಿಕೆಯ ಸಂಪಾದಕತ್ವ ಇವೆಲ್ಲವುಗಳಿಂದ ಡಾ. ಹೆಡಗೇವಾರರ ಚಿಂತನಶೀಲ ಮನಸ್ಸು ಮತ್ತು ವಿಚಾರ ಸಾಮರ್ಥ್ಯ ಇವೆರಡೂ ಪರಿಪಕ್ವಗೊಂಡವು. ಸಾಮ್ರಾಜ್ಯವಾದದ ವಿರುದ್ಧದ ಆಂದೋಲನದಲ್ಲಂತೂ ಅವರೊಬ್ಬ ಕಡುನಿಷ್ಠ ಸಿಪಾಯಿಯೇ ಆದರು. ಇದೀಗ ದೇಶದ ರಾಜಕೀಯ ವಿದ್ಯಮಾನಗಳು ಮತ್ತು ಸಾಮಾಜಿಕ ಪರಿಸ್ಥಿತಿಯ ಅರಿವಿನ ಜತೆ ವಿಸ್ತೃತ ಆಗುಹೋಗುಗಳ ಹಿನ್ನೆಲೆಯಲ್ಲಿ ನಮ್ಮ ಸೋಲಿನ ಕಾರಣಗಳ ಬಗ್ಗೆ ಅವರ ಮನದಲ್ಲಿ ವಿಚಾರಗಳ ಸತತ ಮಥನ ನಡೆಯಲಾರಂಭಿಸಿತು. ವೈದ್ಯಕೀಯ ಪದವಿ ಗಳಿಸಿದ್ದರೂ ಅವರು ಆ ವೃತ್ತಿಯನ್ನು ಹಿಡಿಯಲಿಲ್ಲ. ಕುಟುಂಬದ ಬಡತನ ಕಣ್ಣಿಗೆ ರಾಚುತ್ತಿದ್ದರೂ ಹಣಸಂಪಾದನೆಯ ಕೆಲಸದಲ್ಲಿ ಅವರು ತಮ್ಮನ್ನು ತೊಡಗಿಸಿಕೊಳ್ಳಲಿಲ್ಲ. ಹಲವು ವಿಧದ ಒತ್ತಡ ಎದುರಿಸಬೇಕಾಗಿ ಬಂದರೂ ವಿವಾಹದ ಆಗ್ರಹಕ್ಕೆ ಮಣಿಯಲಿಲ್ಲ. ಇನ್ನೊಂದು ಕಡೆ ಹಿಂದೂ ಮಹಾಸಭಾದ ಮತ್ತು ತಿಲಕರ ಅನುಯಾಯಿಗಳ ವಿಶೇಷ ಒಲವು ತನ್ನ ಮೇಲಿದ್ದರೂ ಅವರ ವಿಚಾರಗಳಿಗೆ ತನ್ನ ಸ್ವಂತದ ಚಿಂತನೆ ಮತ್ತು ವಿವೇಕಗಳನ್ನು ಅವರು ಒತ್ತೆಯಾಗಿಡಲಿಲ್ಲ. ತಮ್ಮ ಸ್ವಭಾವದಿಂದಲೇ ಅವರು ಸ್ವತಂತ್ರ ಮನೋಭಾವದವರಾಗಿದ್ದರು. ತಾವು ಇನ್ನೂ ಬಾಲಕರಾಗಿದ್ದಾಗಲೇ ಭೋಂಸ್ಲೆ ರಾಜರ ಕೋಟೆಯ ಮೇಲೆ ಹಾರಾಡುತ್ತಿದ್ದ 'ಯೂನಿಯನ್ ಜಾಕ್' ಕಂಡಾಗ 'ನಾವು ಗುಲಾಮರಾದೆವೇಕೆ?' ಎಂಬ ಯಾವ ಪ್ರಶ್ನೆ ಅವರ ಮನವನ್ನು ಕಾಡುತ್ತಿತ್ತೋ, ಅದು ಮುಂದೆಯೂ ಅವರನ್ನು ಸದಾ ಕಾಲವೂ ಪೀಡಿಸುತ್ತಿತ್ತು. ತಮ್ಮ ಸಂಪೂರ್ಣ ಬದುಕನ್ನು ಒಂದು ಕಠೋರ ಸಾಧನೆಗಾಗಿ ಅವರು ಆರಂಭದಿಂದಲೇ ಮುಡಿಪುಗೊಳಿಸಿದ್ದರು. ಗೃಹಜೀವನದಲ್ಲಿ ಸುಖ ಸೌಕರ್ಯಗಳಿಗೆ ಅವರು ಆದ್ಯತೆ ನೀಡಲೇ ಇಲ್ಲ.

"1915ರಿಂದ ಆರಂಭಿಸಿ 1924ರ ವರೆಗೆ ಹತ್ತು ವರ್ಷಗಳ ಕಾಲ ಅವರು ದೇಶದಲ್ಲಿ ನಡೆಯುತ್ತಿದ್ದ ವಿಭಿನ್ನ ಆಂದೋಲನಗಳ ಹಾಗೂ ವಿವಿಧ ರೀತಿಯ ಸಂಸ್ಥೆಗಳ ಬಗ್ಗೆ ಆಳವಾಗಿ ತಿಳಿಯುವ ಸಲುವಾಗಿ ಸೂಕ್ಷ್ಮವಾದ ಅವಲೋಕನ ಮತ್ತು ವಿಶ್ಲೇಷಣೆಗಳನ್ನು ನಡೆಸಿದರು. ಜತೆಯಲ್ಲಿ ನಮ್ಮ ರಾಷ್ಟ್ರವನ್ನು ಕಾಡುತ್ತಿದ್ದ ಕಾಯಿಲೆಯ ನಿಖರವಾದ ಕಾರಣ ತಿಳಿಯಲು ಸಹ ಅವರು ಪ್ರಯತ್ನಿಸಿದರು. ನಮ್ಮ ಈ ಮಾತೃಭೂಮಿ ಹಿಂದೂಸ್ಥಾನವು ವಿಸ್ತೀರ್ಣದಲ್ಲಿ, ಜನಸಂಖ್ಯೆ, ನೈಸರ್ಗಿಕ ಸೌಂದರ್ಯ, ಖನಿಜಗಳು, ಫಲವತ್ತತೆ ಮತ್ತು ಸಂಪತ್ತಿನಲ್ಲಿ ಮಾತ್ರವಲ್ಲ, ತತ್ವಜ್ಞಾನ, ಸಂಸ್ಕೃತಿ, ಇತಿಹಾಸ, ಶೌರ್ಯ, ಪರಾಕ್ರಮ, ವಿದ್ಯೆ ಮತ್ತು ಕಲೆಕೌಶಲಗಳು ಇವುಗಳಲ್ಲಿ ಯಾವುದಾದರೂ ಒಂದರಲ್ಲಿ ಸಹ ಎಂದೂ ಹಿಂದುಳಿದುದೇ ಇಲ್ಲ; ಈಗಲೂ ಇಲ್ಲ. ಆದ್ದಾಗ್ಯೂ ನಮ್ಮ ಈ ಪ್ರಾಚೀನ ಹಿಂದೂ

ರಾಷ್ಟ್ರವು ದಿನಗಳೆದಂತೆ ಅಧಃಪತನದ ಆಳಕ್ಕೆ ಇಳಿಯುತ್ತಲೇ ಇರಲು ನಮ್ಮ ಯಾವ ರಾಷ್ಟ್ರೀಯ ದುರ್ಗುಣ ಕಾರಣವಾಗಿರಬಹುದು? ಡಾ. ಹೆಡಗೇವಾರರ ಮನಸ್ಸನ್ನು ಸದಾ ಕುಟುಕುತ್ತಿದ್ದ ಪ್ರಶ್ನೆಯಿದು. ಈ ಪ್ರಶ್ನೆಗೆ ನಿಜವಾದ ಉತ್ತರವೇನು ಎಂಬುದನ್ನು ಹುಡುಕುವ ಸಲುವಾಗಿ ಅವರ ಮನದಲ್ಲಿ ಸತತವಾದ ಚಿಂತನ ಮಂಥನ ನಡೆಯುತ್ತಿತ್ತು" ಎಂದು 1941ರಲ್ಲಿ ವ.ಣ.ಶೇಂಡೆ ಅವರು ಬರೆದಿದ್ದಾರೆ.[1]

ಭಾರತದ ಭೂತ, ವರ್ತಮಾನ ಮತ್ತು ಭವಿಷ್ಯಗಳನ್ನು ಸಮಗ್ರವಾಗಿ ಮನದಲ್ಲಿರಿಸಿಕೊಂಡು ಅವರು ಇಲ್ಲಿನ ರಾಷ್ಟ್ರೀಯತೆಯ ಮೂಲವನ್ನು ತಿಳಿಯಲು ಆಳವಾದ ಚಿಂತನೆ ನಡೆಸಿದರು. ರಾಜಕೀಯ ಕ್ಷೇತ್ರದಲ್ಲಿ ವ್ಯಾಪಕವಾಗಿರುವ ಅನೈತಿಕತೆ, ಸ್ಥಾನಮಾನ ಮತ್ತು ಒಣ ಪ್ರತಿಷ್ಠೆಗಾಗಿ ರಾಷ್ಟ್ರದ ಹಿತವನ್ನೇ ಬಲಿಗೊಡುವಂತಹ ಪ್ರವೃತ್ತಿ ಮತ್ತು ವ್ಯಕ್ತಿ, ಜಾತಿ ಹಾಗೂ ಪಕ್ಷದ ಸ್ವಾರ್ಥಕ್ಕಾಗಿ ದೇಶದ ಒಳಿತನ್ನು ಗೌಣವೆಂಬಂತೆ ಕಡೆಗಣಿಸುವ ರೀತಿನೀತಿ ಇವು ನಮ್ಮ ರಾಷ್ಟ್ರೀಯ ಜೀವನದ ಅಭಿಶಾಪಗಳು ಮತ್ತು ಇವುಗಳಿಂದಾಗಿಯೇ ನಮ್ಮ ರಾಷ್ಟ್ರವು ಅಧೋಗತಿಯ ಪಾತಾಳಕ್ಕಿಳಿದಿದೆ. ಜನರ ಮುಂದೆ ಭಾಷಣಗಳನ್ನು ಮಾಡುವುದರಿಂದ, ಮನವಿ ಅಥವಾ ಹೇಳಿಕೆಗಳನ್ನು ನೀಡಿದ ಮಾತ್ರದಿಂದ ರಾಷ್ಟ್ರವು ಶಕ್ತಿಶಾಲಿಯಾಗದು. ಅದಕ್ಕಾಗಿ ನಿರಂತರವಾಗಿ ರಾಷ್ಟ್ರೀಯತೆಯ ಶಿಕ್ಷಣ, ದೇಶಭಕ್ತಿಯ ಸಂಸ್ಕಾರ, ಸಾಮೂಹಿಕ ಬದುಕಿನ ಜೀವನದೃಷ್ಟಿ, ಸಾಮಾಜಿಕ ಸಂವೇದನಶೀಲತೆ ಹಾಗೂ ಏಕತೆಯ ಭಾವ ಇವುಗಳನ್ನು ಮನದಲ್ಲಿ ಆಳವಾಗಿ ಬೇರೂರಿಸುವ ಅಗತ್ಯವಿದೆ. ರಾಷ್ಟ್ರದ ಮೊಟ್ಟಮೊದಲ ಘಟಕ ವ್ಯಕ್ತಿಯೇ. ಎಲ್ಲಿನ ತನಕ ಆತನ ಹೃದಯದಲ್ಲಿ ವಿಶುದ್ಧ ರಾಷ್ಟ್ರಭಕ್ತಿಯ ಭಾವನೆ ಚಿಗುರಿ ಬೆಳೆಯುವುದಿಲ್ಲವೋ, ಅಲ್ಲಿಯ ತನಕ ರಾಷ್ಟ್ರೀಯತೆಯ ಶುದ್ಧ ಕಲ್ಪನೆಗಳೂ ಬಲಗೊಳ್ಳಲು ಸಾಧ್ಯವಿಲ್ಲ. ವ್ಯಕ್ತಿಯಲ್ಲಿ ಪರಿಶುದ್ಧತೆ ಬೆಳೆದಲ್ಲಿ ಮಾತ್ರ ರಾಷ್ಟ್ರಜೀವನದಲ್ಲೂ ಪರಿಶುದ್ಧತೆ ಬೆಳೆಯಬಲ್ಲದು. ಸ್ವಾಮಿ ವಿವೇಕಾನಂದರಿಂದ ಮೊದಲ್ಗೊಂಡು ನಮ್ಮ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಪ್ರತಿಪಾದಿಸಿದ ಎಲ್ಲ ಹಿರಿಯ ಚಿಂತಕರು ಹೇಳಿರುವ ವಿಚಾರಗಳು, ನಮ್ಮದೇ ಆದ ಅಪಾರ ಜ್ಞಾನ ಮತ್ತು ಅತ್ಯುಚ್ಚ ಚಿಂತನೆಯ ಪರಂಪರೆ ಇವೆಲ್ಲ ಇದ್ದು ಸಹ ರಾಷ್ಟ್ರವ್ಯಾಪಿಯಾಗಿ ಇದ್ದ ಸಂಕೀರ್ಣ ಮತ್ತು ಕೃತ್ರಿಮ ಒಡಕುಗಳಿಂದಾಗಿ, ಒಟ್ಟಿನಲ್ಲಿ, ರಾಷ್ಟ್ರೀಯ ಭಾವವೇ ನಷ್ಟಗೊಂಡಿದೆ. ಇಲ್ಲಿ ಚಿಂತಕರು ಮತ್ತು ವ್ಯಾಖ್ಯಾನಕಾರರಿಗೆ ಕೊರತೆಯಿಲ್ಲ. ಉತ್ತಮ ಚಿಂತನೆ ಮತ್ತು ಆದರ್ಶ ಸಿದ್ಧಾಂತಗಳಿಗೆ ಅಭಾವವಿಲ್ಲ. ತೇಜಸ್ವೀ ಇತಿಹಾಸವಿದೆ. ಉದಾತ್ತ ಪರಂಪರೆಗಳಿವೆ, ಉಜ್ವಲ ಭವಿಷ್ಯದ ಕನಸುಗಳಿವೆ, ಆದರೆ ಎಲ್ಲರನ್ನೂ ಒಗ್ಗೂಡಿಸಿ, ಒಂದೇ ಧ್ವನಿಯಲ್ಲಿ ಗರ್ಜಿಸುವಂತೆ ಮಾಡಬಲ್ಲ ಒಂದು ಸಂಘಟನೆ ಮಾತ್ರ ಇಲ್ಲಿಲ್ಲ. ಡಾ. ಹೆಡಗೇವಾರರು ನಮ್ಮ ರಾಷ್ಟ್ರಜೀವನದ ಈ ಪ್ರಮುಖ ಕೊರತೆಯನ್ನು ಗುರುತಿಸಿದರು. ಅದನ್ನು ತುಂಬಿಸಲು ಸ್ವತಃ ವ್ರತ ಕೈಗೊಂಡರು. ಅವರು ಆರಂಭಿಸಿದ 'ರಾಷ್ಟ್ರೀಯ ಸ್ವಯಂಸೇವಕ ಸಂಘ'ವು ಅವರ ಈ ಸಂಕಲ್ಪದ್ದೇ ಫಲಶ್ರುತಿ.

## ಸಂಘಟನೆಯ ಸಂಸ್ಕಾರ

ತಮಗೆ ಹಲವಾರು ವರ್ಷಗಳಿಂದ ಚೆನ್ನಾಗಿ ತಿಳಿದಿದ್ದ 25 ಮಂದಿ ಆಮಂತ್ರಿತರನ್ನು ಸೇರಿಸಿ, ಅವರೆಲ್ಲರೊಂದಿಗೆ ಸಾಕಷ್ಟು ದೀರ್ಘವಾಗಿ ವಿಮರ್ಶಿಸಿ, 1925ರ

---

1. ವ.ಣ.ಶೇಂಡೆ, ಪರಮ ಪೂಜನೀಯ ಡಾ. ಹೆಡಗೇವಾರ, 1941 ಪು.11

ವಿಜಯದಶಮಿಯಂದು ಅವರೊಂದು ಹೊಸ ಸಂಘಟನೆಗೆ ಶ್ರೀಗಣೇಶ ಮಾಡಿದರು. ಈ ಸಂಘಟನೆಗೆ ಒಂದು ಹೊಸ ಕಾರ್ಯಪದ್ಧತಿಯನ್ನೂ ಅವರೇ ಬಳಕೆಗೆ ತಂದರು. ಅಂದು ಸೇರಿದ್ದವರಲ್ಲಿ ಭಾವೂಜಿ ಕಾವರೆ, ಅಣ್ಣಾ ಸೋಹನಿ, ವಿಶ್ವನಾಥ ರಾವ್ ಕೇಳ್ಕರ್, ಬಾಳಾಜಿ ಹುದ್ದಾರ್, ಬಾಪುರಾವ್ ಭೇದಿ ಮೊದಲಾದವರು ಉಲ್ಲೇಖಿಸಲ್ಪಡಬಹುದಾದ ಪ್ರಮುಖರು. ಅವರಲ್ಲಿ ಹೆಚ್ಚಿನವರು ಡಾ. ಹೆಡಗೇವಾರರ ಬಾಲ್ಯದ ಸ್ನೇಹಿತರೇ ಆಗಿದ್ದಂತಹವರು ಮತ್ತು ಮುಂದೆ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ, ನಾಗಪುರ ನ್ಯಾಷನಲ್ ಯೂನಿಯನ್‌ನಲ್ಲಿ ಮತ್ತು ಗಾಂಧಿವಾದಿ ಆಂದೋಳನದಲ್ಲೂ ಸಹಕಾರಿಗಳಾಗಿದ್ದವರು.

ಸಂಘದ ಆರಂಭವೂ ತನ್ನದೇ ರೀತಿಯಲ್ಲಿ ಒಂದು ವಿಶಿಷ್ಟ ಪದ್ಧತಿಯಲ್ಲಿ ಆಯಿತು. ಹೊಸ ಸಂಘಟನೆ ಆರಂಭವಾಗುವುದರ ಬಗ್ಗೆ ಪತ್ರಿಕೆಗಳಲ್ಲಿ ಸುದ್ದಿಯಾಗಲಿ, ಸಾರ್ವಜನಿಕರ ಬಳಿ ಮನವಿಯಾಗಲಿ ಇರಲಿಲ್ಲ. ಈ ಸಂಘಟನೆಯ ಉದ್ದೇಶಗಳೇನು ಎಂಬುದನ್ನು ಲಿಖಿತ ರೂಪದಲ್ಲಿ ಪ್ರಕಟಿಸಿ ಘೋಷಿಸಲೂ ಇಲ್ಲ. ಎಲ್ಲಿವರೆಗೆಂದರೆ ಸಂಘದ ಆರಂಭವಾಗಿ ಆರು ತಿಂಗಳುಗಳ ವರೆಗೆ ಅದಕ್ಕೊಂದು ಹೆಸರನ್ನು ಸಹ ಇಟ್ಟಿರಲಿಲ್ಲ. ಸಂಘಟನೆಯ ಅಧಿಕಾರದ ಸ್ಥಾನಗಳು ಮತ್ತು ಅದರ ಕಾರ್ಯದ ಚೌಕಟ್ಟು ಇವುಗಳು ಕೂಡ ಅದು ಬೆಳೆದು ವಿಸ್ತಾರವಾದಂತೆ ಕ್ರಮೇಣ ಆಗುತ್ತಲೇ ಹೋದುವು. 1926ರ ಏಪ್ರಿಲ್ 17ರಂದು ಸಂಘಕ್ಕೊಂದು ಹೆಸರು ನಿರ್ಧಾರವಾಯಿತು. ಸಂಘದ ಆರಂಭವು ನಾಗಪುರದಲ್ಲಿನ ಬಿರುಸಿನ ಸಾಮಾಜಿಕ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ಯಾವುದನ್ನೂ ಅಸ್ತವ್ಯಸ್ತಗೊಳಿಸುವಂತಹುದಾಗಲಿ, ಎಲ್ಲರ ಲಕ್ಷ್ಯ ಸೆಳೆಯುವಂತಹುದಾಗಲಿ ಆಗಿರದಿದ್ದುದರಿಂದ ಹೀಗಾಗಿದ್ದುದು ಸ್ವಾಭಾವಿಕವೇ. ಡಾ. ಹೆಡಗೇವಾರರು ಸಂಘವನ್ನು ಪ್ರಚಾರ, ಪ್ರಸಿದ್ಧಿಗಳ ಬೆಡಗುಬಿನ್ನಾಣಗಳಿಂದ ಉದ್ದೇಶಪೂರ್ವಕವಾಗಿ ದೂರವಿರಿಸಿದ್ದರು. ಆರಂಭದ ದಿನಗಳಲ್ಲಿ ನಾಗಪುರದ ಆಡಳಿತಾಧಿಕಾರಿಗಳಿಗೆ, ಕುಲೀನರಿಗೆ ಮತ್ತು ಬುದ್ಧಿಜೀವಿಗಳಿಗೆ ಸಂಘದ ನಿತ್ಯ ಶಾಖೆ ಒಂದು 'ವ್ಯಾಯಾಮಶಾಲೆ' ಎಂಬಂತೆ ಅನಿಸುತ್ತಿತ್ತು. ಅವರಿಗೆ ಹಾಗನಿಸುತ್ತಿದ್ದುದು ಸಹಜವೇ.

ಸಂಘದ ಸ್ಥಾಪನೆಗಿಂತ ಮೊದಲು ಡಾ. ಹೆಡಗೇವಾರರು ಅಂದಿನ ಹಿಂದೂ ರಾಷ್ಟ್ರವಾದಿಗಳನ್ನು ಕಂಡು ಅವರೊಂದಿಗೆ ಚರ್ಚಿಸಿದ್ದರು. ಅಂತಹವರಲ್ಲಿ ವಿನಾಯಕ ದಾಮೋದರ ಸಾವರಕರರೂ ಒಬ್ಬರು. ಅದಕ್ಕಾಗಿ ರತ್ನಗಿರಿಗೆ ಹೋಗಿ ಅಲ್ಲಿ ಅವರನ್ನು ಭೇಟಿಯಾಗಿದ್ದರು. 1925ರ ಜನವರಿಯಲ್ಲಿ ಮಧ್ಯಪ್ರಾಂತ ಕಾಂಗ್ರೆಸ್ ಸಮಿತಿಯ ಏರ್ಪಾಡಿನಂತೆ ಸ್ವಾಮಿ ಸತ್ಯದೇವ ಅವರು ಪ್ರಾಂತದಲ್ಲಿ ಪ್ರವಾಸದಲ್ಲಿದ್ದಾಗ, ಡಾ. ಹೆಡಗೇವಾರರು ಪ್ರವಾಸದ ಪೂರ್ಣ ಕಾಲಾವಧಿಯಲ್ಲಿ ಅವರ ಜತೆಯಲ್ಲಿದ್ದರು. ಸ್ವಾಮಿ ಸತ್ಯದೇವ ಅವರು ಹಿಂದೂ ಸಂಘಟನೆಯ ಅಗತ್ಯದ ಬಗ್ಗೆ ಹೇಳುತ್ತ:

"ಹಿಂದೂಗಳನ್ನು ಸಂಘಟಿಸುವುದು ಮುಸಲ್ಮಾನರನ್ನು ವಿರೋಧಿಸುವ ಸಲುವಾಗಿ ಎಂಬುದು ಖಂಡಿತಕ್ಕೂ ಸರಿಯಲ್ಲ. ನಮಗೆ ಹಿಂದೂಸ್ಥಾನವೇ ಸರ್ವಸ್ವ. ಇಂತಹ ಕಡು ನಿಷ್ಠೆಯನ್ನು ಇನ್ನಷ್ಟು ದೃಢಗೊಳಿಸಲು ಹಿಂದೂಗಳ ಒಂದು ಸಂಘಟನೆಯು ಅತ್ಯಗತ್ಯವಾಗಿದೆ" ಎಂದಿದ್ದರು.

## ಹಿಂದೂ ಧರ್ಮದ ಸುಧಾರಣೆ

ಹಿಂದೂ ಧರ್ಮದ ಸುಧಾರಣೆಯಿಂದ ರಾಷ್ಟ್ರದ ಚೇತನದ ಜಾಗೃತಿ ಹಿಂದೂ ಸಂಘಟನೆಗಳ ಬೆಳವಣಿಗೆಗಳು: ಅವುಗಳ ಕಾರ್ಯದ ಪದ್ಧತಿ, ಭೂಮಿಕೆ, ಅವುಗಳ

ತಾತ್ಕಾಲಿಕ ಗುರಿ ಮತ್ತು ಸಾರ್ವಕಾಲಿಕ ಧ್ಯೇಯ ಇತ್ಯಾದಿ ಸಂಗತಿಗಳ ಲಕ್ಷ್ಯಪೂರ್ವಕ ಅಧ್ಯಯನ ನಡೆಸಿದ ನಂತರವಷ್ಟೇ ಡಾ. ಹೆಡಗೇವಾರರಿಗೆ ಹೊಸದೊಂದು ಸಂಘಟನೆಯನ್ನು ಆರಂಭಿಸುವುದು ಅಗತ್ಯವೆನಿಸಿತು.

ಹತ್ತೊಂಭತ್ತನೆಯ ಶತಮಾನದಲ್ಲಿ ಹಲವಾರು ವಿಧದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸುಧಾರಣೆಗಳೂ ನಡೆದಿದ್ದವು. ರಾಜಾ ರಾಮಮೋಹನರಾಯ್ ಅವರ ಬ್ರಹ್ಮ ಸಮಾಜ (1828), ಸ್ವಾಮಿ ದಯಾನಂದ ಸರಸ್ವತಿ ಅವರ ಆರ್ಯ ಸಮಾಜ (1875) ಮತ್ತು ಸ್ವಾಮಿ ವಿವೇಕಾನಂದರಿಂದ ಆರಂಭವಾದ ರಾಮಕೃಷ್ಣ ಮಿಶನ್ ಇವೆಲ್ಲವೂ ಅಂತಹ ಹಲವಾರು ಪ್ರಯತ್ನಗಳ ವಿವಿಧ ಮುಖಗಳೇ. ತನ್ನ ಸುಧಾರಣೆಯಲ್ಲಿ ಮುಖ್ಯವಾಗಿ ಹಿಂದೂ ಸಮಾಜವು ತೊಡಗಿದ್ದ ಕಾರಣದಿಂದಾಗಿ ಇವೆಲ್ಲ ಸಂಸ್ಥೆಗಳು ಮತ್ತು ಇಲ್ಲಿ ಹೇಳಲಾಗಿರುವ ಸಮಾಜ ಸುಧಾರಕರು ಸಹ ಅಂದಿನ ಸಾಮ್ರಾಜ್ಯವಾದಿ ಆಡಳಿತದ ಹಿನ್ನೆಲೆಯಲ್ಲಿ, ಒಂದು ರೀತಿಯಲ್ಲಿ ರಾಜಕೀಯ ನಿಟ್ಟಿನಲ್ಲೂ ನಮ್ಮ ರಾಷ್ಟ್ರೀಯ ಚೈತನ್ಯವನ್ನು ಬಡಿದೆಬ್ಬಿಸುವುದರಲ್ಲಿ ಮುಂದಾಳುಗಳೇ ಆದರು. ಹಿಂದೂಗಳಿಗೆ ಸಂಬಂಧಿಸಿದ ಯಾವುದೇ ಕಾರ್ಯ ಅಥವಾ ಜನಾಂದೋಳನವು ಕೇವಲ ಒಮ್ಮುಖದ ಕಾರ್ಯ ಮಾತ್ರವಾಗಿರಲು ಸಾಧ್ಯವಿಲ್ಲ. ಕಾರಣವೆಂದರೆ ಸುದೀರ್ಘ ಇತಿಹಾಸ ಕಾಲದಿಂದ ಇಲ್ಲಿನ ರಾಷ್ಟ್ರೀಯ ಸಮುದಾಯವಾಗಿರುವ ಹಿಂದೂ ಸಮಾಜವು ಆಧುನಿಕವಾದ ರಾಷ್ಟ್ರ ರಾಜ್ಯಗಳ ಕಲ್ಪನೆಗನುಗುಣವಾಗಿ ಇಲ್ಲಿ ಕೇವಲ ನಾಗರಿಕತೆ ಹೊಂದಿರುವ ಸಮಾಜವಷ್ಟೇ ಅಲ್ಲ. ಬದಲಾಗಿ ಈ ರಾಷ್ಟ್ರವು ಇಲ್ಲಿನ ಸಂಸ್ಕೃತಿ, ಅದರ ಶ್ರೇಷ್ಠ ಮೌಲ್ಯಗಳು ಇವುಗಳೊಂದಿಗೆ ಒಳಪಟ್ಟುಕೊಂಡೇ ವಿಕಾಸಗೊಂಡಿರುವಂತಹದು. ಅದಕ್ಕೊಂದು ಐತಿಹಾಸಿಕ ತಳಹದಿಯಿದೆ. ಇಲ್ಲಿನ ರಾಷ್ಟ್ರಜೀವನವು ತನ್ನದೇ ರೀತಿಯಲ್ಲಿ ಸಾಂಸ್ಕ ೃತಿಕವೂ ಹೌದು. ವಿಶ್ವಸ್ತರದಲ್ಲಿ ಒಂದೇ ಆದ ಚೈತನ್ಯವನ್ನು ಒಪ್ಪುವಂತಹದೂ ಹೌದು. ವಿಶ್ವಸ್ತರದಲ್ಲಿ ವಿವಿಧ ಸಂಸ್ಕೃತಿಗಳ ವಿಕಾಸದಲ್ಲೂ ಅದು ತನ್ನ ಪಾತ್ರವನ್ನು ಸಲ್ಲಿಸಿದೆ. ಅನ್ಯ ರಾಷ್ಟ್ರಗಳಿಗಿಂತ ಭಾರತೀಯ ರಾಷ್ಟ್ರದ ಭಿನ್ನತೆಯಿರುವುದೇ ಇದರಲ್ಲಿ. ಇದು ಇನ್ನಾವುದೇ ಸಂಸ್ಕೃತಿಯ ಕೇವಲ ಒಂದು ಭಾಗವಲ್ಲ. ಬದಲಾಗಿ ತನ್ನದೇ ಆದ ವಿಶಿಷ್ಟ ಸಂಸ್ಕೃತಿಯೊಂದಿಗೆ ಸಂಪೂರ್ಣವಾಗಿ ಬೆರೆತು ವಿಕಾಸಗೊಂಡು ಬಂದಿರುವಂತಹದು. ಭಾರತದ ಸಂಸ್ಕೃತಿ ಮತ್ತು ಭಾರತೀಯ ರಾಷ್ಟ್ರಜೀವನ ಇವು ಪರಸ್ಪರ ಅವಲಂಬಿತವಾಗಿರುವಂತಹವು. ಹೀಗಾಗಿ ಇಲ್ಲಿನ ರಾಷ್ಟ್ರಜೀವನದ ಮೇಲೆ ಆಗಬಹುದಾದ ಯಾವುದೇ ಆಘಾತವು ಇಲ್ಲಿನ ಸಂಸ್ಕೃತಿಯ ಮೇಲೆಯೂ ಆದಂತೆಯೇ ಹಾಗೂ ಇಲ್ಲಿನ ಸಂಸ್ಕೃತಿಯನ್ನು ಪ್ರಶ್ನಿಸುವುದೆಂದಲ್ಲಿ, ಅದು ಇಲ್ಲಿನ ರಾಷ್ಟ್ರೀಯತೆಯನ್ನು ಪ್ರಶ್ನಿಸಿದಂತೆಯೇ ಆಗುತ್ತದೆ. ಹೀಗಾಗಿ ಆರ್ಯಸಮಾಜವು 'ಅದರ ಎಲ್ಲ ಚಟುವಟಿಕೆಗಳಲ್ಲಿ ರಾಷ್ಟ್ರೀಯತೆ ಮತ್ತು ಪ್ರಜಾಪ್ರಭುತ್ವದ ಭಾವನೆಗಳಿಂದಲೇ ಪ್ರೇರಿತವಾಗಿತ್ತು.'[2] ಸ್ವಾಮಿ ವಿವೇಕಾನಂದ, ಲಾಲಾ ಲಜಪತರಾಯ್, ಬಾಲಗಂಗಾಧರ ತಿಲಕ್, ಮಹರ್ಷಿ ಅರವಿಂದ, ವಿಪಿನ್ ಚಂದ್ರಪಾಲ್, ಬಂಕಿಮಚಂದ್ರ ಚಟ್ಟೋಪಾಧ್ಯಾಯ ಮೊದಲಾದ ಎಲ್ಲ ಚಿಂತಕರು ಹಿಂದೂ ಸಂಸ್ಕೃತಿ, ಹಿಂದೂ ಮೌಲ್ಯಗಳು ಮತ್ತು ಹಿಂದೂ ರಾಷ್ಟ್ರವನ್ನು ಸಂಕುಚಿತವಾದ ಧಾರ್ಮಿಕ, ಸಾಂಪ್ರದಾಯಿಕ, ಜಾತೀಯ ಅಥವಾ ಯಾವುದೇ ಭಾಷೆ ಯಾ ಕ್ಷೇತ್ರ ಇತ್ಯಾದಿಗಳಿಗೆ ಮಾತ್ರ ಸಂಬಂಧಿಸಿದಂತೆ ನೋಡದೆ ಇವುಗಳಿಂದ ಮೇಲೆದ್ದು ನೋಡುವಂತಹವರಾಗಿದ್ದರು.

---

2. .ಆರ್. ದೇಸಾಯಿ, ಸೋಶಿಯಲ್ ಬ್ಯಾಕ್‌ಗ್ರೌಂಡ್ ಆಫ್ ಇಂಡಿಯನ್ ನ್ಯಾಶನಲಿಸಂ, ಪು-292.

ಇವರೆಲ್ಲರಲ್ಲಿ ಸಮಾನವಾಗಿದ್ದ ಅಂಶವೊಂದಿದೆ. ಭಾರತದ ಸ್ವರೂಪ ಮತ್ತು ಸ್ವಭಾವ ಇವೆರಡನ್ನೂ ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ನೋಡಿದವರು ಇವರು. ರಾಷ್ಟ್ರವನ್ನು 'ದೇವಿ'ಯಾಗಿ ಕಂಡರು. ಆದಕ್ಕಾಗಿ ಮಿಕ್ಕೆಲ್ಲ ಧರ್ಮಗಳಿಗಿಂತ 'ರಾಷ್ಟ್ರಧರ್ಮ'ವನ್ನು ಅತಿ ಶ್ರೇಷ್ಠವಾಗಿ ತಿಳಿಯುತ್ತಿದ್ದವರು ಇವರು. ಇವರಿಗೆ ವೈಯಕ್ತಿಕವಾದ ಧರ್ಮ ಮತ್ತು ರಾಷ್ಟ್ರಧರ್ಮ ಇವುಗಳ ನಡುವೆ ವಿರೋಧಾಭಾಸ ಇರಲಿಲ್ಲ. 'ಹಿಂದೂಗಳ ದೇಶಭಕ್ತಿಯು ತನ್ನವರನ್ನು ಬಿಟ್ಟು ಇನ್ನಾವನನ್ನೋ ಒಪ್ಪದ ಮನೆಯೊಡತಿಯಂತೆ' ಎಂದು ರಾಧಾಕುಮುದ ಮುಖರ್ಜಿಯವರು ಬರೆಯುತ್ತಾರೆ. ಭಾರತದಲ್ಲಿ ಧರ್ಮದ, ಸಂಸ್ಕೃತಿಯ ಮತ್ತು ಸಮಾಜದ ಪುನರ್ಜಾಗರಣವು ಹಿಂದೂಗಳ ಪುನರ್ಜಾಗರಣದ ಜತೆಯಲ್ಲಿ ಬೆಸೆದುಕೊಂಡಿರುವಂತಹದು. ಕಾರಣವೆಂದರೆ ಧರ್ಮ ಸುಧಾರಣೆಗಾಗಿ ನಡೆದಿದ್ದ ಎಲ್ಲ ಆಂದೋಳನಗಳ ಪ್ರಭಾವ ನೇರವಾಗಿ ಹೆಚ್ಚು ಆದುದು ಹಿಂದೂ ಸಮಾಜದ ಮೇಲೆಯೇ. ಇತರ ಮತ ಮತ್ತು ಸಂಪ್ರದಾಯಗಳಲ್ಲಿ ಆಗಿರುವ ಸುಧಾರಣೆಗಳ ಪ್ರಕ್ರಿಯೆ ಒಂದೂ ಅತಿ ನಿಧಾನವಾಗಿತ್ತು ಅಥವಾ ಸುಧಾರಣೆ ಆಗಿಯೇ ಇಲ್ಲವೆನ್ನಬಹುದು. ಹೀಗಾಗಿಯೇ ತನ್ನ ಸುಧಾರಣಾ ಪ್ರಯತ್ನಗಳಿಗೆ ಹಿಂದೂ ಸಮಾಜವನ್ನು ಮತ್ತು ಅದರ ಧಾರ್ಮಿಕ ಆಚರಣೆಗಳನ್ನು ಪ್ರಯೋಗಶಾಲೆಯಾಗಿ ಮಾಡಿಕೊಂಡಿದ್ದ ರಾಜಾ ರಾಮಮೋಹನರಾಯ್ ಅವರನ್ನು 'ಭಾರತೀಯ ಪುನರುದಯದ ಪಿತ' ಎಂದು ಹೇಳಲಾಗುತ್ತದೆ. ಇದೇ ಕಾರಣಕ್ಕಾಗಿ ಡಾ. ಹೆಡಗೇವಾರರು ಆರಂಭಿಸಿದ ಹಿಂದೂ ಸಂಘಟನೆಯ ಕಾರ್ಯವು ರಾಜಾ ರಾಮಮೋಹನರಾಯ್‌ರವರು ಹುಟ್ಟುಹಾಕಿದ್ದ ಹೊಸ ಪರಂಪರೆಯಂತೆ ವಾಸ್ತವಿಕವಾಗಿ ರಾಷ್ಟ್ರೀಯ ಕಾರ್ಯವೇ ಎನಿಸಿತು. ಇಲ್ಲಿ ಹಿಂದುತ್ವವೇ ರಾಷ್ಟ್ರೀಯತೆ ಎಂಬುದು ಅವರ ಖಚಿತವಾದ ಅಭಿಪ್ರಾಯವಾಗಿದೆ. ಇದರಲ್ಲಿ ಯಾವುದೇ ಮತ ಅಥವಾ ಸಂಪ್ರದಾಯವನ್ನು ಹೊರತುಪಡಿಸುವ ವಿಚಾರವಿರದೆ, ನಮ್ಮ ಸನಾತನ ಸಾಂಸ್ಕೃತಿಕ ಚೇತನವನ್ನು ಆಧರಿಸಿ, ನಮ್ಮ ರಾಷ್ಟ್ರೀಯತೆಯ ಸಕಾರಾತ್ಮಕವಾದ ವಿವರಣೆ ನೀಡುವಂತಹ ಭಾವ ಮಾತ್ರವಿದೆ. ಸಂಘದ ಸ್ಥಾಪನೆಯ ಉದ್ದೇಶವನ್ನು ವಿವರಿಸುತ್ತ ಡಾ. ಹೆಡಗೇವಾರರು:

"ಸ್ವಪ್ರೇರಣೆಯಿಂದ ಹಾಗೂ ಸ್ವಯಂಸ್ಫೂರ್ತರಾಗಿ ರಾಷ್ಟ್ರದ ಸೇವೆಗಾಗಿ ತಮ್ಮನ್ನು ಮುಡಿಪಾಗಿರಿಸಿರುವಂತಹ ವ್ಯಕ್ತಿಗಳು ಸಂಪೂರ್ಣವಾಗಿ ರಾಷ್ಟ್ರಕಾರ್ಯಕ್ಕಾಗಿಯೇ ಕಟ್ಟಿರುವ ಸಂಘಟನೆಯೇ ರಾಷ್ಟ್ರೀಯ ಸ್ವಯಂಸೇವಕ ಸಂಘವಾಗಿದೆ. ಪ್ರತಿಯೊಂದು ರಾಷ್ಟ್ರದಲ್ಲೂ, ಅಲ್ಲಿನ ರಾಷ್ಟ್ರೀಯರು ತಮ್ಮ ದೇಶದ ಸೇವೆಗಾಗಿ ಇಂತಹ ಸಂಘಟನೆಗಳನ್ನು ಕಟ್ಟುತ್ತಾರೆ. ಅದೇ ಹಿನ್ನೆಲೆಯಲ್ಲಿ ನಮ್ಮ ಈ ಪವಿತ್ರ ಅದರ ಹಿತ ಕಾಪಾಡುವ ಸಲುವಾಗಿ ನಾವು ಈ ದೇಶದಲ್ಲಿ ಸಂಘವನ್ನು ಆರಂಭಿಸಿದ್ದೇವೆ. ಈ ಸಂಘಟನೆಯ ಮೂಲಕವೇ ನಾವು ನಮ್ಮ ರಾಷ್ಟ್ರದ ಸರ್ವಾಂಗೀಣ ಉನ್ನತಿಯನ್ನು ಮಾಡುವ ನಿರ್ಧಾರ ಕೈಗೊಂಡಿದ್ದೇವೆ" ಎಂದಿದ್ದರು.

ಅವರು ಹಿಂದೂಸ್ಥಾನದ ಸಾಂಸ್ಕೃತಿಕ ಭೂತಕಾಲವನ್ನು ಪರಿಚಯಿಸುವ ಸಲುವಾಗಿ ಹಿಂದೂ ರಾಷ್ಟ್ರವನ್ನು ಸಕಾರಾತ್ಮಕವಾಗಿ ವಿಶ್ಲೇಷಿಸುವ ಅಗತ್ಯವನ್ನು ತಿಳಿಸಿದ್ದಾರೆ. ಅದಕ್ಕಾಗಿ 'ಹಿಂದೂರಾಷ್ಟ್ರ'ವನ್ನು ಒಂದು 'ಜಾತೀಯ ರಾಷ್ಟ್ರ'ವೆಂಬಂತೆ ತಿಳಿದು ಭ್ರಮೆಗೆ ಒಳಗಾಗಬಾರದು. ರಾಷ್ಟ್ರದ ಕಲ್ಪನೆಯನ್ನು ಅವರು ವಿವರಿಸುತ್ತಿದ್ದುದು ಹೀಗೆ

"ಒಂದು ದೇಶದಲ್ಲಿ ಒಂದು ವಿಶಿಷ್ಟ ಸಮುದಾಯದವರು ತಮ್ಮದೇ ಆದ ವಿಶೇಷ ಪರಂಪರೆಯನ್ನು ಅನುಸರಿಸಿ ಬದುಕುತ್ತ, ಸಮಾನವಾದ ವಿಚಾರ ಹಾಗೂ ಸಮಾನವಾದ ಇತಿಹಾಸವನ್ನು ಹೊಂದಿ ಒಂದಾಗಿ ಬಾಳುವವರಾದಾಗ ಅಂತಹವರನ್ನು ರಾಷ್ಟ್ರವೆನ್ನಲಾಗುತ್ತದೆ. ಆ ರಾಷ್ಟ್ರವು ಸಹ ಅದರ ನಿವಾಸಿಗಳ ಹೆಸರಲ್ಲೆ ಗುರುತಿಸಲ್ಪಡುತ್ತದೆ. ಅಂತಹ ಸಮಾನ ಸಂಪ್ರದಾಯದ ಜನರ ಹಿತಸಂಬಂಧಗಳೂ ಒಂದೇ ಆಗಿರುತ್ತದೆ. ಅವರಲ್ಲಿ ಸಹಜವಾಗಿಯೇ ಒಂದುತನದ ಭಾವನೆ ಸಹ ಜೀವಂತವಾಗಿರುತ್ತದೆ. ಈ ವಿಧದ ಏಕತೆಯ ಭಾವನೆಯೇ ಅವರ ಏಳ್ಗೆಗೂ ಕಾರಣವಾಗುತ್ತದೆ. ಭಿನ್ನಭಿನ್ನ ದೇಶಗಳವರು, ಭಿನ್ನ ಭಿನ್ನ ಸಂಸ್ಕೃತಿಯನ್ನು ಅನುಸರಿಸುವವರು, ಭಿನ್ನಭಿನ್ನ ವಿಚಾರಗಳುಳ್ಳವರು, ಭಿನ್ನಭಿನ್ನ ಇತಿಹಾಸವಿರುವವರು, ಪರಸ್ಪರ ಶತ್ರುಗಳಂತೆ ಇರುವವರು, ತಮ್ಮ ಹಿತಸಂಬಂಧಗಳಲ್ಲಿ ಪರಸ್ಪರ ವಿರೋಧ ಮಾಡುವಂತಹವರು ಮತ್ತು ಭಕ್ಷ್ಯ ಮತ್ತು ಭಕ್ಷಕರಂತೆ ಇರುವವರು ಮೊದಲಾದವರು ಭಿನ್ನ ಭಿನ್ನ ಉದ್ದೇಶಗಳಿಗಾಗಿ ಒಂದುಗೂಡಿ ಬಂದರೂ ಅವರು ತಮ್ಮದೇ ಒಂದು ರಾಷ್ಟ್ರವನ್ನು ಕಟ್ಟಲಾರರು. ಅಂತಹ ಜನಸಮೂಹವನ್ನು ರಾಷ್ಟ್ರವೆನ್ನಲಾಗುವುದಿಲ್ಲ."

## ಹಿಂದುತ್ವ ಆಂದೋಳನದ ಇತಿಹಾಸ

ಡಾ. ಹೆಡಗೇವಾರರಿಂದ ಆರಂಭವಾದ ಈ ಸಂಘದ ಹೆಸರಿನ ಜನಾಂದೋಳನದ ಬಗ್ಗೆ ಅಧ್ಯಯನ/ಸಂಶೋಧನೆ ಮಾಡಬೇಕೆಂದಿರುವ ವಿದ್ವಾಂಸರು ಇದರ ಕುರಿತು ಆಳವಾಗಿ ತಿಳಿಯಲು ಪ್ರಯತ್ನಿಸುವ ಬದಲಾಗಿ ಅಂದಿನ ರಾಜಕೀಯ ಧಾರ್ಮಿಕ, ಸಾಂಪ್ರದಾಯಿಕ ಇತ್ಯಾದಿ ಪರಿಸ್ಥಿತಿಗಳ ಜತೆ ಇದನ್ನು ಗಂಟುಹಾಕಿ ವಿಶ್ಲೇಷಿಸುತ್ತಾರೆ.

ಅಂದಿನ ಸಾಮಾಜಿಕ ರಾಜಕೀಯ ಹಿನ್ನೆಲೆಯಲ್ಲಿ ಹಿಂದೂ ರಾಷ್ಟ್ರವಾದಿಗಳು ತಮ್ಮತಮ್ಮಲ್ಲಿ ಚರ್ಚಿಸುತ್ತಿದ್ದ ರೀತಿಯನ್ನು ಸಹ ತಿಳಿಯುವ ಅಗತ್ಯವಿದೆ. ಇಪ್ಪತ್ತನೆಯ ಶತಮಾನದಲ್ಲಿ ಹಿಂದೂ ಚಿಂತಕರ ಮನದಲ್ಲಿ ಹಿಂದೂಗಳ ಅಸ್ಮಿತೆಯ ಭಾವ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಇಸವಿ 1909ರಲ್ಲಿ ಇಬ್ಬರು ಚಿಂತಕರು ಈ ಭಾವವನ್ನು ತರ್ಕಬದ್ಧವಾಗಿ ಮತ್ತು ಖಚಿತವಾದ ಆಧಾರಗಳ ಸಹಿತ ಪ್ರಸ್ತುತಪಡಿಸಿದ್ದಾರೆ. ಬಂಗಾಳದ ಯು.ಎನ್. ಮುಖರ್ಜಿ ಅವರು ಹಿಂದೂ ಸಮಾಜವನ್ನು 'ಮರಣೋನ್ಮುಖ ಜನಾಂಗ' (ಡೈಯಿಂಗ್ ರೇಸ್) ಎಂಬ ನೆಲೆಯಲ್ಲಿ ಕಂಡು ತಮ್ಮ ವಾದವನ್ನು ಮಂಡಿಸಿದ್ದಾರೆ. "ನಾವು ಹಿಂದೂಗಳು ಏನೂ ತಿಳಿಯದ ಹಾಸ್ಯಾಸ್ಪದ ಜನರು. ನಮ್ಮ ನಾಲ್ದೆಸೆಗಳಲ್ಲೂ ಏನಾಗುತ್ತಿದೆ ಎಂಬುದೇ ನಮಗೆ ತಿಳಿಯದು. ಇಲ್ಲಿನ ಎರಡು ಸಮುದಾಯಗಳ ಪ್ರತ್ಯಕ್ಷ ಸ್ಥಿತಿ ಈಗ ಹೇಗಿದೆ? ಮುಸಲ್ಮಾನರ ಭವಿಷ್ಯ ಉಜ್ವಲವಾಗಿದೆ ಮತ್ತು ಅವರಿಗದರಲ್ಲಿ ವಿಶ್ವಾಸವೂ ಇದೆ. ಆದರೆ ಹಿಂದೂಗಳಿಗೆ ತಮ್ಮ ಸುತ್ತಮುತ್ತ ಏನಾಗುತ್ತಿದೆ ಎಂಬ ಅರಿವು ಸಹ ಇಲ್ಲ.... ವರ್ಷದ ಕೊನೆಯಲ್ಲಿ ಅವರು ತಮ್ಮ ಜನಸಂಖ್ಯೆಯಲ್ಲಿ ಹೆಚ್ಚಳವಾಗಿರುವುದನ್ನು ಲೆಕ್ಕಹಾಕುತ್ತಿದ್ದಲ್ಲಿ, ನಾವು ಹಿಂದೂಗಳು ಅದು ಕಡಿಮೆಯಾಗುವುದನ್ನು ಒಪ್ಪಿಕೊಂಡುಬಿಡುತ್ತೇವೆ. ಅವರಲ್ಲಿ ಶಕ್ತಿಯಿದೆ, ಸಂಪತ್ತಿದೆ ಮತ್ತು ಪರಸ್ಪರ ಸೋದರತ್ವದ ಭಾವ ಬಲಗೊಳ್ಳುತ್ತಲೂ ಇದೆ. ನಾವಾದರೋ ಒಡೆದು ಚೂರು-ಚೂರಾಗುತ್ತಿದ್ದೇವೆ."

ಮುಖರ್ಜಿಯವರು ಇವೆರಡು ಸಮುದಾಯಗಳ ನಡುವಿನ ಈ ಸಮಸ್ಯೆಗೆ ಕಾರಣವನ್ನು ಹಿಂದೂಗಳಲ್ಲಿರುವ ವೈವಿಧ್ಯದ ನೈತಿಕ ಹಿನ್ನೆಲೆಯಲ್ಲಿ ನೋಡದೆ, ಅವರ ಒಟ್ಟು ಇರುವಿಕೆಯ ಜತೆಯಲ್ಲಿ ಗಂಟುಹಾಕಿ ನೋಡಿದ್ದಾರೆ. ಮುಂದೆ 1911ರ

ಜನಗಣತಿಯಲ್ಲಿ ಹಿಂದೂಗಳ ಜನಸಂಖ್ಯೆ ಹಿಂದಿನ ಮೂರು ದಶಕಗಳಲ್ಲಿ ಇದ್ದುದಕ್ಕಿಂತ ಕಡಿಮೆಯಾಗಿರುವುದು ಲಕ್ಷ್ಯಕ್ಕೆ ಬಂತು. ಮುಖರ್ಜಿಯವರ ಈ ವಿಧದ ಜನಸಂಖ್ಯೆಯ ವಿಶ್ಲೇಷಣೆ ಅಂದಿನ ಹಿಂದೂ ನಾಯಕರ ಮೇಲೆ ಹೆಚ್ಚಿನ ಪ್ರಭಾವ ಬೀರಿತು. ಸ್ವಾಮಿ ಶ್ರದ್ಧಾನಂದರು "ಮುಖರ್ಜಿಯವರು ಹೇಳಿರುವ ಸಂಗತಿಗಳಿಂದ ನಾನು ಪೂರಾ ಪ್ರಭಾವಿತನಾಗಿರುವೆ" ಎಂದು ಬರೆದಿದ್ದರು.

ಇತ್ತ ಪಂಜಾಬಿನ ಆರ್ಯ ಸಮಾಜದ ನಾಯಕ ಲಾಲ್‌ಚಂದ್ ಅವರು 1909ರಲ್ಲಿ "ದಿ ಪಂಜಾಬಿ" ಪತ್ರಿಕೆಯಲ್ಲಿ ಸರಣಿಯಾಗಿ ಲೇಖನಗಳನ್ನು ಬರೆದರು. ಅವರ ಲೇಖನದ ಶೀರ್ಷಿಕೆ 'ರಾಜಕೀಯದಿಂದ ಆತ್ಮನಿಷೇಧ.' ಹಿಂದೂಗಳ ಪತನಕ್ಕೆ ಅವರು ಮುಖ್ಯ ಕಾರಣವನ್ನಾಗಿ ಕಂಡಿದ್ದುದು ರಾಜಕಾರಣದಿಂದ ದೂರವುಳಿಯುವಂತಹ ಅವರ ಪ್ರವೃತ್ತಿ. ಹಿಂದೂಗಳ ಹಿತದ ಬಗ್ಗೆ ಅಸಡ್ಡೆ ತೋರುತ್ತಿದ್ದ ಕಾಂಗ್ರೆಸ್‌ನ್ನು ಅವರು ಕಟುವಾಗಿ ಟೀಕಿಸಿದ್ದಾರೆ. ಹಿಂದೂಗಳು ರಾಜಕೀಯ ವೇದಿಕೆಯೊಂದರಲ್ಲಿ ಒಂದುಗೂಡಿ ಬರುವ ಅಗತ್ಯದ ಬಗ್ಗೆ ಅವರು ಒತ್ತು ನೀಡಿದ್ದಾರೆ ಮತ್ತು ಅಂದಿನ ಸಂಕಟವನ್ನು ಎದುರಿಸಲು ಅದೊಂದೇ ಮಾರ್ಗವೆಂದು ಪ್ರತಿಪಾದಿಸಿದ್ದಾರೆ.

ವಾಸ್ತವಿಕವಾಗಿ ಇವರಿಬ್ಬರೂ ರಾಜಕೀಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಹಿಂದೂಗಳಿಗೆ ಒಂದು ಕಾರ್ಯಸೂಚಿಯನ್ನು ನೀಡಿದ್ದಾರೆ. ಸುಮಾರು ಒಂದು ದಶಕವಿಡೀ ನಡೆದಿದ್ದ ಈ ಚರ್ಚೆ ಮತ್ತು ಆತ್ಮಾವಲೋಕನದಿಂದಾಗಿ ವಿವಿಧ ಸ್ಥಳಗಳಲ್ಲಿ ಸಣ್ಣಪುಟ್ಟ ಸಂಘಟನೆಗಳು ಆಗಲೇ ಆರಂಭವಾಗಿದ್ದವು. ಆರ್ಯ ಸಮಾಜವು 'ಶುದ್ಧಿ ಮತ್ತು ಸಂಘಟನೆ'ಯ ಘೋಷಣೆ ಹಾಕಿತು. ಸ್ವಾಮಿ ಶ್ರದ್ಧಾನಂದರು 'ಭಾರತೀಯ ಹಿಂದೂ ಶುದ್ಧಿ ಸಭಾ'ವನ್ನು ಸ್ಥಾಪಿಸಿದರು. 1915ರಲ್ಲಿ ಅಖಿಲ ಭಾರತೀಯ ಹಿಂದೂ ಮಹಾಸಭಾ ಸ್ಥಾಪಿತವಾಯಿತು.

ಇಸವಿ 1906ರಲ್ಲಿ ಮುಸ್ಲಿಂ ಲೀಗ್ ಆರಂಭವಾಯಿತು. ಸಾಮ್ರಾಜ್ಯವಾದಿ ಆಡಳಿತದಿಂದ ಪೋಷಣೆ ಮತ್ತು ಕಾಂಗ್ರೆಸ್‌ನ ತುಷ್ಟೀಕರಣ ನೀತಿ ಇವುಗಳಿಂದಾಗಿ ಅದು ಬಹು ಬೇಗ ಬಲಿಯಿತು. ಅಸಹಕಾರ ಆಂದೋಳನದ ನಂತರ ಕೇರಳದಲ್ಲಿ ನಡೆದ ಮೋಪ್ಲಾ ದಂಗೆಗಳ ನಂತರವಂತೂ ಹಿಂದೂವಾದಿ ರಾಜಕಾರಣದ ಅವಶ್ಯಕತೆಯೂ ಹೆಚ್ಚೆಚ್ಚು ಅನುಭವಕ್ಕೆ ಬರತೊಡಗಿತು. ಡಾ. ಮುಂಜೆಯವರ ಮುಂದಾಳುತನದಲ್ಲಿ ನಾಗಪುರದ ಒಂದು ವಿಚಾರಣಾ ಆಯೋಗವು ಮಲಬಾರಿಗೆ (ಕೇರಳಕ್ಕೆ) ತೆರಳಿ ಅಲ್ಲಿ ಹಿಂದೂಗಳ ಮೇಲಾದ ನಾನಾ ರೀತಿಯ ದೌರ್ಜನ್ಯಗಳ ಮಾಹಿತಿಗಳನ್ನು ಸಂಗ್ರಹಿಸಿ ಇಡೀ ರಾಷ್ಟ್ರದ ಲಕ್ಷ್ಯಕ್ಕೆ ತಂದಿತು. ಅಸಹಕಾರ ಆಂದೋಳನದ ನಂತರ ಮುಸ್ಲಿಂ ಮತಾಂಧ ಉಗ್ರತೆ ಇನ್ನೂ ಹೆಚ್ಚತೊಡಗಿತು. ಇದರ ಪರಿಣಾಮವಾಗಿ 1922ರಲ್ಲಿ ಗಯಾದಲ್ಲಿ ನಡೆದ ಹಿಂದೂ ಮಹಾಸಭಾದ ಅಧಿವೇಶನದಲ್ಲಿ ಒಂದು ಹೊಸ ಭೂಮಿಕೆ ಮಂಡಿಸಲ್ಪಟ್ಟಿತು. ಈ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದವರು ಪಂಡಿತ ಮದನ ಮೋಹನ ಮಾಳವೀಯ ಅವರು. ಅವರು ತಮ್ಮ ಭಾಷಣದಲ್ಲಿ ಹಿಂದೂಗಳು ತಮ್ಮ ಸ್ವಂತದ ರಕ್ಷಣೆಗಾಗಿ ಸಂಘಟಿತರಾಗಬೇಕು ಎಂಬ ಕರೆ ನೀಡಿದರು.

1906ರ ನಂತರ ಮುಸಲ್ಮಾನರ ಮನೋಧರ್ಮದಲ್ಲಾದ ಬದಲಾವಣೆ ಯಾವುದೇ ರಾಷ್ಟ್ರವಾದಿಗೆ ಅತ್ಯಂತ ಆಘಾತಕರವೆನಿಸುವಂತಹುದಾಗಿತ್ತು. ಖಿಲಾಫತ್ ಆಂದೋಲನದ ನಂತರ ಹಿಂದೂಗಳು ಮತ್ತು ಮುಸಲ್ಮಾನರ ಪರಸ್ಪರ ಸಂಬಂಧಗಳಲ್ಲಿ ಪರಿವರ್ತನೆ

ರಭಸ ಬಂತು. ಮುಸಲ್ಮಾನರ ಆಕ್ರಮಣಕಾರಿ ಮನೋಭಾವದ ಫಲವಾಗಿ ಹಿಂದೂ ಸಮುದಾಯದಲ್ಲಿ ಧ್ರುವೀಕರಣದ ಪ್ರಕ್ರಿಯೆಗೆ ವೇಗ ಲಭಿಸಿತು.

ಮೋಪ್ಲಾ ದಂಗೆಗಳ ಸಂಬಂಧದಲ್ಲಿ ನಾಗಪುರದ ಆಯೋಗದ ವರದಿಯಲ್ಲೂ ಹಿಂದೂಗಳು ತಮ್ಮ ಧರ್ಮದ ನೆಲೆಯಲ್ಲಿ ಒಂದುಗೂಡಬೇಕಾದ ಅಗತ್ಯವನ್ನು ಹೇಳಲಾಗಿತ್ತು. ವಿನಾಯಕ ದಾಮೋದರ ಸಾವರಕರರ 'ಹಿಂದುತ್ವ: ಹೂ ಈಸ್ ಎ ಹಿಂದೂ' ಎಂಬ ಗ್ರಂಥವು (1923) ಈ ಪ್ರಕ್ರಿಯೆಗೆ ಒಂದು ಸೈದ್ಧಾಂತಿಕ ನೆಲೆಗಟ್ಟನ್ನು ಒದಗಿಸಿತು. ಹೀಗೆ ಆರ್ಯ ಸಮಾಜ, ಹಿಂದೂ ಮಹಾಸಭಾ ಮತ್ತು ಇನ್ನಿತರ ಹಿಂದೂ ಸಂಘಟನೆಗಳಲ್ಲಿ ಸಮಕಾಲೀನ ಪರಿಸ್ಥಿತಿಯಲ್ಲಿ ಹಿಂದೂಗಳು ಒಂದು ರಾಜಕೀಯ ಶಕ್ತಿಯಾಗಿ ಮತ್ತು ಸಂಘಟಿತ ರೂಪದಲ್ಲಿ ಒಂದು ಪ್ರಭಾವಿ ಭೂಮಿಕೆಯನ್ನು ನಿಭಾಯಿಸುವವರಾಗಿ ಮುಂದೆ ಬರಬೇಕೆಂಬ ಬಗ್ಗೆ ಪೂರಾ ಸಹಮತವೂ ಏರ್ಪಟ್ಟಿತು. ಅಂತಹ ಶಕ್ತಿಯು ಬ್ರಿಟಿಷರ ಸಾಮ್ರಾಜ್ಯವಾದ ಮತ್ತು ಮುಸಲ್ಮಾನರ ಮತಾಂಧ ಉಗ್ರತೆ ಹಾಗೂ ದಬ್ಬಾಳಿಕೆಗೆ ಸುಯೋಗ್ಯವಾದ ಉತ್ತರವಾಗಬಲ್ಲದು ಎಂದು ಈ ಸಂಸ್ಥೆಗಳಿಗೆ ಅನಿಸಿತ್ತು. ಆದರೆ ಸವಾಲಿದ್ದುದು ಅಂತಹ ಏಕತೆಯನ್ನು ರೂಪಿಸುವುದು ಹೇಗೆ ಎಂಬ ವಿಷಯದಲ್ಲೆ. ಹಿಂದೂಗಳಲ್ಲಿ ವ್ಯಾಪಕವಾಗಿ ಇರುವ ಪರಸ್ಪರ ವಿರೋಧಾಭಾಸಗಳನ್ನು ಕೊನೆಗೊಳಿಸುವುದು ಹೇಗೆ? ಹೋಳಾಗಿರುವ ಹಿಂದೂ ಸಮಾಜವನ್ನು ರಾಷ್ಟ್ರೀಯ ಮಟ್ಟದಲ್ಲಿ ಒಂದುಗೂಡಿಸುವುದು ಹೇಗೆ? ಇಂತಹ ಮೂಲಭೂತ ಪ್ರಶ್ನೆಗಳಿಗೆ ಉತ್ತರವು ದೊರೆಯುತ್ತಿರಲಿಲ್ಲ. ಸಾವರಕರರ ಗ್ರಂಥವು ಹಿಂದೂ ರಾಷ್ಟ್ರದ ಸಾಂಸ್ಕೃತಿಕ ನೆಲೆ, ಭೌಗೋಳಿಕ ಗಡಿಗಳು ಮತ್ತು ಪೂರ್ವಜರು ಯಾರು ಎಂಬ ಜಿಜ್ಞಾಸೆಗಳಿಗೆ ಉತ್ತರವೇನೋ ಒದಗಿಸಿತ್ತು. ಆದರೆ ಈ ಸಂಬಂಧದಲ್ಲಿ ಎದ್ದ ವಿವಾದಗಳಿಗೆ ಹಿಂದೂ ಚಿಂತಕರಿಂದ ಸಮಾಧಾನಕಾರಕ ಉತ್ತರಗಳು ದೊರೆಯದಿದ್ದುದರಿಂದ ಆ ಗ್ರಂಥವು ಬುದ್ಧಿಜೀವಿಗಳ ನಡುವೆ ಕೇವಲ ಚರ್ಚೆಯ ಗ್ರಾಸವಾಗಿ ಮಾತ್ರ ಉಳಿಯುವಂತಾಯಿತು.

ಹಿಂದೂ ಪ್ರಜ್ಞೆಯ ಕುರಿತು ಚರ್ಚೆ ಮತ್ತು ಹಿಂದೂಗಳ ಭವಿಷ್ಯದ ಬಗ್ಗೆ ಯೋಜನೆಗಳನ್ನು ರೂಪಿಸುವುದರಲ್ಲಿ ಪಂ. ಮಾಳವೀಯ, ಭಾಯಿ ಪರಮಾನಂದ, ಡಾ. ಮುಂಜೆ, ವೀರ ಸಾವರಕರ್, ಸ್ವಾಮಿ ಶ್ರದ್ಧಾನಂದ ಮತ್ತು ಲಾಲಾ ಲಜಪತರಾಯ್ ಅವರು ಗಂಭೀರವಾಗಿ ತೊಡಗಿದ್ದರು. ರಾಷ್ಟ್ರೀಯತೆಗೆ ಸಂಬಂಧಿಸಿದಂತೆ ಅವರಲ್ಲಿ ಸ್ಥೂಲವಾಗಿ ಒಮ್ಮತವಿತ್ತು. ಹಿಂದೂಗಳದೇ ಪ್ರಭುತ್ವವಿರುವ ರಾಜಕೀಯ ವ್ಯವಸ್ಥೆಯಲ್ಲಿ ಅಲ್ಪಸಂಖ್ಯಾತರ ಇರುವಿಕೆಗೆ ಸಮಾಧಾನಕರ ಪರಿಹಾರ ಮುಂದೆ ತಾನಾಗಿಯೇ ದೊರೆಯುವುದು ಎಂದು ಅವರು ನಂಬಿದ್ದರು. ಅಲ್ಪಸಂಖ್ಯಾತರ ಉಗ್ರ ಆಚರಣೆಗಳಿಂದಾಗಿ ಹಿಂದೂಗಳಲ್ಲಿ ರೂಪಗೊಂಡ ಅಸುರಕ್ಷಿತತೆಯ ಭಾವವೇ ಹಿಂದೂಗಳ ರಾಜಕಾರಣಕ್ಕೆ ಪ್ರಚಾರದ ಸಾಧನವಾಗುತ್ತಿತ್ತು. 1909ರಿಂದ ಆರಂಭಿಸಿ 1923ರ ವರೆಗೂ ಹಿಂದೂಗಳ ರಾಷ್ಟ್ರವಾದಿ ಚಿಂತನೆ, ಚರ್ಚೆ, ಕಾರ್ಯಕ್ರಮಗಳು ಮತ್ತು ಜನಾಂದೋಳನಗಳಲ್ಲೂ ಮುಸಲ್ಮಾನರ ಕುರಿತಾದ ಚಿಂತನೆಯೇ ಪ್ರಧಾನ ಪಾತ್ರ ವಹಿಸುತ್ತಿತ್ತು ಎಂದರೂ ಪ್ರಾಯಶಃ ತಪ್ಪಾಗಲಾರದು. ಕಾಂಗ್ರೆಸ್ಸು ಸಮ್ಮಿಶ್ರ ರಾಷ್ಟ್ರವಾದದ ಸಿದ್ಧಾಂತವನ್ನು ಪ್ರತಿಪಾದಿಸುತ್ತ ಅದಕ್ಕೆ ಮನ್ನಣೆ ಒದಗಿಸುವ ಪ್ರಯತ್ನದಲ್ಲಿ ತೊಡಗಿತ್ತು. ಹಿಂದೂಗಳ ಚಾರಿತ್ರ್ಯದ ಮೇಲಾಗುತಿದ್ದ ಆರೋಪಗಳ ಫಲವಾಗಿ ಅಪರಾಧಿ ಪ್ರಜ್ಞೆ ಮೂಡಿಸಿಕೊಂಡು ಈ ರಾಷ್ಟ್ರೀಯ ಪಕ್ಷದ ನಾಯಕರು ಮುಸಲ್ಮಾನರ ಜಾತೀಯತೆ, ಮತಾಂಧತೆ ಮತ್ತು ಹಿಂದೂಗಳ ವಿರುದ್ಧ ಸದಾ ಕಿಡಿಕಾರುವ ಅವರ ನಡವಳಿಕೆಗಳನ್ನು

ಇನ್ನಷ್ಟು ತೆರೆಯ ಮರೆಗೆ ಸೇರಿಸಲು ಪ್ರಯತ್ನಿಸುತ್ತಿದ್ದರು. ಕಾಂಗ್ರೆಸ್‌ನ ರೀತಿನೀತಿ ಅದೆಷ್ಟು ವಿಚಿತ್ರವಾಗಿತ್ತೆಂದರೆ, ಪ್ರತ್ಯೇಕವಾದಿ ಮುಸಲ್ಮಾನರ ಜತೆ ಅದು ಗೌರವಪೂರ್ಣವಾಗಿ ಸಂವಾದ ನಡೆಸುತ್ತಿತ್ತು. ಹಿಂದೂ ಮಹಾಸಭೆಯ ನಾಯಕರ ಜತೆ ಸೌಜನ್ಯದ ಮಾತುಕತೆಗೂ ಒಪ್ಪುತ್ತಿರಲಿಲ್ಲ. ದೇಶದ ವಿಭಜನೆಯಾಗುವವರೆಗೂ ಮುಸ್ಲಿಂ ಲೀಗ್ ಸಂವಾದಕ್ಕಾಗಿ ಮತ್ತು ರಾಜಕೀಯ ಸಹಕಾರಕ್ಕಾಗಿ ಆಹ್ವಾನಿತವಾಗುತ್ತಿದ್ದರೆ, ಹಿಂದೂ ಮಹಾ ಸಭೆಯನ್ನು ಅದು ಅಸ್ಪೃಶ್ಯವಾಗಿಯೇ ಕಾಣುತ್ತಿತ್ತು.

ಇದೆಲ್ಲದರ ಜತೆಯಲ್ಲಿ ಸಮಕಾಲೀನ ಇತರ ಹಿಂದೂ ರಾಷ್ಟ್ರವಾದಿಗಳು ಹಿಂದುತ್ವ ಮತ್ತು ಹಿಂದೂ ರಾಷ್ಟ್ರದ ವಿಚಾರವನ್ನು ತುಂಬ ಸೀಮಿತವಾಗಿ ಚಿತ್ರಿಸುವುದರಲ್ಲಿ ಹಾಗೂ ಅದನ್ನು ನಿಷ್ಫಲವಾಗಿ ಮಾಡುವುದರಲ್ಲಿ ನಿರ್ವಹಿಸಿದ್ದ ಪಾತ್ರವೂ ಕಡಿಮೆ ಕಿರಿಕಿರಿಯದೇನೂ ಅಲ್ಲ. ಅವರು ಸಾರ್ವಜನಿಕ ಸಭೆಗಳು, ಸಮ್ಮೇಳನಗಳು ಮತ್ತು ಇನ್ನಿತರ ವಿಧ ರಾಜಕೀಯ ಪ್ರಚಾರದ ಕಾರ್ಯಕ್ರಮಗಳ ಮೂಲಕ ತಮ್ಮ ಚಳವಳಿಯನ್ನು ಬುದ್ಧಿಜೀವಿ ಮತ್ತು ಮಧ್ಯಮ ವರ್ಗದ ಹಿಂದೂ ಪರಿವಾರಗಳವರೆಗೆ ಮಾತ್ರ ಸೀಮಿತವಾಗಿರಿಸಿದ್ದರು. ಅವರ ಎಲ್ಲ ಕಾರ್ಯಕ್ರಮಗಳಲ್ಲಿ ಇರುತ್ತಿದ್ದ ಪಲ್ಲವಿ ಒಂದೇ - ಕಾಂಗ್ರೆಸ್‌ನ್ನು ಪದಚ್ಯುತಗೊಳಿಸಿ ಅದರ ಸ್ಥಾನದಲ್ಲಿ ಹಿಂದೂ ಮಹಾ ಸಭೆಯನ್ನು ಸ್ಥಾಪಿಸಬೇಕು ಎಂಬುದು ಮಾತ್ರ. ಅವರ ಚಿಂತನೆ, ಟೀಕೆ ಇತ್ಯಾದಿ ಎಲ್ಲವೂ ಇರುತ್ತಿದ್ದುದು ಅಲ್ಪಸಂಖ್ಯಾತರ ಬಗ್ಗೆ ಕಾಂಗ್ರೆಸ್‌ನ ನೀತಿಯ ಮತ್ತು ಲೀಗ್‌ನ ಪ್ರತ್ಯೇಕವಾದಿ ಚಟುವಟಿಕೆಗಳ ವಿರುದ್ಧ ಮಾತ್ರ. ಹೀಗಾಗಿ ಅವರ ಕಾರ್ಯ ಚಟುವಟಿಕೆಗಳು ಇರುತ್ತಿದ್ದುದೇ ಸಂಕುಚಿತ ರೀತಿಯಲ್ಲಿ. ಹಿಂದೂ ಸಮಾಜದಲ್ಲಿನ ಇನ್ನಿತರ ಸವಾಲುಗಳ ಕಡೆ - ಉದಾಹರಣೆಗಾಗಿ ಅಸ್ಪೃಶ್ಯತೆ, ಜಾತಿ ಜಾತಿಗಳ ನಡುವೆ ಮೇಲುಕೀಳು ಭಾವನೆ, ಘೋರ ರೀತಿಯ ಸ್ವಾರ್ಥ ಇತ್ಯಾದಿಗಳ ಕಡೆ ಅವರ ಲಕ್ಷ್ಯ ಹರಿಯಲೇ ಇಲ್ಲ. ಹಿಂದೂಗಳಲ್ಲಿ ಹೃದಯ ಪರಿವರ್ತನೆಯಾದರೆ ಸಾಕು, ಸಾಮಾಜಿಕ ಸಮಾನತೆ ತಾನಾಗಿಯೇ ಉಂಟಾಗುವುದು ಎಂಬ ಅತಿ ಸರಳೀಕರಿಸಿದ ಚಿಂತನೆ ಅವರದಾಗಿತ್ತು. ಇಂತಹ ಕೇವಲ ಅಧಿಕಾರ ಪ್ರಾಪ್ತಿಯ ಶ್ರೀಮಂತ ವರ್ಗದ ನಾಯಕರ ದೃಷ್ಟಿಕೋನದ ಕಾರಣದಿಂದಾಗಿ, ಸರ್ವಸಾಮಾನ್ಯ ಹಿಂದೂವಿಗೆ ಕಾಂಗ್ರೆಸ್‌ನಲ್ಲಿ ಹಲವಾರು ವಿಧ ಕೊರತೆಗಳು ಕಾಣಿಸುತ್ತಿದ್ದರೂ, ಹಿಂದೂ ಮಹಾಸಭೆಯ ನಾಯಕತ್ವದಲ್ಲಿ ವಿಶ್ವಾಸವಿರಲಿಲ್ಲ. ಹೀಗಾಗಿ ಅಂದಿನ ಹಿಂದೂ ರಾಜಕಾರಣವು ಬಹುಮತಗಳಿಸುವ ಸಲುವಾಗಿಯೇ ಉಳಿಯಿತು.

ಈ ರೀತಿಯಲ್ಲಿ ಸಮಕಾಲೀನ ವಿದ್ಯಮಾನಗಳ ನಡುವೆ ಸಂಘವನ್ನು ಆರಂಭಿಸಿದಾಗ ಡಾ. ಹೆಡಗೇವಾರರ ಮನದಲ್ಲಿ ಹಿಂದೂಗಳ ಸಂರಕ್ಷಣೆಗಾಗಿ ಒಂದು ಪಡೆಯನ್ನು ರೂಪಿಸಬೇಕು ಎಂದಾಗಲಿ ಅಥವಾ ಹಿಂದೂಗಳ ರಾಜಕಾರಣಕ್ಕಾಗಿ ಸ್ವಯಂಸೇವಕರ ಒಂದು ಸೇನೆಯನ್ನು ಕಟ್ಟಬೇಕು ಎಂಬ ವಿಚಾರವಾಗಲಿ ಇರಲಿಲ್ಲ. ಹಾಗೇನಾದರೂ ಇದ್ದಲ್ಲಿ ಅವರು ಹಿಂದೂ ಮಹಾಸಭೆಯ ವೇದಿಕೆಯಲ್ಲಿ ಹಿಂದೂಗಳ ಒಂದುಗೂಡುವಿಕೆ ಹಾಗೂ ಸುರಕ್ಷೆಯ ಕಾರ್ಯವನ್ನು ಕಟ್ಟಬಹುದಾಗಿತ್ತು. ಹಿಂದೂ ಮಹಾಸಭೆಯಲ್ಲಿ ಅವರಿಗೊಂದು ಗೌರವಾನ್ವಿತ ಸ್ಥಾನ ಇದ್ದೇ ಇತ್ತು. ಹಿಂದೂ ಮಹಾಸಭೆಯ ಎಲ್ಲ ಅಖಿಲ ಭಾರತೀಯ ನಾಯಕರು - ಪಂ. ಮಾಳವೀಯ, ಡಾ. ಮುಂಜೆ, ಭಾಯಿ ಪರಮಾನಂದ, ಪದ್ಮರಾಜ ಜೈನ್, ಡಾ. ಶ್ಯಾಮಾಪ್ರಸಾದ ಮುಖರ್ಜಿ ಮತ್ತು ಸಾವರಕರ್ ಮೊದಲಾದವರ ಜತೆ ಅವರಿಗೆ ನಿಕಟವಾದ ಸಂಪರ್ಕವಿತ್ತು. ಜಾತೀಯವಾದಿ ಘಟನೆಗಳನ್ನು ಪ್ರತಿಭಟಿಸಬೇಕು, ಹಿಂದೂ-ಹಿತದ ವಿರುದ್ಧ ಆಗುವಂತಹ ಆಕ್ರಮಣಗಳ

ವಿರುದ್ಧ ರಾಜಕೀಯವಾಗಿ ಗರ್ಜಿಸಬೇಕು ಇತ್ಯಾದಿಗಳು ಅತ್ಯಗತ್ಯವೆಂದೇ ಅವರು ತಿಳಿದಿದ್ದರು. ಈ ನಿಟ್ಟಿನಲ್ಲಿ ಮಹಾಸಭೆ ಕ್ರಿಯಾಶೀಲವಾಗಿರುವುದೂ ಅವರಿಗೆ ಗೊತ್ತಿತ್ತು. ಆದರೆ ರಾಷ್ಟ್ರೀಯ ಸಮಸ್ಯೆಗೆ ಅದೇ ಶಾಶ್ವತವಾದ ಪರಿಹಾರವಲ್ಲ ಎಂಬುದನ್ನು ಅವರು ತಿಳಿದಿದ್ದರು. ಹಿಂದೂ ಮಹಾಸಭೆ ಮಾಡುತ್ತಿದ್ದ ಕೆಲಸಗಳೆಲ್ಲವೂ ಕ್ಷಣಿಕ ಆವೇಶ ಮತ್ತು ಭಾವೋದ್ರೇಕದ ಪ್ರತಿಕ್ರಿಯೆ ಮಾತ್ರವಾಗಿರುತ್ತಿದ್ದವು. ಕೇವಲ ಯಾವುದೋ ಘಟನೆಯೊಂದಕ್ಕೆ ಪ್ರತಿಕ್ರಿಯೆಯಾಗಿ ಆಗುವಂತಹ ಕೆಲಸಗಳೆಲ್ಲವೂ, ಆ ಪ್ರಸಂಗ ತಣ್ಣಗಾದ ಕೂಡಲೇ ತಾನಾಗಿಯೇ ನಿಂತುಹೋಗುವುವು ಎಂಬುದರ ಅರಿವಿತ್ತು ಅವರಿಗೆ. ಡಾ. ಹೆಡಗೇವಾರರ ಕಲ್ಪನೆಯ ಹಿಂದೂ ಸಂಘಟನೆ ಒಂದು ಸಕಾರಾತ್ಮಕ ನೆಲೆಗಟ್ಟಿನಲ್ಲಿ, ಶಾಶ್ವತವಾಗಿ ಪ್ರಗತಿಶೀಲ ಹಾಗೂ ಸರ್ವವ್ಯಾಪ್ತಿಯಾಗಿ ಆಗಬೇಕಾದುದು ಎನ್ನುವಂತಹುದಾಗಿತ್ತು. ಅದಕ್ಕಾಗಿ ಸಮಕಾಲೀನ ಇನ್ನಿತರ ಎಲ್ಲ ಹಿಂದೂಸಂಘಟನೆಗಳ ಉಪಯುಕ್ತತೆ ಮತ್ತು ಕೊರತೆಗಳ ಚಕ್ರವ್ಯೂಹದಿಂದ ದೂರವುಳಿದು ಅವರು ತಮ್ಮದೇ ಪ್ರತ್ಯೇಕವಾದ ಹಿಂದೂ ಸಂಘಟನೆಯನ್ನು ಆರಂಭಿಸಿದರು. ಹೀಗಾಗಿ ಇಸವಿ 1925 ಭಾರತದ ರಾಷ್ಟ್ರೀಯತೆಯ ಇತಿಹಾಸದಲ್ಲಿ ಒಂದು ನೂತನ ಮೈಲುಗಲ್ಲಾಯಿತು.

## ದಾರ್ಶನಿಕ ಹಿನ್ನೆಲೆ

ಮುಖರ್ಜಿ–ಲಾಲ್‌ಚಂದ್ (1909)ರಿಂದ ಆರಂಭಿಸಿ ಮಾಳವೀಯ ಸಾವರಕರ (1923)ರ ವರೆಗೆ ವಿವಿಧ ರೀತಿಯ ಹಿಂದೂ ಚಿಂತನೆ ಮತ್ತು ಚಟುವಟಿಕೆಗಳಲ್ಲಿ ಡಾ. ಹೆಡಗೇವಾರರಿಗೆ ಅದೆಷ್ಟು ಸಹಮತವಿತ್ತು ಅಥವಾ ಇರಲಿಲ್ಲ ಎಂಬ ಬಗ್ಗೆ ಹೇಳುವುದು ಸುಲಭವೇನೂ ಅಲ್ಲ. ಸಂಘಕ್ಕೆ ಸಂಬಂಧಿಸಿ ನಡೆದಿರುವ ಎಲ್ಲ ಅಧ್ಯಯನಗಳಲ್ಲಿ ಅವರು ಸಹ ಇದೇ ಪರಂಪರೆಯ ಭಾಗವಾಗಿದ್ದರು ಎಂದು ತಿಳಿಯಲಾಗುತ್ತದೆ. ಇದು ಸಂಘದ ಚಿಂತನೆಯ ಶೈಲಿಯನ್ನು ತಿಳಿಯಲು, ವಿವರಿಸಲು ಮತ್ತು ವಿಚಾರ ಪ್ರವಾಹದಲ್ಲಿನ ನಿರಂತರತೆಯನ್ನು ಗುರುತಿಸಲು ಸುಲಭದ, ಸರಳ ರೀತಿಯೇನೊ ಆಗಬಹುದು. ಪ್ರಾಯಶಃ ಅದಕ್ಕೊಂದು ಕಾರಣವೂ ಇರಬಹುದು. ಡಾ. ಹೆಡಗೇವಾರರು ತಮ್ಮ ಸಮಕಾಲೀನ ಹಿಂದೂರಾಷ್ಟ್ರವಾದಿ ವಿಚಾರಗಳು, ಸಂಸ್ಥೆಗಳು ಮತ್ತು ನಾಯಕರ ಬಗ್ಗೆಯೂ, ಅವರ ಕೊರತೆಗಳನ್ನು ಉಲ್ಲೇಖಿಸಿ ಸಾರ್ವಜನಿಕವಾಗಿ ಆಗಲಿ, ಖಾಸಗಿ ಮಾತುಕತೆಗಳಲ್ಲಾಗಲಿ ತಮ್ಮ ಭಿನ್ನಾಭಿಪ್ರಾಯವನ್ನು ಪ್ರಕಟಿಸಿಲ್ಲ; ಮಾತ್ರವಲ್ಲ ಅಂತಹ ನಾಯಕರೊಂದಿಗೆ ಸ್ಪರ್ಧೆಗಿಳಿಯುವುದಾಗಿ ಆಗಲಿ, ತಮ್ಮದೇ ಪ್ರತ್ಯೇಕವಾದ ಸಮಾನಾಂತರ ಸಿದ್ಧಾಂತವನ್ನು ಮಂಡಿಸುತ್ತಿರುವುದಾಗಿ ಆಗಲಿ ಹೇಳಿಲ್ಲ. ಹೀಗಾಗಿ ಅವರನ್ನೂ ಕೂಡ ಡಾ. ಮುಂಜೆ, ಮಾಳವೀಯ, ಪರಮಾನಂದ ಮತ್ತು ಸಾವರಕರರ ಮಟ್ಟದ ಅದೇ ಸಾಲಿನವರೇ ಎಂಬಂತೆಯೂ ನೋಡಬಹುದು. ಆದರೆ ಸೂಕ್ಷ್ಮವಾಗಿ ವೀಕ್ಷಿಸಿದಲ್ಲಿ ಅವರ ಚಿಂತನೆ, ಸಮಕಾಲೀನ ಹಿಂದೂನಾಯಕರ ಚಿಂತನೆಗಿಂತ ಪೂರಾ ಭಿನ್ನವಾಗಿದ್ದುದು ಲಕ್ಷ್ಯಕ್ಕೆ ಬರದೆ ಇರುವುದಿಲ್ಲ.

ಅವರು ಹಿಂದೂ ಸಮಾಜ, ಸಂಸ್ಕೃತಿ ಮತ್ತು ಧರ್ಮವನ್ನು ಸಹ ಒಂದೇ ಆದ ಪ್ರಾಚೀನ ನಾಗರಿಕತೆಯ ಭಾಗವೆಂಬಂತೆ ತಿಳಿಯುತ್ತಿದ್ದವರು. ಹೀಗಾಗಿ ಭಾರತೀಯ ಜೀವನ ಮತ್ತು ರಾಷ್ಟ್ರ ಇವು ಪರಸ್ಪರ ಅಭಿನ್ನ ಎಂಬುದು ಅವರ ನಂಬಿಕೆಯಾಗಿತ್ತು. ರಾಷ್ಟ್ರವು ಹುಟ್ಟುವುದು ಜೀವನಶೈಲಿಯ ಗರ್ಭದಿಂದ ಮತ್ತು ಜೀವನಶೈಲಿಯ ಪ್ರವಾಹವು ರಾಷ್ಟ್ರದ ಮುನ್ನಡೆಗೆ ಶಕ್ತಿಪ್ರದಾನ ಮಾಡುತ್ತದೆ. ಹೀಗಾಗಿ ಹಿಂದೂ ರಾಷ್ಟ್ರವು ಸುದೀರ್ಘ

ಇತಿಹಾಸದಿಂದ ಹರಿದುಬಂದ ಒಂದು ವಿಚಾರವನ್ನು ಅದರ ಸಂಸ್ಕೃತಿಯ ಮೂಲಕ ಪ್ರತಿಬಿಂಬಿಸುವ ಕನ್ನಡಿಯೇ ಆಗಿದೆ. ಹಿಂದೂ ದರ್ಶನ, ಸಾಹಿತ್ಯ, ಸಂಸ್ಕೃತಿ ಮತ್ತು ಇತಿಹಾಸ ಇವೆಲ್ಲದರಲ್ಲಿ ಹರಿಯುವ ಜೀವರಸ ಒಂದೇ. ಹಿಂದೂಸಂಘಟನೆಯು ಈ ರಾಷ್ಟ್ರೀಯತೆಗೆ ಅದರ ಸುದೀರ್ಘ ಜೀವನ ಶೈಲಿಯ ಹಿನ್ನೆಲೆಯಲ್ಲಿ ಶಾಶ್ವತವಾದ ಗತಿಶೀಲ ಮತ್ತು ಬಲವಾದ ಆಧಾರವನ್ನು ಒದಗಿಸುವಂತಹ ಉಪಕರಣ ಮಾತ್ರವಾಗಿದೆ. ಆದಕ್ಕಾಗಿ ಹಿಂದೂಗಳ ಸಂಘಟನೆ ಒಂದು ರಾಷ್ಟ್ರೀಯ ಕಾರ್ಯವೇ ಆಗಿದೆ. ಡಾ. ಹೆಡಗೇವಾರರು "ಸಂಘದ ಕಾರ್ಯವಾಗಲಿ, ಅದರ ವಿಚಾರಧಾರೆಯಾಗಿರಲಿ ನಮ್ಮ ಹೊಸ ಶೋಧನೆಯೇನಲ್ಲ. ನಮ್ಮ ಪರಮಪವಿತ್ರವಾದ ಸನಾತನ ಹಿಂದೂ ಧರ್ಮ, ನಮ್ಮ ಪುರಾತನವಾದ ಸಂಸ್ಕೃತಿ, ನಮ್ಮ ಸ್ವಯಂಸಿದ್ಧವಾದ ಹಿಂದೂ ರಾಷ್ಟ್ರ ಮತ್ತು ಅನಾದಿಕಾಲದಿಂದಲೂ ನಮ್ಮದಾಗಿರುವ ಪರಮ ಪವಿತ್ರ ಭಗವಾ ಧ್ವಜ ಇವೆಲ್ಲವನ್ನೂ ಸಂಘವು ಅವು ಹೇಗಿವೆಯೊ ಹಾಗೆಯೇ ಎಲ್ಲರ ಮುಂದಿರಿಸಿದೆ. ಇವುಗಳಲ್ಲಿ ಪುನಃ ಚೈತನ್ಯ ತುಂಬಿಸುವ ಸಲುವಾಗಿ ಸದ್ಯದ ಪರಿಸ್ಥಿತಿಯಲ್ಲಿ ಯಾವುದು ಅನುಕೂಲವಾದ ಕಾರ್ಯದ ಪದ್ಧತಿ ಎಂದು ಸಂಘಕ್ಕೆ ಅನಿಸುತ್ತದೊ ಅದನ್ನು ಸಂಘವು ಸ್ವೀಕರಿಸುತ್ತದೆ" ಎಂದಿದ್ದರು.

ಮುಖರ್ಜಿಯವರು ಹೇಳಿದ್ದ 'ಮರಣೋನ್ಮುಖಿ ಜನಾಂಗ' ಎಂಬ ಸಿದ್ಧಾಂತವನ್ನು ಅವರು ಒಪ್ಪುತ್ತಿರಲಿಲ್ಲ. ಸಂಖ್ಯೆಯನ್ನು ಆಧರಿಸಿ ಹಿಂದೂಗಳನ್ನು ಅಳೆಯುವುದು ಮತ್ತು ಹಿಂದೂ ರಾಷ್ಟ್ರದ ಸೋಲಿನ ವಿಚಾರ ಮಾಡುವುದು ಸೀಮಿತ ಚಿಂತನೆಯ ರೀತಿ ಎಂಬುದು ಅವರ ಅಭಿಪ್ರಾಯವಾಗಿತ್ತು. ಹಿಂದೂಗಳು ಒಂದು ಸುದೀರ್ಘ ಇತಿಹಾಸವುಳ್ಳ ರಾಷ್ಟ್ರೀಯ ಜನಾಂಗವಾಗಿದ್ದಾರೆ. ಇಲ್ಲಿನ ರಾಷ್ಟ್ರೀಯತೆಯನ್ನು ಪ್ರತಿನಿಧಿಸುವವರಾಗಿದ್ದಾರೆ ಅವರು. ಹಿಂದೂ ರಾಷ್ಟ್ರೀಯತೆಯು ಭಾವನೆಗೆ ಸಂಬಂಧಿಸಿದುದು. ಈ ರಾಷ್ಟ್ರ ಈಗ ದುರ್ಬಲವಾಗಿದ್ದಲ್ಲಿ ಅದಕ್ಕೆ ಹಿಂದೂ ಸಮಾಜವು ದುರ್ಬಲವಾಗಿರುವುದೇ ಕಾರಣ. ಇಲ್ಲಿನ ಧರ್ಮ ಮತ್ತು ಸಂಸ್ಕೃತಿ ಇವುಗಳು ಸೋತಿರುವುದು, ಇಲ್ಲಿ ಸಂಘಟಿತ ಜೀವನವಿಲ್ಲದಿರುವುದರಿಂದಾಗಿ. "ಒಂದು ಸಮಾಜವು ದುರ್ಬಲವಾದಲ್ಲಿ, ಅದರ ದೌರ್ಬಲ್ಯವೇ ಹೊರಗಿನ ಆಕ್ರಮಣಗಳಿಗೆ ಅವಕಾಶ ನೀಡುವಂತಹದಾಗುತ್ತದೆ. ಜಗತ್ತಿನಲ್ಲಿ ಶಾಂತಿಭಂಗ ಮಾಡಿದ ಪಾಪವನ್ನು ಸಹ ಇಂತಹ ದುರ್ಬಲ ಸಮಾಜದ ತಲೆಗೆ ಕಟ್ಟಬೇಕಾಗುತ್ತದೆ. ಆದಕ್ಕಾಗಿ ಆಕ್ರಮಣಕಾರಿಗಳ ಮೇಲೆ ದೋಷ ಹೊರಿಸುವಂತಹ ವ್ಯರ್ಥ ಕಾಲಯಾಪನೆ ಮಾಡುವ ಬದಲು, ಜಗತ್ತಿನ ಅಶಾಂತಿಗೆ ಕಾರಣವಾಗುವಂತಹ ತನ್ನ ಸ್ವಂತದ ದೌರ್ಬಲ್ಯವನ್ನು ದೂರಗೊಳಿಸಲು ಸರ್ವವಿಧ ಪ್ರಯತ್ನ ಮಾಡುವುದೇ ದುರ್ಬಲ ಸಮಾಜವೊಂದರ ಪರಮ ಕರ್ತವ್ಯವಾಗಿದೆ" ಎಂದಿದ್ದಾರೆ ಅವರು.

ಡಾ. ಹೆಡಗೇವಾರರ ಶಕ್ತಿಯಿದ್ದುದು ಎರಡು ಸಂಗತಿಗಳಲ್ಲಿ – ಮೊದಲನೆಯದಾಗಿ, ಹಿಂದೂ ಸಮಾಜದ ರಾಜಕೀಯ ಮತ್ತು ಸಾಮಾಜಿಕ ದೌರ್ಬಲ್ಯಗಳಿಗೆ ಕಾರಣ ಮತ್ತು ಕರ್ತೃಗಳನ್ನು ಸಮಾಜದ ಹೊರಗೆ ಕಾಣಲು ಪ್ರಯತ್ನಿಸುವುದು ವಾಸ್ತವಿಕವಾಗಿ ಪಲಾಯನವಾದವಲ್ಲದೆ ಬೇರೇನೂ ಅಲ್ಲ; ಎರಡನೆಯದಾಗಿ, ಸ್ವಾತಂತ್ರ್ಯದ ಪ್ರಾಪ್ತಿಯು ಆಂತರಿಕ ಶಕ್ತಿ ಮತ್ತು ಆತ್ಮಶಕ್ತಿಯಿಂದ ಮಾತ್ರ ಸಾಧ್ಯ ಎಂಬ ವಿಚಾರದಲ್ಲಿ. ಇಂತಹ ಶಕ್ತಿಯನ್ನು ಗಳಿಸುವುದು ಹಿಂದೂಗಳಲ್ಲಿ ರಾಷ್ಟ್ರೀಯತೆಯ ಭಾವವನ್ನು ಸತತವಾಗಿ ಬೆಳೆಸಿ, ಅವರನ್ನು ಸಂಘಟಿಸುವುದರಿಂದಲೇ ಸಾಧ್ಯ. ಹಿಂದೂ ಸಮಾಜದ ದುರ್ಬಲತೆಗೆ ಕಾರಣವಾದುದು ಪರಸ್ಪರ ಒಡಕಿನ ಹಾಗೂ ಸಂಕುಚಿತ ಭಾವನೆಗಳೇ. ಆದಕ್ಕಾಗಿ

ಸಂಘಟನೆಯ ಮೊದಲ ಕಾರ್ಯವೇ ರಾಷ್ಟ್ರೀಯತೆಯನ್ನು ಆಧರಿಸಿ, ಹಿಂದೂಗಳ ಸುಪ್ತಮನದಲ್ಲಿ ಈಗಲೂ ಜೀವಂತವಾಗಿರುವ ತಮ್ಮ ಸುದೀರ್ಘ ಐತಿಹಾಸಿಕ ಏಕತೆಯನ್ನು ಇನ್ನೊಮ್ಮೆ ಸ್ಪರ್ಶಿಸಿ ಎಬ್ಬಿಸುವುದಾಗಿದೆ. ಡಾ. ಹೆಡಗೇವಾರರ ದೃಷ್ಟಿಯು ವ್ಯಾಪಕವೂ ಆಗಿತ್ತು, ಸರ್ವ ಸಮಾವೇಶಕವೂ ಆಗಿತ್ತು. ಅವರು ಸಂಘವನ್ನು ಆರಂಭಿಸಿದುದು ಮೊಪ್ಲಾ ದಂಗೆಯ ಪ್ರತಿಕ್ರಿಯೆಯಾಗಿ ಅಲ್ಲ. ಬದಲಾಗಿ ಹಿಂದೂಗಳ ರಾಷ್ಟ್ರಧರ್ಮದ ಸಕಾರಾತ್ಮಕ ಭಾವನೆಗಳ ಆಧಾರದ ಮೇಲೆ. "ಹಿಂದೂಸ್ಥಾನದಲ್ಲಿ ನಾವು ಹಿಂದೂಗಳು ಈಗ ಇಪ್ಪತ್ತೈದು ಕೋಟಿಯಷ್ಟಿದ್ದೇವೆ. ಆದರೆ ಈ ದೇಶದಲ್ಲಿ ಮೂವತ್ತೈದು ಕೋಟಿ ಜನರಿದ್ದಾರೆ. ನಮ್ಮನ್ನು ಬಿಟ್ಟು ಉಳಿದ ಹತ್ತು ಕೋಟಿ ಮಂದಿ ಎಲ್ಲಿಂದ ಬಂದರು? ಅವರೆಲ್ಲ ಹಿಂದೊಮ್ಮೆ ನಮ್ಮವರೇ ಆಗಿದ್ದವರು" ಎಂದಿದ್ದರು ಅವರು. ಇಲ್ಲಿಂದ ಮುಂದೆ ಅವರೆತ್ತಿರುವ ಪ್ರಶ್ನೆ ಅವರ ಮನದ ಸ್ಥಿಮಿತತೆ ಮತ್ತು ವ್ಯಾಪಕವಾದ ಸೈದ್ಧಾಂತಿಕ ನೆಲೆಗಟ್ಟನ್ನು ಸಂಕೇತಿಸುತ್ತಿದೆ. "ನಾವು ಅವರೆಲ್ಲರನ್ನು ಕಳೆದುಕೊಂಡಿದ್ದೇಕೆ? ನಾವು ಆಳವಾದ ನಿದ್ದೆಯಲ್ಲಿ ಮಗ್ನರಾಗಿದ್ದೆವು. ಹೀಗಾಗಿ ಅವರೆಲ್ಲ ನಮ್ಮನ್ನು ಬಿಟ್ಟು ಅಗಲಿದರು" ಎಂಬುದು ಅವರ ಅನಿಸಿಕೆಯಾಗಿತ್ತು. ಈ ರೀತಿಯಲ್ಲಿ ಒಳಮುಖವಾಗಿ ಅವರು ಮಾಡಿದ್ದ ಹಿಂದೂ ರಾಷ್ಟ್ರೀಯತೆಯ ಚಿಂತನೆ ಮತ್ತು ಅದರ ಕುರಿತು ಆಂತರಿಕವಾದ ಚರ್ಚೆ ಅವರದೇ ವಿಶೇಷತೆಯಾಗಿತ್ತು.

'ಹಿಂದೂ'ವಿನ ಬಗ್ಗೆ ಹಿಂದೂ-ರಾಷ್ಟ್ರವಾದಿಗಳು ನೀಡಿರುವ ವಿವರಣೆ ಮತ್ತು 'ಹಿಂದೂರಾಷ್ಟ್ರ'ದ ಕುರಿತ ವ್ಯಾಖ್ಯೆಯನ್ನು ಅವರು ಸಂಘದ ಆಧಾರಭೂತ ಸಿದ್ಧಾಂತವನ್ನಾಗಿ ಮಾಡಿಕೊಳ್ಳಲಿಲ್ಲ. ಕೇವಲ ಶಾಬ್ದಿಕ ವಿವರಣೆಯಲ್ಲಿ ಭಾವನೆಗಳಿಗೆ ಪ್ರಕಟರೂಪ ನೀಡಲಾಗುವುದಿಲ್ಲ ಎಂಬುದನ್ನು ಅವರು ತಿಳಿದಿದ್ದರು ಮತ್ತು ಅಪೂರ್ಣ ವಿವರಣೆಯಿಂದ ಯಾವುದೇ ಸಿದ್ಧಾಂತಕ್ಕೆ ಅಗತ್ಯವಿರುವಷ್ಟು ಶಕ್ತಿ ಲಭಿಸುವುದಿಲ್ಲ ಎಂಬುದೂ ಅವರಿಗೆ ಗೊತ್ತಿತ್ತು. ಅವರು ಸಂಘದಲ್ಲಿ ಬುದ್ಧಿವಾದವನ್ನು ಪ್ರತ್ಯಕ್ಷ ಚಟುವಟಿಕೆಗಳ ಮೂಲಕ ಮತ್ತು ಸಿದ್ಧಾಂತವನ್ನು ಪ್ರತ್ಯಕ್ಷ ನಡವಳಿಕೆಯ ಮೂಲಕ ವಿವರಿಸಲು ಮುಂದಾದರು. ಉದಾಹರಣೆಗೆ ಅದುವರೆಗೆ ಸ್ಪರ್ಶಿಸಿಲ್ಲದ – ಹಿಂದೂವಿನ ವ್ಯವಹಾರ ಹೇಗಿರಬೇಕು? ಅವನಲ್ಲಿ ರಾಷ್ಟ್ರೀಯ ಮನೋಭಾವ ಎಷ್ಟಿದೆ? ಅವನು ರಾಷ್ಟ್ರೀಯತೆ ಮತ್ತು ಸಂಸ್ಕೃತಿಯನ್ನು ಅದೆಷ್ಟು ಮೈಗೂಡಿಸಿಕೊಂಡಿದ್ದಾನೆ? ತನ್ನ ಪರಿಚಯವನ್ನು ಅವನು ಜಾತಿ, ವರ್ಗ, ಕ್ಷೇತ್ರ, ಭಾಷೆ ಇವುಗಳನ್ನು ಆಧರಿಸಿ ಮಾಡುತ್ತಾನೆಯೇ ಅಥವಾ ಒಟ್ಟು ರಾಷ್ಟ್ರೀಯತೆಯ ಭಾವಕ್ಕೆ ತನ್ನ ಆದ್ಯತೆ ನೀಡಿದ್ದಾನೆಯೇ? ತನ್ನ ಸ್ವಂತದ ನಂಬಿಕೆಗಳು ಮತ್ತು ರಾಷ್ಟ್ರಧರ್ಮ ಇವುಗಳಲ್ಲಿ ಎಷ್ಟರಮಟ್ಟಿಗೆ ಸಾಮಂಜಸ್ಯವನ್ನು ಅವನು ರೂಪಿಸಿದ್ದಾನೆ? ತನ್ನ ವ್ಯಕ್ತಿಗತ ಮತ್ತು ಕೌಟುಂಬಿಕ ಹೊಣೆಗಳಿಂದ ಮೇಲೆದ್ದು ರಾಷ್ಟ್ರದ ಹಿತದ ಬಗ್ಗೆ ಎಷ್ಟು ಹೊಣೆಗಾರಿಕೆಯನ್ನು ಅವನು ರೂಢಿಸಿಕೊಂಡಿದ್ದಾನೆ ಇತ್ಯಾದಿ ಸಂಗತಿಗಳನ್ನು ಸಂಘದ ಚಿಂತನೆ ಮತ್ತು ವ್ಯವಹಾರಗಳಿಗೆ ಅವರು ಆಧಾರವಾಗಿ ಮಾಡಿಕೊಂಡರು.

ಸಂಘಕಾರ್ಯದ ಮೂಲಮಂತ್ರವೇ ವೈಚಾರಿಕ ಸಕ್ರಿಯತೆ. "ಸಂಘವು ಒಂದು ವ್ಯಾಯಾಮಶಾಲೆಯಲ್ಲ, ಅಥವಾ ಇದೊಂದು ಕ್ಲಬ್ ಅಥವಾ, ಮಿಲಿಟರಿ ಸ್ಕೂಲ್ ಅಲ್ಲ. ಸಂಘವು ಹಿಂದೂಗಳ ಒಂದು ರಾಷ್ಟ್ರನಿಷ್ಠ ಸಂಘಟನೆಯಾಗಿದೆ. ಹಿಂದೂ-ಸಮಾಜವನ್ನು ಉಕ್ಕಿಗಿಂತಲೂ ಗಟ್ಟಿಯಾಗಿ ಮಾಡಹೊರಟಿರುವ ಸಂಘಟನೆಯಿದು" ಎನ್ನುತ್ತಿದ್ದರು ಅವರು.

ಡಾ. ಹೆಡಗೇವಾರರು ಸಂಘವನ್ನು ಆರಂಭಿಸಿದುದೇನೋ ಅಂದಿನ ಸಮಕಾಲೀನ ಸನ್ನಿವೇಶದಲ್ಲಿ. ಆದರೆ ಅದರ ಪಾತ್ರ ಕೇವಲ ಸಾಂದರ್ಭಿಕವಾಗಿ ಮಾತ್ರ ಇರದೆ, ಇನ್ನೂ ವ್ಯಾಪಕವಾಗಿ ಮೌಲ್ಯವತ್ತಾದುದೂ ಆಗಿದೆ.

## ಸಂಘಟನೆ

ಅವರ ನಿಧನದ ನಂತರ 'ಕೇಸರಿ' ಪತ್ರಿಕೆಯು "ತಿಲಕರ ನಿಧನದ ನಂತರ ಅನೇಕ ಪಕ್ಷಗಳಿದ್ದವು. ಆದರೆ ಯಾರೂ ಸಹ ರಾಷ್ಟ್ರಜೀವನಕ್ಕೆ ಅತಿ ಹೆಚ್ಚಿನ ಮಹತ್ವ ನೀಡಿ ರಾಷ್ಟ್ರಕ್ಕಾಗಿ ಹೆಮ್ಮೆಪಡುವಂತಹ, ದೇಶಭಕ್ತಿ ಮತ್ತು ಆತ್ಮಗೌರವ ಇವುಗಳ ವಿಷಯದಲ್ಲಿ ತಮ್ಮ ಲಕ್ಷ್ಯ ಕೇಂದ್ರೀಕರಿಸಿ ಕಾರ್ಯ ಮುಂದುವರಿಸಲಿಲ್ಲ. ರಾಷ್ಟ್ರದ ಬುನಾದಿಯನ್ನು ಸುದೃಢಗೊಳಿಸಲು ಇದು ತೀರಾ ಅಗತ್ಯವಾದುದು. ಡಾ. ಹೆಡಗೇವಾರರು ಇದಕ್ಕೆ ಕಾರ್ಯರೂಪ ನೀಡಿದ್ದರು" ಎಂದು ಬರೆದಿತ್ತು. ಸಂಘದ ಆರಂಭವಾದಾಗ ಅವರ ವಿಚಾರ ಪ್ರವಾಹದಲ್ಲಿ ತಪ್ಪದೇ ಇರುತ್ತಿದ್ದ ಪದವೆಂದರೆ 'ರಾಷ್ಟ್ರ' ಮತ್ತು ಸಂಘಟನೆಯಲ್ಲಿ ಇದ್ದವರೆಲ್ಲರೂ ಒಂದೇ ಶ್ರೇಣಿಯ 'ಸ್ವಯಂಸೇವಕ' ಎಂಬ ಕಾರ್ಯಕರ್ತರೇ. ಎಲ್ಲರ ಮುಂದೆ ಆದರ್ಶದ ರೂಪದಲ್ಲಿ ಇರುತ್ತಿದ್ದುದು 'ಭಗವಾ ಧ್ವಜ' ಮಾತ್ರ. ಆದರೆ ಕಾರ್ಯವು ಬೆಳೆದಂತೆ, ಅದಕ್ಕೊಂದು ಚೌಕಟ್ಟು ಸಹ ತಯಾರಾಗುತ್ತ ಬಂತು. 'ಶಾಖಾ' ಎಂಬುದು ಸ್ವಯಂಸೇವಕರ ಸಾಮೂಹಿಕ ರೂಪವಾಗಿದೆ. ಶಾಖೆಯಲ್ಲಿ ಆಡುವುದು ಸ್ವದೇಶಿ ಆಟಗಳನ್ನು, ಮತ್ತು ಅವುಗಳ ಉದ್ದೇಶವೂ ಪ್ರತಿಯೊಬ್ಬನಲ್ಲಿ ಸಾಮೂಹಿಕತೆಯ ಭಾವವನ್ನು ರೂಪಿಸುವಂತಹುದಾಗಿದೆ.

ಸಾಮಾನ್ಯವಾಗಿ ಯಾವುದೇ ಸಂಘಟನೆಯಲ್ಲಿ, ಅದಕ್ಕೊಂದು ಕಾರ್ಯತಂತ್ರ ರಚಿಸಬೇಕಾದಾಗ ಲಿಖಿತ ರೀತಿಯಲ್ಲಿ ಸದಸ್ಯರು, ಅವರು ಸಲ್ಲಿಸಬೇಕಾದ ಸದಸ್ಯತಾ ಶುಲ್ಕ ಇತ್ಯಾದಿ ನಿರ್ಧರಿಸಲ್ಪಡುತ್ತವೆ. ಆದರೆ ಡಾ. ಹೆಡಗೇವಾರರು ಅಂತಹ ಯಾವುದೇ ಸಂಗತಿಯನ್ನು ಸಂಘದಲ್ಲಿ ಬಳಸಲಿಲ್ಲ. ಶಾಖೆಯಲ್ಲಿ ಪಾಲ್ಗೊಳ್ಳುವಿಕೆ ಮತ್ತು ಸದಸ್ಯತ್ವವನ್ನು ಸಹ ಪೂರಾ ಅವರವರ ಇಚ್ಛೆಗನುಗುಣವಾಗಿ ಇರಲೆಂದು ಅವಕಾಶ ನೀಡಿದರು. ರಾಷ್ಟ್ರಕ್ಕೆ ಸಂಬಂಧಿಸಿದಂತೆ ಪ್ರತಿಯೊಬ್ಬರ ಭಾವನಾತ್ಮಕ ನಿಷ್ಠೆಯೇ ಸಂಘದ ಸದಸ್ಯರನ್ನು ಒಂದಾಗಿ ಬೆಸೆಯುವ ಆಧಾರವಾಯಿತು. ಶಾಖೆಯು ಒಂದು ವ್ಯಾಯಾಮಶಾಲೆ ಅಥವಾ ಶಾರೀರಿಕ ತರಬೇತಿಯ ಕೇಂದ್ರವಾಗಿರದೆ, ಪ್ರತಿಯೊಬ್ಬನಲ್ಲೂ ವೈಚಾರಿಕ ಕ್ರಾಂತಿಯನ್ನು ತರುವಂತಹ ಒಂದು ನಿಯಮಿತವಾಗಿ ನಡೆಯುವ ಕೇಂದ್ರವಾಗಿದೆ. ಸ್ವಯಂಸೇವಕರಿಗೆ ಹೆಚ್ಚಿನ ತರಬೇತಿಯನ್ನು ನೀಡಿ, ಅವರ ನಿಷ್ಠೆಯನ್ನು ಸುದೃಢಗೊಳಿಸುವ ಸಲುವಾಗಿ 'ಸಂಘ ಶಿಕ್ಷಾ ವರ್ಗ' ನಡೆಸುವ ರೂಢಿ ಜಾರಿಗೆ ಬಂತು. ಆರಂಭದ ದಿನಗಳಲ್ಲಿ ಅದನ್ನು 'ಅಧಿಕಾರಿ ಪ್ರಶಿಕ್ಷಣ ಶಿಬಿರ' ಎಂದು ಹೇಳಲಾಗುತ್ತಿತ್ತು. ಅದರಲ್ಲಿ ತರಬೇತಿ ಪಡೆದಿರುವ ಸ್ವಯಂಸೇವಕರು ಕಾರ್ಯದ ವಿಸ್ತಾರ ಮಾಡುವವರಾಗುತ್ತಾರೆ. ಹೀಗೆ ಒ.ಟಿ.ಸಿ. ಎಂದು ಹೇಳಲಾಗುವ ಈ ಪ್ರಶಿಕ್ಷಣ ಶಿಬಿರದ ಪದ್ಧತಿ 1929ರಲ್ಲಿ ಆರಂಭವಾಯಿತು.

ಡಾ. ಹೆಡಗೇವಾರರು ನಾಲ್ಕು ವರ್ಷಗಳ ನಂತರ ಈ ರೀತಿಯಲ್ಲಿ ಪ್ರಶಿಕ್ಷಣ ಪಡೆದಿರುವ ಕಾರ್ಯಕರ್ತರಲ್ಲಿ ಸಂಘದ ಕಾರ್ಯಕ್ಕಾಗಿ ಸ್ವಇಚ್ಛೆಯಿಂದ ಪೂರ್ಣ ಸಮಯ ಕೊಡಲು ತಯಾರಾಗಿರುವವರನ್ನು ಪ್ರಾಂತದ ಬೇರೆ ಬೇರೆ ಊರುಗಳಲ್ಲಿ, ಕೆಲವೊಮ್ಮೆ ಅನ್ಯ ಪ್ರಾಂತಗಳಿಗೂ ಕಾರ್ಯವಿಸ್ತಾರಕ್ಕಾಗಿ ಕಳುಹಿಸಲಾರಂಭಿಸಿದರು. ಅಂತಹವರೆಲ್ಲರನ್ನೂ

'ಪ್ರಚಾರಕರು' ಎಂದು ಹೇಳಲಾಯಿತು. ಸಂಘಟನೆಯ ಕಾರ್ಯರಚನೆಯಲ್ಲಿ 'ಪ್ರಚಾರಕ'ರು ಅತಿ ಹೆಚ್ಚಿನ ನಿಷ್ಠೆಯಿಂದ ಕಾರ್ಯ ಮಾಡುವವರಾಗಿರುತ್ತಾರೆ.

ಹದಿನಾಲ್ಕು ವರ್ಷಗಳಲ್ಲಿ ಸಂಘ ಕಾರ್ಯದ ವಿಸ್ತಾರ ಸುದೂರದವರೆಗೆ ಆದ ನಂತರ ಡಾ. ಹೆಡಗೇವಾರರು ನಾಗಪುರದ ಸಮೀಪದಲ್ಲಿನ ಸಿಂದಿ ಎಂಬ ಒಂದು ಗ್ರಾಮದಲ್ಲಿ 1939ರಲ್ಲಿ ಒಂದು ಬೈಠಕ್ ಏರ್ಪಡಿಸಿದರು. ಹತ್ತು ದಿನಗಳ ಕಾಲ ನಡೆದ ಈ ಬೈಠಕ್‌ನಲ್ಲಿ ಅವರಲ್ಲದೆ, ಮಾ.ಸ. ಗೋಲ್ವಾಳ್ಕರ್, ಅಪ್ಪಾಜಿ ಜೋಶಿ, ನಾನಾಸಾಹೇಬ ಟಾಲಾಟುಲೆ, ದೇವರಸ್ ಮೊದಲಾದವರು ಪಾಲ್ಗೊಂಡಿದ್ದರು. ಸಂಘದ ಇತಿಹಾಸದಲ್ಲಿ ಈ ಬೈಠಕ್ ಅತ್ಯಂತ ಮಹತ್ವದ್ದೆನಿಸಿತು. ಶಾಖೆಯ ನಿಯಮಗಳು, ಸಂಘದ ಪ್ರಾರ್ಥನೆ, ಪ್ರತಿಜ್ಞೆ, ಇತ್ಯಾದಿ ಸಂಗತಿಗಳು ಈ ಬೈಠಕ್‌ನಲ್ಲಿ ನಿರ್ಧರಿತವಾದವು. ಸಂಘದ ಕಾರ್ಯ ಎರಡು ಸಮಾನಾಂತರ ಸ್ತರಗಳಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ರೀತಿಯಲ್ಲಿ ನಡೆಯುತ್ತದೆ. ಔಪಚಾರಿಕವಾಗಿ ಸಂಘದ ಕಾರ್ಯರಚನೆ ಮುಖ್ಯ ಶಿಕ್ಷಕನಿಂದ ಆರಂಭಿಸಿ ಸರಸಂಘಚಾಲಕರವರೆಗೆ ಸುದೀರ್ಘವಾಗಿ ಇರುತ್ತದೆ. ಅನೌಪಚಾರಿಕವಾಗಿ, ಸ್ವಯಂಸೇವಕರು ಔಪಚಾರಿಕ ಸ್ಥಾನಮಾನಗಳ ಹೊರಗಿದ್ದುಕೊಂಡು ಸಂಘಟನೆಗೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನೂ ನಿರ್ವಹಿಸುತ್ತಾರೆ. ಈ ವಿಧದ ಔಪಚಾರಿಕ ಮತ್ತು ಅನೌಪಚಾರಿಕ ಕಾರ್ಯ ವ್ಯವಸ್ಥೆಯ ಕಾರಣದಿಂದಾಗಿಯೇ ಒಬ್ಬನೇ ವ್ಯಕ್ತಿ ಹೆಚ್ಚಿನ ಜವಾಬ್ದಾರಿ ವಹಿಸಿ ಕಾರ್ಯ ಮಾಡಿದ ನಂತರ, ತನಗಿಂತ ಕೆಳಗಿನ ಜವಾಬ್ದಾರಿ ವಹಿಸುವವನ ಕೈಕೆಳಗಿದ್ದೂ ಸಹ, ಯಾವುದೇ ಅಧಿಕಾರವೇ ಇಲ್ಲದೆ ಅಥವಾ ಹೋಲಿಕೆಯಲ್ಲಿ ಸಣ್ಣ ಜವಾಬ್ದಾರಿಯನ್ನು ವಹಿಸುತ್ತ ಕೂಡ ಕಾರ್ಯ ಮಾಡುವವನಾಗಿರಬಹುದು. ಹೀಗಾಗಿ ಅನ್ಯ ಸಂಘಟನೆಗಳಿಗಿಂತ ಭಿನ್ನವಾಗಿ ಸಂಘದಲ್ಲಿ ಶಕ್ತಿಯ ಕೇಂದ್ರವು ವಿವರಣೆ ಇಲ್ಲದೆಯೂ ಅಥವಾ ಅಗೋಚರವಾಗಿಯೂ ಇರಬಲ್ಲುದು. ಇದಕ್ಕೆ ಮುಖ್ಯ ಕಾರಣವಾಗಿದ್ದುದು ಡಾ. ಹೆಡಗೇವಾರರು 'ಸಾಮೂಹಿಕ ನಾಯಕತ್ವ'ದ 'ಸಾಮೂಹಿಕ ಜವಾಬ್ದಾರಿ'ಯ ಹಾಗೂ 'ಸಮಾಲೋಚನೆ'ಯ ಮೂಲಕ ನಿರ್ಣಯಗಳನ್ನು ಕೈಗೊಳ್ಳುವ ಪದ್ಧತಿಯನ್ನು ಅನುಸರಿಸುತ್ತಿದ್ದುದು. ಸಂಘದ ಪ್ರತಿಯೊಬ್ಬ ಸದಸ್ಯನೂ ಮೂಲತಃ ಓರ್ವ ಸ್ವಯಂಸೇವಕನೇ ಆಗಿರುತ್ತಾನೆ. ಸರಸಂಘಚಾಲಕರ ಸ್ಥಾನ ಅತ್ಯುಚ್ಚವಾದುದು ಹಾಗೂ ಅದು ಓರ್ವ 'ಮಾರ್ಗದರ್ಶಕ, ದಾರ್ಶನಿಕ ಮತ್ತು ಮಿತ್ರ'ನಂತೆ ಎಂದು ತಿಳಿಯಲಾಗುತ್ತದೆ. ಸಂಘದ ಕಾರ್ಯರಚನೆ ಇನ್ನಿತರ ಪರಂಪರಾಗತ ಸಂಸ್ಥೆಗಳಿಗಿಂತ ಭಿನ್ನ ಹಾಗೂ ವಿಶಿಷ್ಟವಾಗಿರುವುದು ಈ ಹಿನ್ನೆಲೆಯಲ್ಲಿ. ಸಾಮಾನ್ಯವಾಗಿ ಒಂದು ಸಂಘಟನೆ ಕಟ್ಟಬೇಕಾದಲ್ಲಿ ಅದಕ್ಕಾಗಿ ಹಣಕಾಸು ವ್ಯವಸ್ಥೆ, ಕಾರ್ಯಾಲಯ, ಚಂದಾಗೆ ರಸೀತಿ ಮತ್ತು ಅಧಿಕಾರ ಸ್ಥಾನಗಳ ನಿರ್ಧಾರ ಈ ರೀತಿ ಆರಂಭವಾಗುತ್ತದೆ. ನಂತರವಷ್ಟೇ ಅದರ ಕಾರ್ಯವಿಸ್ತಾರದ ಯೋಜನೆ ಮಾಡಲಾಗುತ್ತದೆ. ಆದರೆ ಡಾ. ಹೆಡಗೇವಾರರು ಹೆಸರೇ ಇಲ್ಲದೆ, ಅಧಿಕಾರ ಸ್ಥಾನಗಳನ್ನು ಸೃಷ್ಟಿಸದೆ, ಸಂಘದ ಕಾರ್ಯವನ್ನು ಆರಂಭಿಸಿದರು. ಆರಂಭವಾದ ಆರು ತಿಂಗಳ ನಂತರ ಸಂಘಕ್ಕೊಂದು ಹೆಸರು ನೀಡಲ್ಪಟ್ಟರೂ, ಸರಸಂಘಚಾಲಕ, ಸರಕಾರ್ಯವಾಹ ಮತ್ತು ಸರಸೇನಾಪತಿ ಇತ್ಯಾದಿ ಅಧಿಕಾರ ಸ್ಥಾನಗಳು ನಾಲ್ಕು ವರ್ಷಗಳ ನಂತರ ಆದವು. ಸರಸಂಘಚಾಲಕ ಪದವಿಯು ನಿರ್ಧಾರವಾದುದಂತೂ ಇನ್ನೂ ವಿಶೇಷ ರೀತಿಯಲ್ಲೆ.

ದಿನೇ ದಿನೇ ಬದಲಾಗುತ್ತಿರುವ ದೇಶದ ರಾಜಕೀಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಸಂಘದ ನಿಲುವಿನ ಬಗ್ಗೆ ವಿಚಾರ ವಿಮರ್ಶೆ ಮಾಡುವ ಸಲುವಾಗಿ ಕೆಲವು ಪ್ರಮುಖ

ಸ್ವಯಂಸೇವಕರ ಎರಡು ದಿನಗಳ ಬೈಠಕ್‌ವೊಂದನ್ನು 1929ರ ನವೆಂಬರ್ 9 ಮತ್ತು 10ರಂದು ಡಾ. ಹೆಡಗೇವಾರರು ಏರ್ಪಡಿಸಿದ್ದರು. ಈ ಬೈಠಕ್‌ನಲ್ಲಿ ಕಾಂಗ್ರೆಸ್‌ನ ಕಾರ್ಯಕ್ರಮಗಳಿಗೆ ಸಂಬಂಧಿಸಿ ಸಂಘದ ನೀತಿಗಳು ಮತ್ತು ಕಾರ್ಯದ ವಿಸ್ತಾರದ ಕುರಿತು ಚರ್ಚೆಯಾಯಿತು. ಸಂಘದ ಕಾರ್ಯದ ಆಧಾರವಾಗಿ ಏಕಚಾಲಕಾನುವರ್ತಿತ್ವ ಬಳಸಿಕೊಳ್ಳಬೇಕೆಂದು ಅಲ್ಲಿ ನಿರ್ಧಾರವಾಯಿತು. ಅದೊಂದು ವಿಶೇಷ ಮಹತ್ವದ ನಿರ್ಧಾರವಾಗಿತ್ತು. ಈ ವಿಷಯದಲ್ಲಿ ಗಹನವಾದ ಚರ್ಚೆ ನಡೆಯಿತು. ಈ ಚರ್ಚೆಯಲ್ಲಿ ವಿಶ್ವನಾಥರಾವ್ ಕೇಳ್ಕರ್, ತಾತ್ಯಾಜಿ ಕಾಳೀಕರ್, ಅಪ್ಪಾಜಿ ಜೋಶಿ, ಬಾಪುರಾವ್ ಮುಠಾಳ, ಬಾಬಾಸಾಹೇಬ ಕೋಲತೆ, ಬಾಳಾಜಿ ಹುದ್ದಾರ್, ಕೃಷ್ಣರಾವ್ ಮೊಹರೀರ್, ಮಾರ್ತಾಂಡ ರಾವ್ ಜೋಗ್ ಹಾಗೂ ದೇವಯೀಕರ್ ಮೊದಲಾದವರು ಪಾಲ್ಗೊಂಡಿದ್ದರು.

ಸಂಘಕ್ಕೆ ಪಶ್ಚಿಮದ ಮಾದರಿಯ ಸಂಘಟನೆಗಳಿಗಿಂತ ಭಿನ್ನವಾದ ಸ್ವರೂಪವನ್ನು ಏಕಚಾಲಕಾನುವರ್ತಿತ್ವದ ಕಲ್ಪನೆಯು ನೀಡುತ್ತದೆ. ಇದು ಏಕಕಾಲದಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ಇವೆರಡೂ ಮಾದರಿಗಳ ಸಮ್ಮಿಶ್ರವಾಗಿರುವಂತಹುದು. ಸಂಘದಲ್ಲಿ ಓರ್ವ ವ್ಯಕ್ತಿಗೆ ಲಭಿಸುವ ಮಹತ್ವವು ಆತನ 'ನೈತಿಕ ಶಕ್ತಿ'ಯನ್ನು ಅವಲಂಬಿಸಿ ಇರುತ್ತದೆ. ಏಕಚಾಲಕಾನುವರ್ತಿತ್ವವು ಸಂಘಕ್ಕೆ ಪಾರಿವಾರಿಕ ಸ್ವರೂಪವನ್ನು ನೀಡುವಂತಹುದಾಗಿದೆ. ಸಂಘದ ಕಾರ್ಯರಚನೆ ಒಂದು ಕುಟುಂಬದ ರೀತಿಯದು. ಇದರ ಎಲ್ಲ ಸದಸ್ಯರು ಒಂದು ಸಮಾನವಾದ ಧ್ಯೇಯದ ಪ್ರಾಪ್ತಿಗಾಗಿ ಸ್ವಇಚ್ಛೆಯಿಂದ ಮತ್ತು ಸಮಾನ ನಿಷ್ಠೆಯಿಂದ ಕಾರ್ಯಕ್ಕೆ ತಮ್ಮನ್ನು ಸಮರ್ಪಿಸಿಕೊಂಡು ಯೋಗ್ಯ ನಾಯಕರ ನಿರ್ದೇಶನದಂತೆ ಕಾರ್ಯ ಮಾಡುತ್ತಾರೆ.

ಬೈಠಕ್‌ನಲ್ಲಿದ್ದ ಈ ಒಂಭತ್ತು ಕಾರ್ಯಕರ್ತರು ಈ ವಿಧದ ಚಿಂತನೆಯನ್ನು ಅನ್ಯ ಸ್ವಯಂಸೇವಕರೊಂದಿಗೂ ಚರ್ಚಿಸಿ "ಸರಸಂಘಚಾಲಕ" ಪದವನ್ನು ಸೃಷ್ಟಿಸಿದರು. ಅವರು ನಡೆಸಿದ್ದ ಈ ಅನೌಪಚಾರಿಕ ಚರ್ಚೆಯ ಬಗ್ಗೆ ಸ್ವತಃ ಡಾ. ಹೆಡಗೇವಾರರಿಗೂ ಗೊತ್ತಿರಲಿಲ್ಲ.

ಬೈಠಕ್‌ನ ಎರಡನೇ ದಿನ ಎಲ್ಲ ಸ್ವಯಂಸೇವಕರ ಒಂದು ವಿಶೇಷ ಸಭೆಯನ್ನು ಕರೆಯಲಾಗಿತ್ತು. ಬೈಠಕ್‌ನಲ್ಲಾದ ನಿರ್ಣಯಕ್ಕೆ ಕಾರ್ಯರೂಪ ನೀಡುವ ಸಲುವಾಗಿ ಡಾ. ಹೆಡಗೇವಾರರು ಕಾರ್ಯಕ್ರಮಕ್ಕೆ ಆಗಮಿಸಿದಂತೆಯೇ ಅಪ್ಪಾಜಿ ಜೋಶಿಯವರು 'ಸರಸಂಘಚಾಲಕ ಪ್ರಣಾಮ್ - ಏಕ್, ದೋ, ತೀನ್' ಎಂದು ಎಲ್ಲ ಸ್ವಯಂ-ಸೇವಕರಿಗೆ ಜೋರಾಗಿ ಆದೇಶ ನೀಡಿದರು. ಅಲ್ಲಿ ಹಾಜರಿದ್ದ ಸ್ವಯಂಸೇವಕರೆಲ್ಲ ಡಾ. ಹೆಡಗೇವಾರರಿಗೆ ಸರಸಂಘಚಾಲಕರ ನಿಟ್ಟಿನಲ್ಲಿ ಪ್ರಣಾಮ ಸಲ್ಲಿಸಿದರು. ಡಾ. ಹೆಡಗೇವಾರರು ಕ್ಷಣಕಾಲ ಅವಾಕ್ಕಾದರು. ಕಾರ್ಯಕ್ರಮದ ನಂತರ ಅವರು ಅಪ್ಪಾಜಿ ಜೋಶಿಯವರ ಬಳಿ ತಮ್ಮ ಅಸಮ್ಮತಿಯನ್ನು ಸೂಚಿಸುತ್ತ, "ನನಗಿದು ಸರಿ ಕಾಣಲಿಲ್ಲ. ನನಗಿಂತ ಹಿರಿಯರಾಗಿರುವ ಆದರಣೀಯರು ಮತ್ತು ತ್ಯಾಗಿಗಳಿಂದ ನಾನು ಪ್ರಣಾಮ ಸ್ವೀಕರಿಸುವುದು ನನಗೆ ಉಚಿತವೆನಿಸುವುದಿಲ್ಲ" ಎಂದರು.

ಆಗ ಅಪ್ಪಾಜಿಯವರು "ಇದು ಸಂಘದ ಸಾಮೂಹಿಕ ನಿರ್ಣಯವಾಗಿದೆ. ಸಂಘಟನೆಯ ಹಿತಕ್ಕಾಗಿ, ನಿಮಗೆ ಸ್ವತಃ ಅಸಮಾಧಾನಕರ ಎನಿಸುವಂತಹ ಈ ಸಂಗತಿಯನ್ನು ನೀವು ಸ್ವೀಕರಿಸಬೇಕಾದ ಅಗತ್ಯವಿದೆ" ಎಂದು ತಿಳಿಸಿದರು.

ಸರಸಂಘಚಾಲಕರು ಸಂಘದಲ್ಲಿ ಕುಟುಂಬದ ಯಜಮಾನನಂತೆ ಇರುವವರು. ಡಾ. ಹೆಡಗೇವಾರರು ಸರಸಂಘಚಾಲಕ ಸ್ಥಾನಕ್ಕೆ ಸಂಬಂಧಿಸಿದಂತೆ ತಮ್ಮ ಚಿಂತನೆಯ ರೀತಿಯನ್ನು ಸ್ವಯಂಸೇವಕರ ಮುಂದಿರಿಸಿ, ತಮ್ಮ ಪ್ರಜಾಸತ್ತಾತ್ಮಕ ಮನೋಭಾವ, ರೀತಿನೀತಿ ಮತ್ತು ಆದರ್ಶಗಳನ್ನು ಸಂಘದಲ್ಲಿ ಒಂದು ಪರಂಪರೆಯಾಗಿ ಬೆಳೆಸಿದರು. 1933ರಲ್ಲಿ ಅವರು ಈ ಕುರಿತು ಹೀಗೆ ಬರೆದಿರಿಸಿದರು.

- ಈ ರಾಷ್ಟ್ರೀಯ ಸ್ವಯಂಸೇವಕ ಸಂಘದ ಜನ್ಮದಾತ ಅಥವಾ ಸಂಸ್ಥಾಪಕ ನಾನಲ್ಲ, ತಾವೆಲ್ಲರೂ – ಇದು ನನಗೆ ಚೆನ್ನಾಗಿ ಗೊತ್ತಿದೆ.
- ನಿಮ್ಮ ಇಚ್ಛೆಯಂತೆ ಮತ್ತು ಆಜ್ಞೆಯಂತೆ, ನೀವು ಸೃಷ್ಟಿಸಿರುವ ಈ ಸಂಘದ ಪಾಲನೆಗೆ ದಾಯಿಯ ರೀತಿಯಲ್ಲಿ ನಾನು ಕೆಲಸ ಮಾಡುತ್ತಿದ್ದೇನೆ.
- ಇನ್ನು ಮುಂದಕ್ಕೂ ನೀವು ಬಯಸುವವರೆಗೆ ಮತ್ತು ನಿಮ್ಮ ಅನುಮತಿ ಇರುವವರೆಗೆ ನಾನು ಈ ಕಾರ್ಯವನ್ನು ಮಾಡುವೆನು. ಈ ಕಾರ್ಯವನ್ನು ಮಾಡುವಾಗ ಎಂತಹ ವಿಪತ್ತುಗಳೇ ಬರಲಿ, ಮಾನಾಪಮಾನಗಳನ್ನು ಸಹಿಸುವ ಸಂದರ್ಭಗಳೇ ಬರಲಿ, ನಾನು ಎಂದಿಗೂ ಹೆಜ್ಜೆಯನ್ನು ಹಿಂದಿಡಲಾರೆ.
- ಒಂದು ವೇಳೆ ಈ ಕಾರ್ಯ ಮಾಡಲು ನಾನು ಅನರ್ಹನಾಗಿದ್ದೇನೆ, ಆದ್ದರಿಂದ ಸಂಘಕ್ಕೆ ಹಾನಿಯಾಗುತ್ತದೆ, ಎಂದು ನಿಮಗೆ ಕಂಡು ಬಂದಲ್ಲಿ ಇನ್ನೊಬ್ಬ ಯೋಗ್ಯ ವ್ಯಕ್ತಿಯನ್ನು ನೀವು ಆಯ್ದುಕೊಳ್ಳಬಹುದು.
- ನಿಮ್ಮ ಆಜ್ಞೆಯಂತೆ ಎಷ್ಟು ಸಂತೋಷದಿಂದ ನಾನು ಈ ಪದವಿಯನ್ನು ಅಲಂಕರಿಸಿದೆನೋ, ಅಷ್ಟೇ ಸಂತೋಷದಿಂದ ನೀವು ನಿಯುಕ್ತಿ ಮಾಡುವ ಹೊಸ ವ್ಯಕ್ತಿಗೆ ಎಲ್ಲ ಅಧಿಕಾರ ಸೂತ್ರಗಳನ್ನು ವಹಿಸಿಕೊಟ್ಟು ನಾನು ಆತನ ಆಜ್ಞೆಯನ್ನು ಪಾಲಿಸುವ ಸ್ವಯಂಸೇವಕನಾಗಿ ಕೆಲಸ ಮಾಡುವೆನು.
- ನನ್ನ ಮಟ್ಟಿಗೆ ಹೇಳುವುದಾದರೆ ನನಗೆ ನನ್ನ ವ್ಯಕ್ತಿತ್ವ ಹಿರಿದಲ್ಲ. ಸಂಘ ಕಾರ್ಯ ಹಿರಿದು ಮತ್ತು ಸಂಘದ ಹಿತಕ್ಕಾಗಿ ಯಾವುದೇ ಕೆಲಸ ಮಾಡಲು ನನಗೆ ಎಂದಿಗೂ ಅಪಮಾನವೆನಿಸದು.
- ಸಂಘಚಾಲಕರ ಆಜ್ಞೆಯನ್ನು ಸ್ವಯಂಸೇವಕರು ಯಾವುದೇ ಪರಿಸ್ಥಿತಿಯಲ್ಲೂ ಮೀನಮೇಷ ಎಣಿಸದೆ ಪಾಲಿಸುವುದು ಆವಶ್ಯಕ. 'ಮೂಗಿಗಿಂತ ಮೂಗುತಿ ಭಾರ' ಆಗುವಂತಹ ಸ್ಥಿತಿ ಸಂಘಕ್ಕೆ ಎಂದಿಗೂ ಬಾರದು. ಅದೇ ಸಂಘದ ಯಶಸ್ಸಿನ ರಹಸ್ಯ.
- ಆದ್ದರಿಂದ ಸ್ವತಃ ಆಜ್ಞಾಪಾಲನೆ ಮಾಡುವುದು ಮತ್ತು ಅನ್ಯ ಸ್ವಯಂಸೇವಕರು ಆಜ್ಞಾಪಾಲನೆ ಮಾಡುವಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ಸ್ವಯಂಸೇವಕನ ಆದ್ಯ ಕರ್ತವ್ಯವಾಗಿದೆ.

ಸಂಘಟನೆಯೊಂದರ ಪ್ರಮುಖನಾಗಿರುವವನ ಯಾವ ವಿಚಾರ, ನಡವಳಿಕೆ ಮತ್ತು ಮಾಡುವಂತಹ ಎಲ್ಲ ಕೆಲಸಗಳಲ್ಲೂ ಪರಸ್ಪರ ಸಾಮಂಜಸ್ಯವಿರುತ್ತದೊ ಅಂತಹವನು ಆದರ್ಶ ಪುರುಷನಾಗಿ ಸಂಘಟನೆಯ ದೀಪಸ್ತಂಭವಾಗುತ್ತಾನೆ. ಡಾ. ಹೆಡಗೇವಾರರ ವಾಣಿ ಮತ್ತು ಮಾತುಗಳಲ್ಲಿ ಮಾತ್ರ ಆದರ್ಶವಿದ್ದುದಲ್ಲ, ಅವರು ಅದನ್ನು ತಮ್ಮ

ಬದುಕಿನಲ್ಲೂ ಅಕ್ಷರಶಃ ಕೃತಿಗಿಳಿಸಿದ್ದರು. ಹೀಗಾಗಿಯೇ ಆದ್ಯ ಸರಸಂಘಚಾಲಕರಾಗಿ ಅವರು ತಮ್ಮ ಜೀವನದಲ್ಲಿ ಮತ್ತು ದೇಹಬಿಟ್ಟ ನಂತರವೂ ಸ್ವಯಂಸೇವಕರಿಗೆ ಜೀವಂತ ಪ್ರೇರಣೆಯ ಕೇಂದ್ರವಾಗಿ ಉಳಿದರು. ತಮ್ಮ ಕೆಲಸ – ಕಾರ್ಯಗಳ ಮೂಲಕ ಅವರು ಏಕಚಾಲಕಾನುವರ್ತಿತ್ವವನ್ನು ಸಂಘದ ಕಾರ್ಯ ಪದ್ಧತಿಯಲ್ಲಿ ಒಂದು ಆದರ್ಶ ವ್ಯವಸ್ಥೆಯನ್ನಾಗಿ ರೂಪಿಸಿದರು.

ಸಂಘದ ಕಾರ್ಯವ್ಯಾಪ್ತಿ ಹೆಚ್ಚುತ್ತಿದ್ದಂತೆಯೆ ಕಾರ್ಯನಿರ್ವಹಣೆ ಬಗ್ಗೆ ನಿರ್ಣಯಗಳನ್ನು ಕೈಗೊಳ್ಳಲಾಯಿತು. ಸರಸಂಘಚಾಲಕ ಸ್ಥಾನ ನಿರೂಪಣೆ ನಂತರ ಸರಕಾರ್ಯವಾಹ (ಪ್ರಧಾನ ಕಾರ್ಯದರ್ಶಿ) ಮತ್ತು ಸರಸೇನಾಪತಿ ಸ್ಥಾನ ರೂಪಿಸಲಾಯಿತು.

ಅಖಿಲ ಭಾರತೀಯ ಪ್ರತಿನಿಧಿ ಸಭಾ ಮತ್ತು ಅಖಿಲ ಭಾರತೀಯ ಕಾರ್ಯಕಾರಿ ಮಂಡಲಗಳಲ್ಲಿ ನೀತಿ ಮತ್ತು ಕಾರ್ಯಕ್ರಮಗಳ ಬಗ್ಗೆ ನಿರ್ಧಾರ ಕೈಗೊಳ್ಳಲಾಗುತ್ತದೆ. ಡಾ. ಹೆಡಗೇವಾರ್ ಅವರು ಸಲಹೆ ಸೂಚನೆ ಪಡೆದು 1940ರಲ್ಲಿ ಶ್ರೀ ಗೋಳ್ವಾಳ್ಕರ್ ಅವರನ್ನು ತಮ್ಮ  ಉತ್ತರಾಧಿಕಾರಿಯಾಗಿ ನಿಯುಕ್ತಿ ಮಾಡಿದರು. ಇದೇ ಪರಂಪರೆ ಮುಂದುವರೆದಿದೆ.

ಸಂಘದ ಹಣಕಾಸಿನ ವ್ಯವಸ್ಥೆಯನ್ನು ಸಂಘಟನೆಯ ಮಟ್ಟದಲ್ಲೆ ಮಾಡಲಾಗುತ್ತದೆ. ವರ್ಷದಲ್ಲೊಮ್ಮೆ ಸ್ವಯಂಸೇವಕರು 'ಗುರುಪೂರ್ಣಿಮಾ' ದಿನದಂದು ಧ್ವಜದ ಮುಂದೆ ಸ್ವಇಚ್ಛೆಯಿಂದ ಧನ ಸಮರ್ಪಣೆ ಮಾಡುತ್ತಾರೆ. ಇದನ್ನು 'ಗುರುದಕ್ಷಿಣಾ' ಎನ್ನಲಾಗುತ್ತದೆ. ಈ ಪದ್ಧತಿ 1928ರಿಂದ ನಡೆದುಕೊಂಡು ಬಂದಿದೆ.

ಸಂಘದ ಕಾರ್ಯಪದ್ಧತಿ ಮತ್ತು ಕಾರ್ಯದ ರಚನೆ ಇವೆರಡೂ ಸಹ ಡಾ. ಹೆಡಗೇವಾರರ ಕಲ್ಪನೆಯಿಂದಲೇ ಮೂಡಿ ಬಂದಂತಹವು. "ಸಂಘದ ವಿಚಾರಧಾರೆ ಮತ್ತು ಕಾರ್ಯದ ಪದ್ಧತಿ ಇವು ಡಾ. ಹೆಡಗೇವಾರರ ಚಿಂತನೆಯದೇ ಅಭಿವ್ಯಕ್ತಿ" ಎಂದು ದತ್ತೋಪಂತ ಠೇಂಗಡಿಯವರು ಹೇಳಿರುವುದು ನಿಜಕ್ಕೂ ಯಥಾರ್ಥವಾದುದು.

ಸಂಘ ಮತ್ತು ರಾಷ್ಟ್ರ ಇವನ್ನು ಸಮಾನಾರ್ಥದ ಪರ್ಯಾಯಪದಗಳನ್ನಾಗಿ ಮಾಡಬೇಕೆಂಬ ಡಾ. ಹೆಡಗೇವಾರರ ಉದ್ದೇಶದ ಹಿಂದೆ ಇದ್ದುದು ಸಂಘದ ಕೆಲಸವನ್ನೇ ರಾಷ್ಟ್ರೀಯ ಕಾರ್ಯವೆಂಬಂತೆ ಮಾಡಬೇಕು ಎಂಬುದೇ. 'ನಮ್ಮ ಸಂಘದ ಕಾರ್ಯವೂ ರಾಷ್ಟ್ರೀಯ ಕಾರ್ಯವೇ ಆಗಿದೆ' ಎಂದು ಅವರು ಹೇಳುತ್ತಿದ್ದುದು ಉಂಟು. ಹೀಗಾಗಿ ಸಂಘದ ಕೆಲಸವನ್ನು 'ಈಶ್ವರೀಯ' ಕಾರ್ಯವಾಗಿ ಅವರು ತಿಳಿಯುತ್ತಿದ್ದರು. ಸಂಕ್ಷೇಪವಾಗಿ ಹೇಳುವುದಾದಲ್ಲಿ ಶುದ್ಧ ಹಾಗೂ ಪವಿತ್ರ ಭಾವನೆಯಿಂದ ಪ್ರೇರಿತವಾಗಿ ಕಾರ್ಯದಲ್ಲಿ ತೊಡಗಿರುವ ಸಂಘಟನೆಯೇ ಸಾಂಸ್ಕೃತಿಕ ರಾಷ್ಟ್ರೀಯತೆಗೂ ಆಧಾರವಾಗಬಲ್ಲದು. ಸಂಘವು ವ್ಯಕ್ತಿಯಲ್ಲಿ ರಾಷ್ಟ್ರೀಯ ಭಾವನೆಯನ್ನು ಮತ್ತು ರಾಷ್ಟ್ರದಲ್ಲಿ ಸಾಂಸ್ಕೃತಿಕ ಜಾಗೃತಿಯನ್ನು ನಿರ್ಮಿಸುವಂತಹ ಸಾಧನವಾಗಿದೆ.

# ಸ್ವಾತಂತ್ರ್ಯ ಹೋರಾಟ ಮತ್ತು ಡಾ. ಹೆಡಗೇವಾರ್

ಯಾವುದೇ ಒಂದು ರಾಷ್ಟ್ರದ ಅಭಿವೃದ್ಧಿಗೆ, ಅದರ ರಾಷ್ಟ್ರೀಯ ಮಹತ್ವದ ವಿಷಯಗಳಲ್ಲಿ ಎಲ್ಲರ ಸಹಮತ ಇರುವುದು ಅಗತ್ಯವೇ. ದೇಶವು ಗುಲಾಮಗಿರಿಯಲ್ಲಿದ್ದಾಗಲಂತೂ ಇದು ಇನ್ನೂ ಹೆಚ್ಚು ಅಗತ್ಯವೆನಿಸುತ್ತದೆ. ನಮ್ಮ ಸ್ವಾತಂತ್ರ್ಯದ ಹೋರಾಟ ನಡೆಯುತ್ತಿದ್ದಾಗ, ಅನೇಕ ಸಣ್ಣ ಹಾಗೂ ದೊಡ್ಡ ಸಂಘಟನೆಗಳು ದೇಶದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗದಲ್ಲೂ ಸಕ್ರಿಯವಾಗಿದ್ದವು. ಆದರೆ ಅವುಗಳ ನಡುವೆ ಸೈದ್ಧಾಂತಿಕವಾಗಿ ಪರಸ್ಪರ ಭಿನ್ನಾಭಿಪ್ರಾಯಗಳೂ ಇದ್ದವು. ರಾಜಕೀಯ ವೇದಿಕೆಯಾಗಿ ಒಂದು ಕಡೆ ಕಾಂಗ್ರೆಸ್ ಇದ್ದಲ್ಲಿ ಇನ್ನೊಂದು ಕಡೆ ಕಮ್ಯುನಿಸ್ಟ್ ಪಕ್ಷವಿತ್ತು. ಹಿಂದೂ ಮಹಾಸಭಾ, ಮುಸ್ಲಿಂ ಲೀಗ್ ಮೊದಲಾದವು ಸಹ ಅಂದಿನ ರಾಜಕೀಯ ಕ್ಷೇತ್ರದಲ್ಲಿ ಪ್ರತ್ಯಕ್ಷವಾಗಿ ಕ್ರಿಯಾಶೀಲವಾಗಿದ್ದವು. ಇದೇ ಸಂದರ್ಭದಲ್ಲಿ ಡಾ. ಹೆಡಗೇವಾರರು ರಾಷ್ಟ್ರೀಯ ಸ್ವಯಂಸೇವಕ ಸಂಘದ ನೀತಿ ಮತ್ತು ಕಾರ್ಯಕ್ರಮಗಳನ್ನು ಬೇರೊಂದು ರೀತಿಯಲ್ಲಿ ವಿಕಾಸಗೊಳಿಸಿದರು. ಆದರೆ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ರಾಷ್ಟ್ರದ ಮುಂದೆ ಜೀವನ ಮರಣಗಳ ಸವಾಲು ಎದ್ದು ನಿಂತಾಗ, ಸಂಘಟನಾತ್ಮಕ ಹಾಗೂ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಮತ್ತು ನಾಯಕತ್ವ ಯಾರದಿರಬೇಕೆಂಬ ಬಗ್ಗೆ ವಿವಾದ, ಹಾಗೂ ಅಹಂಕಾರವನ್ನೇ ಪ್ರಧಾನವಾಗಿ ಮಾಡಿಕೊಂಡು ಎಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿ ಇರುವುದು ಸರಿಯಲ್ಲ ಎಂಬುದೂ ಅವರ ಚಿಂತನೆಯ ರೀತಿಯಾಗಿತ್ತು.

ನಮ್ಮ ಸ್ವಾತಂತ್ರ್ಯದ ಹೋರಾಟವು ಭಾರತೀಯ ರಾಷ್ಟ್ರದ ಸ್ವಂತಿಕೆಯ ಹಾಗೂ ಅಸ್ತಿತ್ವದ ಸಮರ್ಥನೆಗೆ ಸಂಬಂಧಿಸಿದುದು ಎಂಬುದು ಸರ್ವವಿದಿತ. ಹೀಗಾಗಿ ವಸಾಹತುಶಾಹಿಯ ವಿರುದ್ಧ ನಡೆಯುವ ಈ ಹೋರಾಟದಲ್ಲಿ ಸಹಕರಿಸುವ ಬಗ್ಗೆ ಡಾ. ಹೆಡಗೇವಾರರು ಮೀನಮೇಷ ಎಣಿಸುವವರಾಗಿರಲಿಲ್ಲ. ಸಂಘದ ಸ್ಥಾಪನೆಗೆ ಮುಂಚೆಯೆ ಅವರು ಕ್ರಾಂತಿಕಾರಿಯಾಗಿಯೂ ಮತ್ತು ಕಾಂಗ್ರೆಸ್‌ನ ಸಕ್ರಿಯ ಕಾರ್ಯಕರ್ತರಾಗಿಯೂ ಹೋರಾಟದಲ್ಲಿ ಭಾಗವಹಿಸಿದ್ದವರೇ. ಆದರೆ ತಮ್ಮದೇ ಆದ ವಿಶಿಷ್ಟ ಸೈದ್ಧಾಂತಿಕ ಮಾರ್ಗವನ್ನು ಸ್ವೀಕರಿಸಿ, ಪ್ರತ್ಯೇಕವಾದ ಸಂಘಟನೆಯೊಂದನ್ನು ಆರಂಭಿಸಿದ ಮೇಲೆ ಅದಕ್ಕೆ ಅಖಿಲ ಭಾರತೀಯ ಸ್ವರೂಪ ನೀಡುವುದಕ್ಕೆ ಅವರು ಹೆಚ್ಚು ಲಕ್ಷ್ಯವೀಯಲಾರಂಭಿಸಿದರು. ಅಷ್ಟಾದರೂ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಅವರ ರೀತಿನೀತಿ ಮತ್ತು ಚಿಂತನೆಯಲ್ಲೂ ವ್ಯತ್ಯಾಸವೇನೂ ಆಗಲಿಲ್ಲ. ಸಂಘದ ಸರಸಂಘಚಾಲಕರಾಗಿ ಅವರು ತಮ್ಮದಾಗಿಸಿಕೊಂಡಿದ್ದ ವಿನಯಪೂರ್ಣ ನಡವಳಿಕೆ, ರಾಷ್ಟ್ರಹಿತದ ಬಗ್ಗೆ ವಿಶಾಲವಾದ ದೃಷ್ಟಿ ಮತ್ತು ತಮ್ಮ ನಂಬಿಕೆಯಲ್ಲಿ ದೃಢತೆ, ಇವು ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಪ್ರಾಯಶಃ ಬೇರೊಂದು ಹೋಲಿಕೆಯೇ ಇಲ್ಲದಂತಹವು ಎಂದರೂ ತಪ್ಪಾಗಲಾರದು.

## ಪೂರ್ಣ ಸ್ವಾತಂತ್ರ್ಯದ ಗುರಿ

ಹೊರಗಿನಿಂದ ಕಾಣಲು, ಸಂಘದ ಶಾಖೆಯು ನಾಗಪುರದಲ್ಲಿನ ಇನ್ನಿತರ ವ್ಯಾಯಾಮಶಾಲೆಗಳಂತೆಯೇ ಕಾಣುತ್ತಿತ್ತು. ಶಾರೀರಿಕ ಶಿಕ್ಷಣದ ಜತೆಜತೆಯಾಗಿ ಸ್ವಯಂಸೇವಕರಿಗೆ ಲಭಿಸುತ್ತಿದ್ದ ಬೌದ್ಧಿಕ ಶಿಕ್ಷಣದ ಕಲ್ಪನೆ ಹೊರಗಿನವರಿಗೆ ಪ್ರಾಯಶಃ ಗೊತ್ತಾಗುತ್ತಿರಲಿಲ್ಲ. ಡಾ. ಹೆಡಗೇವಾರರು ಸ್ವತಂತ್ರವಾದ ಹಿಂದೂ ರಾಷ್ಟ್ರವನ್ನು ಕಾಣಲು ಅಪೇಕ್ಷಿಸುತ್ತಿದ್ದರು ಮತ್ತು ಸ್ವಯಂಸೇವಕರನ್ನೂ ಅದೇ ನಿಟ್ಟಿನಲ್ಲಿ ರೂಪಿಸುತ್ತಿದ್ದರು. ಡಾ. ಹೆಡಗೇವಾರರ ಜೀವನವನ್ನು ಸಂಶೋಧನಾತ್ಮಕವಾಗಿ ಅಧ್ಯಯನ ನಡೆಸಿರುವ ಹಿರಿಯ ವಿದ್ವಾಂಸರಲ್ಲೂ ಸಂಘದ ಗುರಿಯೇನಾಗಿತ್ತು ಎಂಬ ಬಗ್ಗೆ ಅಭಿಪ್ರಾಯ ಭೇದಗಳಿವೆ. ದೇವೇಂದ್ರ ಸ್ವರೂಪ ಅವರ ಅಭಿಪ್ರಾಯವೆಂದರೆ "ಡಾ. ಹೆಡಗೇವಾರರು ಸಂಘದ ಸ್ಥಾಪನೆ ಮಾಡಿದ್ದು ಸ್ವಾತಂತ್ರ್ಯ ಪ್ರಾಪ್ತಿಯ ಗುರಿಗಾಗಿಯೆ." ಆದರೆ ಹೆಚ್ಚಿನವರು ಇದನ್ನು ಒಪ್ಪುವುದಿಲ್ಲ. ದತ್ತೋಪಂತ ಠೇಂಗಡಿಯವರ ಅಭಿಪ್ರಾಯದಲ್ಲಿ ಡಾ. ಹೆಡಗೇವಾರರು ಸ್ವಾತಂತ್ರ್ಯ ಪ್ರಾಪ್ತಿಗಾಗಿ ಸಂಘವನ್ನು ಸಿದ್ಧಗೊಳಿಸುತ್ತಿದ್ದುದು ನಿಜವೇ. ಆದರೂ "ಅವರ ಲಕ್ಷ್ಯವಿದ್ದುದು ಭಾರತವನ್ನು ಒಂದು ಶಕ್ತಿಶಾಲಿ ರಾಷ್ಟ್ರವನ್ನಾಗಿ ಮಾಡಿ ಅದರ ಪರಮ ವೈಭವ ಸ್ಥಿತಿಯನ್ನು ಕಾಣುವಂತಾಗಬೇಕು ಎಂಬುದಾಗಿತ್ತು. ಅಂತಹ ಸ್ಥಿತಿ ತಲುಪುವುದು ಸ್ವಾತಂತ್ರ್ಯ ಗಳಿಸದೆ ಸಾಧ್ಯವಿಲ್ಲ ಎಂಬುದರ ಅರಿವು ಸಹ ಅವರಿಗಿತ್ತು."

ಸಂಘದ ಶಾಖೆಗಳಲ್ಲಿ ಮತ್ತು ಪ್ರಶಿಕ್ಷಣ ವರ್ಗಗಳಲ್ಲೂ ದೇಶಭಕ್ತಿ ತುಂಬಿತುಳುಕುವಂತಹ ಬೌದ್ಧಿಕಗಳು, ಕಾರ್ಯಕ್ರಮಗಳು ಮತ್ತು ಆಟಗಳ ವ್ಯವಸ್ಥೆ ಇರುತ್ತದೆ. 1929ರ ಏಪ್ರಿಲ್ 27-28ರಂದು ವರ್ಧಾದಲ್ಲಿ ನೂರು ಸ್ವಯಂಸೇವಕರ ಒಂದು ಪ್ರಶಿಕ್ಷಣ ಶಿಬಿರವನ್ನು ನಡೆಸಲಾಗಿತ್ತು. ಶಿಬಿರದಲ್ಲಿ ಎಲ್ಲ ಭಾಷಣಕಾರರು ಸ್ವರಾಜ್ಯಪ್ರಾಪ್ತಿಗಾಗಿ ತಮ್ಮ ಸರ್ವಸ್ವ ತ್ಯಾಗಕ್ಕಾಗಿ ಸಿದ್ಧರಿರಬೇಕೆಂದು ಶಿಬಿರಾರ್ಥಿಗಳಿಗೆ ಕರೆ ನೀಡಿದ್ದರು ಮತ್ತು ಸಾರ್ವಜನಿಕರ ಮುಂದೆ 'ಸಂಘದ ಅಂತಿಮ ಗುರಿ ಸ್ವಾತಂತ್ರ್ಯ ಪ್ರಾಪ್ತಿ' ಎಂದು ಘೋಷಿಸಲಾಗಿತ್ತು ಸಹ. ಡಾ. ಹೆಡಗೇವಾರರು ತಮ್ಮ ಭಾಷಣದಲ್ಲಿ "ಬ್ರಿಟಿಷ್ ಸರ್ಕಾರವು ಭಾರತವನ್ನು ಸ್ವತಂತ್ರಗೊಳಿಸುವುದಾಗಿ ಹಲವು ಬಾರಿ ಆಶ್ವಾಸನೆ ನೀಡಿದೆ. ಆದರೆ ಈ ಆಶ್ವಾಸನೆ ಪೂರಾ ಸುಳ್ಳೆಂದು ಈಗ ಸಾಬೀತುಗೊಂಡಿದೆ. ಭಾರತವು ತನ್ನ ಸ್ವಶಕ್ತಿಯ ಮೇಲೆಯೇ ಸ್ವತಂತ್ರವಾಗಲಿದೆ; ಇದರಲ್ಲಿ ಸಂದೇಹವೇನೂ ಇಲ್ಲ. ಬ್ರಿಟಿಷರ ಒಡೆತನವನ್ನು ಐರ್ಲೆಂಡ್ ಒಪ್ಪಿಕೊಂಡಿಲ್ಲ. ಬ್ರಿಟಿಷ್ ಶಾಸಕರು ಐರ್ಲೆಂಡಿನ ಜನರ ಮನವನ್ನು ಗೆಲ್ಲುವುದರಲ್ಲಿ ಸೋತಿದ್ದಾರೆ. ಇತ್ತ ಭಾರತೀಯರ ಮನ ಗೆಲ್ಲುವುದರಲ್ಲೂ ಅವರು ಸಫಲರಾಗಿಲ್ಲ. ಈಗ ಕೇವಲ ಬಲಾತ್ಕಾರದಿಂದ ಮಾತ್ರ ಅವರು ಭಾರತವನ್ನು ತಮ್ಮ ತಾಬಾನ್ನಾಗಿ ಮಾಡಿಕೊಂಡಿದ್ದಾರೆ. ಭಾರತೀಯರೆಲ್ಲರೂ – ಅವರು ಅನುಸರಿಸುವ ಮತ ಯಾವುದೇ ಇರಲಿ – ಅವರೆಲ್ಲರೂ ಹಿಂದೂಗಳೇ ಆಗಿದ್ದಾರೆ ಮತ್ತು ನಮ್ಮ ಸ್ವರಾಜ್ಯವು ಸಹ ಹಿಂದೂ ಸ್ವರಾಜ್ಯವೇ ಆಗಿದೆ. ಯಾರು ಈ ಸ್ವಾತಂತ್ರ್ಯದ ಹೋರಾಟದಲ್ಲಿ ಪಾಲ್ಗೊಳ್ಳುವುದಿಲ್ಲವೋ ಅಂತಹವರು ಖಂಡಿತವಾಗಿಯೂ ನಮ್ಮ ಟೀಕೆಗೆ ಪಾತ್ರರು. ನಮ್ಮ ದೃಷ್ಟಿಯಲ್ಲಿ ಎಲ್ಲ ಭಾರತೀಯರೂ ಹಿಂದೂಗಳೇ ಆಗಿದ್ದು, ಈ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವುದು ಎಲ್ಲರದೂ ಜವಾಬ್ದಾರಿಯಾಗಿದೆ."

ಸಂಘದ ಸ್ಥಾಪನೆಗಿಂತ ಒಂದು ವಾರದ ಮೊದಲಷ್ಟೇ ಡಾ. ಹೆಡಗೇವಾರರು ಮತ್ತು ಅವರ ನಿಕಟ ಸಹಕಾರಿ ಹರಿಕೃಷ್ಣ ಜೋಶಿ (ಅಪ್ಪಾಜಿ ಜೋಶಿ) ಅವರು ಪ್ರಾಂತೀಯ

ಕಾಂಗ್ರೆಸ್ ಸಮಿತಿಗೆ ಆಯ್ಕೆಯಾಗಿದ್ದರು. ಅಲ್ಲಿಂದ ಆರಂಭಿಸಿ 1928ರ ಕೊನೆಯ ತನಕ ಅವರು ಪ್ರಾಂತೀಯ ಕಾಂಗ್ರೆಸ್ ಸಮಿತಿಯೊಂದಿಗೆ ಸಂಬಂಧಿತರೇ ಆಗಿದ್ದರು. ಪ್ರಾಂತೀಯ ಕಾಂಗ್ರೆಸ್‌ನ ಕಾರ್ಯಕ್ರಮಗಳನ್ನು ನಿರ್ಧರಿಸುವುದರಲ್ಲಿ ಮತ್ತು ಅವುಗಳನ್ನು ಕಾರ್ಯಗತಗೊಳಿಸುವುದರಲ್ಲಿ ಡಾ. ಹೆಡಗೇವಾರರ ಮಹತ್ವದ ಪಾತ್ರವಿರುತ್ತಿತ್ತು. 1927ರ ಜನವರಿ 30ರಂದು ಭಾರತ ಸರ್ಕಾರವು ಚೀನಕ್ಕೆ ತನ್ನ ಸೇನೆಯನ್ನು ಕಳುಹಿಸಿದ್ದುದರ ವಿರುದ್ಧ ನಾಗಪುರ ನಗರ ಕಾಂಗ್ರೆಸ್ ಒಂದು ಸಭೆಯನ್ನು ಏರ್ಪಡಿಸಿತ್ತು. ಈ ಸಭೆಯಲ್ಲಿ ಸರ್ಕಾರದ ವಿರುದ್ಧ ಒಂದು ಠರಾವು ಸಹ ಸ್ವೀಕರಿಸಲ್ಪಟ್ಟಿತ್ತು. ಈ ಠರಾವನ್ನು ಸಭೆಯ ಮುಂದಿರಿಸಿದವರು ಸಂಘದ ಓರ್ವ ಪ್ರಮುಖರಾದ ಲ.ವಾ. ಪರಾಂಜಪೆ ಅವರು. ಈ ಠರಾವಿನಲ್ಲಿ "ಈ ಸಭೆಯು ಭಾರತೀಯ ನಾಗರಿಕರನ್ನು ಸೈನ್ಯದ ಉದ್ದೇಶಗಳಿಗಾಗಿ ಬಳಸುವಂತಹ ಸರ್ಕಾರದ ಕ್ರಮಗಳನ್ನು – ಪ್ರದರ್ಶನಗಳು, ಪ್ರಚಾರ ಮತ್ತು ವಿರೋಧಾತ್ಮಕ ಠರಾವು ಇತ್ಯಾದಿ ರೂಪದಲ್ಲಿ – ಪ್ರತಿಭಟಿಸುವಂತೆ ಎಲ್ಲ ಭಾರತೀಯ ನಾಗರಿಕರಿಗೆ ಕರೆ ನೀಡುತ್ತದೆ" ಎಂದು ಹೇಳಲಾಗಿದೆ. ಈ ಠರಾವನ್ನು ಬರೆದು ರೂಪಿಸಿದವರು ಡಾ. ಹೆಡಗೇವಾರರು.

## ಸೈಮನ್ ಆಯೋಗಕ್ಕೆ ವಿರೋಧ

ಅಸಹಕಾರ ಆಂದೋಳನದ ನಂತರ 1928ರಲ್ಲಿ ಮಾಡಲಾದ ಸೈಮನ್ ಆಯೋಗದ ವಿರುದ್ಧ ಪ್ರತಿಭಟನೆಯು ವಸಾಹತುಶಾಹಿಯ ವಿರೋಧದ ಒಂದು ಮಹತ್ವಪೂರ್ಣ ಕಾರ್ಯಕ್ರಮವೆನಿಸಿತು. ಕಾಶಿಯಲ್ಲಿ ನಡೆದಿದ್ದ ಕಾಂಗ್ರೆಸ್‌ನ ವಿಶೇಷ ಅಧಿವೇಶನದಲ್ಲಿ ಸೈಮನ್ ಆಯೋಗವನ್ನು ಬಹಿಷ್ಕರಿಸುವ ಹಾಗೂ ಅಖಿಲ ಭಾರತೀಯ ಮಟ್ಟದಲ್ಲಿ ಹರತಾಳ ನಡೆಸಲು ನಿರ್ಧರಿಸಲಾಯಿತು. ಮರಾಠಿ ಮಧ್ಯಪ್ರಾಂತದ ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿದ್ದ ಜೋಶಿಯವರು ಮತ್ತು ಡಾ. ಹೆಡಗೇವಾರರು ಕಾರ್ಯಸಮಿತಿಯ ಸದಸ್ಯರಾಗಿದ್ದರು. ಸೈಮನ್ ವಿರುದ್ಧ ಪ್ರತಿಭಟನೆಯ ಕಾರ್ಯಕ್ರಮಕ್ಕೆ ಪ್ರಚಾರ ಮಾಡುವ ಹಾಗೂ ಈ ನಿಟ್ಟಿನಲ್ಲಿ ಜನಜಾಗೃತಿಯನ್ನುಂಟುಮಾಡುವ ಕಾರ್ಯವನ್ನು ಡಾ. ಹೆಡಗೇವಾರರಿಗೆ ಒಪ್ಪಿಸಲಾಗಿತ್ತು. ನಾಗಪುರದಲ್ಲಿ ಕಾಂಗ್ರೆಸ್ ವತಿಯಿಂದ ಸಭೆಯನ್ನು ಏರ್ಪಡಿಸಿ ಸೈಮನ್ ಆಯೋಗದ ವಿರುದ್ಧ ಠರಾವನ್ನು ಸ್ವೀಕರಿಸಲಾಯಿತು. ಈ ಠರಾವಿನಲ್ಲಿ "ದೇಶದ ಹಿಂದೂಗಳು ಮತ್ತು ಮುಸಲ್ಮಾನರು ಒಂದಾಗಿ ವಸಾಹತುಶಾಹಿಗೆ ಯೋಗ್ಯವಾದ ಪ್ರತ್ಯುತ್ತರ ನೀಡಬೇಕಾಗಿದೆ" ಎಂದು ಹೇಳಲಾಯಿತು. 1929ರ ಮಾರ್ಚ್‌ನಲ್ಲಿ ಸೈಮನ್ ಆಯೋಗವು ಮಧ್ಯಪ್ರಾಂತ ಮತ್ತು ಬಿರಾರ್‌ಗೆ ಬಂದಾಗ ವಿಭಿನ್ನ ರಾಜಕೀಯ ದೃಷ್ಟಿಕೋನವುಳ್ಳವರಾಗಿದ್ದೂ ಸಹ ಹಿಂದೂ ನಾಯಕರು ಆಯೋಗದ ಜತೆ ಸಹಕರಿಸಲು ನಿರಾಕರಿಸಿದರು. ಆದರೆ ಮುಸಲ್ಮಾನರು ಆಯೋಗವನ್ನು ಸ್ವಾಗತಿಸಿದರು.[1] ಆಯೋಗದ ವಿರುದ್ಧ ಪ್ರತಿಭಟನೆಯಲ್ಲಿ ಸಂಘವೂ ಪಾಲ್ಗೊಂಡಿತ್ತು. ಆ ಹೊತ್ತಿಗೆ ನಾಗಪುರ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಸಂಘದ ಹದಿನೆಂಟು ಶಾಖೆಗಳಿದ್ದವು. ಡಾ. ಹೆಡಗೇವಾರರು ಸಂಘದ ಸ್ವಯಂಸೇವಕರಿಗೆ ಕಾಂಗ್ರೆಸ್ ಮೂಲಕ ಕೆಲಸ ಮಾಡುವಂತೆ ಸೂಚನೆ ನೀಡಿದ್ದರು. ಡಾ. ಹೆಡಗೇವಾರರಿಗೆ ಈ ಕಾರ್ಯಕ್ರಮದ ಪ್ರಚಾರ ಮಾಡುವಂತಹ ಹೊಣೆಯಿತ್ತು.

---

1. ಮಧ್ಯಪ್ರಾಂತ ಏವಂ ಬೆರಾರ್ ಕೀ ಪ್ರಶಾಸನಿಕ ರಿಪೋರ್ಟ್, 1931–32 ಖಂಡ 11, ಪು. 9 ಗವರ್ನಮೆಂಟ್ ಪ್ರಿಂಟಿಂಗ್ ಪ್ರೆಸ್, ನಾಗಪುರ 1933

## ಜನವರಿ 26, 1930

ಅದೇ ದಿನಗಳಲ್ಲಿ ಸ್ಥಾನೀಯ ಮಟ್ಟದಲ್ಲಿ ಸಂಘ ಮತ್ತು ಕಾಂಗ್ರೆಸ್ ನಡುವೆ ಸಂಬಂಧಗಳು ಹುಳಿಯಾಗತೊಡಗಿದ್ದವು. ಕಾಂಗ್ರೆಸ್‌ನ ಕೆಲವು ಪ್ರಮುಖ ನಾಯಕರು ಸಂಘದ ಮೇಲೆ ಬರಿಯ ಸುಳ್ಳಿನ ಹಾಗೂ ತಮ್ಮ ಮನಸ್ಸಿಗೆ ಬಂದಂತೆ ಆರೋಪಗಳನ್ನು ಹೊರಿಸಲಾರಂಭಿಸಿದ್ದರು. ಡಾ. ಹೆಡಗೇವಾರರ ಗಮನಕ್ಕೆ ಈ ವಿಷಯ ಬಂದಾಗ, ಅವರು 1929ರ ಆಗಸ್ಟ್ 24ರಂದು ಹೀಗೆ ಬರೆದಿರಿಸಿದ್ದರು:

"ನನಗಿದು ಮೊದಲೇ ತಿಳಿದಿತ್ತು. ನಾವು ಇಂತಹ ಪರಿಸ್ಥಿತಿಯಿಂದಲೂ ದಾಟಿ ಬರಬೇಕಾಗಿದೆ. ಭಗವಂತ ಎಲ್ಲರಿಗೂ ಸದ್ಬುದ್ಧಿ ನೀಡಲಿ ಎಂದು ನಾವು ಪ್ರಾರ್ಥಿಸೋಣ. ನಮ್ಮ ಸದ್ವಿವೇಕಕ್ಕನುಗುಣವಾಗಿ ಮತ್ತು ಭಗವಂತನನ್ನು ಧ್ಯಾನಿಸಿ ನಮ್ಮ ಕಾರ್ಯವನ್ನು ಮಾಡಿದ ಮೇಲೂ ಸಹ ಯಾರಿಗಾದರೂ ಮನದಲ್ಲಿ ನಮ್ಮ ಬಗ್ಗೆ ಸಂದೇಹಗಳುಂಟಾದಲ್ಲಿ ಅಥವಾ ಯಾರಿಗಾದರೂ ಸಂಘವನ್ನು ವಿರೋಧಿಸಬೇಕು ಎಂದು ಅನಿಸಿದಲ್ಲಿ, ನಾವಾದರೂ ಏನು ಮಾಡಬಲ್ಲೆವು? ಇದು ಕೇವಲ ರಾಜಕಾರಣ ಮಾತ್ರ. ಅದಕ್ಕೆ ಹೆದರಿಕೊಂಡು ಎಷ್ಟು ಕಾಲ ತಾನೇ ಇರಲು ಸಾಧ್ಯ?"

ಸಂಘದ ಬೆಳೆಯುತ್ತಿರುವ ಕಾರ್ಯ ಮತ್ತು ಅದರ ಸ್ವತಂತ್ರವಾದ ನಾಯಕತ್ವ ಇವುಗಳನ್ನು ಕಂಡು ಕಾಂಗ್ರೆಸ್‌ನ ನಾಯಕರು ಕರುಬುತ್ತಿದ್ದುದು ಸುಸ್ಪಷ್ಟ. ಆದರೆ ರಾಷ್ಟ್ರದ ಎದುರು ಇದ್ದ ಇನ್ನಿತರ ಸವಾಲುಗಳ ಮುಂದೆ ಈ ವಿವಾದಗಳಿಗೆ ಡಾ.ಹೆಡಗೇವಾರರು ಸ್ವಲ್ಪವೂ ಮಹತ್ವ ನೀಡಲಿಲ್ಲ. 1929ರ ಡಿಸೆಂಬರ್‌ನಲ್ಲಿ ಲಾಹೋರ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಒಂದು ಐತಿಹಾಸಿಕ ಠರಾವು ಸ್ವೀಕರಿಸಲ್ಪಟ್ಟಿತು. ಕಾಂಗ್ರೆಸ್ ಸಂಪೂರ್ಣ ಸ್ವಾತಂತ್ರ್ಯವನ್ನು ತನ್ನ ಗುರಿಯಾಗಿ ಘೋಷಿಸಿ, 1930ರ ಜನವರಿ 26ರಂದು (ಭಾನುವಾರ) ದೇಶಾದ್ಯಂತ ಸ್ವಾತಂತ್ರ್ಯ ದಿನಾಚರಣೆಗಾಗಿ ಕರೆ ನೀಡಿತು. ಡಾ. ಹೆಡಗೇವಾರರಿಗೆ ಮೊದಲೇ ಅದರ ಸುಳಿವು ಸಿಕ್ಕಿತ್ತು. ಅವರು ಕಾಂಗ್ರೆಸ್‌ನ ಈ ನಿರ್ಣಯದ ಬಗ್ಗೆ ತುಂಬ ಸಂತಸ ಪಟ್ಟರು. ಸ್ವಾತಂತ್ರ್ಯ ದಿನಾಚರಣೆಗೆ ಕಾಂಗ್ರೆಸ್ ನೀಡಿದ್ದ ಕರೆಯನ್ನು ಅವರು ಸಂಘದ ನಿರ್ಣಯವೇ ಎಂಬಂತೆ ಅದಕ್ಕೆ ಕಾರ್ಯರೂಪವನ್ನು ನೀಡಿದರು. ಸಂಘದ ಸ್ಥಾಪನೆಯ ನಂತರ ಮೊಟ್ಟ ಮೊದಲ ಬಾರಿಗೆ ಸಂಘದವತಿಯಿಂದ ಒಂದು ಅಧಿಕೃತವಾದ ಸೂಚನೆಯನ್ನು ಆಗ ಎಲ್ಲ ಶಾಖೆಗಳಿಗೆ ರವಾನಿಸಲಾಯಿತು. 1930ರ ಜನವರಿ 21ರಂದು ಡಾ. ಹೆಡಗೇವಾರರು ಕಳುಹಿಸಿದ್ದ ಪತ್ರದಲ್ಲಿ,

"...ಈ ವರ್ಷ ಕಾಂಗ್ರೆಸ್ 'ಸ್ವಾತಂತ್ರ್ಯ'ವನ್ನು ತನ್ನ ಗುರಿಯನ್ನಾಗಿ ಮಾಡಿಕೊಂಡಿದೆ. ಅದರ ಕಾರ್ಯಕಾರಿ ಸಮಿತಿಯು 1930ರ ಜನವರಿ 26 ಭಾನುವಾರದಂದು ಭಾರತದಾದ್ಯಂತ 'ಸ್ವಾತಂತ್ರ್ಯ ದಿನ'ದ ಆಚರಣೆಗೆ ಕರೆ ನೀಡಿದೆ.

"ಅಖಿಲ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಈಗ ಸಂಪೂರ್ಣ ಸ್ವಾತಂತ್ರ್ಯದ ಗುರಿಯವರೆಗೆ ತಲುಪಿರುವುದನ್ನು ಕಂಡು ಎಲ್ಲರಿಗೂ ಸಂತೋಷವಾಗಿರುವುದು ಸಹಜವೇ. ಇಂತಹ ಧ್ಯೇಯವನ್ನು ಮುಂದಿರಿಸಿಕೊಂಡು ಕಾರ್ಯಮಾಡುವಂತಹ ಯಾವುದೇ ಸಂಸ್ಥೆಗಾದರೂ ಸಹಕಾರ ನೀಡಬೇಕಾದುದು ನಮ್ಮ ಸಹಜವಾದ ಕರ್ತವ್ಯವೇ ಆಗಿದೆ.

"ಅದಕ್ಕಾಗಿ ರಾಷ್ಟ್ರೀಯ ಸ್ವಯಂಸೇವಕ ಸಂಘದ ಎಲ್ಲ ಶಾಖೆಗಳಲ್ಲೂ ದಿ. 26.1.1930ರಂದು ಭಾನುವಾರ ಸಂಜೆ 6.00 ಘಂಟೆಗೆ ತಂತಮ್ಮ ಸಂಘಸ್ಥಾನದಲ್ಲಿ ತಮ್ಮ

ಶಾಖೆಯ ಎಲ್ಲ ಸ್ವಯಂಸೇವಕರ ಸಭೆಯನ್ನು ಏರ್ಪಡಿಸಬೇಕು. ಅಲ್ಲಿ ನಮ್ಮ ರಾಷ್ಟ್ರೀಯ ಧ್ವಜ ಎಂದರೆ ಭಗವಾ ಧ್ವಜಕ್ಕೆ ವಂದನೆಯನ್ನು ಸಲ್ಲಿಸಬೇಕು. ಅಂದಿನ ಭಾಷಣದಲ್ಲಿ ಎಲ್ಲರಿಗೂ ಸ್ವಾತಂತ್ರ್ಯದ ನಿಜವಾದ ಅರ್ಥ, ಹಾಗೂ ನಮ್ಮ ನಿಜವಾದ ಧ್ಯೇಯವನ್ನು ಪ್ರತಿಯೊಬ್ಬರೂ ಯಾವ ರೀತಿಯಲ್ಲಿ ತಮ್ಮ ಮುಂದಿರಿಸಿಕೊಳ್ಳಬೇಕು ಎಂಬುದನ್ನು ವಿವರವಾಗಿ ಸ್ಪಷ್ಟಪಡಿಸಬೇಕು. ಈ ಕಾರ್ಯಕ್ರಮದ ವರದಿಯನ್ನು ಕಳುಹಿಸಬೇಕು."

ಕಾಂಗ್ರೆಸ್‌ನ ಒಮ್ಮುಖದ ವಿರೋಧವು ಸಂಘದ ಕಾರ್ಯಕರ್ತರ ಮನಸ್ಸು ಮತ್ತು ಬುದ್ಧಿಯನ್ನು ಪ್ರಭಾವಿತಗೊಳಿಸದಂತೆ ಅವರು ಎಚ್ಚರವಹಿಸಿದರು. ತಮ್ಮ ಈ ಸುತ್ತೋಲೆಯಲ್ಲಿ ಅವರು ಕಾಂಗ್ರೆಸ್‌ನ್ನು 'ಅಖಿಲ ಭಾರತೀಯ' ಹಾಗೂ 'ರಾಷ್ಟ್ರೀಯ' ಎಂದು ಉಲ್ಲೇಖಿಸಿದುದಲ್ಲದೆ, ಸಂಘ ಮತ್ತು ಕಾಂಗ್ರೆಸ್ ನಡುವೆ ನಾಯಕತ್ವ ಮತ್ತು ಸಂಘಟನೆಯದಷ್ಟೇ ಅಲ್ಲ, ಬದಲಾಗಿ ಏಕತೆ, ಸಮಾನತೆ ಮತ್ತು ಶ್ರೇಷ್ಠತೆ ಇವೆಲ್ಲವುಗಳನ್ನು ಆಧರಿಸಿ ಪರಸ್ಪರ ಸಹಕರಿಸುವ ಅಗತ್ಯವನ್ನೂ ಹೇಳಿದರು. ಸ್ವಾತಂತ್ರ್ಯದ ಗುರಿಗೆ ಶರತ್ತು ಸಹಿತ ಸಮರ್ಥನೆ ನೀಡುವವರನ್ನು ಅವರು ಸ್ವಾರ್ಥಿಗಳು ಮತ್ತು ಅವಿವೇಕಿಗಳು ಎಂದು ತಿಳಿಯುತ್ತಿದ್ದರು. ಜನವರಿ 26ರಂದು ಸಂಜೆ ಸಂಘದ ಶಾಖೆಗಳಲ್ಲಿ ನಡೆಸಲಾದ ಸ್ವಾತಂತ್ರ್ಯದ ದಿನಾಚರಣೆ ಮಧ್ಯಪ್ರಾಂತದ ಮರಾಠಿ ಭಾಷಾ ಪ್ರದೇಶದಲ್ಲಿ ತುಂಬ ಪ್ರಭಾವಿ ಕಾರ್ಯಕ್ರಮ ನಡೆಯಿತು. ಸಂಘದ ಸ್ವಯಂಸೇವಕರಿಗೆ ರಾಷ್ಟ್ರದ ಹಿತವು ಸಂಘಟನೆಗಿಂತ ಮೇಲಿನದು ಮತ್ತು ಪರಿಶುದ್ಧವಾದ ರಾಷ್ಟ್ರ ಭಾವದಿಂದ ಕೆಲಸ ಮಾಡುವಂತಹ ಸಂಸ್ಥೆಗಳ ಹಿತವೂ ರಾಷ್ಟ್ರದ ಹಿತದಲ್ಲೆ ಬೆಸೆದುಕೊಂಡಿದೆ ಎಂಬುದನ್ನು ತಮ್ಮ ಈ ಕೃತಿಯಿಂದ ತೋರಿಸಿಕೊಟ್ಟರು.

## ಸವಿನಯ ಕಾನೂನು ಭಂಗ ಆಂದೋಳನ

ಅಸಹಕಾರ ಆಂದೋಳನವನ್ನು ಕೈಬಿಟ್ಟ ಕಾರಣದಿಂದಾಗಿ ಉಂಟಾದ ಸಡಿಲತೆಯು 1928-29ರ ಸುಮಾರಿಗೆ ಕ್ರಮೇಣ ಕೊನೆಗೊಂಡಿತ್ತು. ಹೀಗಾಗಿ ಇನ್ನೊಮ್ಮೆ ಮಹಾತ್ಮಾಗಾಂಧಿಯವರ ನಾಯಕತ್ವದಲ್ಲಿ ವಸಾಹತುಶಾಹಿ ವಿರುದ್ಧ ಆಂದೋಳನವೆಸಗಲು ಕಾಂಗ್ರೆಸ್ ತಯಾರಿಯಲ್ಲಿ ತೊಡಗಿತು. ಕಾಂಗ್ರೆಸ್‌ನ ಲಾಹೋರ್ ಅಧಿವೇಶನದಲ್ಲಿ ಪಕ್ಷವು ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿಗೆ ಹೋರಾಟ ನಡೆಸಲು ಅಧಿಕಾರವನ್ನು ವಹಿಸಿಕೊಟ್ಟಿತು. 1930ರ ಫೆಬ್ರವರಿಯಲ್ಲಿ ಸಾಬರಮತಿಯಲ್ಲಿ ನಡೆದ ತನ್ನ ಸಭೆಯಲ್ಲಿ ಕಾಂಗ್ರೆಸ್ ಸಮಿತಿಯು ಆಂದೋಳನವನ್ನು ಯೋಜಿಸಲು ಹಾಗೂ ಅದರ ನಾಯಕತ್ವವನ್ನು ವಹಿಸಿ ಮಾರ್ಗದರ್ಶನ ನೀಡಲು ಮಹಾತ್ಮಾ ಗಾಂಧೀಯವರಿಗೆ ಎಲ್ಲ ಅಧಿಕಾರಗಳನ್ನೂ ನೀಡಿತು. ಮಹಾತ್ಮಾ ಗಾಂಧಿಯವರು 1930ರ ಎಪ್ರಿಲ್ 6ರಂದು ದಾಂಡಿಯಲ್ಲಿ ಉಪ್ಪಿನ ಕಾನೂನನ್ನು ಧಿಕ್ಕರಿಸಿ ಸವಿನಯ ಕಾನೂನು ಭಂಗದ ಆಂದೋಳನವನ್ನು ಆರಂಭಿಸಿದರು. ಇದರ ನಂತರ ದೇಶದ ಉದ್ದಗಲಕ್ಕೆ ಕಾನೂನು ಭಂಗ ಆಂದೋಳನವನ್ನು ಸತ್ಯಾಗ್ರಹ ನಡೆಸುವ ಮೂಲಕ ಮುಂದುವರಿಸಲಾಯಿತು.

ಮಧ್ಯಪ್ರಾಂತದಲ್ಲಿ ಈ ಆಂದೋಳನವು ಆರಂಭವಾದುದು 9 ಏಪ್ರಿಲ್ 1930ರಲ್ಲಿ ಅಕೋಲದಲ್ಲಿ. ಅಲ್ಲೂ ಉಪ್ಪಿನ ಕಾನೂನನ್ನು ಭಂಗಿಸಲಾಯಿತು. ಆದರೆ ಆಗ ಆಂದೋಳನವು ಅಷ್ಟೇನೂ ಪ್ರಭಾವ ಬೀರಲಿಲ್ಲ. ಸರ್ಕಾರವು ಸತ್ಯಾಗ್ರಹಿಗಳನ್ನು ಬಂಧಿಸಲು ಸಹ ಮುಂದಾಗಲಿಲ್ಲ. ಪರಸ್ಪರ ತಿಕ್ಕಾಟವಾಗದಂತೆ ಅದು ಸಂಯಮ ವಹಿಸಿತು. ಹೀಗಾಗಿ ಆಂದೋಳನವನ್ನು ಇನ್ನಷ್ಟು ಪ್ರಭಾವಿಯಾಗಿ ಮಾಡುವ ಸಲುವಾಗಿ

ಸಂಘರ್ಷದ ಅಂಗವಾಗಿ 'ಜಂಗಲ್ ಸತ್ಯಾಗ್ರಹ'ವನ್ನು ತನ್ನ ಕಾರ್ಯಕ್ರಮದಲ್ಲಿ ಸೇರಿಸಿಕೊಳ್ಳಲು ಪ್ರಾಂತೀಯ ಕಾಂಗ್ರೆಸ್ ನಿರ್ಧರಿಸಿತು. ಅದರ ನಿರ್ಧಾರಕ್ಕೆ ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿಯು ಸಹ ತನ್ನ 'ಅಸ್ತು' ಹೇಳಿತು.

ಮಧ್ಯಪ್ರಾಂತದ ಅರಣ್ಯ ವಿಭಾಗದ ವಶದಲ್ಲಿ 19,618 ಚದರ ಮೈಲಿಯಷ್ಟು ಕಾಡು ಪ್ರದೇಶವಿತ್ತು. 1930–31ರಲ್ಲಿ ಪ್ರಾಂತೀಯ ಆಡಳಿತಕ್ಕೆ ಇದರಿಂದ ರೂ. 51,11,944ರಷ್ಟು ಆದಾಯ ಬಂದಿತ್ತು. ಅದರಲ್ಲಿ ರೂ. 39,60,430ರಷ್ಟು ವೆಚ್ಚವಾಗಿದ್ದು ನಿವ್ವಳ ಉಳಿತಾಯವಾಗಿದ್ದುದು ರೂ. 11,51,544ರಷ್ಟು. 1929–30ರಲ್ಲಿ ನಿವ್ವಳ ಉಳಿತಾಯವಾಗಿದ್ದುದು ರೂ. 20,21,566ರಷ್ಟು. ಹೀಗಾಗಿ ಕಾಂಗ್ರೆಸ್ 'ಜಂಗಲ್ ಸತ್ಯಾಗ್ರಹ'ದ ಮೂಲಕ ಪ್ರಾಂತೀಯ ಸರ್ಕಾರದ ಆದಾಯದ ಮೇಲೆ ಆಘಾತವೆಸಗಲು ನಿರ್ಧರಿಸಿತು. ಅಭಯಾರಣ್ಯದಲ್ಲಿರುವ ಹುಲ್ಲು ಅಥವಾ ಮರಗಳನ್ನು ಕಡಿಯುವುದರ ಮೂಲಕ ಸರ್ಕಾರವನ್ನು ಹಾಗೂ ಕಾನೂನನ್ನು ಧಿಕ್ಕರಿಸುವುದನ್ನೇ ಈ ಆಂದೋಳನದ ಸ್ವರೂಪವನ್ನಾಗಿ ಯೋಚಿಸಲಾಯಿತು.

ಸವಿನಯ ಕಾನೂನು ಭಂಗದ ಆಂದೋಳನದ ಕಲ್ಪನೆ ಮತ್ತು ಮಹಾತ್ಮಾ ಗಾಂಧಿಯವರ ನಾಯಕತ್ವದಲ್ಲಿ ಅದರಲ್ಲಿ ಪಾಲ್ಗೊಳ್ಳುವ ಸಲುವಾಗಿ ಸಂಘದಲ್ಲಿ ಪೂರ್ಣವಾಗಿ ಮಾನಸಿಕತೆ ತಯಾರಾಗಿತ್ತು. ಡಾ. ಮುಂಜೆಯವರ ಡೈರಿಯಲ್ಲಿ ಉಲ್ಲೇಖಿತವಾಗಿರುವ ಮುಂದಿನ ಮಾಹಿತಿ ಸಂಘದಲ್ಲಿ ಸೃಷ್ಟಿಯಾಗಿದ್ದ ಅಂದಿನ ವಾತಾವರಣಕ್ಕೆ ಕನ್ನಡಿ ಹಿಡಿದಿದೆ:

"ಬೇಸಿಗೆಯ ರಜೆಯಲ್ಲಿ ಪ್ರಶಿಕ್ಷಣಕ್ಕಾಗಿ ಊರೂರುಗಳಿಂದ ಬಂದಿದ್ದ ಸ್ವಯಂಸೇವಕರನ್ನು ಉದ್ದೇಶಿಸಿ ನಾನು ಸಂಜೆ ಮಾತಾಡಿದೆ. ಭಾರತವನ್ನು ಹಿಂದೂ ಭಾರತವಾಗಿ ಮಾಡಬೇಕೆಂಬುದೇ ಸಂಘದ ಗುರಿಯಾಗಿದೆ ಮತ್ತು ಸ್ವರಾಜ್ಯದ ಕಲ್ಪನೆಯೂ ಅಫ್ಘಾನಿಸ್ತಾನವು ಮುಸಲ್ಮಾನರ ರಾಜ್ಯವಾಗಿರುವಂತೆ ಇದು ಹಿಂದೂಗಳ ರಾಜ್ಯವಾಗಿರಬೇಕು ಎಂಬುದೇ ಆಗಿದೆ ಎಂದು ನಾನು ಅವರಿಗೆ ವಿವರಿಸಿದೆ. ನಾನು ಒಂದು ಘಂಟೆ ಕಾಲ ಭಾಷಣ ಮಾಡಿದೆ.... ಆ ಹುಡುಗರ ಮುಖಭಾವದಿಂದ ಅವರು ನನ್ನ ಭಾಷಣವನ್ನು ಮೆಚ್ಚುತ್ತಾ ಇಲ್ಲ ಎಂಬುದು ನನಗೆ ಅರಿವಾಯಿತು. ಪ್ರಾಯಶಃ ಸ್ವರಾಜ್ಯ ಪ್ರಾಪ್ತಿಗಾಗಿ ಮಹಾತ್ಮಾಗಾಂಧಿಯವರ ಸವಿನಯ ಕಾನೂನು ಭಂಗ ಆಂದೋಳನದ ಪ್ರಭಾವ ಅವರ ಬುದ್ಧಿ ಮನಗಳ ಮೇಲೆ ಹೆಚ್ಚು ಪ್ರಭಾವ ಬೀರಿರಬೇಕು ಅಥವಾ ನನ್ನ ಭಾಷಣವೇ ಅವರಿಗೆ ಹಿಡಿಸದಿರಬೇಕು."[2]

ಆಂದೋಳನದ ಆರಂಭದಿಂದಲೂ ಸಂಘದ ಸ್ವಯಂಸೇವಕರು ಅದರಲ್ಲಿ ಪಾಲ್ಗೊಳ್ಳತೊಡಗಿದ್ದರು. ಆದರೆ ಡಾ. ಹೆಡಗೇವಾರರು ತಾವು ಸ್ವತಃ ಸ್ವಯಂಸೇವಕರ ಜತೆಯಲ್ಲಿ ಅದರಲ್ಲಿ ಭಾಗವಹಿಸುವುದಾಗಿ ಪ್ರಕಟಿಸಿದಾಗ ಅವರ ಉತ್ಸಾಹ ಮೇರೆ ಮೀರಿತು. ದೇಶದಲ್ಲಿನ ಬದಲಾಗುತ್ತಿರುವ ಪರಿಸ್ಥಿತಿಯಲ್ಲಿ ಸಂಘದ ನಿಲುವನ್ನು ಚರ್ಚಿಸಿ ನಿರ್ಧರಿಸುವ ಸಲುವಾಗಿ 1929ರ ನವೆಂಬರ್‌ನಲ್ಲಿ ನಾಗಪುರದಲ್ಲಿ ಎಲ್ಲ ಸಂಘಚಾಲಕರ ಬೈಠಕ್ಕೊಂದನ್ನು ಕರೆಯಲಾಯಿತು. ಮೂರು ದಿನಗಳ ಕಾಲ ನಡೆದ ಈ ಬೈಠಕ್‌ನಲ್ಲಿ

---

2 ಮುಂಜೆ ಪೇಪರ್ಸ್, ಪ್ರೈವೇಟ್ ಡೈರಿ 3 ಜುಲೈ 1930, ನೆಹರು ಸ್ಮಾರಕ ಸಂಗ್ರಹಾಲಯ ಮತ್ತು ಪುಸ್ತಕಾಲಯ, ನವದೆಹಲಿ.

ಕಾಂಗ್ರೆಸ್ ಯೋಜಿಸಿರುವ ಈ ಆಂದೋಳನವನ್ನು ಯಾವುದೇ ಶರತ್ತಿಲ್ಲದೆ ಸಂಪೂರ್ಣವಾಗಿ ಸಮರ್ಥಿಸಬೇಕೆಂದು ಎಲ್ಲರೂ ಕೂಡಿ ಒಮ್ಮತದಿಂದ ನಿರ್ಧರಿಸಿದರು. 1929ರ ಕೊನೆಯ ಭಾಗದಲ್ಲಿ ನಾಗಪುರದಲ್ಲಿ ಸಂಘದ ಒಟ್ಟು 37 ಶಾಖೆಗಳು ಇದ್ದವು. ನಾಗಪುರ ಬಿಟ್ಟಲ್ಲಿ ಬೇರೊಂದು ಪ್ರಮುಖ ಶಾಖೆಯಾಗಿ ಆಗ ಬೆಳೆಯುತ್ತಿದ್ದುದು ವರ್ಧಾ. ಅಲ್ಲಿ 12 ಶಾಖೆಗಳಿದ್ದವು. 1930ರ ನಡುವಿನ ಭಾಗದಲ್ಲಿ ಸಂಘದ ಶಾಖೆಗಳು 52ಕ್ಕೆ ಏರಿದ್ದವು. ಸ್ವಯಂಸೇವಕರ ಸಂಖ್ಯೆಯೂ ಎರಡರಿಂದ ಎರಡೂವರೆ ಸಾವಿರದ ವರೆಗೆ ತಲಪಿತ್ತು. ಇದರಲ್ಲಿ ತರುಣ ಸ್ವಯಂಸೇವಕರೇ ಏಳುನೂರರಿಂದ ಎಂಟುನೂರರ ವರೆಗೆ ಇದ್ದರು.

ಆಂದೋಳನವನ್ನು ಸಮರ್ಥಿಸಿ ಸಂಘವು ಕೈಗೊಂಡಿದ್ದ ನಿರ್ಧಾರವು ಆಕಸ್ಮಿಕವೂ ಅಲ್ಲ ಅಥವಾ ಯಾವುದೇ ಒತ್ತಡಕ್ಕೆ ಒಳಗಾಗಿಯೂ ಅಲ್ಲ. ಡಾ. ಹೆಡಗೇವಾರರು ಸಂಘದ ಕಾರ್ಯಕ್ರಮಗಳನ್ನು ತಿಂಗಳುಗಳ ಮೊದಲೇ ನಿರ್ಧರಿಸುವುದು ಆಗ ಸಂಘದಲ್ಲಿ ಇದ್ದ ರೂಢಿಯೇ. ಆಂದೋಳನಕ್ಕೆ ಸಂಬಂಧಿಸಿ ಸಂಘದ ನಿಲುವೇನೆಂಬುದು ಡಾ. ಹೆಡಗೇವಾರರು ಹೇಳಿದ್ದ ಒಂದು ಮಾತಿನಿಂದ ಸ್ಪಷ್ಟವಾಗಿದೆ. "ಪ್ರಸ್ತುತ ಆಂದೋಳನವು ನಮ್ಮ ಸ್ವರಾಜ್ಯ ಪ್ರಾಪ್ತಿಯ ಹೋರಾಟದಲ್ಲಿ ಕಟ್ಟಕಡೆಯ ಸಂಘರ್ಷವೆಂಬ ಭ್ರಮೆಯಿರಿಸಿಕೊಳ್ಳಬೇಕಾದ ಅಗತ್ಯವೇನೂ ಇಲ್ಲ. ನಿರ್ಣಾಯಕ ಸಂಘರ್ಷವು ನಡೆಯಲಿರುವುದು ಈ ಆಂದೋಳನದ ನಂತರವೇ ಮತ್ತು ಅದಕ್ಕಾಗಿ ಸರ್ವಸ್ವ ತ್ಯಾಗ ಮಾಡಲು ನಾವು ಸಿದ್ಧರಿರಬೇಕಾಗಿದೆ."

1920–21ರ ಸಂಘರ್ಷದ ಅನುಭವದಿಂದ ಡಾ. ಹೆಡಗೇವಾರರು ಪಾಠ ಕಲಿತಿದ್ದರು. ಕಾರ್ಯಕರ್ತರ ಮನದಲ್ಲಿ ಆಧಾರರಹಿತ ಭರವಸೆಯನ್ನು ಮೂಡಿಸಿದಲ್ಲಿ ಅದರ ಪರಿಣಾಮ ಒಳ್ಳೆಯದಾಗುವುದಿಲ್ಲ ಎಂಬ ಅರಿವಿತ್ತು ಅವರಿಗೆ. "ಒಂದೇ ವರ್ಷದಲ್ಲಿ ಸ್ವರಾಜ್ಯ" ಎಂಬ ಘೋಷಣೆಯಿಂದಾಗಿ 1920–21ರಲ್ಲಿ ಅಸಹಕಾರ ಆಂದೋಳನದ ಬಗ್ಗೆ ಉತ್ಸಾಹವೇನೋ ಉಕ್ಕಿ ಹರಿಯಿತು. ಆದರೆ ಅದರ ನಂತರ ಅದೇ ಪ್ರಮಾಣದಲ್ಲಿ ನಿರಾಶೆ, ಹತಾಶೆ ಮತ್ತು ಅಸಮಾಧಾನವೂ ತಲೆಯೆತ್ತಿತ್ತು. ಅದಕ್ಕಾಗಿ ಅವರು ಆಂದೋಳನದ ವಾಸ್ತವಿಕತೆಯನ್ನು ಅರಿತ ನಂತರವಷ್ಟೇ ಸ್ವಯಂಸೇವಕರಿಗೆ ಅದರಲ್ಲಿ ಪಾಲ್ಗೊಳ್ಳಲು ಕರೆ ನೀಡಿದ್ದರು.

ಆಂದೋಳನದಲ್ಲಿ ಸಂಘದ ಸಹಭಾಗಿತ್ವ ಹೇಗಿರಬೇಕು ಎಂಬ ಬಗ್ಗೆಯೂ ಸ್ವಯಂಸೇವಕರ ಮನದಲ್ಲಿ ಪ್ರಶ್ನೆಗಳಿದ್ದವು. ಹಲವರ ಇಚ್ಛೆಯಿದ್ದುದು ಸಂಘದ ಗಣವೇಷ ಧರಿಸಿ, ಭಗವಾ ಧ್ವಜವನ್ನು ಮುಂದಿರಿಸಿಕೊಂಡು ಭಾಗವಹಿಸಬೇಕು ಎಂಬ ರೀತಿಯಲ್ಲಿ. ಅದರಿಂದಾಗಿ ಸಂಘದ ಪಾತ್ರವನ್ನು ಎಲ್ಲರೂ ಗುರುತಿಸಬಹುದು ಎಂಬುದು ಅವರಿಗಿದ್ದ ನಿರೀಕ್ಷೆ. ಆದರೆ ಈ ಪ್ರಶ್ನೆಗೆ ಉತ್ತರವನ್ನು ಡಾ. ಹೆಡಗೇವಾರರು ಬೇರೊಂದು ರೀತಿಯಲ್ಲಿ ಹೇಳಿದರು. "ಸ್ವಯಂಸೇವಕರು ಸಂಘಚಾಲಕರಿಂದ ಅನುಮತಿ ಪಡೆದು ವೈಯಕ್ತಿಕ ನೆಲೆಯಲ್ಲಿ ಆಂದೋಳನದಲ್ಲಿ ಪಾಲ್ಗೊಳ್ಳಬಹುದು. ಆ ರೀತಿಯಾಗಿ ಭಾಗವಹಿಸುವುದರಲ್ಲಿ ಯಾರಿಂದಲೂ ಅಡ್ಡಿಯಾಗದು." ಸಾಮ್ರಾಜ್ಯವಾದದ ವಿರುದ್ಧ ಹೋರಾಟ ಯಾವುದೇ ಆದರೂ ಒಂದೇ ವೇದಿಕೆಯಿಂದ, ಒಂದೇ ಧ್ವಜದ ಅಡಿಯಲ್ಲಿ, ಒಂದೇ ಘೋಷಣೆಯೊಂದಿಗೆ ಮತ್ತು ಒಂದೇ ವಿಧದ ಕಾರ್ಯಕ್ರಮದಿಂದ ಕೂಡಿ ಆಗಬೇಕೆಂಬುದರ ಸಮರ್ಥಕರಾಗಿದ್ದವರು ಡಾ. ಹೆಡಗೇವಾರರು. ಸಂಘದ ಬ್ಯಾನರ್‌ನಡಿಯಲ್ಲಿ ಪ್ರತ್ಯೇಕವಾದ ಧ್ವಜದೊಂದಿಗೆ ಹಾಗೂ ತಮ್ಮದೇ ಆದ

ನಾಯಕತ್ವದಲ್ಲಿ ಆಂದೋಳನದಲ್ಲಿ ಪಾಲ್ಗೊಳ್ಳುವುದರಿಂದ "ಅನಗತ್ಯದ ವಿವಾದವೊಂದರ ಸೃಷ್ಟಿಗೆ ಕಾರಣವಾಗುವುದು" ಎಂಬುದು ಅವರಿಗೆ ಸ್ಪಷ್ಟವಿತ್ತು. ಅದಕ್ಕಾಗಿ ಯಾವುದೇ ಸೈದ್ಧಾಂತಿಕ ಚರ್ಚೆಗೆ ಆಸ್ಪದ ನೀಡದೆ, "ಆಂದೋಳನದಲ್ಲಿ ಪೂರ್ಣವಾಗಿ ಸಮರಸವಾಗಿ ಪಾಲ್ಗೊಳ್ಳಬೇಕು" ಎಂಬ ಸಲಹೆಯನ್ನು ಅವರು ಸ್ವಯಂಸೇವಕರಿಗೆ ನೀಡಿದರು. ಈ ನಿಟ್ಟಿನಲ್ಲಿ ತಮ್ಮ ಸ್ವಂತದ ಆದರ್ಶವನ್ನೇ ಅವರು ಮುಂದಿರಿಸಿದರು.

## ಒಂದು ವಿನೂತನ ಆದರ್ಶ

ಸಂಘದ ಯೋಜನೆಯಂತೆ 1930ರ ಜುಲೈ 12ರಂದು ನಾಗಪುರದ ಗುರುದಕ್ಷಿಣಾ ಉತ್ಸವದ ಪ್ರಸಂಗದಲ್ಲಿ ಒಂದು ವಿಶೇಷ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಅಂದು ಹೆಚ್ಚಿನ ಸಂಖ್ಯೆಯಲ್ಲಿ ಸ್ವಯಂಸೇವಕರು ಮತ್ತು ಹಿತೈಷಿಗಳು ಸಹ ಬಂದಿದ್ದರು. ಈ ಸಂದರ್ಭದಲ್ಲಿ ಮಾತಾಡಿದ ಡಾ. ಲ.ವಾ. ಪರಾಂಜಪೆ ಅವರು, ಡಾ. ಹೆಡಗೇವಾರರು ತಮ್ಮ ಕೆಲವು ಸಹಕಾರಿಗಳ ಜತೆಯಲ್ಲಿ 'ಜಂಗಲ್ ಸತ್ಯಾಗ್ರಹ'ದಲ್ಲಿ ಭಾಗವಹಿಸುವುದಾಗಿ ಘೋಷಿಸಿದರು. ತಮ್ಮ ಭಾಷಣದಲ್ಲಿ ಅವರು "ಈ ಆಂದೋಳನದಲ್ಲಿ ಪಾಲ್ಗೊಳ್ಳಬೇಕೆಂದಿರುವವರು ಸಂತೋಷದಿಂದ ಭಾಗವಹಿಸಬಹುದು. ಆದರೆ ಇನ್ನುಳಿದವರು ಈಗ ತಾನೇ ಹುಟ್ಟಿರುವ ಈ ಸಂಘಟನೆಯ ಕಾರ್ಯದಲ್ಲೇ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳಬೇಕು. ಪ್ರಸ್ತುತ ಆಂದೋಳನವು ನಮ್ಮ ರಾಷ್ಟ್ರವನ್ನು ಸ್ವಾತಂತ್ರ್ಯಪ್ರಾಪ್ತಿಯ ದಿಕ್ಕಿನಲ್ಲಿ ಮುಂದೆ ಕೊಂಡೊಯ್ಯಲಿದೆ ಎಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಆದರೆ ಇದರ ಜತೆಯಲ್ಲೇ ಮುಂದಿನ ಹೋರಾಟದಲ್ಲಿ ತಮ್ಮ ಸರ್ವಸ್ವವನ್ನು ಸಮರ್ಪಿಸಲು ಸಿದ್ಧರಿರುವಂತಹವರನ್ನು ಸಂಘಟಿಸುವ ಸಂಘದ ನೈಜ ಕಾರ್ಯವನ್ನು ನಿರಂತರವಾಗಿ ನಡೆಸಿಕೊಂಡು ಹೋಗಬೇಕಾದ ಅಗತ್ಯವೂ ಇದೆ" ಎಂದು ಸಹ ಹೇಳಿದರು.

ಉತ್ಸವದ ಕೊನೆಯಲ್ಲಿ ಡಾ. ಹೆಡಗೇವಾರರು ಪುಟ್ಟ ಭಾಷಣ ಮಾಡಿದರು. ತಮ್ಮ ಮಾತು ಮತ್ತು ಕೃತಿಯಲ್ಲಿ ಅವರು ಮುಂದಿಟ್ಟ ಆದರ್ಶ ಪ್ರಾಯಶಃ ಸ್ವಾತಂತ್ರ್ಯ ಆಂದೋಳನದಲ್ಲಿ ಇನ್ಯಾವ ಸಂಸ್ಥೆಯೂ ಇಟ್ಟಿರಲಾರದು. ಆ ದಿನಗಳಲ್ಲಿ ಈ ಆಂದೋಳನಕ್ಕೆ ಶಕ್ತಿ ತುಂಬಿಸುವುದನ್ನು ಬಿಟ್ಟು, ಕಮ್ಯುನಿಸ್ಟರು ಕಾಂಗ್ರೆಸ್ ಪಕ್ಷದೊಳಗೆ ನುಸುಳಿ ಅದನ್ನು ತಮ್ಮ ವಶಪಡಿಸಿಕೊಳ್ಳುವ ಹೊಂಚು ಹಾಕುತ್ತಿದ್ದರು. ಕಾಂಗ್ರೆಸ್‌ಗೆ ಸೇರಿದ್ದ ಅನೇಕ ಸಂಸ್ಥೆಗಳನ್ನು ಅವರು ಆಗಲೇ ವಶಪಡಿಸಿಕೊಂಡು ಆಗಿತ್ತು ಸಹ. ಸಮಾಜವಾದಿಗಳು ಕಾಂಗ್ರೆಸಿನೊಳಗೆ ತಮ್ಮದೇ ಪ್ರತ್ಯೇಕ ಗುಂಪೊಂದನ್ನು ಮಾಡಿಕೊಂಡೇ ಇದ್ದರು. ಹಿಂದೂ ಮಹಾಸಭೆ ಮತ್ತು ಲೀಗ್ ಇವೆರಡೂ ತಂತಮ್ಮ ಸಂಘಟನೆಗಳ ಸಂಕುಚಿತ ಅಭಿಮಾನದಿಂದ ಕೂಡಿದವುಗಳಾಗಿ ತಮ್ಮ ಸಮುದಾಯಗಳ ನಾಯಕತ್ವ ಗಳಿಸುವುದಕ್ಕಾಗಿ ತಮ್ಮದೇ ಆದ ಅಹಂಕಾರದಲ್ಲಿ ಮುಳುಗಿದ್ದುವು. ಆದರೆ ಡಾ. ಹೆಡಗೇವಾರರು, ಒಂದು ಕಡೆ ಆಂದೋಳನದ ಸಲುವಾಗಿ ತಮ್ಮ ಸಂಘಟನೆಯನ್ನು ವಿಸರ್ಜಿಸಲಿಲ್ಲ ಮತ್ತು ಇನ್ನೊಂದು ಕಡೆ ಆಂದೋಳನದಲ್ಲಿ ಪ್ರತ್ಯೇಕತೆಯ ಮಾನಸಿಕತೆಯನ್ನು ಬೆಳೆಸಲೂ ಇಲ್ಲ. ಅವರು ಕಾಂಗ್ರೆಸ್ಸಿನ ಆಂದೋಳನದಲ್ಲಿ ಓರ್ವ ಸರ್ವಸಾಮಾನ್ಯ ಸತ್ಯಾಗ್ರಹಿಯಾಗಿ ಸೇರಿಕೊಂಡರು. ತಮ್ಮ ಅಂದಿನ ಐತಿಹಾಸಿಕ ಭಾಷಣದಲ್ಲಿ ಅವರು:

"ಧನ್ಯವಾದ ತಿಳಿಸಿ ಕುಳಿತುಕೊಂಡ ನಂತರ ನಾನು ಸಂಘದ ಸರಸಂಘಚಾಲಕನಾಗಿ ಮುಂದುವರಿಯುವುದಿಲ್ಲ. ಡಾ. ಪರಾಂಜಪೆ ಅವರು ಸಂಘದ ಸರಸಂಘಚಾಲಕತ್ವವನ್ನು

ವಹಿಸಿಕೊಳ್ಳಲು ಒಪ್ಪಿದ್ದಾರೆ. ಇದಕ್ಕಾಗಿ ಸಂಘದ ವತಿಯಿಂದ ಅವರಿಗೆ ಹಾರ್ದಿಕವಾಗಿ ಧನ್ಯವಾದಗಳನ್ನು ತಿಳಿಸುತ್ತೇನೆ. ಈ ಆಂದೋಳನದಲ್ಲಿ ಭಾಗವಹಿಸಲು ನಿರ್ಧರಿಸಿರುವ ನಾವೆಲ್ಲರೂ ಇದನ್ನು ನಮ್ಮ ವೈಯಕ್ತಿಕವಾದ ನೆಲೆಯಲ್ಲಿ ಮಾಡುತ್ತಿದ್ದೇವೆ. ಸಂಘದ ವೈಚಾರಿಕ ಭೂಮಿಕೆಯಲ್ಲಾಗಲಿ, ಕಾರ್ಯದ ಪದ್ಧತಿಯಲ್ಲಾಗಲಿ ಯಾವುದೇ ಬದಲಾವಣೆಯಾಗಿಲ್ಲ ಮಾತ್ರವಲ್ಲ, ಅದರ ಮೇಲಿನ ನಮ್ಮ ಶ್ರದ್ಧೆಯೂ ಅಲ್ಲಾಡಿಲ್ಲ. ನಮ್ಮ ದೇಶದಲ್ಲಿ ನಡೆಯುವ ಯಾವುದೇ ಆಂದೋಳನವಿರಲಿ, ಅದರ ಒಳ ಹೊರ ಎಲ್ಲ ಮಾಹಿತಿಗಳನ್ನು ತಿಳಿದು ಅದನ್ನು ನಮ್ಮ ಕಾರ್ಯಕ್ಕೆ ಉಪಯುಕ್ತವಾಗಿಸುವುದು ಹೇಗೆ ಎಂಬುದು ದೇಶದ ಸ್ವಾತಂತ್ರ್ಯ ಪ್ರಾಪ್ತಿಯ ಗುರಿಗಾಗಿ ದುಡಿಯುವಂತಹ ಯಾವುದೇ ಸಂಘಟನೆಯಾದರೂ ಮಾಡಲೇಬೇಕಾದ ಕರ್ತವ್ಯವಾಗಿದೆ" ಎಂದು ತಿಳಿಸಿದರು.

1921ರಲ್ಲಿ ಅವರು ಸೆರೆಮನೆ ವಾಸಕ್ಕೆ ಹೊರಟಾಗ, ಸೆರೆವಾಸವೇ ದೇಶಭಕ್ತಿಗೆ ಇನ್ನೊಂದು ಹೆಸರು ಎಂಬುದನ್ನು ಒಪ್ಪಿರಲಿಲ್ಲ. ಬದಲಾಗಿ ಅಗತ್ಯವಿದ್ದಾಗ ಮಾತ್ರ ಸೆರೆಮನೆ ಸೇರಲೂ ಸಹ ಸಿದ್ಧರಿರಬೇಕು. ಆದರೆ ಹೊರಗೆ ಉಳಿದು ದೇಶದ ಸ್ವಾತಂತ್ರ್ಯಕ್ಕಾಗಿ ಕಾರ್ಯ ಮಾಡುವುದು ಹೆಚ್ಚು ಉಚಿತ ಎಂದು ಹೇಳಿದ್ದರು. ಈ ಮಾತನ್ನು ಅವರು ಮತ್ತೊಮ್ಮೆ ತಮ್ಮ ಭಾಷಣದಲ್ಲಿ ಉಲ್ಲೇಖಿಸಿದರು.

"ಸೆರೆಮನೆಗೆ ಹೋಗುವುದೇ ಇಂದು ದೇಶಭಕ್ತಿಯ ಇನ್ನೊಂದು ರೂಪ ಎಂದು ತಿಳಿಯಲಾಗುತ್ತಿದೆ. ಆದರೆ ಎರಡು ವರ್ಷಗಳ ಕಾಲ ಸೆರೆಮನೆಯಲ್ಲಿ ಇರಲು ಸಿದ್ಧರಿರುವವರ ಬಳಿ, 'ನೀವು ಮನೆ, ಸಂಸಾರ ಇತ್ಯಾದಿ ಕೆಲಸಗಳಿಂದ ಎರಡು ವರ್ಷಗಳ ಕಾಲ ರಜೆ ಪಡೆದು, ದೇಶದ ಸ್ವಾತಂತ್ರ್ಯಕ್ಕಾಗಿ ದುಡಿಯುವಂತಹ ಸಂಘಟನೆಯ ಕಾರ್ಯಕ್ಕಾಗಿ ನಿಮ್ಮ ಶಕ್ತಿ ಸಮಯವನ್ನು ಮುಡಿಪಾಗಿಡಿ' ಎಂದಲ್ಲಿ, ಅದಕ್ಕಾಗಿ ಅವರು ಸಿದ್ಧರಾಗುವುದಿಲ್ಲ. ಅದೇಕೆ ಹಾಗೆ? ದೇಶದ ಸ್ವಾತಂತ್ರ್ಯವು ಒಂದು ವರ್ಷ ಅಥವಾ ಆರೇಳು ತಿಂಗಳುಗಳ ಕೆಲಸದಿಂದ ಅಲ್ಲ, ಆದರೆ ವರ್ಷಾನುಗಟ್ಟಲೆ ಸತತವಾಗಿ ಸಂಘಟನೆಯ ಕೆಲಸ ಮಾಡಿದಲ್ಲಿ ಮಾತ್ರ ಪ್ರಾಪ್ತವಾದೀತು ಎಂಬುದನ್ನು ಅರ್ಥ ಮಾಡಿಕೊಳ್ಳಲು ಯಾರೂ ಸಿದ್ಧರಿಲ್ಲ. ಇಂತಹ ಕ್ಷಣಿಕ ದೇಶಭಕ್ತಿಯನ್ನು ಬಿಡದ ಮತ್ತು ದೇಶದ ಸ್ವಾತಂತ್ರ್ಯಕ್ಕಾಗಿ ಸಂಘಟನೆಯ ಕಾರ್ಯವನ್ನು ಮಾಡುತ್ತಲೇ ಬದುಕಬೇಕೆಂಬ ನಿರ್ಧಾರ ಮಾಡದ ವಿನಾ ದೇಶದ ಭಾಗ್ಯ ಬದಲಾಗದು. ಇಂತಹ ಮನೋವೃತ್ತಿಯನ್ನು ತರುಣರಲ್ಲಿ ಬೆಳೆಸುವ ಹಾಗೂ ಅಂತಹ ತರುಣರ ಸಂಘಟನೆ ಮಾಡುವುದನ್ನೇ ಸಂಘವು ತನ್ನ ಗುರಿಯನ್ನಾಗಿ ಮಾಡಿಕೊಂಡಿದೆ."

ಅವರ ಭಾಷಣದ ನಂತರ ಸಂಘದ ಸರಸೇನಾಪತಿ ಮಾರ್ತಾಂಡ ರಾವ್ ಜೋಗ್ ಅವರು ಡಾ. ಹೆಡಗೇವಾರ್ ಮತ್ತು ಅವರ ಜತೆಯಲ್ಲಿ ಸತ್ಯಾಗ್ರಹಿಗಳಾಗಿ ಹೋಗುವಂತಹ ಪ್ರಮುಖ ಕಾರ್ಯಕರ್ತರಿಗೆಲ್ಲ ಹೂಹಾರ ತೊಡಿಸಿ ಸನ್ಮಾನಿಸಿದರು.

### ಪುಸದ್ ಸತ್ಯಾಗ್ರಹ

ಜುಲೈ 14ರಂದು ಡಾ. ಹೆಡಗೇವಾರರ ನಾಯಕತ್ವದ ಸತ್ಯಾಗ್ರಹಿಗಳ ತಂಡ ನಾಗಪುರದಿಂದ ಹೊರಟಿತು. ನಾಗಪುರ ರೈಲು ನಿಲ್ದಾಣದಲ್ಲಿ ಅವರನ್ನು ಬೀಳ್ಕೊಡುವುದಕ್ಕಾಗಿ ನೂರಾರು ಮಂದಿ ಸೇರಿದ್ದರು. ಅವರಲ್ಲಿ ಹೊಸದಾಗಿ ಸರಸಂಘಚಾಲಕತ್ವ ವಹಿಸಿದ್ದ ಡಾ. ಪರಾಂಜಪೆ, ಢಬಲೆ, ಬ್ಯಾರಿಸ್ಟರ್ ಗೋವಿಂದರಾವ್ ದೇಶಮುಖ್ ಮೊದಲಾದ ಪ್ರಮುಖರಿದ್ದರು.

ದಾರಿಯುದ್ದಕ್ಕೂ ರೈಲು ನಿಂತ ಕಡೆಗಳಲ್ಲೆಲ್ಲ ನೂರಾರು ಮಂದಿ ಅವರ ಸ್ವಾಗತಕ್ಕಾಗಿ ಬಂದಿದ್ದರು. ಕೆಲವರು ಅಲ್ಲಿಯೇ ಸತ್ಯಾಗ್ರಹಿಗಳ ತಂಡವನ್ನು ಸೇರಿಕೊಂಡರು. ಮರುದಿನ ವರ್ಧಾದಲ್ಲಿ ಒಂದು ಶೋಭಾಯಾತ್ರೆಯನ್ನೂ ಹೊರಡಿಸಲಾಯಿತು. ಅಲ್ಲೂ ಅನೇಕ ಸಂಘದ ಪ್ರಮುಖರು ಮತ್ತು ಇತರ ಕಾರ್ಯಕರ್ತರು ಸತ್ಯಾಗ್ರಹಿಗಳ ತಂಡದಲ್ಲಿ ಸೇರಿದರು. ಡಾ. ಹೆಡಗೇವಾರರ ಜತೆಯಲ್ಲಿ ಅಪ್ಪಾಜಿ ಜೋಶಿ, 'ಮಹಾರಾಷ್ಟ್ರ' ಪತ್ರಿಕೆಯ ಸಂಪಾದಕ ಬಾಳಾಸಾಹೇಬ ಢಬಳೆ, ದಾದಾರಾವ್ ಪರಮಾರ್ಥ, ವಿಠ್ಠಲರಾವ್ ದೇವ್, ಭೈಯಾಜಿ ಕುಂಬಳವಾರ್, ಅರ್ಣಿಯ ಅಂಬಾಡೆ, ಚಂದಾದ ಪಾಲೇವಾರ್ ಮೊದಲಾದ ಪ್ರಮುಖರು ತಂಡದಲ್ಲಿದ್ದರು. ಈ ತಂಡವು ದಿ. 16ರಂದು ಪುಸದ್ ತಲುಪಿತು. ದಿ. 17ರಂದು ಡಾ. ಹೆಡಗೇವಾರರು ಯವತ್‌ಮಾಳದಲ್ಲಿ ಒಂದು ಭಾರೀ ಸಭೆಯನ್ನುದ್ದೇಶಿಸಿ ಮಾತಾಡಿದರು. ಆಂದೋಲನಕ್ಕಾಗಿ ಒಂದು 'ವಾರ್ ಕೌನ್ಸಿಲ್' ರಚಿತವಾಗಿತ್ತು. ಈ ಕೌನ್ಸಿಲ್, ಡಾ.ಹೆಡಗೇವಾರರ ತಂಡದಿಂದ ಸತ್ಯಾಗ್ರಹವು ಜುಲೈ 21ರಂದು ಎಂದು ನಿಗದಿಗೊಳಿಸಿತ್ತು. ಅವರ ಜತೆಯಲ್ಲಿ ಬಂದಿದ್ದ ಎಲ್ಲ ಸಂಘದ ಪ್ರಮುಖರಿಗೆ 'ವಾರ್ ಕೌನ್ಸಿಲ್' ಭಿನ್ನ ಸತ್ಯಾಗ್ರಹಿಗಳ ತಂಡದ ನಾಯಕತ್ವ ವಹಿಸುವಂತೆ ನಿರ್ದೇಶನ ನೀಡಿತ್ತು.

ಈ ಸತ್ಯಾಗ್ರಹದ ಮೊದಲ ಹೆಜ್ಜೆಯಿರಿಸಿದವರು ಲೋಕನಾಯಕ ಎಂ.ಎಸ್. ಅಣೆ ಅವರು. ಪುಸದ್‌ನಲ್ಲಿ ಅವರು ಮಾಡಿದ್ದ ಸತ್ಯಾಗ್ರಹದ ಪ್ರಾರಂಭ ಅಷ್ಟಾಗಿ ಸಫಲತೆ ನೀಡಲಿಲ್ಲ. ಅನೇಕ ಹಿರಿಯ ನಾಯಕರು ಒಂದು ವಾರದ ಕಾಲ ವಿವಿಧ ತಂಡಗಳ ನಾಯಕತ್ವ ವಹಿಸಿಯಾಗಿತ್ತು. ಹೀಗಾಗಿ ಒಂದು ವಾರದ ನಂತರ ಸತ್ಯಾಗ್ರಹದ ಕಾರ್ಯಕ್ರಮವನ್ನೇ ನಿಲ್ಲಿಸಲಾಯಿತು. ಸತ್ಯಾಗ್ರಹದ ಎರಡನೇ ಹಂತವನ್ನು ಜುಲೈ 21ರಂದು ಆರಂಭಿಸಲು 'ವಾರ್ ಕೌನ್ಸಿಲ್' ನಿರ್ಧರಿಸಿತು. ಅದರ ಉದ್ಘಾಟನೆಯನ್ನು ಡಾ. ಹೆಡಗೇವಾರ್ ಮಾಡುವವರಿದ್ದರು. ಟಿ.ಎಸ್. ಬಾಪಟ್‌ರವರು ಮಾಡಿದ್ದ ಈ ಘೋಷಣೆಯ ನಂತರ ಸತ್ಯಾಗ್ರಹಕ್ಕೆ ಸಂಬಂಧಿಸಿದ ಪೊಲೀಸ್ ವರದಿಯಲ್ಲಿ ಹೀಗೆ ಹೇಳಲಾಗಿತ್ತು: "ಪುಸದ್ ಸತ್ಯಾಗ್ರಹ ಅಷ್ಟೇನೂ ಸಫಲವಾಗಿಲ್ಲ. ಆದರೆ ಇದರ ಎರಡನೇ ಹಂತ ಯವತಮಾಳದಿಂದ ನಾಲ್ಕು ಮೈಲಿ ದೂರದಲ್ಲಿ ಜುಲೈ 21ರಂದು ಆರಂಭವಾಗಲಿದೆ. ಈ ಸತ್ಯಾಗ್ರಹವು ಸಫಲವಾಗುವ ಎಲ್ಲ ಲಕ್ಷಣಗಳು ಕಾಣುತ್ತಿವೆ."

ದಿ. 21ರಂದು ಪ್ರಾತಃಕಾಲ ಆರೂವರೆಗೆ ನಾಗಪುರ ಭವನದ ಮೈದಾನದಲ್ಲಿ ಸ್ವಯಂಸೇವಕರು ಮೊದಲು ಧ್ವಜ ವಂದನೆ ಮಾಡಿ ನಂತರ ಕಾಟನ್ ಮಾರ್ಕೆಟ್ ಕಡೆಗೆ ತೆರಳಿದರು. ಡಾ. ಹೆಡಗೇವಾರರ ಜತೆಯಲ್ಲಿ ಸುಮಾರು 3–4 ಸಾವಿರದಷ್ಟು ಜನರು ಇದ್ದರು. ಈ ಸಂಖ್ಯೆ ಅವರು ಮುಂದೆ ಮುಂದೆ ಹೋದಂತೆ ಇನ್ನೂ ಹೆಚ್ಚು ಬೆಳೆಯುತ್ತಹೋಯಿತು. ಸತ್ಯಾಗ್ರಹದ ಸ್ಥಾನದಲ್ಲಿ ಸೇರಿದ್ದ ಜನರು ಹತ್ತು ಸಾವಿರದಷ್ಟಿದ್ದರು. ಅದರಲ್ಲಿ ಒಳ್ಳೆಯ ನೂರರಷ್ಟು ಮಹಿಳೆಯರೂ ಇದ್ದರು. ಎತ್ತಿನ ಬಂಡಿಯಿಂದ ಹಿಡಿದು ಮೋಟಾರ್ ಕಾರ್ ವರೆಗೆ ವಿವಿಧ ರೀತಿಯ ವಾಹನಗಳಲ್ಲಿ ಜನರು ಅವರನ್ನು ಅನುಸರಿಸುತ್ತಿದ್ದರು. ಡಾ. ಹೆಡಗೇವಾರರ ಜತೆಯಲ್ಲಿ ಸೇರಿದ್ದ ಜನಸ್ತೋಮವು ಪೊಲೀಸರ ಅಂದಾಜನ್ನು ಸತ್ಯವಾಗಿಸಿತ್ತು. ಸತ್ಯಾಗ್ರಹ ನಡೆಯುವ ಸ್ಥಳದಲ್ಲಿ ಪೊಲೀಸರು ಮತ್ತು ಅರಣ್ಯ ಇಲಾಖೆಯ ಎಲ್ಲ ಹಿರಿಯ ಅಧಿಕಾರಿಗಳೂ ಮೊದಲೇ ಬಂದು ಕಾಯುತ್ತಿದ್ದರು. ಡಾ. ಹೆಡಗೇವಾರರು ತಮ್ಮ ತಂಡದ ಜತೆಯಲ್ಲಿ 'ಜಂಗಲ್ ಕಾನೂನ'ನ್ನು ಮುರಿದ ಕೂಡಲೇ ಪೊಲೀಸರು ಅವರನ್ನು ಬಂಧಿಸಿದರು. ಡಾ. ಹೆಡಗೇವಾರರು ಸತ್ಯಾಗ್ರಹವನ್ನು ಮುಂದುವರಿಸುವಂತೆ ಜನರಿಗೆ ಕರೆ ನೀಡಿ ಪೊಲೀಸರ ಜೊತೆಯಾದರು. ಅಂದೇ ಸಂಜೆ

ಅವರ ಮೇಲೆ ಮೊಕದ್ದಮೆಯನ್ನು ಚಲಾಯಿಸಲಾಯಿತು. ನ್ಯಾಯಾಧೀಶ ಭರೂಚಾ ಅವರು ಡಾ. ಹೆಡಗೇವಾರರಿಗೆ ಒಂಭತ್ತು ತಿಂಗಳ ಸಶ್ರಮ ಸೆರೆವಾಸದ ಶಿಕ್ಷೆಯನ್ನು ವಿಧಿಸಿದರು. ಅಪರಾಧಿಕ ದಂಡ ಸಂಹಿತೆಯಂತೆ ಆರು ತಿಂಗಳ ಮತ್ತು 379ನೇ ವಿಧಿಯಂತೆ ಮೂರು ತಿಂಗಳ ಸಶ್ರಮ ಸೆರೆವಾಸ–ಹೀಗೆ ಎರಡು ಶಿಕ್ಷೆಗಳನ್ನು ಅವರಿಗೆ ವಿಧಿಸಿದರು.

ಈ ಸತ್ಯಾಗ್ರಹದ ಸಫಲತೆಯ ಕಾರಣದಿಂದಾಗಿ ಪೊಲೀಸ್ ಮತ್ತು ಆಡಳಿತವು ಸಹ ಆಂದೋಳನವು ಇನ್ನೂ ಉಗ್ರ ಹಾಗೂ ಹೆಚ್ಚಿನ ರಭಸ ತೆಗೆದುಕೊಳ್ಳಬಹುದು ಎಂದು ಚಿಂತಿತರಾಗಿದ್ದರು. ಈ ಕಾರಣಕ್ಕಾಗಿಯೇ ಬೇರೆ ಸತ್ಯಾಗ್ರಹಗಳ ಹೋಲಿಕೆಯಲ್ಲಿ ಡಾ. ಹೆಡಗೇವಾರರಿಗೆ ವಿಧಿಸಲಾಗಿದ್ದ ಶಿಕ್ಷೆ ಹೆಚ್ಚಿನ ಪ್ರಮಾಣದಾಗಿತ್ತು. ಒಂದೇ ವಿಧದ ತಪ್ಪಿಗಾಗಿ ಒಬ್ಬರೇ ಮ್ಯಾಜಿಸ್ಟ್ರೇಟರು ಒಂದೇ ದಿನದಲ್ಲಿ ಬೇರೆ ಬೇರೆ ವಿಧದ ಶಿಕ್ಷೆಯನ್ನು ವಿಧಿಸಿದ್ದೇ ಅಂದಿನ ಒಂದು ವಿಶೇಷತೆ. ಡಾ. ಹೆಡಗೇವಾರರಿಗೆ ಒಂಭತ್ತು ತಿಂಗಳ ಸಶ್ರಮ ಸೆರೆವಾಸದ ಶಿಕ್ಷೆ ವಿಧಿಸಲಾಗಿದ್ದರೆ ಅವರ ಜತೆಯಲ್ಲೆ ಸತ್ಯಾಗ್ರಹ ನಡೆಸಿದ್ದ ಇತರ ಹನ್ನೊಂದು ಮಂದಿಯನ್ನು ಕೇವಲ ನಾಲ್ಕು ತಿಂಗಳ ಸಾಮಾನ್ಯ ಸೆರೆವಾಸದ ಶಿಕ್ಷೆಗೆ ಒಳಪಡಿಸಲಾಗಿತ್ತು. "ಡಾ. ಹೆಡಗೇವಾರರ ಸತ್ಯಾಗ್ರಹದ ಪ್ರಭಾವದ ಬಗ್ಗೆ ಪೊಲೀಸ್ ವರದಿಯಲ್ಲಿ ಡಾ. ಹೆಡಗೇವಾರರಿಗೆ ನೀಡಲಾಗಿದ್ದ ಶಿಕ್ಷೆಯ ಪರಿಣಾಮ ಉತ್ತಮವೇ ಆಗಿದೆ. ಅದರಿಂದಾಗಿ ಅವರ ನಂತರ ಅದೇ ಮಟ್ಟದ ಇನ್ನಾವ ನಾಯಕರೂ ಸತ್ಯಾಗ್ರಹಕ್ಕಾಗಿ ಮುಂದೆ ಬಂದಿಲ್ಲ" ಎಂದು ತಿಳಿಸಲಾಗಿದೆ. ನಾಗಪುರದಲ್ಲಿ ಡಾ. ಹೆಡಗೇವಾರರ ಸತ್ಯಾಗ್ರಹವನ್ನು ಸಮರ್ಥಿಸಿ ಒಂದು ಭಾರೀ ಸಭೆಯನ್ನು ನಡೆಸಲಾಯಿತು. ಅವರು ಸತ್ಯಾಗ್ರಹದ ಸಂದರ್ಭದಲ್ಲಿ ಕತ್ತರಿಸಿದ್ದ ಹುಲ್ಲನ್ನು ಯವತಮಾಳದಿಂದ ನಾಗಪುರಕ್ಕೆ ತರಲಾಗಿತ್ತು ಮತ್ತು ಶಾಖೆಗಳಲ್ಲಿ ಸತ್ಯಾಗ್ರಹದ ವರದಿಯನ್ನು ಓದಿ ಹೇಳಿದ ನಂತರ ಆ ಹುಲ್ಲನ್ನು ಧ್ವಜಕ್ಕೆ ಸಮರ್ಪಿಸಲಾಯಿತು. ಡಾ. ಹೆಡಗೇವಾರರು ಸತ್ಯಾಗ್ರಹ ನಡೆಸಿದ ದಿನವೇ ಅವರನ್ನು ಸಮರ್ಥಿಸಿ ಕಾಂಗ್ರೆಸ್ ಒಂದು ಸಭೆಯನ್ನು ನಡೆಸಿತು.

ಡಾ. ಹೆಡಗೇವಾರರ ಸತ್ಯಾಗ್ರಹವು ಮಧ್ಯಪ್ರಾಂತದ ಸವಿನಯ ಕಾನೂನು ಭಂಗ ಆಂದೋಳನದಲ್ಲಿ ಅತ್ಯಂತ ಯಶಸ್ವಿ ಕಾರ್ಯಕ್ರಮಗಳಲ್ಲಿ ಒಂದೆನಿಸಿತು.

## ತೀವ್ರಗೊಂಡ ಆಂದೋಳನ

ಡಾ. ಹೆಡಗೇವಾರರಿಗೆ ನೀಡಲಾಗಿದ್ದ ಕಠಿಣ ಸಜೆಯಿಂದಾಗಿ ಪ್ರಾಂತದ ಕಾಂಗ್ರೆಸ್ ಸಂಘಟನೆಯ ಮೇಲೆ ಹೆಚ್ಚಿನ ಪರಿಣಾಮವೇನೂ ಆಗದೆ ಹೋದರೂ, ಸಂಘದ ಸ್ವಯಂಸೇವಕರು ಇನ್ನೂ ಹೆಚ್ಚಿನ ಉತ್ಸಾಹದಿಂದ ಸತ್ಯಾಗ್ರಹದಲ್ಲಿ ಭಾಗವಹಿಸಲು ಮುಂದೆ ಬರಲಾರಂಭಿಸಿದರು. ಸಂಘದ ಪ್ರಭಾವವಿರುವಲ್ಲೆಲ್ಲ ಸತ್ಯಾಗ್ರಹವು ಹೊಸ ಹೊಸ ರೂಪ ತಾಳತೊಡಗಿತು.

ಇದರ ಹೆಚ್ಚಿನ ಪ್ರಭಾವ ಕಾಣಿಸಿದುದು ಶರಾಬು ಅಂಗಡಿಗಳನ್ನು ಬಂದ್ ಮಾಡಿಸುವುದರಲ್ಲಿ. ನಾಗಪುರದಲ್ಲಿ ಸ್ವಯಂಸೇವಕರು ಮದ್ಯಪಾನ ನಿಷೇಧದ ಅಭಿಯಾನವನ್ನೇ ಕೈಗೊಂಡರು. 1920–21ರ ಅಸಹಕಾರ ಆಂದೋಳನದ ಸಂದರ್ಭದಲ್ಲೂ ಈ ಕಾರ್ಯಕ್ರಮವು ಪ್ರಾಂತದಲ್ಲಿ ಯಶಸ್ವಿಯಾಗಿತ್ತು. 1931ರಲ್ಲಿ ಈ ಆಂದೋಳನದಿಂದಾಗಿ ಶರಾಬು ಮಾರಾಟವು ಶೇ. 60%ರಷ್ಟು ಕಡಿಮೆಯಾಯಿತು.

ಸರ್ಕಾರದ ವಿರುದ್ಧ ನಡೆಸಲಾದ ಆಂದೋಳನಗಳಲ್ಲಿ 1930–32ರಲ್ಲಿ ಸಂಘದ ಮುಂದಾಳುತನವನ್ನು ಸರ್ಕಾರವು ಒಪ್ಪಲೇ ಬೇಕಾಯಿತು.[3]

ಸವಿನಯ ಕಾನೂನು ಭಂಗದ ಈ ಆಂದೋಳನದಲ್ಲಿ ನಿಷೇಧಿತ ಸಾಹಿತ್ಯದ ಓದುವುದನ್ನು ಸಹ ಒಂದು ಭಾಗವಾಗಿ ಮಾಡಲಾಗಿತ್ತು. ನಾಗಪುರದಲ್ಲಿ ಸಂಘದ ಕಾರ್ಯಕರ್ತರು ಸಾರ್ವಜನಿಕ ಸಭೆಗಳಲ್ಲಿ ಅಂತಹ ಸಾಹಿತ್ಯವನ್ನು ಓದುವುದರ ಮೂಲಕ ಬಂಧಿತರಾಗುತ್ತಿದ್ದರು. ಇದರಲ್ಲಿ ಸಂಘದ ಸರಕಾರ್ಯವಾಹ ಜಿ.ಎಂ. ಹುದ್ದಾರ್ ಅವರೂ ಸೇರಿದ್ದರು. ಅವರು ಒಂದು ಸಾರ್ವಜನಿಕ ಸಭೆಯಲ್ಲಿ ಮ್ಯಾಜಿನಿ ಮತ್ತು ವಿನಾಯಕ ದಾಮೋದರ ಸಾವರಕರ ಅವರ ನಿಷೇಧಿತ ಪುಸ್ತಕಗಳನ್ನು ಓದಿ, ಪೊಲೀಸ್ ಮತ್ತು ಅಡಳಿತಕ್ಕೂ ಬಹಿರಂಗವಾಗಿ ಸವಾಲೆಸಗಿ ಬಂಧಿತರಾದರು.[4] ನಾಗಪುರದ ಸಂಘಚಾಲಕ ಅಪ್ಪಾಸಾಹೇಬ ಹಳ್ದೆ ಅವರು ಸಂಘಚಾಲಕ ಹೊಣೆಯಿಂದ ಮುಕ್ತರಾಗಿ 'ಜಂಗಲ್ ಸತ್ಯಾಗ್ರಹ'ದಲ್ಲಿ ಪಾಲ್ಗೊಂಡು ಸೆರೆಮನೆ ಸೇರಿದರು. ಅದೇ ರೀತಿಯಲ್ಲಿ ಶಿರಪುರದ ಸಂಘಚಾಲಕ ಬಾಬುರಾವ್ ವೈದ್ಯ ಅವರು ಸಹ ಬಂಧನಕ್ಕೊಳಗಾದರು. ಸಂಘದ ಇನ್ನೊಬ್ಬ ಅಖಿಲ ಭಾರತೀಯ ಅಧಿಕಾರಿಯಾಗಿದ್ದ ಮಾರ್ತಾಂಡ ಜೋಗ್ ಅವರು–ಸಂಘದಲ್ಲಿ 'ಸೇನಾಪತಿ'ಯ ಹೊಣೆ ನಿರ್ವಹಿಸುತ್ತಿದ್ದವರು–'ವಾರ್ ಕೌನ್ಸಿಲ್'ನಲ್ಲಿ ಸ್ವಯಂಸೇವಕರಿಗೆ 'ಕ್ಯಾಪ್ಟನ್' ಆಗಿ ನಿಯುಕ್ತರಾಗಿದ್ದರು. ಅವರು ಕೌನ್ಸಿಲ್‌ನ ಗುಪ್ತ ಸಮಾಚಾರ ಪತ್ರಿಕೆ 'ವಾರ್ ಬುಲೆಟಿನ್'ನ ಪ್ರಕಾಶನದ ಹೊಣೆ ಸ್ವೀಕರಿಸಿದ್ದರು. ಮುಂದೆ ಸೆಪ್ಟೆಂಬರ್ 4ರಂದು ನಾಗಪುರದಿಂದ 60 ಕಿ.ಮೀ. ದೂರದಲ್ಲಿನ ತಲೆಂಗಾವ್‌ನಲ್ಲಿ ಸಂಘದ ಸ್ವಯಂಸೇವಕರೊಂದಿಗೆ ಸತ್ಯಾಗ್ರಹ ನಡೆಸಿ ಅವರು ಸಹ ಬಂಧಿತರಾದರು. ಅವರೆಲ್ಲರಿಗೂ ನಾಲ್ಕು ತಿಂಗಳ ಸಕ್ತಮ ಸೆರೆವಾಸದ ಶಿಕ್ಷೆ ವಿಧಿಸಲಾಗಿತ್ತು. ಅವರ ಸತ್ಯಾಗ್ರಹದಲ್ಲೂ ಸಾವಿರಾರು ಸಂಖ್ಯೆಯಲ್ಲಿ ಜನರು ಭಾಗವಹಿಸಿದ್ದರು. ರಾಮಭಾವು ವಖರೆ, ವಿಠ್ಠಲರಾವ್ ಗಾಡಗೆ, ಸೀತಾರಾಮ ಪಂತ ಮಹಕರ್ ಮೊದಲಾದ ಅನೇಕ ಸಂಘದ ಪ್ರಮುಖರು ಸತ್ಯಾಗ್ರಹಿಗಳ ನಾಯಕತ್ವ ವಹಿಸಿದ್ದರು. ಮಹಕರ್ ಯವತಮಾಳದಲ್ಲಿ ಸಂಘದ ಶಿಬಿರದ ವ್ಯವಸ್ಥಾ ಪ್ರಮುಖರಾಗಿದ್ದವರು. ಅವರೂ ಸಂಘದ ಸ್ವಯಂಸೇವಕರ ಜತೆಯಲ್ಲಿ ಬಂಧನಕ್ಕೊಳಗಾದರು.[5] ತಲೆಂಗಾವ್‌ನ ಡಾ. ಅಂಬಾದಾಸ್ ನಾರಾಯಣ, ವಿಷ್ಣು ಗೋವಿಂದ ಘೋಟಕರ್, ವಿಠ್ಠಲ ಭಾಮುಜಿ ಲೋಹನ್ ಮೊದಲಾದ ಸ್ವಯಂಸೇವಕರಿಗೆ ನಾಲ್ಕು ತಿಂಗಳ ಸಕ್ತಮ ಸೆರೆವಾಸದ ಶಿಕ್ಷೆ ವಿಧಿಸಲ್ಪಟ್ಟಿತ್ತು.[6]

ಸಂಘದ ಪ್ರಶಿಕ್ಷಣ ಶಿಬಿರಗಳಲ್ಲಿ ಸ್ವಯಂಸೇವಕರಿಗೆ ಪ್ರಥಮ ಚಿಕಿತ್ಸೆ ಮತ್ತು ಶುಶ್ರೂಷೆಯ ವಿಷಯದಲ್ಲಿ ಶಿಕ್ಷಣವನ್ನು ನೀಡಿ ಒಂದು ಘಟಕವನ್ನು ರಚಿಸಲಾಗಿತ್ತು. ಅದರಲ್ಲಿ ನೂರು ಸ್ವಯಂಸೇವಕರಿದ್ದರು. ಮಧ್ಯಪ್ರಾಂತದ ಸತ್ಯಾಗ್ರಹದ ಸಂದರ್ಭದಲ್ಲಿ ಈ ಘಟಕವು ತನ್ನ ಪಾತ್ರವನ್ನು ಸೊಗಸಾಗಿ ನಿರ್ವಹಿಸಿತು. ಪ್ರದರ್ಶನಗಳು, ಶೋಭಾಯಾತ್ರೆಗಳು

---

3. ಪಾಕ್ಷಿಕ ರಿಪೋರ್ಟ್ ಮಧ್ಯಪ್ರಾಂತ ಬಿರಾರ್, ಜುಲೈ 1932ರ ಉತ್ತರಾರ್ಧ L/P&J/12/40 ರಾಷ್ಟ್ರೀಯ ಅಭಿಲೇಖಾಗಾರ, ನವದೆಹಲಿ.
4. ಕೇಸರಿ, 9 ಡಿಸೆಂಬರ್ 1938
5. ಕೇಸರಿ, 2 ಆಗಸ್ಟ್ 1930 ಮತ್ತು 22 ಜುಲೈ 1930 ಪು. 2
6. ಕೇಸರಿ, 2 ಆಗಸ್ಟ್ 1930 ಮತ್ತು 22 ಜುಲೈ 1930 ಪು. 2

ಮತ್ತು ಸತ್ಯಾಗ್ರಹಗಳಾದಾಗ ಸತ್ಯಾಗ್ರಹಿಗಳ ಜತೆಯಲ್ಲಿ ಸ್ವಯಂಸೇವಕರ ಈ ಘಟಕವೂ ಹಾಜರಿರುತಿತ್ತು. ಪೊಲೀಸರ ದಮನಕಾರಿ ಕ್ರಮಗಳಿಂದಾಗಿ ಅಥವಾ ಶಕ್ತಿ ಹೀನತೆಯಿಂದಾಗಿ ಸತ್ಯಾಗ್ರಹಿಗಳು ಮೂರ್ಛಿತರಾದಲ್ಲಿ ಈ ಘಟಕವು ಕೂಡಲೇ ಪ್ರಥಮ ಚಿಕಿತ್ಸೆಗೆ ಮುಂದಾಗುತ್ತಿತ್ತು. ಸೆಪ್ಟೆಂಬರ್ 9ರಂದು ನಾಗಪುರದಲ್ಲಿ ಪೊಲೀಸರು ಸತ್ಯಾಗ್ರಹಿಗಳ ಮೇಲೆ ಅಮಾನವೀಯವಾಗಿ ಲಾಠಿ ಪ್ರಹಾರ ಮಾಡಿದ್ದರಿಂದ ಹಲವಾರು ಸತ್ಯಾಗ್ರಹಿಗಳು ಏಟು ತಿಂದು ಗಾಯಗೊಂಡಿದ್ದರು. ಅವರೆಲ್ಲರಿಗೂ ಆಗ ಕಾರ್ಯನಿರ್ವಾಹಕ ಸರಸಂಘಚಾಲಕರಾಗಿದ್ದ ಡಾ. ಪರಾಂಜಪೆಯವರ ಚಿಕಿತ್ಸಾಲಯದಲ್ಲಿ ಅಗತ್ಯದ ಚಿಕಿತ್ಸೆ ಉಪಚಾರಗಳನ್ನು ನೀಡಲಾಯಿತು. ಅದಕ್ಕಿಂತ ಒಂದು ತಿಂಗಳು ಮೊದಲು ಸಂಪೂರ್ಣ ಪ್ರಾಂತದಲ್ಲಿ 'ಗಢವಾಲ ದಿನ'ದ ಆಚರಣೆಯಾದಾಗ ಪೊಲೀಸರು ಮತ್ತು ಆಂದೋಳನಕಾರರ ನಡುವೆ ಮಧ್ಯರಾತ್ರಿಯವರೆಗೂ ಪರಸ್ಪರ ತಿಕ್ಕಾಟ ನಡೆದಿತ್ತು. ಆ ಸಂದರ್ಭದಲ್ಲೂ ಈ ಘಟಕವು ಅಹೋರಾತ್ರಿ ಆಂದೋಳನಕಾರರಿಗೆ ನೆರವು ನೀಡಿತ್ತು.

1930ರ ದಸರಾ ಸಂದರ್ಭದಲ್ಲಿ ಸಂಘದ ಎಲ್ಲ ಶಾಖೆಗಳಲ್ಲಿ 'ಎಲೆ ಮನವೇ ನಿನಗೆ ಸುಖ ಅನುಭವಿಸಲು ಅಧಿಕಾರವಿಲ್ಲ' (ರೇ ಮನ ತುಝೆ ಸುಖಕಾ ಅಧಿಕಾರ ನಹೀಂ) ಎಂಬ ವಿಷಯದ ಪ್ರಬಂಧವೊಂದನ್ನು ಓದಲಾಗಿತ್ತು. ದೇಶಭಕ್ತಿಯಿಂದ ತುಂಬಿ ತುಳುಕುತ್ತಿದ್ದ ಆ ಲೇಖನದಲ್ಲಿ "ಮಾತೃಭೂಮಿಯು ಗುಲಾಮಗಿರಿಯ ಸಂಕೋಲೆಯಿಂದ ಬಿಡುಗಡೆಗೊಳ್ಳದೆ ಈ ರಾಷ್ಟ್ರವು ಶಕ್ತಿಶಾಲಿ ಹಾಗೂ ವೈಭವಪೂರ್ಣವಾಗುವುದು ಸಾಧ್ಯವಿಲ್ಲ. ಅಲ್ಲಿಯವರೆಗೆ ನಮಗೆ ಸುಖಕ್ಕಾಗಿ ಸ್ವಲ್ಪವಾದರೂ ಆಸೆ ಪಡಲು ಸಹ ಹಕ್ಕಿಲ್ಲ. ತಮ್ಮ ತಾಯಿಯನ್ನು ದುಃಖ, ನೋವು, ಅವಮಾನ ಮತ್ತು ದಾಸ್ಯಗಳಲ್ಲಿ ಬಿಟ್ಟು, ತಾವು ಭೌತಿಕವಾದ ಸುಖದ ಬೆನ್ನು ಹತ್ತುವ ಮಕ್ಕಳು, ನಿಜಕ್ಕೂ ಅತ್ಯಂತ ನೀಚರು. ನಿಜವಾದ ಸುಖವಿರುವುದು ಈ ಸಂಕೋಲೆಯನ್ನು ಮುರಿಯುವುದರಲ್ಲಿ ಹಾಗೂ ರಾಷ್ಟ್ರವನ್ನು ಸ್ವತಂತ್ರಗೊಳಿಸುವುದರಲ್ಲಿ" ಎಂಬ ಭಾವನೆಯೇ ತುಂಬಿದೆ.

ಒಟ್ಟಿನಲ್ಲಿ ಡಾ. ಹೆಡಗೇವಾರರು ತಮ್ಮ ಸ್ವಂತದ ಹಾಗೂ ಸಂಘದ ಸ್ವಯಂಸೇವಕರ ಸಾಮೂಹಿಕ ವ್ಯವಹಾರದ ಮೂಲಕ, ರಾಜಕೀಯ ಪ್ರಜ್ಞೆಗಿಂತಲೂ ಹೆಚ್ಚಾಗಿ ಸಾಂಸ್ಕೃತಿಕ ಪ್ರಜ್ಞೆಯ ಮೂಲಕ ದೇಶಭಕ್ತಿಯು ಹರಿಯುತ್ತಿದೆ ಎಂಬುದನ್ನು ತೋರಿಸಿಕೊಟ್ಟರು. ಸಂಘವು ಸ್ವಾತಂತ್ರ್ಯದ ಹೋರಾಟದಲ್ಲಿ ತನ್ನ ನಿಲುವಿನ ಸಹಿತವೇ ತನ್ನನ್ನು ಸಮರ್ಪಿಸಿಕೊಂಡಿದ್ದುದು ಸಂಘದ ರೂಪದಲ್ಲಿ ಅವರ ಹೊಸ ಚಿಂತನೆ ಮತ್ತು ಕಾರ್ಯದ ರೀತಿ ಅದೆಷ್ಟು ಸೂಕ್ತ ಎಂಬುದನ್ನು ಜಾಹೀರುಪಡಿಸಿತು.

# ಎರಡನೆಯ ಸೆರೆವಾಸ

ಡಾಕ್ಟರ್ ಹೆಡಗೇವಾರರ ಬಂಧನದ ಪರಿಣಾಮವಾಗಿ ಪ್ರಾಂತದಾದ್ಯಂತ ವ್ಯಾಪಕ ಪ್ರತಿಕ್ರಿಯೆ ವ್ಯಕ್ತವಾದವು. ಅವರನ್ನು ರೈಲಿನಲ್ಲಿ ಅಕೋಲಾ ಸೆರೆಮನೆಗೆ ಕರೆದೊಯ್ಯುತ್ತಿದ್ದಾಗ ಪ್ರತಿಯೊಂದು ನಿಲ್ದಾಣದಲ್ಲೂ ಅವರನ್ನು ಅಭಿನಂದಿಸಲು ಜನರು ಕಿಕ್ಕಿರಿದು ಜಮಾಯಿಸುತ್ತಿದ್ದರು. ರೈಲು ಮಾರ್ಗದಲ್ಲಿ ಯವತಮಾಳ ಮತ್ತು ಮೂರ್ತಿಜಾಪುರ ನಡುವೆ ಇರುವ ನಿಲ್ದಾಣ ದಾಬ್ವಾದಲ್ಲಿ ದಟ್ಟವಾಗಿ ಸೇರಿದ್ದ ಜನರಿಂದಾಗಿ ರೈಲ್ವೆ ಪ್ಲಾಟ್‌ಫಾರಂ ತಾನೇ ತಾನಾಗಿ ಒಂದು ಸಭಾಸ್ಥಾನವಾಗಿ ಮಾರ್ಪಟ್ಟಿತ್ತು. ಅಲ್ಲಿ ಸೇರಿದ್ದವರು ಕನಿಷ್ಠ ಸಾವಿರದಿಂದ ಸಾವಿರದ ಇನ್ನೂರರವರೆಗೆ ಇರಬಹುದು. ಪ್ಲಾಟ್‌ಫಾರಂ ಮೇಲೆಯೇ ಒಂದು ವೇದಿಕೆಯನ್ನು ರಚಿಸಲಾಗಿತ್ತು. ದಾಬ್ವಾದ ಕಾಂಗ್ರೆಸ್ ನಾಯಕರು ದಾವ್ರೂ ಅವರ ಮುಂದಾಳುತನದಲ್ಲಿ ಜನರು ಡಾ. ಹೆಡಗೇವಾರರನ್ನು ರೈಲಿನಲ್ಲೇ ಭೇಟಿಯಾಗಿ, ಅವರು ವೇದಿಕೆಗೆ ಬಂದು ಅಲ್ಲಿ ಸೇರಿದ್ದ ಜನಸ್ತೋಮವನ್ನು ಉದ್ದೇಶಿಸಿ ಮಾತಾಡುವಂತೆ ವಿನಂತಿಸಿದರು. ಜನರ ಒತ್ತಾಯದಿಂದಾಗಿ ಪೋಲೀಸ್ ಅಧಿಕಾರಿಗಳು ನಿರುಪಾಯವಾಗಿ ಡಾ. ಹೆಡಗೇವಾರರಿಗೆ ವೇದಿಕೆಗೆ ಹೋಗಲು ಅನುಮತಿ ನೀಡಿದರು.

ಅಲ್ಲಿ ಡಾ. ಹೆಡಗೇವಾರರು ಮಾಡಿದ್ದುದು ಪುಟ್ಟ ಭಾಷಣ. ಆದರೆ ತುಂಬ ಉತ್ಸಾಹಪ್ರದವಾಗಿತ್ತದು. ತಮ್ಮ ಭಾಷಣದಲ್ಲಿ ಅವರು ಹೀಗೆ ಹೇಳಿದರು:

"ಹತ್ತು ವರ್ಷಗಳ ಹಿಂದೆ ಆಂಗ್ಲರ ವಿರುದ್ಧ ನಾವು ಅಸಹಕಾರ ಆಂದೋಳನ ನಡೆಸಿದ್ದೆವು. ಈಗ ನಾವು ವಸಾಹತುಶಾಹಿಗಳ ಕಾನೂನುಗಳನ್ನು ಮುರಿಯಲು ಹೊರಟಿದ್ದೇವೆ. ಆಂಗ್ಲ ಸರ್ಕಾರವು ದಬ್ಬಾಳಿಕೆಯ ಮೂಲಕ ಜನತೆಯನ್ನು ಹೆದರಿಸಬಹುದು ಎಂಬ ಭ್ರಮೆಯಲ್ಲಿದೆ. ಆದರೆ ಹಿಂದೂಸ್ತಾನದ ಇತಿಹಾಸವೇ ಧರ್ಮ ಮತ್ತು ಅಧರ್ಮದ ನಡುವಿನ ಸಂಘರ್ಷದ್ದು. ಕಾನೂನು ಪಾಲನೆಯ ಪಾಠವನ್ನು ನಾವು ಆಂಗ್ಲರಿಂದೇನೂ ಕಲಿಯಬೇಕಾಗಿಲ್ಲ. ಅವರು ಕಾನೂನು ಎಂದು ಹೇಳುವುದೆಲ್ಲವೂ ನಮ್ಮ ಪಾಲಿಗೆ ಸಂಕೋಲೆಗಳಲ್ಲದೆ ಇನ್ನೇನೂ ಅಲ್ಲ. ಅವರು ಅಶಾಂತಿ ಎಂದು ಹೇಳುವುದೆಲ್ಲವೂ ಮುಂದೆ ಬರಲಿರುವ ಶುಭ ದಿನಗಳ ಪೂರ್ವಸಂಕೇತಗಳಾಗಿವೆ. ಅದನ್ನು ಅವರು ಗುರುತಿಸದೆ ಇರಬಹುದು. ವಸಾಹತುಶಾಹಿಯ ಸವಾಲನ್ನು ಒಪ್ಪಂದ ಅಥವಾ ಸಂವಾದದಿಂದ ಪರಿಹರಿಸಲಾಗುವುದಿಲ್ಲ. ಯಾರು ಕಪಟ, ವಂಚನೆಗಳ ಮಾರ್ಗದಿಂದ ಸಂಪೂರ್ಣ ರಾಷ್ಟ್ರವನ್ನು ಬಲಾತ್ಕಾರಪೂರ್ವಕ ತಮ್ಮ ವಶಪಡಿಸಿಕೊಂಡಿದ್ದಾರೋ, ಅವರು ಆಸುರಿ ಶಕ್ತಿಗಳನ್ನು ಪ್ರತಿನಿಧಿಸುವಂತಹವರು. ಯಾವ ರೀತಿಯಲ್ಲಿ ಸೀತಾಮಾತೆಯ ಅಪಹರಣ ಮಾಡಿದ ರಾಕ್ಷಸರು ಅಂತಿಮವಾಗಿ

ವಿನಾಶ ಹೊಂದಿದನೋ ಅದೇ ರೀತಿಯ ಪರಿಣಾಮವನ್ನು ಮುಂದೆ ಆಂಗ್ಲರೂ ಕಾಣಬೇಕಾಗುತ್ತದೆ. ಇನ್ನೂ ಅವಕಾಶವಿರುವಾಗಲೇ ಅವರು ಪರಿಸ್ಥಿತಿಯನ್ನು ಸರಿಯಾಗಿ ಅರಿತುಕೊಂಡು ಹಿಂದೂಸ್ಥಾನದಿಂದ ವಾಪಸ್ ಹೋಗದೇ ಇದ್ದಲ್ಲಿ ಕೊನೆಯಲ್ಲಿ ಅವರ ಗತಿಯೂ ಅದೇ ರಾಕ್ಷಸನಂತಾಗುವುದು ಖಂಡಿತ".

ಅವರ ಈ ಸತ್ವಯುತ ಭಾಷಣದ ಪರಿಣಾಮವಾಗಿ ಅಲ್ಲಿನ ವಾತಾವರಣವೆಲ್ಲ ಉತ್ಕಟ ರಾಷ್ಟ್ರೀಯತೆಯ ಭಾವದಿಂದ ಕಾವೇರಿತು. "ವಂದೇಮಾತರಂ" ಘೋಷಣೆಯೊಂದಿಗೆ ಜನತೆ ಅವರನ್ನು ಅಲ್ಲಿಂದ ಬೀಳ್ಕೊಟ್ಟಿತು. ಅವರ ಈ ಉದ್ರೇಕಕಾರಿ ಹಾಗೂ ಸರ್ಕಾರದ ವಿರುದ್ಧ ಬೆಂಕಿಕಾರುವ ಭಾಷಣ ಕೇಳಿದ ಪೊಲೀಸ್ ಅಧಿಕಾರಿಗಳು ಮಾತ್ರ ಕಿಡಿಕಿಡಿಯಾದರು. ಡಾ. ಹೆಡಗೇವಾರರಿಗೆ ಮತ್ತೆ ಮತ್ತೆ ಜನರನ್ನು ಉದ್ದೇಶಿಸಿ ಮಾತಾಡುವುದಕ್ಕೆ ಅವಕಾಶ ನೀಡಲು ಮೊದಲೇ ಅವರು ಸಿದ್ಧರಿರಲಿಲ್ಲ. ಈಗಂತೂ ಮುಂದೆ ಏನಾದರೂ ಅವಕಾಶ ನೀಡಿದಲ್ಲಿ ತಾವೇ ಶಿಸ್ತಿನ ಕ್ರಮ ಎದುರಿಸಬೇಕಾಗಬಹುದೆಂಬ ಭೀತಿಯೂ ಅವರನ್ನು ಆವರಿಸಿತು. ರೈಲು ಹೊರಟಂತೆಯೇ ಪೊಲೀಸ್ ಅಧಿಕಾರಿಯೊಬ್ಬರು ಅವರಿಗೆ ಕೈಕೋಳ ತೊಡಿಸಲು ಮುಂದಾದರು. ಈ ವಿಷಯದಲ್ಲಿ ಸಾಕಷ್ಟು ಬಿಸಿಯಾದ ವಾದವಿವಾದಗಳು ನಡೆದವು. ಸಮಾಜದಲ್ಲಿನ ಗೌರವಾನ್ವಿತ ಬದುಕು ನಡೆಸುತ್ತಿದ್ದವರು ಡಾ. ಹೆಡಗೇವಾರರು. ಪ್ರಖರ ರಾಷ್ಟ್ರಭಕ್ತರಾಗಿದ್ದುದರ ಜತೆಯಲ್ಲಿ ಸ್ವಾಭಿಮಾನ, ಧೈರ್ಯ, ಆತ್ಮವಿಶ್ವಾಸ ಮತ್ತು ನಿರ್ಭೀತ ಮನೋವೃತ್ತಿ ಇವುಗಳ ಮೂರ್ತಿವೆತ್ತ ವ್ಯಕ್ತಿತ್ವ ಅವರದು. ಅವರು ಪೊಲೀಸ್ ಅಧಿಕಾರಿಯ ಮುಂದೆ ಸೆಟೆದು ನಿಂತು "ತಾಖತ್ತಿದ್ದಲ್ಲಿ ಕೈ ಕೋಳ ತೊಡಿಸಿ ನೋಡೋಣ" ಎಂದು ಸವಾಲೆಸೆದರು. ಅವರ ಜತೆಯಲ್ಲಿ ಇನ್ನುಳಿದ ಸತ್ಯಾಗ್ರಹಿಗಳೂ ಬಲವಾಗಿ ಪ್ರತಿಭಟಿಸಿದರು. ಪರಿಣಾಮವಾಗಿ ಪೊಲೀಸ್ ಅಧಿಕಾರಿ ತನ್ನ ಆದೇಶವನ್ನು ವಾಪಸ್ ಪಡೆಯಬೇಕಾಯಿತು. ಡಾ. ಹೆಡಗೇವಾರರು ಮುಂದಿನ ನಿಲ್ದಾಣಗಳಲ್ಲೂ ಅದೇ ರೀತಿಯ ಅಭಿನಂದನೆಗಳನ್ನು ಸ್ವೀಕರಿಸುತ್ತ ಮುಂದುವರಿಸಿದರು.

## ಸೆರೆಮನೆಯಲ್ಲಿ ಬದುಕು

ಅವರ ಪಾಲಿಗೆ ಅದು ಎರಡನೇ ಸೆರೆವಾಸ. ಅವರಿಗೆ 'ಬಿ' ಹಾಗೂ ಅವರ ತಂಡದ ಇತರರಿಗೆ ವಿಧಿಸಲಾಗಿದ್ದುದು 'ಸಿ' ಶ್ರೇಣಿ. ಎಲ್ಲರೂ ಸೇರಿ ಇದ್ದವರು ಸುಮಾರು ಇಪ್ಪತ್ತು ಮಂದಿ. ಮೊದಲು ಅವರನ್ನು ಒಂಟಿಯಾಗಿಯೇ ನೂರಡಿ ಉದ್ದ ಹಾಗೂ ಮೂವತ್ತಡಿ ಅಗಲದ ಕೊಠಡಿಯೊಂದರಲ್ಲಿ ಇರಿಸಲಾಗಿತ್ತು. ನಂತರದ ದಿನಗಳಲ್ಲಿ ಅವರ ಜತೆಯಲ್ಲಿ ಯವತಮಾಳದ ಎಸ್. ಎಚ್. ಬಲ್ಲಾಳ್ ಅವರೂ ಸೇರಿದ್ದರು. ಇನ್ನೂ ಕೆಲವು ದಿನಗಳ ನಂತರ ಮೆಹಕರ್ ಸಂಘ ಶಾಖೆಯ ರಾಜೇಶ್ವರಾವ್ ದೇಶಮುಖ್ ಮತ್ತು ದಾದಾಸಾಹೇಬ ಸೋಮನ್ ಅವರೂ ಆಗಸ್ಟ್ 18ರಂದು ಅದೇ ಕೊಠಡಿಗೆ ಬಂದರು. ಶ್ರೀಯುತ ದೇಶಮುಖ್ ಅವರು ಬರೆಯುತ್ತಾರೆ:

"ಶ್ರಾವಣ ಕೃಷ್ಣಪಕ್ಷದ ಸೋಮವಾರ ನನ್ನ ಬದುಕಿನ ಅತ್ಯಂತ ಸಂಭ್ರಮದ ದಿನ ಅದು. ಕೋಣೆಯಲ್ಲಿ ಪ್ರವೇಶ ಮಾಡಿದಂತೆಯೇ ಪರಮ ಪೂಜ್ಯ ಡಾ. ಹೆಡಗೇವಾರರು ಅಲ್ಲಿ ಕೂತಿರುವುದನ್ನು ಕಂಡೆ... ಸಂಘದ ಸ್ಥಾಪಕರ ಜತೆಯಲ್ಲಿ ಇರುವಂತಹ ಅವಕಾಶ ನನಗೆ ದೊರಕಬಹುದು ಎಂಬ ಕಲ್ಪನೆಯೇ ನನಗಿರಲಿಲ್ಲ. ನನಗಂತೂ ಅತ್ಯಂತ ಆನಂದವಾಯಿತು. ಹಾಗೂ ವಯಸ್ಸಾದ ತಾಯಿ, ತಂದೆ ಮತ್ತು ಸಣ್ಣ ಸಣ್ಣ ಮಕ್ಕಳನ್ನು ಬಿಟ್ಟು ಸೆರೆಮನೆ ಸೇರಿದಂತಹ ದುಃಖವೆಲ್ಲ ಕ್ಷಣಾರ್ಧದಲ್ಲಿ ಮರೆತೇ ಹೋಯಿತು."

ಮುಂದೆ 'ಬಿ' ಶ್ರೇಣಿಯ ರಾಜಕೀಯ ಕೈದಿಗಳ ಸಂಖ್ಯೆ 35ರ ವರೆಗೆ ಏರಿತು.

## ಯಾಚನೆ ಇಲ್ಲ

ಜೈಲಿನಲ್ಲಿ ಅಧಿಕಾರಿ ಫ್ರೋರ್ಡ್ ಅವರು ಡಾ. ಹೆಡಗೇವಾರರ ಮೊದಲ ಸೆರೆವಾಸದ ಸಂದರ್ಭದಲ್ಲಿ ಅದೇ ಸೆರೆಮನೆಯಲ್ಲಿ ಇದ್ದವರೇ. ಹೀಗಾಗಿ ಅವರಿಬ್ಬರೂ ಮೊದಲೇ ಪರಸ್ಪರ ಪರಿಚಿತರಾಗಿದ್ದವರು. ಓರ್ವ ಐರಿಷ್ ಮಹನೀಯರಾಗಿದ್ದ ಅವರು ಭಾರತೀಯರ ಸ್ವಾತಂತ್ರ್ಯ ಹೋರಾಟದಲ್ಲೂ ಒಂದಿಷ್ಟು ಸಹಾನುಭೂತಿ ಇದ್ದವರು. ಡಾ. ಹೆಡಗೇವಾರರ ರಾಷ್ಟ್ರೀಯ ಚಿಂತನೆ ಮತ್ತು ಗೌರವಪೂರ್ಣ ರೀತಿನೀತಿ ಇವುಗಳನ್ನು ಸ್ವತಃ ಗೌರವಿಸುತ್ತಿದ್ದ ಫ್ರೋರ್ಡ್, ಅವರನ್ನು ತುಂಬ ಆದರದಿಂದ ಕಾಣುತ್ತಿದ್ದರು. ಹೀಗಾಗಿ 'ಬಿ' ಶ್ರೇಣಿಯ ಇತರ ಸತ್ಯಾಗ್ರಹಿಗಳು ಫ್ರೋರ್ಡ್ ಅವರ ಬಳಿ ತಮ್ಮ ಆಹಾರ, ಬಟ್ಟೆ, ಇನ್ನಿತರ ಸೌಕರ್ಯಗಳಲ್ಲಿ ಇನ್ನೂ ಹೆಚ್ಚಿನ ಸೌಕರ್ಯಕ್ಕಾಗಿ ವಿನಂತಿಸುವಂತೆ ಡಾ. ಹೆಡಗೇವಾರರನ್ನು ಒತ್ತಾಯಿಸಿದಾಗ ಅವರು, "ನಿಜ, ಫ್ರೋರ್ಡ್ ಅವರು ನನ್ನ ಮಾತುಗಳನ್ನು ಗೌರವಿಸುತ್ತಾರೆಂಬುದನ್ನು ನಾನು ಬಲ್ಲೆ. ಅವರೋರ್ವ ಪ್ರಾಮಾಣಿಕ ಅಧಿಕಾರಿಯಾಗಿರುವವರು. ಆದರೆ ಅವರು ನಮ್ಮನ್ನಾಳುವ ಸಾಮ್ರಾಜ್ಯವಾದಿ ಶಾಸನದ ಓರ್ವ ಪ್ರತಿನಿಧಿ ಎಂಬುದೂ ಗೊತ್ತಿರಲಿ. ಅವರ ಬಳಿ ಬೇಡಿಕೆ ಸಲ್ಲಿಸುವುದು ಎಂದರೆ ಆಂಗ್ಲ ಸಾಮ್ರಾಜ್ಯವಾದಿಗಳ ಮುಂದೆ ಬೇಡಿದಂತೆಯೇ. ನಾವೀಗ ಯುದ್ಧಕ್ಕಾಗಿ ಹೊರಟಿರುವವರು; ಸುಖ-ಸೌಕರ್ಯಗಳ ಬೆನ್ನು ಹತ್ತಿರುವವರಾದ ಪಕ್ಷದಲ್ಲಿ ನಮಗೆ ಸತ್ಯಾಗ್ರಹ ನಡೆಸಬೇಕಾದ ಅಗತ್ಯವೇನಿತ್ತು?" ಎಂದು ತಮ್ಮ ಅಸಮ್ಮತಿಯನ್ನು ಸೂಚಿಸಿದರು.

ಇನ್ನೊಂದು ಪ್ರಸಂಗ. ಅದು ಸಹ ಅವರ ಅಪ್ಪಟ ರಾಷ್ಟ್ರೀಯ ಭಾವವನ್ನು ಪುಷ್ಟೀಕರಿಸುವಂತಹದು. ಅಪ್ಪಾಜಿ ಜೋಶಿಯವರು ಸಂಘದ ಪ್ರಮುಖರಾಗಿದ್ದಂತೆಯೇ ಪ್ರಾಂತದ ಓರ್ವ ಸುಪರಿಚಿತ ಕಾಂಗ್ರೆಸ್ ನಾಯಕರೂ ಆಗಿದ್ದವರು. 1928ರ ವರೆಗೆ ಅವರು ಪ್ರಾಂತೀಯ ಕಾಂಗ್ರೆಸ್‌ನ ಕಾರ್ಯದರ್ಶಿಯೂ ಆಗಿದ್ದವರು. ಇದಲ್ಲದೆ ಪ್ರಾಂತದ ಇನ್ನಿತರ ಅನೇಕ ಸಾಮಾಜಿಕ ಕಾರ್ಯಗಳಲ್ಲೂ ಅವರ ಕ್ರಿಯಾಶೀಲ ಪಾತ್ರವಿರುತ್ತಿತ್ತು. ಅಪ್ಪಾಜಿಯವರ ಆರೋಗ್ಯ ಕುಸಿಯುತ್ತಿದ್ದುದನ್ನು ಕಂಡು ಫ್ರೋರ್ಡ್, ಅವರಿಗೂ 'ಬಿ' ಶ್ರೇಣಿಯನ್ನು ನೀಡಲು ಯೋಚಿಸಿದರು. ಅದಕ್ಕಾಗಿ ಬೇಡಿಕೆ ಸಲ್ಲಿಸುವಂತೆ ಅವರೇ ಅಪ್ಪಾಜಿಯವರನ್ನು ಆಗ್ರಹಿಸಿದರು ಸಹ. ಅಪ್ಪಾಜಿಯವರು ಮಾಡಬೇಕಾಗಿದ್ದ ಕೆಲಸವೆಂದರೆ ಅಂತಹ ಬೇಡಿಕೆಯೊಂದಿಗೆ ಒಂದು ವಿನಂತಿ ಪತ್ರವನ್ನು ಸಲ್ಲಿಸುವುದಷ್ಟೇ. ಆದರೆ ಅಪ್ಪಾಜಿಯವರಿಗೆ ಅದು ಇಷ್ಟವಿರಲಿಲ್ಲ. ಫ್ರೋರ್ಡ್ ಎಷ್ಟೇ ಆಗ್ರಹಿಸಿದರೂ ಅವರು ಅದಕ್ಕೆ ಮಣಿಯದೆ ಸುಮ್ಮನೆ ಕಾಲ ತಳ್ಳಿದರು. ಕೊನೆಯಲ್ಲಿ ಡಾ. ಹೆಡಗೇವಾರರ ಸಲಹೆ ಪಡೆಯುವಂತೆ ಫ್ರೋರ್ಡ್ ಅಪ್ಪಾಜಿಯವರಿಗೆ ತಿಳಿಸಿದರು. ಆಗ ಡಾ. ಹೆಡಗೇವಾರರು ಅಪ್ಪಾಜಿಯವರ ಬಳಿ

"ನೀವಂತೂ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಯಾಗಿದ್ದವರು. ವಿನಂತಿ ಸಲ್ಲಿಸಿದ ಮಾತ್ರದಿಂದ ಕೆಟ್ಟುದೇನೂ ಆಗುವುದಿಲ್ಲ. ಆದರೆ ಯಾವ ಆಂದೋಲನದಲ್ಲಿ ಪಾಲ್ಗೊಂಡು ನೀವು ಸೆರೆವಾಸ ಅನುಭವಿಸುತ್ತಿದ್ದೀರಿ, ಅದರ ಗೌರವದ ರಕ್ಷಣೆಯ ಹೊಣೆಯೂ ನಿಮ್ಮ ಮೇಲಿದೆಯಲ್ಲವೇ?" ಎಂದರು.

ಅಪ್ಪಾಜಿಯವರ ನಿಶ್ಚಯ ದೃಢವಾಗಿತ್ತು. ಏನೇ ಆದರೂ ತಾನು ವಿನಂತಿಪತ್ರ ಸಲ್ಲಿಸುವುದಿಲ್ಲ ಮತ್ತು ಕಡು ಅನಾರೋಗ್ಯದ ಸ್ಥಿತಿಯಲ್ಲೂ 'ಸಿ' ಶ್ರೇಣಿಯಲ್ಲೆ ತಾನು ಉಳಿಯುವುದಾಗಿ ನಿರ್ಧರಿಸಿದ್ದರು. ಕಟ್ಟಕಡೆಯಲ್ಲಿ ಅವರ ತೀರಾ ಅನಾರೋಗ್ಯವನ್ನು ಲಕ್ಷ್ಯದಲ್ಲಿರಿಸಿ ಸೆರೆಮನೆ ಆಡಳಿತವೇ ಅವರನ್ನು 'ಬಿ' ಶ್ರೇಣಿಗೆ ವರ್ಗಾಯಿಸಿತು.

ತಾವು ಯಾವ ಆಂದೋಳನ ಅಥವಾ ಸಂಘಟನೆಯ ಭಾಗ ಆಗಿದ್ದೇವೋ ಅದರ ಇತಿಮಿತಿಗಳು, ಸಿದ್ಧಾಂತಗಳು ಮತ್ತು ಶಿಸ್ತು ಇವುಗಳ ಚೌಕಟ್ಟಿನಲ್ಲೆ ತಾವಿರಬೇಕು ಎಂಬುದು ಡಾ. ಹೆಡಗೇವಾರರ ನಿಲುವಾಗಿತ್ತು. ಈ ಹಿಂದೆ ಅಸಹಕಾರ ಆಂದೋಳನವನ್ನು ಅನುಶಾಸನ ಭಂಗದ ಕಾರಣವೇ ವಾಪಸ್ ಪಡೆಯಬೇಕಾಗಿ ಬಂದುದು ಎಲ್ಲರೂ ತಿಳಿದಿದ್ದ ಸಂಗತಿ. ಅದೇ ರೀತಿಯಲ್ಲಿ ಮೋಪ್ಲಾ ದಂಗೆಯಲ್ಲಿ ಧರ್ಮಾಂಧರು ಹಿಂದೂಗಳ ಮೇಲೆ ದೌರ್ಜನ್ಯವೆಸಗುವಂತಾದುದು ಆಂದೋಳನಕಾರರಿಗೆ ರಾಷ್ಟ್ರೀಯತೆಯ ಯಥಾರ್ಥ ಕಲ್ಪನೆ ಇಲ್ಲದ ಕಾರಣದಿಂದಾಗಿ. ಯವತಮಾಳದಲ್ಲಿ ಸತ್ಯಾಗ್ರಹದ ನಂತರ ಬಂಧನಕ್ಕೊಳಗಾದಾಗ ಡಾ. ಹೆಡಗೇವಾರರು ಉದ್ರಿಕ್ತರಾದ ಜನಸ್ತೋಮಕ್ಕೆ ಅಹಿಂಸೆಯ ಮಾರ್ಗದಲ್ಲಿ ದೃಢವಾಗಿ ನಿಲ್ಲುವಂತೆ ಕರೆ ನೀಡಿದ್ದು ಸಹ ಇದೇ ಹಿನ್ನೆಲೆಯಲ್ಲಿ. ಆಗ ಅವರು ಹೇಳಿದ್ದುದು:

"ಆಂಗ್ಲ ಶಾಸನದ ವಿರುದ್ಧ ನಾವು ಸಂಘರ್ಷ ನಡೆಸುತ್ತಿರುವುದು ಇದೇ ಮೊದಲ ಸಲವೇನಲ್ಲ ಅಥವಾ ಇದೇ ಕೊನೆಯದೂ ಅಲ್ಲ. ಆಂಗ್ಲರು ನಮ್ಮ ಮೇಲೆ ನಡೆಸುವ ದಬ್ಬಾಳಿಕೆಯು ವಿದೇಶಿ ಸರ್ಕಾರವು ಜನಪ್ರಿಯವಾಗಿಲ್ಲ, ಅದೆಷ್ಟು ಹೆದರಿದೆ ಹಾಗೂ ಅದೆಷ್ಟು ಸ್ವಾತಂತ್ರ್ಯದ ವಿರೋಧಿ ಎಂಬುದರ ಸಂಕೇತವಲ್ಲದೆ ಇನ್ನೇನೂ ಅಲ್ಲ. ನಾವು ಯೋಚಿಸಬೇಕಾದುದು ಇಷ್ಟೇ - ಕೇವಲ ಬೆರಳೆಣಿಕೆಯಷ್ಟು ಮಂದಿ ನಮ್ಮನ್ನು ಗುಲಾಮರಾಗಿಸಿದ್ದಾರೇಕೆ? ಒಂದು ದಿನದ ಉತ್ಸಾಹದ ಪ್ರಭಾವಕ್ಕೊಳಗಾಗಿ ಉದ್ರಿಕ್ತರಾದ ಮಾತ್ರದಿಂದ ಸ್ವಾತಂತ್ರ್ಯವೇನೂ ಲಭಿಸುವುದಿಲ್ಲ ಎಂಬುದು ಗೊತ್ತಿರಲಿ. ಸೆರೆಮನೆಗೆ ಸೇರದೆ ಇರುವವರನ್ನು ಸಹ ಸಂಘಟಿಸಿ ಮುಂದೆ ಅವರನ್ನು ಈ ಸಂಘರ್ಷದಲ್ಲಿ ತೊಡಗಿಸುವ ಸಲುವಾಗಿ ನಾವು ಕೆಲಸದಲ್ಲಿ ಮುಂದುವರಿಯುತ್ತಲೇ ಇರಬೇಕಾಗಿದೆ".

ಸೆರೆಮನೆಯ ಆಜ್ಞೆಗಳನ್ನು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬುದು ಗಾಂಧೀಜಿಯವರ ಸೂಚನೆಯಾಗಿತ್ತು. ಅಲ್ಲಿ ತೀರಾ ಕೋಪಗೊಳ್ಳುವಷ್ಟು ಅವ್ಯವಸ್ಥೆಗಳಿದ್ದರೂ ಡಾ. ಹೆಡಗೇವಾರರು ಮತ್ತು ಅವರ ಸಹಕಾರಿಗಳು ಅನುಶಾಸನವನ್ನು ಎಂದೂ ಮೀರಿದವರಲ್ಲ. ವ್ಯವಹಾರದ ವಿಷಯದಲ್ಲಿ ಡಾ. ಹೆಡಗೇವಾರರು ಮತ್ತು ಗಾಂಧೀಜಿಯರ ಚಿಂತನೆ ಒಂದೇ ರೀತಿಯಲ್ಲಿತ್ತು. ಒಮ್ಮೆ ಸೆರೆಮನೆಯಲ್ಲಿ 'ಸಿ' ಶ್ರೇಣಿಯವರ ಜತೆಯಲ್ಲಿ ತೀರಾ ಅಮಾನವೀಯ ವರ್ತನೆಗಳಾದಾಗ 'ಬಿ' ಮತ್ತು 'ಸಿ' ಶ್ರೇಣಿಯ ಎಲ್ಲ ಸತ್ಯಾಗ್ರಹಿಗಳು ಕೂಡಿ ಉಪವಾಸ ಸತ್ಯಾಗ್ರಹ ನಡೆಸಿದರು. ಇನ್ನೊಮ್ಮೆ ಸೆರೆಮನೆಯಲ್ಲಿ 'ಗಢವಾಲ ದಿನಾಚರಣೆ'ಯನ್ನು ಡಾ. ಹೆಡಗೇವಾರರು ಆಯೋಜಿಸಿದ್ದರು. ಅಂದು ಅವರು ನೀಡಿದ್ದ ಕರೆಯಂತೆ ಎಲ್ಲ ಸತ್ಯಾಗ್ರಹಿಗಳು ಉಪವಾಸ ಆಚರಿಸಿದರು.

ಮೇಲಿಂದ ಬಂದಿದ್ದ ಖಡಕ್ ಆದೇಶದ ಕಾರಣದಿಂದಾಗಿ ಜೈಲ್ ಆಡಳಿತವು ಡಾ. ಹೆಡಗೇವಾರರ ಮೇಲೆ ಬಲವಾದ ಕಣ್ಣಿರಿಸಿತ್ತು. ಈ ಮಾಹಿತಿ ತಲುಪಿದಾಗ ಡಾ. ಮುಂಜೆ ಅವರು ಅವರ ಭೇಟಿಗಾಗಿ ಜುಲೈ 29ರಂದು ಬಂದರು. ಭೇಟಿಯ ನಂತರ

ಡಾ. ಮುಂಜೆ ಅವರು ಬರೆದಿರುವುದು ಹೀಗಿದೆ: "ಅವರೆಲ್ಲರಿಗೆ (ಸಂಘದ ಸ್ವಯಂಸೇವಕರಿಗೆ) ಕಠಿಣವಾದ ಕೆಲಸಗಳನ್ನು ಕೊಡಲಾಗಿದ್ದರೂ ಎಲ್ಲರೂ ಖುಷಿಯಾಗಿ ಇರುವಂತೆ ಕಾಣಿಸುತ್ತದೆ. ಎಲ್ಲರೂ ಸೆರೆಮನೆಯ ಉಡುಗೆಯಲ್ಲೇ ಇದ್ದಾರೆ. ಡಾ. ಹೆಡಗೇವಾರರು ಸೆರೆಮನೆಯ ಉಡುಗೆಯಲ್ಲಿರಲಿಲ್ಲ. ಆದರೆ ಮೇಲಧಿಕಾರಿಗಳ ಆದೇಶದಂತೆ ತಮ್ಮ ಜತೆ ಕೆಟ್ಟದಾಗಿ ವ್ಯವಹರಿಸಲಾಗಿದೆ ಎಂದು ಅವರೂ ದೂರು ಸಲ್ಲಿಸಿದ್ದಾರೆ. ಇನ್ಸ್‌ಪೆಕ್ಟರ್ ಜನರಲ್ ಮೇಜರ್ ಜತಾರ್ ಅವರು ಸೆರೆಮನೆಗೆ ಪರೀಕ್ಷಣೆಗಾಗಿ ಬಂದಿದ್ದರು. ಆದರೆ ತಮ್ಮ ದೂರಿನ ಬಗ್ಗೆ ಅವರೇನೂ ಲಕ್ಷ್ಯವಹಿಸಿಲ್ಲ ಎಂದು ಡಾ. ಹೆಡಗೇವಾರ್ ಅವರು ಹೇಳುತ್ತಿದ್ದಾರೆ. ಈ ವಿಷಯದಲ್ಲಿ ಪ್ರತಿಭಟನಾತ್ಮಕ ಠರಾವು ಮಾಡುವಂತೆ ನಾನು ವಾರ್ ಕೌನ್ಸಿಲ್‌ನ ಸರ್ವಾಧಿಕಾರಿ ಶ್ರೀರಾಮ್ ಅವರಿಗೆ ತಿಳಿಸಿರುವೆ".

## ಲೋಕಸಂಗ್ರಹ ವೃತ್ತಿ

ಡಾ. ಹೆಡಗೇವಾರರ ಒಂದು ವಿಶೇಷ ಗುಣವೆಂದರೆ ಲೋಕಸಂಗ್ರಹವು. ಅವರು ತಮ್ಮ ಸಂವಾದದಲ್ಲಿ ವಾದ ವಿವಾದಗಳೆಲ್ಲವನ್ನೂ ನಾಜೂಕಾಗಿ ಬದಲಿಸುತ್ತ, ವ್ಯಕ್ತಿವ್ಯಕ್ತಿಗಳ ನಡುವೆ ವ್ಯಾಪಕವಾಗಿ ಇರುವ ಸಮಾನ ಸಕಾರಾತ್ಮಕ ಅಂಶಗಳನ್ನು ಆಧರಿಸಿ ಎಲ್ಲರನ್ನೂ ತಮ್ಮ ಕಾರ್ಯದಲ್ಲಿ ಜೋಡಿಸಿಕೊಳ್ಳುತ್ತಿದ್ದರು. ಸೆರೆಮನೆಯಲ್ಲಿದ್ದಾಗಲೂ ಅವರ ಈ ಕ್ರಮ ಮುಂದುವರಿದಿತ್ತು. ಸೆರೆಮನೆಯಲ್ಲಿದ್ದ ರಾಜಕೀಯ ಕೈದಿಗಳಲ್ಲಿ ಸಂಘವನ್ನು ಹಿಂಸಾವಾದಿ ಮತ್ತು ಜಾತೀಯವಾದಿ ಇತ್ಯಾದಿ ರೀತಿಯಲ್ಲಿ ತಿಳಿಯುತ್ತಿದ್ದವರು ಕೆಲವರಿದ್ದರು. ಡಾ. ಹೆಡಗೇವಾರರು ಅವರ ವಿಚಾರಗಳನ್ನು ಕಿವಿಗೊಟ್ಟು ಕೇಳುತ್ತಿದ್ದರು. ಹಾಗೂ ರಾಷ್ಟ್ರ, ಸಂಸ್ಕೃತಿ, ಸಮಾಜ, ದೇಶ, ಮಹಾತ್ಮಾಗಾಂಧಿ, ಕ್ರಾಂತಿಕಾರಿ ಆಂದೋಲನಗಳು ಇತ್ಯಾದಿಗಳ ಬಗ್ಗೆ ಸಂಘದ ಚಿಂತನೆಯನ್ನು ಅವರಿಗೆ ತಿಳಿಸುತ್ತಿದ್ದರು. ಸಂಘದ ಬಗ್ಗೆ ಇದ್ದ ತಪ್ಪು ಕಲ್ಪನೆಗಳು ದೂರವಾದ ನಂತರ ಡಾ. ಹೆಡಗೇವಾರರು ವಿಜಯದಶಮಿಯ ದಿನದಂದು ಪ್ರಾತಃಕಾಲ ಸಂಘದ ಪ್ರಾರ್ಥನೆ ಹೇಳುವ ಕ್ರಮವನ್ನು ಸೆರೆಮನೆಯಲ್ಲಿ ಆರಂಭಿಸಿದರು. ಸೆರೆಮನೆಯಿಂದ ಬಿಡುಗಡೆ ಹೊಂದಿದ ಮೇಲೆ ಅವರಲ್ಲನೇಕರು ಸಂಘದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಹೊರಗಡೆ ನಡೆಯುವಂತಹ ರಾಜಕೀಯ ವಿದ್ಯಮಾನಗಳ ಮಾಹಿತಿಗಳು ಡಾ.ಹೆಡಗೇವಾರರಿಗೆ ಸೆರೆಮನೆಯ ಒಳಗೂ ಲಭಿಸುತ್ತಿದ್ದವು. ಅವರಿಗೆ ಸಂಘ ಕಾರ್ಯದ ಪ್ರಗತಿಯ ಮಾಹಿತಿಗಳನ್ನು ತಿಳಿಸಲು ಆಗಾಗ ಭೇಟಿಗಾಗಿ ಸಂಘದ ಪ್ರಮುಖರು ಬರುತ್ತಲೂ ಇದ್ದರು. ಅಂತಹವರಲ್ಲಿ ಪ್ರಮುಖರಾಗಿದ್ದವರು ಡಾ. ಪರಾಂಜಪೆ ಮತ್ತು ಭಾವೂರಾವ್ ಕುಲಕರ್ಣಿಯವರು.

ಅವರನ್ನು ಚಿಂತೆಗೀಡು ಮಾಡಿದ್ದುದು ಹೊರಗಿನ ಎರಡು ಮಾಹಿತಿಗಳು. ಸ್ವಾತಂತ್ರ್ಯದ ಹೋರಾಟ ಇನ್ನೂ ನಡೆಯುತ್ತಿರುವಾಗಲೇ ಲಂಡನ್‌ನಲ್ಲಿ ಕರೆಯಲಾಗಿದ್ದ ದುಂಡು ಮೇಜು ಪರಿಷತ್ತಿನಲ್ಲಿ ಭಾಗವಹಿಸಲು ಡಾ. ಮುಂಜೆ ಅವರು ನಿರ್ಧರಿಸಿದುದು ಅವರಿಗೆ ಸರಿಯೆನಿಸಲಿಲ್ಲ. ಆದರೆ ಡಾ. ಮುಂಜೆಯವರ ವಿರೋಧಿಗಳು ಅವರನ್ನು 'ಕಬ್ಬಿನ ಜಲ್ಲೆ' (ಗೆಂಡಾ) ಎಂದು ಗೇಲಿ ಮಾಡಿ ಚಿತ್ರಿಸುತ್ತಿದ್ದುದು ಸಹ ಅದು ಹೀನ ರಾಜಕಾರಣ ಎಂದು ಅವರಿಗೆ ಎನಿಸುತಿತ್ತು.

ದುಂಡುಮೇಜು ಪರಿಷತ್ತಿನಲ್ಲಿ ಮುಸಲ್ಮಾನರ ಪ್ರತ್ಯೇಕತಾವಾದದ ಬಗ್ಗೆ ಕೇಳಿ ಅವರು ಚಕಿತರಾದರು. "ಯಾವುದೇ ವ್ಯಕ್ತಿ ತನ್ನ ಪೂರ್ವಜರನ್ನು, ತನ್ನ ಇತಿಹಾಸವನ್ನು, ತನ್ನ ಭೌಗೋಳಿಕ ಪರಿಸರವನ್ನು, ತನ್ನ ನೆರೆಹೊರೆಯವರನ್ನು ಹಾಗೂ ತನ್ನ ಪರಂಪರೆಗಳನ್ನು ಕಡಿದುಕೊಳ್ಳಬಲ್ಲನೇನು? ನಮ್ಮ ವೈಯಕ್ತಿಕ ಮತಕ್ಕಿಂತ ರಾಷ್ಟ್ರಧರ್ಮ ಹೀನವಾಗುವುದು ಎಂದಾದರೂ ಸಾಧ್ಯವಿದೆಯೇ?" ಎಂದು ಆಗ ಅವರು ಪ್ರತಿಕ್ರಿಯಿಸಿದ್ದರು.

ಈ ನಡುವೆ ಸಂಘದ ಮೇಲೆ ಒಂದು ವಿಪತ್ತು ಒದಗಿ ಬರಬಹುದಾದ ಸುದ್ದಿ ಅವರಿಗೆ ತಲಪಿತ್ತು. ಅದು ಅವರನ್ನು ಚಿಂತೆಗೊಳಪಡಿಸಿತ್ತು. ಸೆರೆಮನೆಯ ಶಿಕ್ಷೆ ಪೂರೈಸಿ ಬಿಡುಗಡೆ ಹೊಂದಿದ ನಂತರ ಬಾಲಾಘಾಟ್‌ನಲ್ಲಿ ನಡೆದಿದ್ದ ಒಂದು ರಾಜಕೀಯ ದರೋಡೆಯಲ್ಲಿ ಹುದ್ದಾರ್ ಅವರು ಪಾಲ್ಗೊಂಡಿದ್ದರು. ಹಾಗೂ 1931ರ ಜನವರಿಯಲ್ಲಿ ಅವರ ಬಂಧನವೂ ಆಯಿತು. ಹುದ್ದಾರ್ ಅವರು ಸಂಘದ ಪ್ರಮುಖ ಕಾರ್ಯಕರ್ತರಾಗಿದ್ದವರು. ಇಂತಹ ಹಲವು ವಿಧದ ಘಟನೆಗಳ ನಡುವೆ 1931ರ ಫೆಬ್ರವರಿ 14ರಂದು ಡಾ. ಹೆಡಗೇವಾರರಿಗೆ ಸೆರೆಮನೆಯಿಂದ ಬಿಡುಗಡೆಯಾಯಿತು. ಅಕೋಲಾ, ವರ್ಧಾ ಇನ್ನೂ ಕೆಲವು ಕಡೆಗಳಲ್ಲಿ ಅವರ ಸ್ವಾಗತ ಸಮಾರಂಭಗಳು ನಡೆದವು. ಫೆಬ್ರವರಿ 17ರಂದು ಅವರು ನಾಗಪುರ ತಲುಪಿದರು. ಅಲ್ಲೂ ಒಂದು ಭಾರೀ ಶೋಭಾಯಾತ್ರೆ ನಡೆಯಿತು. ಅಂದೇ ಅವರು ಸರಸಂಘಚಾಲಕರ ಹೊಣೆಯನ್ನು ಪುನಃ ಸ್ವೀಕರಿಸಿದರು.

# ಹಿಂದೂ ಮಹಾಸಭೆ, ಕಾಂಗ್ರೆಸ್ ಮತ್ತು ಸಂಘ

ಮುಂದೆ ಸಂಘದ ಕೆಲಸ ಕ್ರಮಕ್ರಮವಾಗಿ ಬೆಳೆಯುತ್ತ, ಅದು ಅಖಿಲ ಭಾರತೀಯ ಸ್ವರೂಪವನ್ನು ಪಡೆಯತೊಡಗಿತು. ಪರಿಣಾಮವಾಗಿ ಅದರ ಪ್ರಭಾವ ಹೆಚ್ಚುತ್ತ ಹೋದಂತೆ ಮಧ್ಯಪ್ರಾಂತದಲ್ಲಿ ಮತ್ತು ದೇಶದ ಇನ್ನಿತರ ಭಾಗಗಳಲ್ಲಿ ರಾಜಕಾರಣಿಗಳ ಮನದಲ್ಲಿ ಸಂಘದ ಬಗ್ಗೆ ತಮ್ಮದೇ 'ಅಪೇಕ್ಷೆ'ಗಳೂ ಬೆಳೆಯಲಾರಂಭಿಸಿದವು. ಅವರಿಗೆ ಸಂಘವು ಒಂದು ವೈಚಾರಿಕ ಜನಾಂದೋಳನವಾಗಿ ಕಾಣಿಸದೆ ಕೇವಲ ಶಿಸ್ತುಬದ್ಧ ಗಣವೇಷಧಾರಿ ಸ್ವಯಂಸೇವಕರ (ವಾಲಂಟಿಯರ್) ತುಕಡಿ ಮಾತ್ರವಾಗಿ ಒಂದು ಆಕರ್ಷಣೆಯ ವಸ್ತುವಾಗಿ ಕಾಣಿಸಿತು. ಹಿಂದೂ ಮಹಾಸಭೆಯ ಮತ್ತು ಕಾಂಗ್ರೆಸ್‌ನ ಕೆಲವು ನಾಯಕರು ಕೂಡ ಸಂಘವನ್ನು ತಮ್ಮ ಸ್ವಂತದ ರಾಜಕೀಯ ಕೆಲಸಗಳ ಸಲುವಾಗಿ ಬಳಸಲು ಯೋಚಿಸತೊಡಗಿದುದು ಈ ಹಿನ್ನೆಲೆಯಲ್ಲಿ.

## ಹಿಂದೂ ಮಹಾಸಭೆಯಲ್ಲಿ ಡಾ. ಹೆಡಗೇವಾರರು

ಹಿಂದೂ ಮಹಾಸಭೆಯ ಕಾರ್ಯ 1923ರಲ್ಲಿ ನಾಗಪುರದಲ್ಲಿ ಆರಂಭವಾದಾಗಿನಿಂದಲೂ ಡಾ. ಹೆಡಗೇವಾರರು ಅದರ ಜತೆ ಸಂಬಂಧ ಹೊಂದಿದ್ದವರೇ. ಅದರ 14 ಸದಸ್ಯರನ್ನೊಳಗೊಂಡ 'ಪ್ರಚಾರ ಸಮಿತಿ'ಯಲ್ಲಿ ಅವರೂ ಓರ್ವ ಸದಸ್ಯರಾಗಿದ್ದರು. ರಾಜಾ ಲಕ್ಷ್ಮಣರಾವ್ ಭೋಂಸ್ಲೆ ಅವರು ಅದರ ಅಧ್ಯಕ್ಷರಾಗಿದ್ದರು ಮತ್ತು ಡಾ. ಮುಂಜೆ ಕಾರ್ಯದರ್ಶಿಯಾಗಿದ್ದರು. ಅದರ ನಾಗಪುರ ಘಟಕಕ್ಕೆ ಡಾ. ಹೆಡಗೇವಾರರನ್ನು 1926ರಲ್ಲಿ ಕಾರ್ಯದರ್ಶಿಯಾಗಿ ನೇಮಕ ಮಾಡಲಾಯಿತು. 1927ರವರೆಗೂ ಅವರು ಆ ಪದದಲ್ಲಿದ್ದರು. ಈ ಜವಾಬ್ದಾರಿಯಲ್ಲಿ ಡಾ. ಹೆಡಗೇವಾರರು ಅದರ ಇನ್ನಿಬ್ಬರು ಕಾರ್ಯದರ್ಶಿಗಳಾದ ಉದಾರಾಮ ಪಹಲ್ವಾನ್ ಮತ್ತು ಗೋಪಾಲರಾವ್ ದಳವಿ ಅವರುಗಳಿಗಿಂತ ಕಡಿಮೆ ಕ್ರಿಯಾಶೀಲರಾಗಿದ್ದರು. ಹೆಚ್ಚಿನ ಪ್ರಸಂಗಗಳಲ್ಲಿ ಅವರು ಸಭೆಗಳಲ್ಲಿ ಉಪಸ್ಥಿತರಿರುತ್ತಿರಲೂ ಇಲ್ಲ.

ಕಾಂಗ್ರೆಸ್ ಮತ್ತು ಹಿಂದೂ ಮಹಾಸಭೆಗಳಿಗೆ ಸಂಬಂಧಿಸಿ ಡಾ. ಹೆಡಗೇವಾರರ ನಿಲುವು ಸ್ಪಷ್ಟವಾಗಿಯೇ ಇತ್ತು. ಕಾಂಗ್ರೆಸ್ ಒಂದು ಅಖಿಲ ಭಾರತೀಯ ಸಂಸ್ಥೆ ಹಾಗೂ ವಸಾಹತುಶಾಹಿ ವಿರೋಧಿ ಆಂದೋಳನದ ಸರ್ವಮಾನ್ಯ ವೇದಿಕೆ ಎಂಬುದನ್ನು ಅವರು ಒಪ್ಪಿಕೊಂಡಿದ್ದರು. ಯಾವುದೋ ಕೆಲವು ಸೈದ್ಧಾಂತಿಕ ಭಿನ್ನಾಭಿಪ್ರಾಯಗಳನ್ನೇ ಮುಖ್ಯವಾಗಿ ಮಾಡಿಕೊಂಡು ವಸಾಹತುಶಾಹಿಯ ವಿರುದ್ಧದ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರತ್ಯೇಕ ವೇದಿಕೆಗಳನ್ನು ಮಾಡಿಕೊಂಡಿರುವುದು ಅವರಿಗೆ ಒಪ್ಪಿಗೆಯಾಗಿರಲಿಲ್ಲ. ಅದರಿಂದಾಗಿ ಹೋರಾಟವೇ ದುರ್ಬಲಗೊಳ್ಳುತ್ತದೆ ಎಂದು ಅವರಿಗನಿಸುತ್ತಿತ್ತು. ಅದಕ್ಕಾಗಿ ಸ್ವಂತದ ಉದ್ದೇಶದಿಂದ ಬೇರೆ ಯಾವುದೇ ಕೆಲಸದಲ್ಲಿ ತೊಡಗಿರುವ ಸಂಘಟನೆಯಾದರೂ.

ಸಾಮ್ರಾಜ್ಯವಾದದ ವಿರುದ್ಧ ಹೋರಾಡುವ ವಿಚಾರದಲ್ಲಿ ಮಾತ್ರ ಕಾಂಗ್ರೆಸ್‌ನ ವೇದಿಕೆಯಡಿಯಲ್ಲೇ ಷರತ್ತಿಲ್ಲದೆ ಸಹಕರಿಸಲು ಮುಂದಾಗಬೇಕು ಎಂಬುದು ಅವರು ಯೋಚಿಸುತ್ತಿದ್ದ ರೀತಿ. ಈ ಕಾರಣಕ್ಕಾಗಿಯೇ ಅವರು ಸ್ವತಃ ಕಾಂಗ್ರೆಸಿನ ಆಂದೋಳನಾತ್ಮಕ ಹಾಗೂ ರಚನಾತ್ಮಕ ಕಾರ್ಯಕ್ರಮಗಳಲ್ಲೂ ಯಾವುದೇ ಪೂರ್ವಾಗ್ರಹ ಮತ್ತು ಷರತ್ತಿಲ್ಲದೆ ಮನಸಾರೆ ಪಾಲ್ಗೊಳ್ಳುತ್ತಿದ್ದರು. ಅದಕ್ಕಾಗಿ ಕಾಂಗ್ರೆಸ್ ತನಗೆ ಕೃತಜ್ಞವಾಗಿರಬೇಕೆಂದು ಸಹ ಅವರು ಅಪೇಕ್ಷಿಸುತ್ತಿರಲಿಲ್ಲ. ಈ ವಿಷಯದಲ್ಲಿ ಇತರ ನಾಯಕರು ಮತ್ತು ಸಂಘಟನೆಗಳು ಸಹ ತನ್ನಂತೆಯೇ ಇರಬೇಕೆಂಬುದನ್ನು ಅವರು ಬಯಸುತ್ತಿದ್ದುದು ಸಹಜವೇ. ಸಾಮ್ರಾಜ್ಯವಾದದ ವಿರುದ್ಧ ಹೋರಾಟದ ವಿಷಯದಲ್ಲಿ ಅವರ ದೃಷ್ಟಿಯಲ್ಲಿ ಹಿಂದೂ ಮಹಾಸಭೆ ಕಾಂಗ್ರೆಸ್‌ಗೆ ಒಂದು ಪರ್ಯಾಯವಾಗಿರಲಿಲ್ಲ. ಹಿಂದೂ ಹಿತಗಳ ಸಲುವಾಗಿ ಮಹಾಸಭೆ ಇನ್ನೂ ಅನೇಕ ವಿಧದ ಕೆಲಸಗಳನ್ನು ಮಾಡುತ್ತಿರುವುದು ಗೊತ್ತಿದ್ದ ಅವರು, ಅಂತಹ ಕಾರ್ಯಗಳಿಗಾಗಿ ಅದರ ಸೀಮಿತ ಉಪಯೋಗವನ್ನೂ ಚೆನ್ನಾಗಿಯೇ ಅರಿತಿದ್ದರು.

ಹಿಂದೂ ಮಹಾಸಭೆಯು ಹಿಂದೂಗಳ ಸಾಮಾಜಿಕ, ಸಾಂಸ್ಕೃತಿಕ ಸುಧಾರಣೆಗಳ ಹಾಗೂ ಹಿಂದೂ ಏಕತೆಯ ವಿಚಾರಗಳನ್ನು ಬಿಟ್ಟು, ರಾಜಕಾರಣದಲ್ಲಿ ಹೆಚ್ಚಿನ ಆಸಕ್ತಿ ತಳೆಯಲು ಆರಂಭಿಸಿ, ಈ ರಂಗದಲ್ಲಿ ಮುಸಲ್ಮಾನರಿಗೆ ಮುಸ್ಲಿಂ ಲೀಗ್ ಇರುವಂತೆ ತಾನು ಹಿಂದೂಗಳಿಗೆ ಪ್ರತಿನಿಧಿಯೆಂಬಂತೆ ತಿಳಿಯತೊಡಗಿದಾಗಿನಿಂದ ಡಾ. ಹೆಡಗೇವಾರರು ಕ್ರಮೇಣ ಅದರಿಂದ ದೂರವಾಗಲಾರಂಭಿಸಿದರು. 1927ರ ನಂತರ ಅವರು ಅದರ ಜತೆಯಲ್ಲಿದ್ದುದು ಕೇವಲ ಹೆಸರಿಗೆ ಮಾತ್ರ. 1930ರ ನಂತರವಂತೂ ಮಹಾಸಭೆಯ ನಾಯಕರುಗಳ ಜತೆ ವ್ಯಕ್ತಿಗತವಾದ ಸಂಬಂಧಕ್ಕೆ ಮಾತ್ರ ತಮ್ಮನ್ನು ಅವರು ಸೀಮಿತಗೊಳಿಸಿಕೊಂಡರು. ಹಲವಾರು ವಿಷಯಗಳಲ್ಲಿ ವೈಚಾರಿಕ ಸಮಾನತೆಯಿದ್ದ ಕಾರಣದಿಂದಾಗಿ ಮತ್ತು ಕೆಲವೊಮ್ಮೆ ಮಹಾಸಭೆಯ ನಾಯಕರ ಬಗ್ಗೆ ತಮಗಿದ್ದ ಶ್ರದ್ಧೆಯ ಕಾರಣಕ್ಕಾಗಿಯೂ, ಅದರ ಕಾರ್ಯಕ್ರಮಗಳಿಗೆ ಅವರು ಜನಬಲ ಒದಗಿಸುತ್ತಿದ್ದುದೂ ಉಂಟು.

ಸಂಘ ಮತ್ತು ಮಹಾಸಭೆಯ ನಡುವಿನ ಸಂಬಂಧಗಳಿಗೆ ಇದ್ದ ಇನ್ನೊಂದು ಕಾರಣವೆಂದರೆ, ಆರಂಭದ ದಿನಗಳಲ್ಲಿ ಸಂಘವು ತನ್ನ ಕಾರ್ಯವಿಸ್ತಾರಕ್ಕಾಗಿ ಮಹಾಸಭೆಯ ನಾಯಕರಿಂದ ಸಹಾಯ ಪಡೆಯುತ್ತಿದ್ದುದು. ಸಂಘದ ಆರಂಭದ ದಿನಗಳಲ್ಲಿ ಡಾ. ಹೆಡಗೇವಾರರು ಹಿಂದೂತ್ವವಾದಿ ನಾಯಕರಿಂದ ಸಹಕಾರ ಪಡೆಯುತ್ತಿದ್ದರು. ಆಗ ಅವರ ಲಕ್ಷ್ಯವೆಲ್ಲ ಇದ್ದುದು ಹೊಸ ಹೊಸ ಸ್ಥಾನಗಳಲ್ಲಿ ಸಂಘದ ಕಾರ್ಯವನ್ನು ವಿಸ್ತರಿಸುವುದೊಂದರಲ್ಲೆ. ಸಂಘಟನೆಯ ಕೆಲಸಕ್ಕಾಗಿ ಅದರ ಅಗತ್ಯವೂ ಇತ್ತು. ದತ್ತೋಪಂತ ಠೇಂಗಡಿಯವರು ಹೇಳುವಂತೆ ಹಲವು ಕಡೆಗಳಲ್ಲಿ ಹಿಂದೂಮಹಾಸಭೆಯ ಅಂತಹ ಕೆಲವು ನಾಯಕರನ್ನು ಅವರು ಸಂಘಚಾಲಕರಾಗಿ ನಿಯುಕ್ತಿಸಿರುವುದೂ ಇದೆ.

ಇದೆಲ್ಲದರ ನಡುವೆ ಸಂಘದ ಆರಂಭದ ದಿನದಿಂದಲೂ ಅದನ್ನು ಒಂದು ಸ್ವತಂತ್ರ ಸಂಘಟನೆಯಾಗಿಯೇ ಉಳಿಸಲು ಸಹ ಡಾ. ಹೆಡಗೇವಾರರು ಎಚ್ಚರ ವಹಿಸಿದರು. ಈ ನಿಲುವಿನಲ್ಲಿ ಯಾವುದೇ ಸಡಿಲಿಕೆಗೆ ಅವರು ಅವಕಾಶವನ್ನೇ ನೀಡಲಿಲ್ಲ. ಯಾವುದೇ ಮಹತ್ವದ ನಿರ್ಧಾರ ಕೈಗೊಳ್ಳಬೇಕಾದರೂ, ಅವರು ಮೊದಲು ಚರ್ಚಿಸುತ್ತಿದ್ದುದು ಸಂಘದಲ್ಲಿನ ತಮ್ಮ ಸಹಕಾರಿಗಳ ಜತೆ ಮಾತ್ರ. ಅಂತಹ ಅನೇಕ ಉದಾಹರಣೆಗಳು

ಲಭ್ಯವಿದೆ. ಸಂಘದ ನೀತಿ ಮತ್ತು ಕಾರ್ಯಕ್ರಮಗಳನ್ನು ನಿರ್ಧರಿಸುವಾಗ ಅವರು ಮಹಾಸಭೆಯ ಮೇಲೆ ಸಂಘವು ಅವಲಂಬಿತವಾಗಿರದಂತೆ ನೋಡಿಕೊಂಡರು. ಹಾಗೂ ಅಂತಹ ಪ್ರಕ್ರಿಯೆಯಲ್ಲಿ ಯಾವುದೇ ಹಂತದಲ್ಲೂ ಮಹಾಸಭೆಯ ನಾಯಕರ ಸಹಭಾಗಿತ್ವಕ್ಕೆ ಅವರು ಅವಕಾಶವನ್ನೂ ನೀಡಲಿಲ್ಲ. ಇದರ ಒಂದು ಉದಾಹರಣೆಯೆಂದರೆ 1930ರ ಸವಿನಯ ಕಾನೂನು ಭಂಗ ಆಂದೋಳನದ ಸಂದರ್ಭದ್ದು. ಈ ಆಂದೋಳನವನ್ನು ಕುರಿತು ಮಹಾಸಭೆಯಲ್ಲಿ ಒಮ್ಮತವಿರಲಿಲ್ಲ. ಭಾಯಿ ಪರಮಾನಂದರ ನಾಯಕತ್ವದಲ್ಲಿದ್ದ ಮಹಾಸಭೆಯ ಒಂದು ಗುಂಪು ಗಾಂಧೀಜಿಯವರಿಗೆ ಪೂರಾ ವಿರುದ್ಧವಾಗಿದ್ದರೆ, ಡಾ. ಮುಂಜೆಯವರಿದ್ದ ಇನ್ನೊಂದು ಗುಂಪು ಗಾಂಧೀಜಿಯವರ ನೀತಿಗಳನ್ನು ಆಕ್ಷೇಪಿಸುತ್ತಾ, ಆದರೆ ಒಲ್ಲದ ಮನದಿಂದ ಆಂದೋಳನದಲ್ಲಿ ಸಹಭಾಗಿಯೂ ಆಗಿತ್ತು. 1930ರ ಜುಲೈ 11ರಂದು ಡಾ. ಮುಂಜೆ ಅವರು ಸತ್ಯಾಗ್ರಹ ನಡೆಸಿ ಬಂಧನಕ್ಕೊಳಗಾದರು ಹಾಗೂ ಐದು ರೂಪಾಯಿ ದಂಡ ನೀಡಿ ಬಿಡುಗಡೆಗೊಳಿಸಿಕೊಂಡರು. ಆದರೆ ಸಂಘವು ಈ ಸಂಬಂಧದಲ್ಲಿ ಅಂದಿನ ರಾಷ್ಟ್ರೀಯ ಪರಿಸ್ಥಿತಿಯ ಬಗ್ಗೆ ಆಳವಾಗಿ ವಿಮರ್ಶಿಸಿದ ನಂತರವೇ ನಿರ್ಧಾರ ಕೈಗೊಂಡಿತು. ಮಹಾಸಭೆಯ ರೀತಿಯಲ್ಲಿದ್ದಂತೆ ಇಬ್ಬಗೆ ಮತ್ತು ಇಬ್ಬಂದಿತನ ಡಾ. ಹೆಡಗೇವಾರರ ಚಿಂತನೆಯಲ್ಲಿರಲಿಲ್ಲ ಮತ್ತು ಅವರು ಮಹಾಸಭೆಯ ಪ್ರಭಾವಕ್ಕೊಳಗಾಗಲೂ ಇಲ್ಲ. ಈ ಆಂದೋಳನದಲ್ಲಿ ಸಂಘದ ಸಹಭಾಗಿತ್ವವು ನಿಶ್ಶರ್ತವಾಗಿ ಹಾಗೂ ಪೂರ್ಣವಾಗಿತ್ತು.

## ಮಹಾಸಭೆಯ ಅಪೇಕ್ಷೆ

ಸಂಘದ ಅಖಿಲ ಭಾರತೀಯ ಸ್ವರೂಪವನ್ನು ಮಹಾಸಭೆಯು 1932ರಲ್ಲಿ ತನ್ನ ಒಂದು ನಿರ್ಣಯದ ಮೂಲಕ ಒಪ್ಪಿಕೊಂಡಿತು. ಈ ನಿರ್ಣಯದಲ್ಲಿ ಡಾ. ಹೆಡಗೇವಾರರ ಕಾರ್ಯಕ್ರಮವನ್ನು ಪ್ರಶಂಸಿಸಲಾಗಿತ್ತು. ಹಿಂದೂಪರವಾದ ರಾಜಕಾರಣಕ್ಕೆ ತಾನೇ ಕೇಂದ್ರ ಬಿಂದು ಎಂದು ತಿಳಿಯುತ್ತಿದ್ದ ಅದು, ಸಂಘವು ಮಹಾಸಭೆಗೆ ತನ್ನ ಸ್ವಯಂಸೇವಕರ ಪಡೆಯಂತೆ ಕಾರ್ಯನಿರ್ವಹಿಸಬೇಕು ಮತ್ತು ತನಗೆ ಅಗತ್ಯವಿದ್ದಾಗಲೆಲ್ಲ ಸಂಘವು ಜನಬಲವನ್ನು ಒದಗಿಸಬೇಕೆಂದು ಅಪೇಕ್ಷಿಸುತ್ತಿತ್ತು. ಸಂಘವು ಕಾಂಗ್ರೆಸ್‌ನ ಆಂದೋಳನದಲ್ಲಿ ಪಾಲ್ಗೊಳ್ಳುವುದು ಮಹಾಸಭೆಗೆ ಇಷ್ಟವೆನಿಸುತ್ತಿರಲಿಲ್ಲ. ತನ್ನ ನಾಯಕರ ಬೈಠಕ್‌ಗಳು, ಸಮ್ಮೇಳನಗಳು, ಕಾರ್ಯಕ್ರಮಗಳು ಮತ್ತು ಒಟ್ಟಿನಲ್ಲಿ ತಮ್ಮ ಪ್ರಚಾರ ಇತ್ಯಾದಿ ಕೆಲಸಗಳಲ್ಲಿ ತನಗೆ ನೆರವಾಗುವಂತಹ ಒಂದು ಸ್ವಯಂಸೇವಕರ ಪಡೆಯಾಗಿ ಸಂಘವಿರಬೇಕು ಎಂಬ ಆಸೆಯನ್ನು ಮಹಾಸಭೆಯು ಹೊಂದಿತ್ತು.

ಸ್ವಯಂಸೇವಕರನ್ನು ಮಹಾಸಭೆಯು ನೋಡುವ ರೀತಿ ಹೇಗಿತ್ತೆಂಬುದಕ್ಕೆ ಸಂಘದ ಓರ್ವ ಹಿರಿಯ ಕಾರ್ಯಕರ್ತರಾಗಿದ್ದ ಕಾಶಿನಾಥ ಲಿಮಯೇ ಅವರಿಗೆ 1935ರ ನವೆಂಬರ್ 4ರಂದು ಡಾ. ಹೆಡಗೇವಾರರು ಬರೆದಿರುವ ಒಂದು ಪತ್ರದಿಂದ ಗೊತ್ತಾಗುತ್ತದೆ. ಸಂಘದ ಸ್ವಯಂಸೇವಕರ ಕೆಲಸ ಮಹಾಸಭೆಯ ಕಾರ್ಯಕ್ರಮಗಳಿಗಾಗಿ ಮೇಜು ಕುರ್ಚಿಗಳನ್ನು ಎತ್ತುವಂತಹದಲ್ಲ ಎಂಬುದನ್ನು ಅದರ ನಾಯಕರಿಗೆ ತಿಳಿಸುವ ಅಗತ್ಯವಿದೆ ಎಂದು ಆ ಪತ್ರದಲ್ಲಿ ಅವರು ಬರೆದಿದ್ದಾರೆ. ಮುಂದುವರಿಸುತ್ತ, "ಅಲ್ಲಿನ ಪರಿಸ್ಥಿತಿಯಿಂದಾಗಿ ಪ್ರಸ್ತುತ ಅಲ್ಲಿ ನಡೆಯುತ್ತಿರುವುದು ನಾಟಕ ಇನ್ನೂ ತುಸು ಕಾಲ ಮುಂದುವರಿಯಲೂ ಬೇಕಾಗಬಹುದು; ನಿರುಪಾಯವಾಗಿ ಅದನ್ನು ಮಾಡಬೇಕಾಗಿಯೂ ಬರಬಹುದು. ಅಲ್ಲಿನ ಪರಿಸ್ಥಿತಿ ಸ್ವಯಂಸೇವಕರಿಗೆಲ್ಲ ಅತ್ಯಂತ

ಕಿರಿಕಿರಿಯದಾಗಿರುವಂತೆ ನನಗೂ ಅನ್ನಿಸುತ್ತದೆ. ಅದಕ್ಕಾಗಿ ನನ್ನ ಮನಸ್ಸು ಸಹ ನೋಯುತ್ತದೆ" ಎಂದು ತಿಳಿಸಿದ್ದಾರೆ.

ಸಂಘ ಮತ್ತು ಮಹಾಸಭೆ ಇವೆರಡರ ನಡುವೆ ಡಾ. ಹೆಡಗೇವಾರರು ಲಕ್ಷ್ಮಣರೇಖೆಯನ್ನು ಎಳೆದಾಗ, ಡಾ. ಹೆಡಗೇವಾರರು ಮತ್ತು ಸಂಘದ ಬಗ್ಗೆ ಮಹಾಸಭೆಯಲ್ಲಿ ಆಕ್ರೋಶ ಪ್ರಕಟವಾಗಲಾರಂಭವಾಯಿತು. ಮಹಾಸಭೆಯ ಸದಸ್ಯರ ನಡುವೆ ಪರಸ್ಪರ ಚರ್ಚೆಯಲ್ಲಿ ಮತ್ತು ಕೆಲವೊಮ್ಮೆ ಸಾರ್ವಜನಿಕವಾಗಿಯೂ ಅದು ಕಾಣಿಸತೊಡಗಿತು. 1934ರಲ್ಲಿ ಡಾ. ಮುಂಜೆ ಅವರು ಡಾ. ಹೆಡಗೇವಾರರ ಓರ್ವ ಸಹಕಾರಿ ಜಿ.ವಿ. ದೇಶಮುಖ್ ಅವರ ಬಳಿ ಸಂಘವು ಮಹಾಸಭೆಯೊಂದಿಗೆ ಸ್ವಲ್ಪವೂ ಸಹಕರಿಸುವುದಿಲ್ಲ ಎಂದು ಅಸಮಾಧಾನವನ್ನು ಪ್ರಕಟಿಸಿದ್ದರು.[1] ಪನವೇಲ್‌ನಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ವಿನಾಯಕ ದಾಮೋದರ ಸಾವರಕರರು ಸಹ ಮಹಾಸಭೆಯ ವಿಷಯದಲ್ಲಿ ಸಂಘದ 'ತಟಸ್ಥತೆ' ಬಗ್ಗೆ ಟೀಕಿಸಿದ್ದರು. ಸಂಘದ ಬಗ್ಗೆ ಉಲ್ಲೇಖ ಮಾಡುತ್ತಾ "ಸಂಘದ ಸ್ವಯಂಸೇವಕರ ಕತೆಯೆಂದರೆ, ಆತ ಹುಟ್ಟಿದ, ಸಂಘಕ್ಕೆ ಸೇರಿದ ಮತ್ತು ಏನನ್ನೂ ಸಾಧಿಸದೆ ಕೊನೆಯುಸಿರೆಳೆದ, ಇಷ್ಟೇ ಆಗುವುದಿದೆ" ಎಂದು ಸಹ ಅವರು ಹೇಳಿದ್ದರು. ಸಾವರಕರರ ಇಂತಹ ಟೀಕೆಯ ನಂತರ ಮಹಾಸಭೆಯ ಮಧ್ಯಮ ಸ್ತರದ ಮತ್ತು ಕೆಳಗಿನ ಹಂತದ ನಾಯಕರು ಸಹ ಸಂಘದ ಮೇಲೆ ತಮ್ಮ ಟೀಕಾಸ್ತ್ರಗಳ ಬಿರುಸನ್ನು ಹೆಚ್ಚಿಸತೊಡಗಿದರು. ಅಂತಹವರಲ್ಲಿ ಮಾಧವ ಬಿಂದು ಪುರಾಣಿಕ, ನಾಥೂರಾಮ ಗೋಡ್ಸೆ, ವೀರ ಯಶವಂತರಾವ್ ಜೋಶಿ, ಜಿ.ಜಿ. ಅಧಿಕಾರಿ ಮೊದಲಾದವರು ಪ್ರಮುಖರು. ಗೋಡ್ಸೆ, ಜೋಶಿ ಮತ್ತು ಸೋಲಾಪುರದ ರಾಜವಾಡೆ ಅವರನ್ನು ಸೇರಿಸಿ ಪುರಾಣಿಕರು ಸಾವರಕರರಿಗೆ ಒಂದು ಪತ್ರವನ್ನು ಬರೆದಿದು ಸಂಘದ ನಾಯಕರನ್ನು ಕಟುವಾಗಿ ಟೀಕಿಸಿದರು. ಈ ಪತ್ರದಲ್ಲಿ "ಅವರು ಸಂಘಿಗಳನ್ನು (ಸ್ವಯಂಸೇವಕರನ್ನು) ಮಹಾಸಭೆಯ ಕೆಲಸ ಮಾಡದಂತೆ ಉದ್ದೇಶಪೂರ್ವಕವಾಗಿ ತಡೆಯುತ್ತಿದ್ದಾರೆ. ಅವರ ದೃಷ್ಟಿಯಲ್ಲಿ ಹಿಂದೂ ಮಹಾಸಭೆಯೆಂದರೆ ಕೇವಲ ನಾಯಕರುಗಳದೇ ಸಮೂಹವಾಗಿದೆ. ಕಾಂಗ್ರೆಸ್‌ನಲ್ಲಿ ಗೌರವದ ಸ್ಥಾನ ದೊರಕದಿರುವಂತಹ ಮಹತ್ವಾಕಾಂಕ್ಷಿಗಳು ಅವರು. ತನ್ನ ಕೆಲಸದ ಬೆಳವಣಿಗೆಗೆ ನಮ್ಮನ್ನು ಬಳಸುವಂತಹ ಕುಟಿಲತೆ ಸಂಘದ್ದು" ಎಂದು ಆ ಪತ್ರದಲ್ಲಿ ಬರೆಯಲಾಗಿದೆ.

## ಭಾಗಾನಗರ ಸತ್ಯಾಗ್ರಹ

1938ರಲ್ಲಿ ಮಹಾಸಭೆ ಮತ್ತು ಆರ್ಯ ಸಮಾಜ ಇವೆರಡೂ ಜತೆಗೂಡಿ ಹೈದರಾಬಾದ್‌ನ ನಿಜಾಮನ ಹಿಂದೂ ವಿರೋಧಿ ನೀತಿಗಳ ವಿರುದ್ಧ ಸತ್ಯಾಗ್ರಹ ಸಮರವನ್ನು ಆರಂಭಿಸಿದವು. ಇದರ ನಾಯಕತ್ವ ವಹಿಸಿದವರು ಸ್ವತಃ ಸಾವರಕರರು. 'ಜಂಗಲ್ ಸತ್ಯಾಗ್ರಹ'ದಲ್ಲಿ ಡಾ. ಹೆಡಗೇವಾರರು ಸ್ವಯಂಸೇವಕರನ್ನು ಸೇರಿಸಿಕೊಂಡು ಭಾಗವಹಿಸಿದ್ದಂತೆ ಈ ಭಾಗಾನಗರ ಸತ್ಯಾಗ್ರಹದಲ್ಲೂ ಅವರು ಪಾಲ್ಗೊಳ್ಳಬೇಕು ಎಂಬುದೇ ಮಹಾಸಭೆಗಿದ್ದ ಅಪೇಕ್ಷೆ. 1930 ರಿಂದ 1937ರ ವರೆಗೆ ಸಂಘದ ಕಾರ್ಯ ಹಲವು ಪಟ್ಟು ಬೆಳೆದಿತ್ತು. ಈ ಕಾರಣಕ್ಕಾಗಿ ಮಹಾಸಭೆಯು ಅಪ್ರತ್ಯಕ್ಷವಾಗಿ ಸಂಘದ ಸಹಭಾಗಿತ್ವದ ಮೇಲೆಯೇ ಅವಲಂಬಿತವಾಗಿತ್ತು. ಆದರೆ ಡಾ. ಹೆಡಗೇವಾರರ ಮುಂದಿದ್ದ ಸವಾಲು ದೇಶದ ಸ್ವಾತಂತ್ರ್ಯದ್ದು. ಹೀಗಾಗಿ ಯಾವುದೋ ಕೆಲವು ತಾತ್ಕಾಲಿಕ

1. ಜಿ. ವಿ. ದೇಶಮುಖ್, ಕಾಳ, ಸಮುದ್ರಾಂತಿಲ ರತ್ನೇಂ, ವೀಣಾ ಪ್ರಕಾಶನ, ನಾಗಪುರ ಪು. 155–157

ಸಂಗತಿಗಳಿಗಾಗಿ ಸಂಘದ ಶಕ್ತಿಯನ್ನು ವ್ಯಯಿಸುವುದು ಅವರಿಗೆ ಇಷ್ಟವಿರಲಿಲ್ಲ. ವಸಾಹತುಶಾಹಿಯ ವಿರುದ್ಧ ಯಾವುದೇ ಆಂದೋಳನದಲ್ಲಿ ಅವರಿಗಿರುತ್ತಿದ್ದ ಉತ್ಸಾಹ, ಮಿಕ್ಕ ಆಂದೋಳನಗಳಲ್ಲಿ – ವೈಚಾರಿಕವಾಗಿ ಅದೆಷ್ಟೇ ಸಹಮತವಿದ್ದರೂ – ಪ್ರತ್ಯಕ್ಷದಲ್ಲಿ ಇರುತ್ತಿರಲಿಲ್ಲ. ಭಾಗಾನಗರ ಸತ್ಯಾಗ್ರಹದ ವಿಷಯದಲ್ಲಿ ಅವರ ಸಹಮತವೇನೋ ಇತ್ತು. ಆದರೆ ಸ್ವಾತಂತ್ರ್ಯ ಹೋರಾಟದ ದೃಷ್ಟಿಯಲ್ಲಿ ಅದಕ್ಕೆ ವಿಶೇಷ ಮಹತ್ವವಿದೆಯಾಗಿ ಅವರಿಗೆ ಅನಿಸುತ್ತಿರಲಿಲ್ಲ. ಡಾ. ಹೆಡಗೇವಾರರ ಮತ್ತು ಮಹಾಸಭೆಯ ನಾಯಕರುಗಳ ಚಿಂತನೆ, ಸ್ವಭಾವ ಮತ್ತು ಕಾರ್ಯದ ಪದ್ಧತಿಗಳಲ್ಲಿ ವ್ಯತ್ಯಾಸವಿದ್ದಂತೆಯೇ ಸಂಘ ಮತ್ತು ಮಹಾಸಭೆಯ ಆದ್ಯತೆಗಳಲ್ಲೂ ಭಿನ್ನತೆ ಇದ್ದುದು ಸಹಜವೇ. ಸ್ವಯಂಸೇವಕರ ವ್ಯಕ್ತಿಗತವಾದ ಸ್ವಾತಂತ್ರ್ಯ ಮತ್ತು ಸ್ವತಃ ನಿರ್ಣಯ ಕೈಗೊಳ್ಳುವ ಸಾಮರ್ಥ್ಯ ಇವುಗಳಿಗೆ ಡಾ. ಹೆಡಗೇವಾರರು ಹೆಚ್ಚಿನ ಮಹತ್ವ ನೀಡುತ್ತಿದ್ದರು. ಅದಕ್ಕಾಗಿಯೇ ಸಂಘದ ಅಭಿಪ್ರಾಯಗಳು, ನಿರ್ಣಯಗಳು ಮತ್ತು ಕಾರ್ಯಕ್ರಮಗಳೆಂದು ಯಾವುದನ್ನೂ ಸ್ವಯಂಸೇವಕರ ಮೇಲೆ ಅವರು ತಾವೇ ಹೊರಿಸಲಿಲ್ಲ. ಎಲ್ಲರೂ ಸ್ವಇಚ್ಛೆಯಿಂದ ಭಾಗವಹಿಸುವುದನ್ನೇ ಸಂಘದಲ್ಲಿ ಪ್ರೋತ್ಸಾಹಿಸಲಾಗುತ್ತದೆ. ಭಾಗಾನಗರ ಸತ್ಯಾಗ್ರಹಕ್ಕೆ ಸಂಬಂಧಿಸಿ ಸಂಘದ ಅಧಿಕಾರಿಯೊಬ್ಬರು ಕೇಳಿದ್ದ ಪ್ರಶ್ನೆಗೆ ಡಾ. ಹೆಡಗೇವಾರರು 1937ರ ನವೆಂಬರ್ 12ರಂದು ಬರೆದ ಪತ್ರದಲ್ಲಿ ಉತ್ತರ ತುಂಬ ಸ್ಪಷ್ಟವಾಗಿದೆ:

"ತನ್ನ ಸ್ವಂತದ ಇಚ್ಛೆಗನುಗುಣವಾಗಿ, ಸಂಘದಲ್ಲದ ಇನ್ನಾವುದೇ ಸಂಸ್ಥೆಯಲ್ಲಾಗಲಿ, ಆಂದೋಳನದಲ್ಲಾಗಲಿ ಭಾಗವಹಿಸಲು ಅಥವಾ ಅದರ ಸಭೆಯಲ್ಲಿ ಉಪಸ್ಥಿತರಿರಲು ಸಂಘದ ವತಿಯಿಂದ ಅದರ ಯಾವನೇ ಸದಸ್ಯನಿಗೆ ಅಡ್ಡಿ ಮಾಡಲಾಗುವುದಿಲ್ಲ. ಆದರೆ ಅಂತಹ ಸದಸ್ಯರು ತಮ್ಮ ಯಾವುದೇ ಕಾರ್ಯದಿಂದ ಸಂಘಕ್ಕೆ ಹಾನಿಯಾಗಬಾರದೆಂಬ ತಮ್ಮ ಹೊಣೆಯನ್ನು ಸಹ ಎಚ್ಚರದಿಂದ ಕಾಯ್ದುಕೊಳ್ಳಬೇಕು."

ಇನ್ನೊಂದು ಪತ್ರದಲ್ಲಿ ಸ್ವಯಂಸೇವಕರು ವ್ಯಕ್ತಿಶಃ ಈ ಆಂದೋಳನದಲ್ಲಿ ಭಾಗವಹಿಸಬಹುದೆಂದು ಸಹ ಅವರು ತಿಳಿಸಿದ್ದರು. ಅದರಲ್ಲಿ ಸಂಘದ ಸಹಭಾಗಿತ್ವವಿದ್ದುದು ಸಾಂಕೇತಿಕವಾಗಿ ಮಾತ್ರ. ಭೈಯಾಜಿ ದಾಣಿ ಅವರ ಮುಂದಾಳುತನದಲ್ಲಿ ನೂರು ಸ್ವಯಂಸೇವಕರ ತಂಡವೊಂದು ಅದರಲ್ಲಿ ಭಾಗವಹಿಸಿತ್ತು. ಆದರೆ ಮಹಾಸಭೆಗೆ ಅದು ಸಮಾಧಾನ ಕೊಡುವಂತಹದಾಗಿರಲಿಲ್ಲ. ಅದು ಗೊತ್ತಿದ್ದುದೇ. ಅದರ ಪರಿಣಾಮವಾಗಿ ಮಹಾಸಭೆಯ ನಾಯಕರು ಸಂಘದ ವಿರುದ್ಧ ತಮ್ಮ ವಾಗ್ಬಾಣವನ್ನು ಚರಮ ಸೀಮೆಗೆ ಒಯ್ದರು. ಡಾ. ಹೆಡಗೇವಾರರನ್ನು ಮೊಟ್ಟಮೊದಲ ಬಾರಿಗೆ ಸಾರ್ವಜನಿಕವಾಗಿ ಟೀಕೆ ಮಾಡಲಾಯಿತು. ಮುಂಬಯಿಯಿಂದ ಪ್ರಕಟವಾಗುತ್ತಿದ್ದ ಮಹಾಸಭೆಯ ಪರವಾದ ಪತ್ರಿಕೆ 'ವಂದೇ ಮಾತರಂ'ನ ಸಂಪಾದಕ ಜಿ.ಜಿ. ಅಧಿಕಾರಿಯವರು ಹನ್ನೆರಡು ಲೇಖನಗಳ ಒಂದು ಧಾರಾವಾಹಿಯನ್ನು ಬರೆದು ಡಾ. ಹೆಡಗೇವಾರರನ್ನು 'ಹಠಮಾರಿ', 'ಅಹಂಕಾರಿ', ಮತ್ತು 'ಮಹತ್ವಾಕಾಂಕ್ಷಿ' ಇತ್ಯಾದಿ ಕಟು ಶಬ್ದಗಳಲ್ಲಿ ಟೀಕಿಸಿದರು. "ಹಿಂದುತ್ವದ ಆಂದೋಳನದಲ್ಲಿ ಸಹಕರಿಸದವರು ಮತ್ತು ಹಿಂದುತ್ವದ ಶಕ್ತಿಯಲ್ಲಿ ಒಡಕು ಸೃಷ್ಟಿಸುವವರು" ಇತ್ಯಾದಿ ಆರೋಪಗಳನ್ನೂ ಅವರ ಮೇಲೆ ಮಾಡಿದರು. ಆಶ್ಚರ್ಯದ ಸಂಗತಿಯೆಂದರೆ ಇದನ್ನು ಖಂಡಿಸುವ ಅಗತ್ಯವನ್ನು ಮಹಾಸಭೆಯ ಯಾವುದೇ ನಾಯಕ ಮನಗಾಣಲಿಲ್ಲ. ಆದರೆ ಈ ಧಾರಾವಾಹಿಯನ್ನು ಟೀಕಿಸಿ ಮಹಾರಾಷ್ಟ್ರದ ವಿವಿಧ ಊರುಗಳಿಂದ 'ವಂದೇ ಮಾತರಂ' ಸಂಪಾದಕರಿಗೆ ನೂರಾರು ಪತ್ರಗಳು ಬಂದವು. ಕೆಲವು ಕಡೆಗಳಲ್ಲಂತೂ 'ವಂದೇ ಮಾತರಂ'ನ ಬಹಿಷ್ಕಾರದ ಕಾರ್ಯಕ್ರಮಗಳೂ ಆದವು. ನಾಗಪುರದಿಂದ

ಪ್ರಕಟವಾಗುವ 'ಸಾವಧಾನ'ದಲ್ಲಿ ಮೇ 27ರಂದು ಭಾಗಾನಗರ ಸತ್ಯಾಗ್ರಹದಲ್ಲಿ ಸಂಘವು ಭಾಗವಹಿಸದಿರುವ ಕುರಿತು ಟೀಕಿಸುವವರಿಗೆ ಉತ್ತರವಾಗಿ:

"ನಿತ್ಯಕಾರ್ಯ ಮತ್ತು ಪ್ರಾಸಂಗಿಕ ಕಾರ್ಯ ಇವೆರಡರ ಕಲ್ಪನೆ ಜಿ.ಜಿ. ಅಧಿಕಾರಿ ಅವರಿಗೆ ಇರುವುದೇ ಆದಲ್ಲಿ, ಸಂಘದ ವಿರುದ್ಧ ಹನ್ನೆರಡು ವಿಷಭರಿತ ಬುಸುಗುಟ್ಟುವಿಕೆಯನ್ನು ಅವರು ಮಾಡುತ್ತಿರಲಿಲ್ಲ. ಭಾಗಾನಗರ ಸತ್ಯಾಗ್ರಹದ ಉತ್ಸಾಹದ ಭರದಲ್ಲಿ ರಾಷ್ಟ್ರದ ಸ್ವಾತಂತ್ರ್ಯದ ಹೋರಾಟ ಇನ್ನೂ ಮುಗಿದಿಲ್ಲ ಎಂಬುದು ಅವರಿಗೆ ಮರೆತೇ ಹೋಗಿರಬಹುದು. ರಾಷ್ಟ್ರದ ಮುಕ್ತಿಗಾಗಿ ಅಂತಿಮ ಹೋರಾಟ ನಡೆಸಬೇಕಾದಾಗ, ಅದರ ತಯಾರಿಗಾಗಿ ಅಗತ್ಯ ಬೀಳುವುದು ಸ್ವಾತಂತ್ರ್ಯವನ್ನು ತಂದುಕೊಡಬಲ್ಲ ನಿತ್ಯ ಕಾರ್ಯವೇ ವಿನಾ ಭಾಗಾನಗರ ಸತ್ಯಾಗ್ರಹದಂತಹ ಪ್ರಾಸಂಗಿಕ ಕಾರ್ಯ ಅಲ್ಲ. ಭಿನ್ನ ಭಿನ್ನ ರೀತಿಯ ಕೆಲಸ ಮಾಡುವಂತಹ ಸಂಸ್ಥೆಗಳು ಭಿನ್ನ ಭಿನ್ನವೇ..... ಆದರೆ ನಿತ್ಯಕಾರ್ಯದಲ್ಲಿ ತೊಡಗಿರುವ ಸಂಸ್ಥೆಯು, ತನ್ನೆಲ್ಲ ಶಕ್ತಿ ಮತ್ತು ವಿಶೇಷತೆಯನ್ನು ಮರೆತು ತನ್ನದೇ ಆದ ನಿತ್ಯಕಾರ್ಯದಲ್ಲಿ ಒಡಕು ಬರುವಂತಹ ಯಾವುದೇ ಪ್ರಾಸಂಗಿಕ ಕಾರ್ಯಕ್ಕಾಗಿ ಮುಂದೆ ಬರುವುದಿಲ್ಲ" ಎಂದು ಬರೆಯಲಾಗಿತ್ತು.

ಬಾಬಾರಾವ್ ಸಾವರಕರ ಅವರೂ ಒಂದು ಲೇಖನ ಬರೆದು ಹಿಂದೂ ಮಹಾಸಭೆಗೆ ಉತ್ತರವಿತ್ತರು. ಭಾಗಾನಗರ ಸತ್ಯಾಗ್ರಹಕ್ಕೆ ಸಂಬಂಧಿಸಿ ಸಂಘದ ನಿಲುವನ್ನು ಸಮರ್ಥಿಸಿ ಅವರು, "ಸಂಘದಿಂದ ಪ್ರೇರಣೆ ಪಡೆದು ಯಾರು ಹಿಂದುತ್ವ ಮತ್ತು ರಾಷ್ಟ್ರದ ಕುರಿತು ಭಕ್ತಿ ಅಭಿಮಾನಗಳನ್ನು ಮೂಡಿಸಿಕೊಂಡಿದ್ದಾರೋ ಅಂತಹವರು ತಮ್ಮ ಕರ್ತವ್ಯದ ಮಾರ್ಗದಿಂದ ಎಂದೂ ಪಲಾಯನ ಮಾಡುವುದಿಲ್ಲ. ಅವರು ತಮ್ಮ ಕರ್ತವ್ಯವನ್ನು ಇತರರಿಗಿಂತ ಚೆನ್ನಾಗಿ ಅರ್ಥ ಮಾಡಿಕೊಳ್ಳುತ್ತಾರೆ ಮತ್ತು ನಿರ್ವಹಿಸುತ್ತಾರೆ ಸಹ" ಎಂದು ಬರೆದಿದ್ದಾರೆ.

ಅಷ್ಟಾದರೂ ಮಹಾಸಭೆಯ ಅಸಮಾಧಾನ ಕೊನೆಗೊಳ್ಳಲಿಲ್ಲ. 1939ರ ಜೂನ್ 7ರಂದು ಅಧಿಕಾರಿಯವರು ಇನ್ನಷ್ಟು ನೀಚ ಭಾಷೆಯಲ್ಲಿ ಡಾ. ಹೆಡಗೇವಾರರ ಮೇಲೆ ವಾಕ್ಪ್ರಹಾರ ನಡೆಸಿದರು. 'ವಂದೇ ಮಾತರಂ'ನಲ್ಲಿ "ಅಹಂಕಾರದ ವಿಷವು ಸರ್ಪದ ವಿಷಕ್ಕಿಂತಲೂ ಭಯಾನಕವಾದುದೆಂದು ಡಾ. ಹೆಡಗೇವಾರರಿಗೆ ವಿನಮ್ರತೆಯಿಂದ ಹೇಳಲು ನಾವು ಇಚ್ಛಿಸುತ್ತೇವೆ. ಇದೇ ವಿಧದ ಅಹಂಕಾರದ ಮೂಲಕ ಗಾಂಧೀಯವರು ಸೃಷ್ಟಿಸಿರುವ ಅಪ್ಪಟ ವಿನಾಶದ ಇತಿಹಾಸವು ಕಣ್ಣಿಂದ ಮರೆಯಾಗದಿರಲಿ. ರಾ.ಸ್ವ ಸಂಘವನ್ನು ಆರಂಭಿಸಿ ನೀವು ನಿಸ್ಸಂದೇಹವಾಗಿಯೂ ಹಿಂದೂ ಸಮಾಜಕ್ಕೆ ಉಪಕಾರ ಮಾಡಿದ್ದೀರಿ. ಆದರೆ ದಾರಿಹೋಕರಿಗಾಗಿ ಕಟ್ಟಿಸಲಾಗಿದ್ದ ಕೆರೆಯಲ್ಲಿ ಅದರ ದಾನಿಯೇ ಕ್ರೂರ ಜಲಚರಗಳನ್ನು ಬಿಟ್ಟಲ್ಲಿ ಅದಕ್ಕೆ ಏನನ್ನೋಣ? ನೀವು ಮಾಡುತ್ತಿರುವುದು ಅದನ್ನೇ ಮತ್ತು ಹಾಗೆ ಮಾಡುವುದು ಸಹ ಉದ್ದೇಶಪೂರ್ವಕವಾಗಿಯೇ. ಅದಕ್ಕಾಗಿ ದಯವಿಟ್ಟು ತುಸು ಹಿಂತಿರುಗಿ ನೋಡಿ. ನೀವು ಇದೇ ರೀತಿ ಮುಂದುವರಿದದ್ದೇ ಆದಲ್ಲಿ, ಹಿಂದೂ ಸಮಾಜದ ಭಾವೀ ಇತಿಹಾಸಕಾರರು ನಿಮ್ಮ ಹೆಸರನ್ನು ಸಹ ಉಲ್ಲೇಖಿಸಲಾರರು" ಎಂದು ಅವರು ಬರೆದಿದ್ದರು.

ಇಂತಹ ಕಟು ಹಾಗೂ ಕೀಳು ಭಾಷೆಗೆ ಡಾ. ಹೆಡಗೇವಾರರು ಅದೆಷ್ಟು ಸರಳ ಹಾಗೂ ಸಹಜವಾಗಿ ಉತ್ತರಿಸಿದರೋ ಅದು ಯಾವುದೇ ಸಾಮಾಜಿಕ ಕಾರ್ಯಕರ್ತನಿಗೆ ಸದಾ ಕಾಲವೂ ಪ್ರೇರಕವಾಗಿಯೇ ಉಳಿಯುವಂತಹದು. ಇಂತಹ ಕೆಸರು ಕೊಚ್ಚೆಯ ಲೇಖನವನ್ನು ಅವರಿಗೆ ಓದಿ ಹೇಳಿದಾಗ, ಅವರು ನಗುತ್ತ, "ನನ್ನ ಇಚ್ಛೆಯೂ ಅದೇ

ಆಗಿವೆ. ಇತಿಹಾಸದಲ್ಲಿ ನನ್ನ ಹೆಸರಿನ ಉಲ್ಲೇಖವೇ ಆಗದಿದ್ದರೂ ಕೆಲಸ ನಡೆದೀತು. ಆದರೆ ಈ ರೀತಿಯಲ್ಲಿ ಕೆಸರೆರಚುವವರ ಹೆಸರಂತೂ ಚೆನ್ನಾಗಿ ಉಲ್ಲೇಖ ಆಗಲೇಬೇಕು" ಎಂದರು.

ಡಾ. ಹೆಡಗೇವಾರರ ಕಣ್ಣ ಮುಂದಿದ್ದ ಗುರಿ ದೊಡ್ಡದಾಗಿದ್ದಂತೆಯೇ, ಅವರ ಮನಸ್ಸು, ಚಿಂತನೆ, ದೃಷ್ಟಿ ಇವೆಲ್ಲವೂ ಅದೇ ಪ್ರಮಾಣದಲ್ಲಿ ಸಮಗ್ರವೂ ಆಗಿದ್ದವು. ಆದಕ್ಕಾಗಿಯೇ ತಮ್ಮನ್ನು ಟೀಕಿಸುವವರ ವಿರುದ್ಧ ನಿಂದನೆ, ಪ್ರತಿಟೀಕೆ ಇತ್ಯಾದಿ ಮಾಡದೆ, ತಮ್ಮ ಶಕ್ತಿ, ಸಮಯ ಮತ್ತು ಲಕ್ಷ್ಯ ಇವೆಲ್ಲವನ್ನೂ ಅವರು ಕಾರ್ಯದಲ್ಲಿ ಕೇಂದ್ರೀಕರಿಸಿ, ಟೀಕಾಕಾರರಿಗೆ ಉತ್ತರಿಸುವ ಹೊಣೆಯನ್ನು ಇತಿಹಾಸಕ್ಕೇ ಒಪ್ಪಿಸಿದರು. ಹೀಗಾಗಿಯೇ 1940ರಲ್ಲಿ ಡಾ. ಹೆಡಗೇವಾರರ ನಿಧನವಾದಾಗ ಅದೇ ಅಧಿಕಾರಿಯವರು ಅವರ ಅಭಿಮಾನಿಗಳಾಗಿ ಪರಿವರ್ತಿತರಾಗಿದ್ದರು ಹಾಗೂ ಅವರ ಬಗ್ಗೆ ಬರೆಯಲಾಗಿದ್ದ ಲೇಖನಗಳನ್ನು ಸಂಗ್ರಹಿಸಿ ಒಂದು ಪುಸ್ತಕವನ್ನೂ ಪ್ರಕಟಿಸಿದ್ದರು. ಓರ್ವ ವ್ಯಕ್ತಿ ಸಂಯಮಿ, ಧೈರ್ಯಶಾಲಿ ಹಾಗೂ ದೃಢ ಸಂಕಲ್ಪದ ಕಲ್ಲು ಬಂಡೆಯಂತಿದ್ದ, ಅವನು ಎಂತಹುದೇ ಟೀಕೆಯ ಪ್ರವಾಹವನ್ನೂ ಎದುರಿಸಬಲ್ಲ. ಸಂಘದ ವಿಚಾರವನ್ನು ಸಮಾಜದ ಮುಂದಿರಿಸುವ ಸಲುವಾಗಿ ವಿನಾಯಕ ರಾವ್ ಆಪ್ಟೆ ಅವರು 'ರಾಷ್ಟ್ರಧರ್ಮ' ಎಂಬ ಸಾಪ್ತಾಹಿಕವನ್ನು ಪ್ರಕಟಿಸಲು ನಿರ್ಧರಿಸಿದಾಗ, ಡಾ.ಹೆಡಗೇವಾರರು 1937 ರ ನವೆಂಬರ್ 10 ರಂದು ಬರೆದ ಪತ್ರದಲ್ಲಿ:

"ರಾಷ್ಟ್ರಧರ್ಮವು ನಮ್ಮದೇ ವಿಚಾರಧಾರೆಯನ್ನು ಯಾವಾಗಲೂ ಪ್ರತಿಪಾದಿಸುವುದೆಂಬ ಬಗ್ಗೆ ಸ್ವಲ್ಪವೂ ಸಂದೇಹವಿಲ್ಲ. ಆದರೆ ಬೇರೆ ಬೇರೆಯವರು ಎಬ್ಬಿಸುವ ದಾಂಧಲೆಗಳಿಗೆ ಪ್ರತ್ಯುತ್ತರ ನೀಡುವುದರಲ್ಲಿ ನೀವು ಕೊಚ್ಚಿಹೋಗಬೇಡಿ. ಇತ್ತೀಚಿನ ದಿನಗಳಲ್ಲಿ ನಿಮ್ಮ ಪ್ರದೇಶದ ಪತ್ರಿಕೆಗಳಲ್ಲಿ ಸಂಘದ ವಿರುದ್ಧ ಸುಳ್ಳು ಆಕ್ಷೇಪಗಳಿಂದ ಕೂಡಿದ ಆರೋಪವನ್ನು ಹೊರಿಸಲಾಗುತ್ತಿದೆ. ಆರೋಪಗಳಿಗೆ – ಅವು ಪತ್ರಿಕೆಗಳಲ್ಲಿ ಪ್ರಕಟಿತವಾಗಿರಲಿ ಅಥವಾ ಸಾರ್ವಜನಿಕ ಸಭೆಗಳಲ್ಲಿ ಹೇಳಿದುದಾಗಿರಲಿ – ನಾವು ಉತ್ತರ ನೀಡಬೇಕಾದ ಅಗತ್ಯವೇನೂ ಇಲ್ಲ. ಅವುಗಳನ್ನು ಕಂಡೂ ಕಾಣದಂತೆ ಇರುವುದೇ ಲೇಸು" ಎಂದು ಬರೆದಿದ್ದರು.

## ರಾಮ ಸೇನಾ

ಹಿಂದೂ ಮಹಾಸಭೆ ದಿನ ಕಳೆದಂತೆ ಹೆಚ್ಚೆಚ್ಚು ರಾಜಕಾರಣದಲ್ಲಿ ಆಸಕ್ತಿ ವಹಿಸುತ್ತಿದ್ದರೂ, ಅದಕ್ಕೆ ಸಂಘಟನಾತ್ಮಕ ರಚನೆ ಹೆಚ್ಚು ಕಡಿಮೆ ಇರಲೇ ಇಲ್ಲ. ಕಾಂಗ್ರೆಸ್‌ನಿಂದ ದೂರವಾಗಿ ಮಹಾಸಭೆಯ ಜತೆ ನಂಟು ಬೆಳೆಸಲು ಹಿಂದೂಗಳಲ್ಲಿ ಹೆಚ್ಚಿನವರು ಸಿದ್ಧರಿರಲಿಲ್ಲ. ಮಹಾಸಭೆಯ ವಿಚಾರದಲ್ಲಿ ಅವರಿಗೆ ಸಹಾನುಭೂತಿ ಇದ್ದರೂ ತನ್ನ ಸಂಘಟನೆಯೇ ದುರ್ಬಲವಾಗಿದ್ದ ಕಾರಣದಿಂದಾಗಿ ಅವರನ್ನು ತನ್ನ ವೇದಿಕೆಯಡಿಯಲ್ಲಿ ತರಲು ಮಹಾಸಭೆಗೇ ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ಮಹಾಸಭೆಯಲ್ಲಿದ್ದವರು ಸಂಘವನ್ನು ಆಸೆ ಮತ್ತು ಒಂದು ರೀತಿಯಲ್ಲಿ ತಮ್ಮ ಹಕ್ಕು ಎಂಬಂತಹ ಮನೋಭಾವದಿಂದಲೇ ನೋಡುತ್ತಿದ್ದರು. ಭಾಗಾನಗರ ಸತ್ಯಾಗ್ರಹದ ವಿವಾದ ಮತ್ತು ಆವೇಶ ಇನ್ನೂ ತಣ್ಣಗಾಗುವ ಮೊದಲೇ ಮಹಾಸಭೆಯು ಇನ್ನೊಂದು ಹೊಸ ವಿವಾದವನ್ನು ಹುಟ್ಟು ಹಾಕಿತು. 1939ರ ಸೆಪ್ಟೆಂಬರ್‌ನಲ್ಲಿ 'ಹಿಂದೂ ಮಿಲಿಶಿಯಾ' ಎಂಬ ಸ್ವಯಂಸೇವಕ ಸಂಘಟನೆಯೊಂದನ್ನು ಆರಂಭಿಸಲು ಮಹಾಸಭೆಯು ನಿರ್ಧರಿಸಿತು. ಈ ಸಂಬಂಧದ ಬೈಠಕ್‌ನಲ್ಲಿ ಪಾಲ್ಗೊಳ್ಳಲು ಡಾ. ಮುಂಜೆ ಅವರು ಡಾ.

ಹೆಡಗೇವಾರರಿಗೆ ಪತ್ರ ಬರೆದು ಆಗ್ರಹಪೂರ್ವಕವಾಗಿ ಆಮಂತ್ರಿಸಿದ್ದರು. ಆದರೆ ಡಾ. ಹೆಡಗೇವಾರರು ಅದಕ್ಕೆ ಸರ್ವಥಾ ಒಪ್ಪಲಿಲ್ಲ. 1939ರ ಸೆಪ್ಟೆಂಬರ್ 30ರಂದು ಡಾ. ಹೆಡಗೇವಾರರು ಅವರಿಗೆ ತಮ್ಮ ಉತ್ತರ ಬರೆದರು:

"ಪ್ರವಾಸ ಮಾಡಲು ನನಗೆ ಆರೋಗ್ಯಾನುಕೂಲವಿಲ್ಲದ ಕಾರಣದಿಂದಾಗಿ ಅಕ್ಟೋಬರ್ 8ರ ಪುಣೆಯ ಬೈಠಕ್‌ಗೆ ನನಗೆ ಬರಲು ಸಾಧ್ಯವಾಗುವುದಿಲ್ಲ. ನೀವೇನಾದರೂ ಈ ಬೈಠಕ್‌ನ್ನು ನಾಗಪುರದಲ್ಲಿಯೇ ಏರ್ಪಡಿಸಲಾಗುವುದು ಎಂದರೂ ಅದೇ ದಿನ ನಾಗಪುರ ಜಿಲ್ಲೆಯ ಸಂಘದ ಕಾರ್ಯಕರ್ತರ ಬೈಠಕ್ ಇರುವ ಕಾರಣದಿಂದಾಗಿ ಆಗಲೂ ನನಗೆ ಅದರಲ್ಲಿ ಪಾಲ್ಗೊಳ್ಳಲು ಅನುಕೂಲವಿಲ್ಲ." ಮತ್ತೂ ಮುಂದುವರಿದು 'ಹಿಂದೂ ಮಿಲಿಶಿಯ' ಸಂಬಂಧದಲ್ಲಿ ತಮ್ಮ ಹೆಸರನ್ನು ಯಾವುದೇ ಪ್ರಸಂಗದಲ್ಲೂ ಸೇರಿಸಬೇಡಿ ಎಂದು ಸಹ ಅವರು ಡಾ. ಮುಂಜೆ ಅವರಿಗೆ ಆಗ್ರಹಪೂರ್ವಕವಾಗಿ ತಿಳಿಸಿದರು. ಆದರೆ ಡಾ. ಮುಂಜೆ ಅವರು ಡಾ. ಹೆಡಗೇವಾರರ ಪತ್ರವನ್ನು ಪೂರಾ ಅಲಕ್ಷಿಸಿ 'ಹಿಂದೂ ಮಿಲಿಶಿಯಾ'ಗೆ ಸಂಬಂಧಿಸಿದ ಮನವಿಯಲ್ಲಿ ಅವರ ಹೆಸರನ್ನೂ ಸೇರಿಸಿದರು. ಡಾ. ಹೆಡಗೇವಾರರು ತಮ್ಮ ಹೆಸರನ್ನು ಎಳೆದು ತರಬಾರದೆಂದು ಇನ್ನೊಮ್ಮೆ ಅವರನ್ನು ವಿನಂತಿಸಿದರು ಹಾಗೂ ಹಿಂದೂ ಮಹಾಸಭೆಯ ವ್ಯೂಹದಿಂದ ತಮ್ಮನ್ನು ಪೂರಾ ಪ್ರತ್ಯೇಕಿಸಿಕೊಂಡರು.

ಆದರೆ ಡಾ. ಹೆಡಗೇವಾರರ ಸಂಘಟನಾ ಕೌಶಲ್ಯ, ಅವರ ಕೀರ್ತಿ ಮತ್ತು ಸಂಪೂರ್ಣ ವಿಶ್ವಾಸಾರ್ಹತೆ ಇವುಗಳಿಂದಾಗಿ ಹಿಂದೂ ಮಹಾಸಭೆ ಅವರನ್ನು ಬಿಟ್ಟುಬಿಡಲು ಸಿದ್ಧವಿರಲಿಲ್ಲ. ಆರು ತಿಂಗಳುಗಳ ನಂತರ 1940ರ ಮಾರ್ಚ್ 17ರಂದು ಮಹಾಸಭೆಯು 'ರಾಮಸೇನಾ' ಎಂಬ ಹೊಸ ಸ್ವಯಂಸೇವಕ ದಳವನ್ನು ಹುಟ್ಟುಹಾಕಿತು. ಅದರ ಮೂಲಕ ಸಂಘಕ್ಕೆ ಸಮಾನಾಂತರವಾದ ಬೇರೊಂದು ಸ್ವಯಂಸೇವಕ ಸಂಘಟನೆಯನ್ನು ಕಟ್ಟಿಬೆಳೆಸುವುದೇ ಮಹಾಸಭೆಗಿದ್ದ ಯೋಜನೆ. 'ರಾಮಸೇನಾ' ಆರಂಭವಾಗಿದ್ದುದು ಆಕ್ರಮಣಕಾರಿ ಹಿಂದುತ್ವದ ಉದ್ದೇಶದಿಂದ. ಮಹಾಸಭೆಗೆ ಸಂಬಂಧಿಸಿದ ಸಂಘದ ತಟಸ್ಥ ನಿಲುವಿನ ಕಾರಣದಿಂದಾಗಿಯೇ ರಾಮಸೇನಾವನ್ನು ಪ್ರತ್ಯೇಕವಾಗಿ ಆರಂಭಿಸಲು ಮಹಾಸಭೆಯು ಯೋಜಿಸಿತು. ಸಂಘದ ಅಂತಹ ನಿಲುವಿನ ಕುರಿತು ಮಹಾಸಭಾದ ಅಸಮಾಧಾನವು "ಹಿಂದೂಗಳ ಸೈನಿಕ ಶಿಕ್ಷಣದ ದ್ರೋಣಾಚಾರ್ಯ ಪೂಜ್ಯ ಡಾ. ಹೆಡಗೇವಾರರು ನಾಗಪುರದಲ್ಲಿ ಒಂದು ನಿಷ್ಪಕ್ಷ ಸಂಘಟನೆಯೊಂದನ್ನು ಆರಂಭಿಸಿದ್ದಾರೆ" ಎಂಬ ಮಾತುಗಳಿಂದಲೇ ಸ್ಪಷ್ಟವಾಗಿ ಬೆಳಕಿಗೆ ಬಂದಿದೆ. ಮಾರ್ಚ್ 27ರಂದು 'ರಾಮಸೇನೆ'ಯ ಪದಾಧಿಕಾರಿಗಳ ಹೆಸರುಗಳ ಸೂಚಿ ಪ್ರಕಟವಾಯಿತು. ಅದರಲ್ಲಿ ಡಾ. ಹೆಡಗೇವಾರರ ಹೆಸರು ಸಹ ಸೇರಿತ್ತು. ರಾಜಕಾರಣದ ಆಟದಲ್ಲಿ ಮಹಾಸಭೆ ನೈತಿಕತೆಯ ಎಲ್ಲ ಎಲ್ಲೆಗಳನ್ನು ಮೀರಿ ಮುಂದುವರಿದಿರುವುದು ಇದರಿಂದ ಸ್ಪಷ್ಟವಾಯಿತು. ತನ್ನ ಹೆಸರನ್ನು ಈ ಸೂಚಿಯಲ್ಲಿ ಸೇರಿಸಲಾದುದು ಯಾವುದೋ ಸಂಚಿನ ಭಾಗವಾಗಿರಬಹುದೆಂದು ತಿಳಿಸುತ್ತಾ ಡಾ. ಹೆಡಗೇವಾರರು ಈ ಸಂಬಂಧದಲ್ಲಿ ತಮ್ಮ ಬಲವಾದ ಅಸಮಾಧಾನವನ್ನು ಪತ್ರಿಕೆಗಳ ಮೂಲಕ ಬಹಿರಂಗ ಪಡಿಸಿದರು. ಆ ದಿನಗಳಲ್ಲಿ ಅವರು ನಿಸರ್ಗ ಚಿಕಿತ್ಸೆಗಾಗಿ ಬಿಹಾರಿನ ರಾಜಗೀರ್‌ದಲ್ಲಿದ್ದರು. ರಾಮಸೇನಾದ ಸೂಚಿಯಲ್ಲಿ ಅವರ ಹೆಸರನ್ನು ಒಳಪಡಿಸಲಾದುದನ್ನು ಅವರಿಗೆ ತಿಳಿಸಿದವರು ಗೋಲ್ವಾಳ್ಕರರು. ಅದು ಗೊತ್ತಾದ ಕೂಡಲೇ ಗೋಲ್ವಾಳ್ಕರ್‌ರಿಗೆ ತಂತಿ ಮೂಲಕ ಸಂದೇಶ ರವಾನಿಸಿ, ತಮ್ಮ ಹೆಸರಿನ ಕುರಿತು ಗೊಂದಲವನ್ನು ನಿವಾರಿಸುವಂತೆ ಡಾ. ಹೆಡಗೇವಾರರು ತಿಳಿಸಿದರು. "ರಾಮಸೇನಾದ

ಜತೆಯಲ್ಲಿ ಡಾ. ಹೆಡಗೇವಾರರ ಹೆಸರನ್ನು ಅವರಿಗೆ ತಿಳಿಸದೆ ಮತ್ತು ಸಮ್ಮತಿಯನ್ನು ಪಡೆಯದೆ ಸೇರಿಸಲಾಗಿದೆ. ಅವರಿಗೆ ಅದರಲ್ಲಿ ಯಾವುದೇ ವಿಧದ ಸಂಬಂಧವೂ ಇಲ್ಲ" ಎಂಬ ನಿರಾಕರಣದ ಹೇಳಿಕೆ 'ಮಹಾರಾಷ್ಟ್ರ'ದಲ್ಲಿ ಪ್ರಕಟವಾಯಿತು.

ಇಂತಹ ಗೊಂದಲದ ಸೃಷ್ಟಿಯಲ್ಲಿ ಕೇವಲ 'ರಾಮಸೇನಾ' ಮಾತ್ರವಲ್ಲ. ಸ್ಥಾನೀಯ ಮಟ್ಟದಲ್ಲೂ ಸಂಘಕ್ಕೆ ಎದುರಾಳಿಯಾಗಿ ಮಹಾಸಭಾದ ನಾಯಕರು ಅಲ್ಲಲ್ಲಿ ಅನೇಕ ಸಂಘಟನೆಗಳನ್ನು ಹುಟ್ಟುಹಾಕಿದ್ದರು. ಇದರಲ್ಲಿ 'ಹಿಂದೂ ರಾಷ್ಟ್ರದಳ', 'ಶಕ್ತಿ ದಳ', 'ಹಿಂದೂ ಸೇವಾ ದಳ' ಮತ್ತು ನಾಥೂರಾಮ ಗೋಡ್ಸೆಯವರ 'ಹಿಂದೂ ರಾಷ್ಟ್ರ ಸೇನಾ' ಮೊದಲಾದವು ಉಲ್ಲೇಖಿಸಲ್ಪಡಬಹುದಾದ ಕೆಲವು. ಇವೆಲ್ಲವೂ ಸಂಘದ ಸಿದ್ಧಾಂತ ಮತ್ತು ಕಾರ್ಯದ ಪದ್ಧತಿ ಇವೆರಡರಲ್ಲೂ ಭಿನ್ನಾಭಿಪ್ರಾಯ ಹೊಂದಿದ್ದಂತಹವೇ.

ಸಂಘದ ಆರಂಭದ ನಂತರ ಡಾ. ಹೆಡಗೇವಾರರು ಹಿಂದೂ ಜೀವನವನ್ನು ಒಟ್ಟು ರಾಷ್ಟ್ರೀಯ ಜೀವನ ದರ್ಶನದ ರೂಪದಲ್ಲಿ ವಿಕಾಸಗೊಳಿಸಲು ಮತ್ತು ಹಿಂದೂಗಳಲ್ಲಿ ವ್ಯಾಪಕವಾಗಿ ಮೈಗೂಡಿದ್ದ ಸಂಕುಚಿತ ಭಾವನೆಗಳನ್ನು ರಾಷ್ಟ್ರೀಯತೆಯ ಮನೋಭಾವದ ಮೂಲಕ ದೂರಗೊಳಿಸಲು ತಮ್ಮೆಲ್ಲ ಲಕ್ಷ್ಯವನ್ನು ಕೇಂದ್ರೀಕರಿಸಿದ್ದರು. ಅದಕ್ಕಾಗಿ ಹಿಂದೂ, ಹಿಂದುತ್ವ ಮತ್ತು ಹಿಂದೂ ರಾಷ್ಟ್ರ ಇವುಗಳನ್ನು ಅತ್ಯಂತ ವ್ಯಾಪಕವಾಗಿ ಹಾಗೂ ಎಲ್ಲರಿಗೂ ಅರ್ಥವಾಗುವಂತಹ ರೀತಿಯಲ್ಲಿ ವಿವರಿಸುವ ಪ್ರಯತ್ನಗಳು ಆರಂಭವಾದವು. ದೇಶಭಕ್ತಿ, ಮಾತೃಭೂಮಿಯ ಬಗ್ಗೆ ಶ್ರದ್ಧೆ, ಪೂರ್ವಜರ ಬಗ್ಗೆ ಅಭಿಮಾನ, ಸಂಸ್ಕೃತಿಯ ಬಗ್ಗೆ ನಿಷ್ಠೆ–ಇವೆಲ್ಲವುಗಳನ್ನು ಆಧರಿಸಿ ಸಂಘದ ಕಾರ್ಯವನ್ನು ಬೆಳೆಸಲು ಮಾಡಲಾಗುತ್ತಿದ್ದ ಪ್ರಯತ್ನಗಳು ಅವು. ಸಣ್ಣ ಸಸಿಯಾಗಿ ಚಿಗುರಿದ ಸಂಘಕಾರ್ಯವನ್ನು ಕ್ರಮೇಣ ವಟವೃಕ್ಷವಾಗಿ ಬೆಳೆಯುವಂತೆ ಮಾಡುವುದಕ್ಕಾಗಿ ಆ ದಿನಗಳಲ್ಲಿ ಡಾ. ಹೆಡಗೇವಾರರ ಪರಿಶ್ರಮವೆಲ್ಲ ಮೀಸಲಾಗಿತ್ತು. ವಿಶೇಷವೆಂದರೆ ಈ ಎಲ್ಲ ಭಾವನೆಗಳನ್ನು, ಐತಿಹಾಸಿಕ ಸತ್ಯ ವಿಚಾರಗಳನ್ನು ಮತ್ತು ತಮ್ಮೆಲ್ಲ ಕಲ್ಪನೆಗಳನ್ನು ಸಹ ಉಗ್ರವಾದ ಭಾಷೆಯಲ್ಲಿ ಮಂಡಿಸುವುದನ್ನೂ ಅವರು ಬಿಟ್ಟುಬಿಟ್ಟರು. ಬದಲಾಗಿ ಹಿಂದುತ್ವ ಮತ್ತು ರಾಷ್ಟ್ರೀಯತೆ ಇವುಗಳನ್ನು ಸ್ವಯಂಸೇವಕರಿಗೆ ಅನೌಪಚಾರಿಕ ಶಿಕ್ಷಣದ ಮೂಲಕ ಮೈಗೂಡಿಸಲು ಅವರು ಲಕ್ಷ್ಯವನ್ನು ಕೇಂದ್ರೀಕರಿಸಿದರು. ವ್ಯಕ್ತಿಯಲ್ಲಾಗಲಿ, ಸಮಾಜದಲ್ಲಾಗಲಿ ಪರಿವರ್ತನೆ ತರಲು ಸಾಧ್ಯವಾಗುವುದು ವಿಚಾರದ ಜತೆಯಲ್ಲಿ ಕಾರ್ಯರೂಪ ಸಂಬಂಧದ ಮೂಲಕವೇ. ಈ ಪ್ರಕ್ರಿಯೆಯಲ್ಲಿ ಸ್ಥಾನಮಾನ, ಕೀರ್ತಿ ಮತ್ತು ವ್ಯಕ್ತಿಗತವಾದ ಸ್ವಾರ್ಥ ಇತ್ಯಾದಿಗಳಿಗೆ ಸ್ಥಾನವೇ ಇರಬಾರದು. ಬದಲಾಗಿ ಕಠೋರವಾದ ಸಂಯಮ, ಸಂಘಟನೆಗಾಗಿ ಶಕ್ತಿ ಹಾಗೂ ಸಮಯದ ಸಮರ್ಪಣೆ ಮತ್ತು ವ್ಯಕ್ತಿಗತವಾಗಿ ಪರಿಶುದ್ಧವಾದ ಜೀವನ ಇವೆಲ್ಲವುಗಳ ಮೇಲೆ ಈ ಪ್ರಕ್ರಿಯೆ ಅವಲಂಬಿತವಾಗಿದೆ. ಯಾವುದೋ ಭಾವೋದ್ವೇಗಕ್ಕೆ ಒಳಗಾಗಿ ಬರುವಂತಹ ಬದಲಾವಣೆ ಹೆಚ್ಚುಕಾಲ ಉಳಿಯುವಂತಹುದಲ್ಲ. ಒರ್ವ ವ್ಯಕ್ತಿಯಲ್ಲಿ ಸಂಘದ ಛಾಪು ಕಾಣುವುದು ಆತ ತನ್ನ ಕೃತಿ ಮತ್ತು ಚಾರಿತ್ರ್ಯದ ಮೂಲಕ ಬೆಳೆಸಿಕೊಂಡಿರುವ ಆತನ 'ನೈತಿಕ ಶಕ್ತಿ' ಯಲ್ಲಿ. ತನ್ನ ವಿದ್ವತ್ತು, ಸಂಪತ್ತು, ಸಮೃದ್ಧಿ ಮತ್ತು ಪ್ರಸಿದ್ಧಿ ಇವೆಲ್ಲವುಗಳನ್ನೂ ಆತ ಸಮಾಜದ ಹಿತಕ್ಕಾಗಿ ನಿಸ್ವಾರ್ಥ ಭಾವದಿಂದ ಕಾರ್ಯೋಪಯೋಗಿಗೊಳಿಸಿದಾಗ ಮಾತ್ರ ಅವುಗಳು ಸಾರ್ಥಕಗೊಳ್ಳುತ್ತವೆ.

ಈ ಕಾರಣಕ್ಕಾಗಿಯೇ ಮಹಾಸಭೆಯ ರೀತಿ ಮತ್ತು ಸಂಘದ ರೀತಿ ಇವುಗಳಲ್ಲಿ ಭಾರೀ ಕಂದಕವುಂಟಾಯಿತು. ಸಾವರಕರರು, ಮುಂಜೆಯವರು ಮತ್ತು ಪರಮಾನಂದರು ಹಿಂದೂಗಳ ಏಕತೆ, ಹಿಂದೂಗಳ ಸಾಮರ್ಥ್ಯ, ಹಿಂದೂ ರಾಷ್ಟ್ರ

ಇವೆಲ್ಲವುಗಳನ್ನು ರಾಜಕಾರಣದ ನಿಟ್ಟಿನಲ್ಲಿ ತಾತ್ಕಾಲಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ, ಹೊರಗಿನ ಆಕ್ರಮಣಕಾರಿಗಳ, ಅದರಲ್ಲೂ ವಿಶೇಷವಾಗಿ ಮುಸಲ್ಮಾನರ ಆಕ್ರಮಣಗಳ ಒರೆಗಲ್ಲ ಮೇಲೆ ಪ್ರತಿಪಾದಿಸುತ್ತಿದ್ದವರು. ಇವುಗಳ ಕುರಿತು ಹೆಚ್ಚೆಚ್ಚು ಹೇಳುವ ಹಾಗೂ ಜನರಿಗೆ ಹಿಂದುತ್ವದ ಶಿಕ್ಷಣ ನೀಡುವ ಮೂಲಕ ಆಗ ವ್ಯಾಪಕವಾಗಿ ಕಾಣಿಸುತ್ತಿದ್ದ ಸಮಾಜದ ಎಲ್ಲ ದೋಷಗಳನ್ನು ದೂರಗೊಳಿಸಬಹುದೆಂಬುದು ಅವರ ನಂಬಿಕೆಯಾಗಿತ್ತು. ಹೀಗಾಗಿ ಮಹಾಸಭೆಗೆ ಅದರ ಸೈದ್ಧಾಂತಿಕ ವಿಚಾರಗಳಲ್ಲಿ ಮುಸ್ಲಿಂ ಲೀಗ್ ಒರೆಗಲ್ಲಾಗಿದ್ದರೆ, ರಾಜಕಾರಣದಲ್ಲಿ ಪ್ರತ್ಯಕ್ಷ ಸ್ಪರ್ಧಿಯಾಗಿದ್ದುದು ಕಾಂಗ್ರೆಸ್. ಆದರೆ ಸಂಘಕ್ಕೆ ಕಾಂಗ್ರೆಸ್ ಜತೆ ಆಗಲಿ, ಬೇರೆ ಇನ್ನಾವುದೇ ಹಿಂದೂ ಸಂಘಟನೆಯ ಜತೆಯಾಗಲಿ ಪೈಪೋಟಿಯಿರಲಿಲ್ಲ. ಇಸವಿ 1945ರ ವರೆಗೆ ಲೀಗ್ ಸಹ ಸಂಘವನ್ನು ಎಂದೂ ಟೀಕಿಸಿರಲಿಲ್ಲ ಮತ್ತು ಸಂಘವು ಸಹ ತನ್ನ ಕಾರ್ಯದ ವಿಸ್ತಾರಕ್ಕೆ ಇಸ್ಲಾಮಿನ ಆತಂಕವನ್ನು ಆಧಾರವಾಗಿ ಮಾಡಿಕೊಂಡಿರಲಿಲ್ಲ.

ಅಷ್ಟಾದರೂ ಸಂಘ ಮತ್ತು ಮಹಾ ಸಭೆ ಇವೆರಡರ ನಡುವಿನ ಭಿನ್ನ ದೃಷ್ಟಿಕೋನಗಳನ್ನು ಡಾ. ಹೆಡಗೇವಾರರು ಬೌದ್ಧಿಕ ಮಟ್ಟದಲ್ಲಿ ಎಂದೂ ವ್ಯಕ್ತಪಡಿಸಲಿಲ್ಲ. ಹಿಂದುತ್ವ ಪರ ಸಂಘಟನೆಗಳನ್ನು ಕಟಕಟೆಯಲ್ಲಿ ಸಲ್ಲಿಸಿ, ಅವುಗಳನ್ನು ದುರ್ಬಲಗೊಳಿಸಲು ಅವರು ಇಷ್ಟಪಡುತ್ತಿರಲಿಲ್ಲ.

## ಡಾ. ಹೆಡಗೇವಾರ್ ಮತ್ತು ಡಾ. ಮುಂಜೆ

ಮಹಾಸಭಾದ ನಾಯಕರ ಪೈಕಿ ಡಾ. ಹೆಡಗೇವಾರರಿಗೆ ಅತಿ ಹೆಚ್ಚು ನಿಕಟವಾಗಿದ್ದವರು ಡಾ. ಮುಂಜೆ ಅವರೇ. ಅದಕ್ಕೆ ಮುಖ್ಯ ಕಾರಣವೆಂದರೆ ಬಾಲ್ಯಕಾಲದಿಂದಲೂ ತಮ್ಮ ದೇಶಭಕ್ತಿ ಮತ್ತು ಆತ್ಮವಿಶ್ವಾಸದ ಭಾವನೆಗಳಿಗೆ ಪೂರಾ ಸಮರ್ಥನೆ ಮತ್ತು ಆಶೀರ್ವಾದ ಸಹ ಲಭಿಸುತ್ತಿದ್ದುದು ಡಾ. ಮುಂಜೆ ಅವರಿಂದ. ಅವರ ಕ್ರಾಂತಿಕಾರಿ ಚಟುವಟಿಕೆಗಳಲ್ಲೂ ಸಕ್ರಿಯ ಸಹಕಾರವಿರುತ್ತಿದ್ದುದು ಡಾ.ಮುಂಜೆ ಅವರಿಂದಲೇ. ಹೀಗಾಗಿ ಡಾ. ಮುಂಜೆ ಅವರಿಂದ ಡಾ. ಹೆಡಗೇವಾರರಿಗೆ ತಮ್ಮ ಕೊನೆತನಕವೂ ಧಾರಾಳವಾದ ಸ್ನೇಹ ದೊರೆತಿದ್ದಲ್ಲಿ, ಇನ್ನೊಂದು ದಿಕ್ಕಿನಲ್ಲಿ ಡಾ. ಹೆಡಗೇವಾರರ ಮನದಲ್ಲಿ ಡಾ. ಮುಂಜೆ ಅವರ ಬಗ್ಗೆ ಅತ್ಯಂತ ಆದರದ ಭಾವ ಸದಾ ತುಂಬಿರುತ್ತಿತ್ತು.

ವ್ಯಕ್ತಿಗತವಾಗಿ ಅವರಿಬ್ಬರ ಪರಸ್ಪರ ಸಂಬಂಧಗಳು ಆತ್ಮೀಯವಾಗಿದ್ದಾಗಲೂ, ಭಾರತದ ಸ್ವಾತಂತ್ರ್ಯ ಹೋರಾಟ, ಹಿಂದೂ ಸಂಘಟನೆಯ ರೀತಿ, ಗುರಿ, ಕಾರ್ಯದ ಪದ್ಧತಿ ಮತ್ತು ಅದರ ಕಾರ್ಯಕ್ರಮಗಳು ಇತ್ಯಾದಿ ಭಿನ್ನವಾಗಿದ್ದವು. ಈಗಾಗಲೇ ಹಲವಾರು ಪ್ರಸಂಗಗಳಲ್ಲಿ ಅವುಗಳ ಉಲ್ಲೇಖವೂ ಆಗಿದೆ. ಉದಾಹರಣೆಗೆ ಹೇಳುವುದಾದಲ್ಲಿ ಅಸಹಕಾರ ಚಳವಳಿ ಮತ್ತು ಕಾನೂನು ಭಂಗ ಆಂದೋಳನ ಇವೆರಡೂ ಪ್ರಸಂಗಗಳಲ್ಲಿ ಡಾ. ಹೆಡಗೇವಾರರ ಚಿಂತನೆಯು ಡಾ. ಮುಂಜೆ ಅವರಿಗಿಂತ ಭಿನ್ನವಾಗಿತ್ತು. ಅದೇ ರೀತಿಯಲ್ಲಿ ಕಾಂಗ್ರೆಸ್ ಮತ್ತು ಮಹಾತ್ಮಾ ಗಾಂಧೀಯವರ ಕುರಿತು ಅವರಿಬ್ಬರ ನಿಲುವುಗಳೂ ಬೇರೆ ಬೇರೆ ವಿಧದವು ಆಗಿದ್ದವು.

ಸಂಘ ಮತ್ತು ಹಿಂದೂ ಮಹಾಸಭಾ ಇವುಗಳ ಕುರಿತು ಅಧ್ಯಯನ ನಡೆಸಿರುವ ಅನೇಕ ಲೇಖಕರು ಸಂಘದ ಸ್ಥಾಪನೆ ಹಾಗೂ ಅದರ ಸಂಘಟನೆಯ ಶೈಲಿ ಮತ್ತು ಸಿದ್ಧಾಂತಗಳ ವಿಕಸನದಲ್ಲಿ ಡಾ. ಮುಂಜೆ ಅವರ ಪಾತ್ರದ ಬಗ್ಗೆ ತುಂಬ ಉತ್ತಮವಾಗಿಯೇ ಕಂಡಿದ್ದಾರೆ. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ತಿಳಿದೊ, ತಿಳಿಯದೆಯೊ ಮಧ್ಯಪ್ರಾಂತದ

ಸರ್ಕಾರವು ಸಹ ಡಾ. ಮುಂಜೆ ಅವರನ್ನೇ ಸಂಘದ ಸ್ಥಾಪಕ ಹಾಗೂ ಅದರ ಸಿದ್ಧಾಂತ ನಿರೂಪಕ ಎಂದೇ ತಿಳಿಯುತ್ತಿತ್ತು. 1934ರಲ್ಲಿ ಪ್ರಾಂತದ ವಿಧಾನಪರಿಷತ್ತಿನಲ್ಲಿ ಸಂಘದ ಕುರಿತು ನಡೆದಿದ್ದ ಸುದೀರ್ಘವಾದ ಚರ್ಚೆಯಲ್ಲಿ ಸಹ ಈ ತಪ್ಪು ಕಲ್ಪನೆ ಸರ್ಕಾರದ ಸದಸ್ಯರ ಮಾತುಗಳಿಂದ ಧಾರಾಳವಾಗಿ ಬೆಳಕಿಗೆ ಬಂದಿದೆ. (ಈ ವಿಷಯವು 'ಐತಿಹಾಸಿಕ ಚರ್ಚೆ' ಎಂಬ ಮುಂದಿನ ಅಧ್ಯಾಯದಲ್ಲಿ ಹೆಚ್ಚು ವಿವರವಾಗಿ ಇದೆ). ಆದರೆ ಈ ಭ್ರಮೆಯು ಮುಂದಿನ ದಿನಗಳಲ್ಲೂ ಅದೇ ರೀತಿಯಲ್ಲಿ ಉಳಿಯಿತು; ಸಂಘದ ಟೀಕಾಕಾರರೂ ಅದನ್ನು ಖಾಯಂ ಆಗಿ ಉಳಿಸಿದರು.

ದುರ್ದೈವವೆಂದರೆ ವಿಧಾನ ಪರಿಷತ್‌ನಲ್ಲಿ ನಡೆದಿದ್ದ ಈ ಚರ್ಚೆಯು ಸಂಘದ ಕುರಿತು ಅಧ್ಯಯನ ನಡೆಸಿದ ಇತರ ಲೇಖಕರ ಲಕ್ಷ್ಯಕ್ಕೂ ಬಂದಿಲ್ಲದಿರುವುದು. ಡಾ. ಮುಂಜೆ ಮತ್ತು ಡಾ. ಹೆಡಗೇವಾರರ ನಡುವೆ ಇರುತ್ತಿದ್ದ ಸೈದ್ಧಾಂತಿಕ ವಿಚಾರಗಳು ಮತ್ತು ಸಂಘಟನಾತ್ಮಕ ಸಂಬಂಧಗಳನ್ನು ತಿಳಿಯಲು ಯಾರೂ ಸಂಶೋಧನೆಯನ್ನೂ ಮಾಡಿಲ್ಲ. ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಇದ್ದಂತೆಯೇ, ಸ್ವರಾಜ್ಯಪ್ರಾಪ್ತಿಯ ನಂತರದ ದಿನಗಳಲ್ಲೂ ಡಾ. ಮುಂಜೆ ಅವರನ್ನು ಸಂಘದ ಸಂಸ್ಥಾಪಕ, ಸಿದ್ಧಾಂತಕಾರ, ಪ್ರೇರಕ-ವ್ಯಕ್ತಿ ಮತ್ತು ಪ್ರಮುಖ ಎಂಬಂತೆಯೇ ಅನೇಕರು ತಿಳಿಯುತ್ತಾರೆ. ಸಂಘದ ಕುರಿತು ಇರುವ ಅನೇಕ ತಪ್ಪು ಕಲ್ಪನೆಗಳ ಪೈಕಿ ಇದೂ ಕೂಡ ಒಂದು. ಚೇತನ ಭಟ್ ಅವರ 'ಹಿಂದೂ ನ್ಯಾಶನಲಿಸಂ' ಎಂಬ ಗ್ರಂಥದಲ್ಲಿ (2001) ಡಾ. ಮುಂಜೆ ಅವರನ್ನು ಸಂಘದ ಸಂಸ್ಥಾಪಕ ಎಂದು ಹೇಳಲಾಗಿದೆ. ಪ್ರಲಯ ಕಾನುಂಗೊ ಅವರ ಗ್ರಂಥ 'ಆರ್.ಎಸ್.ಎಸ್. ಅಂಡ್ ಪಾಲಿಟಿಕ್ಸ್' (2002) ಇದರಲ್ಲೂ ಸಂಘ ಹಾಗೂ ಡಾ. ಹೆಡಗೇವಾರರು, ಸಂಘದ ವಿಚಾರ ಮತ್ತು ಕಾರ್ಯದ ಪದ್ಧತಿ ಇವುಗಳ ಸಲುವಾಗಿ ಡಾ. ಮುಂಜೆ ಅವರ ಮಾರ್ಗದರ್ಶನದ ಮೇಲೆ ಅವಲಂಬಿತವಾಗಿದ್ದವು ಎಂದು ಹೇಳಲಾಗಿದೆ. ಇನ್ನೋರ್ವ ವಿದೇಶಿ ಸಂಶೋಧಕ ವಿದ್ಯಾರ್ಥಿನಿ ಕೈಸೋಲರಿ ಮಾರ್ಜಿಯಾ, ಡಾ. ಹೆಡಗೇವಾರರಿಗೆ ಮತ್ತು ಸಂಘಕ್ಕೂ ಫ್ಯಾಸಿಸಂ ಮತ್ತು ಮುಸೋಲಿನಿ ಜತೆ ಸಂಬಂಧವು ಮುಂಜೆ ಅವರ ಮೂಲಕ ಆಗಿರುವಂಥದು ಎಂದು ತನ್ನ ಪ್ರಬಂಧದಲ್ಲಿ ಬರೆದಿದ್ದಾಳೆ. ಡಾ. ಮುಂಜೆ ಅವರೇ ಸಂಘದ ಪ್ರಮುಖ ಸಿದ್ಧಾಂತಕಾರರಾಗಿದ್ದರು ಹಾಗೂ ಸಂಘವು ಪೂರ್ತಿಯಾಗಿ ಅವರ ಹಿಡಿತದಲ್ಲೇ ಇತ್ತು ಎಂಬುದು ಆಕೆಯ ದೃಢವಾದ ನಂಬಿಕೆಯಾಗಿದೆ. "ಫ್ಯಾಸಿಸಂನ ಸಂಪರ್ಕಕ್ಕೆ ಬಂದ ಮೊಟ್ಟಮೊದಲ ಹಿಂದೂ ರಾಷ್ಟ್ರವಾದಿಯೆಂದರೆ ಡಾ. ಬಿ. ಎಸ್. ಮುಂಜೆಯವರು. ಅವರೋರ್ವ ರಾಜಕಾರಣಿಯಾಗಿದ್ದು ಸಂಘದ ಜತೆ ಅತಿ ನಿಕಟವಾದ ಸಂಬಂಧವುಳ್ಳವರೂ ಆಗಿದ್ದವರು. ವಾಸ್ತವಿಕವಾಗಿಯೂ ಡಾ. ಮುಂಜೆ ಅವರು ಡಾ. ಹೆಡಗೇವಾರರಿಗೆ ಗುರುವಾಗಿದ್ದು ಅವರಿಬ್ಬರ ನಡುವೆ ಬಲವಾದ ಮೈತ್ರಿ ಇತ್ತು"[2] ಎಂದು ಆಕೆ ಬರೆದಿದ್ದಾಳೆ.

ಡಾ. ಮುಂಜೆ ಅವರು ದುಂಡು ಮೇಜು ಪರಿಷತ್ತಿನಲ್ಲಿ ಪಾಲ್ಗೊಳ್ಳಲು 1931ರಲ್ಲಿ ಲಂಡನ್‌ಗೆ ಹೋಗಿದ್ದರು. ಲಂಡನ್‌ನಿಂದ ವಾಪಸ್ ಬರುವ ದಾರಿಯಲ್ಲಿ 1931ರ ಮಾರ್ಚ್ 19ರಂದು ಅವರು ಇಟಲಿಯಲ್ಲಿ ಮುಸೋಲಿನಿ ಅವರನ್ನು ಭೇಟಿಯಾಗಿದ್ದುದೂ ಉಂಟು. ಅದು ಅವರ ವ್ಯಕ್ತಿಗತವಾದ ಯೋಜನೆಯಂತೆ ಆದುದು ಮತ್ತು ಹೆಚ್ಚೆಂದರೆ ಅದನ್ನು ಮಹಾ ಸಭಾದ ಜತೆಯಲ್ಲಿ ಗಂಟು ಹಾಕಬಹುದು. ಆದರೆ ಡಾ. ಮುಂಜೆ

2 ಕೈಸೋಲರಿ ಮಾರ್ಜಿಯಾ, 'ಹಿಂದುತ್ವಾಸ್ ಫಾರಿನ್ ಟೈ ಅಪ್ ಇನ್ ಥರ್ಟೀಸ್', ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, 22 ಜನವರಿ 2000

ಅವರು ಸಂಘದ ಸ್ಥಾಪಕರು ಮತ್ತು ಅದರ ಸಿದ್ಧಾಂತಕಾರರು ಎಂಬಂತಹ ಭ್ರಮೆಯನ್ನು ಬ್ರಿಟಿಷ್ ಆಳ್ವಿಕೆಯ ಕಾಲದಿಂದಲೂ ಬೆಳೆಸಲಾಗಿದ್ದ ಕಾರಣದಿಂದಾಗಿಯೇ ಈ ಭೇಟಿಗೆ ಸಂಘದ ಜತೆಯೂ ಸಂಬಂಧವನ್ನು ಜೋಡಿಸಲಾಗುತ್ತಿದೆ. ಹೀಗಾಗಿ ಡಾ. ಹೆಡಗೇವಾರರ ಮತ್ತು ಡಾ.ಮುಂಜೆಯವರ ನಡುವಿನ ಸೈದ್ಧಾಂತಿಕ ಹಾಗೂ ಸಂಘಟನೆಯ ಮಟ್ಟದ ಯಥಾರ್ಥ ಸಂಬಂಧಗಳ ಮೇಲೆ ಹೆಚ್ಚಿನ ಬೆಳಕು ಚೆಲ್ಲುವುದು ಅಗತ್ಯವೆನಿಸುತ್ತದೆ.

ಈಗಾಗಲೇ ಉಲ್ಲೇಖಿತವಾಗಿರುವಂತೆ ಡಾ. ಮುಂಜೆ ಅವರ ಅಪೇಕ್ಷೆ ಎಷ್ಟೇ ಇದ್ದರೂ ಮಹಾಸಭೆಯ ಆಶ್ರಯದಲ್ಲಿನ ಸಂಘಟನೆಗಳಿಂದ ಡಾ. ಹೆಡಗೇವಾರರು ತಾವು ದೂರವಾಗಿದ್ದುದಷ್ಟೇ ಅಲ್ಲ, ಸಾಂಕೇತಿಕವಾಗಿಯೂ ಅವುಗಳ ಜತೆ ಸಂಬಂಧವಿರಿಸಿಕೊಂಡವರಾಗಿರಲಿಲ್ಲ. ಮಹಾಸಭಾದ ಕಾರ್ಯಕ್ರಮಗಳಲ್ಲೂ ಅವರು ಪಾಲ್ಗೊಳ್ಳುತ್ತಿದ್ದುದು ತೀರಾ ಕಡಿಮೆ. ಮಹಾಸಭಾದ ಬೈಠಕ್‌ಗಳಲ್ಲಿ ಅವರ ಅನುಪಸ್ಥಿತಿಯ ದಾಖಲೆಗಳಿಂದಲೇ ಇದನ್ನು ತಿಳಿಯಬಹುದಾಗಿದೆ.

ಡಾ. ಮುಂಜೆ ಅವರಿಗೆ ಸೈನಿಕ ಶಿಕ್ಷಣದಲ್ಲಿ ವಿಶೇಷ ರುಚಿಯಿತ್ತು. ಅವರು ಆ ನಿಟ್ಟಿನಲ್ಲಿ ಸದಾ ಪ್ರಯತ್ನಶೀಲರಾಗಿ ಇರುತ್ತಿದ್ದುದೂ ಉಂಟು. ಡಾ. ಹೆಡಗೇವಾರರು ಆರಂಭಿಸಿದ ಶಾಖಾರೂಪದ ಚಟುವಟಿಕೆಗಳನ್ನು ಸಹ ಡಾ. ಮುಂಜೆ ಅವರು ಹಿಂದೂಗಳಿಗೆ ಸೈನಿಕ ತರಬೇತಿ ಎಂಬ ರೀತಿಯಲ್ಲೆ ನೋಡುತ್ತಿದ್ದವರು. ವಾಸ್ತವಿಕವಾಗಿ ಸಂಘದ ಶಾಖೆಗಳಲ್ಲಿ ನೀಡಲಾಗುವ ಶಾರೀರಿಕ ಮತ್ತು ಶಸ್ತ್ರ ತರಬೇತಿ ಇವು ಕೇವಲ ಸಾಂದರ್ಭಿಕ ಅಗತ್ಯವನ್ನು ಪೂರೈಸಲಿಕ್ಕಾಗಿ ಮಾತ್ರ ಇರುವಂತಹವು. ಆದರೆ ಶಾಶ್ವತವಾದ ಉದ್ದೇಶವಿರುವುದು ಸ್ವಯಂಸೇವಕರ ಮಾನಸಿಕ ಬೆಳವಣಿಗೆ ಮತ್ತು ಬೌದ್ಧಿಕ ತರಬೇತಿಯದೇ. ಶಾಖೆಯಲ್ಲಿನ ಶಸ್ತ್ರ ಶಿಕ್ಷಣದ ಕುರಿತ ಈ ತಪ್ಪು ಕಲ್ಪನೆಯ ಪರಿಣಾಮವಾಗಿಯೇ ಡಾ. ಮುಂಜೆ ಅವರು ಡಾ. ಹೆಡಗೇವಾರರನ್ನು ಅವರ ಸಮ್ಮತಿ ಪಡೆಯದೆಯೇ 'ಕೇಂದ್ರೀಯ ಹಿಂದೂ ಸೈನಿಕ ಶಿಕ್ಷಾ ಪರಿಷತ್'ನ ಓರ್ವ ಪ್ರಮುಖ ಸದಸ್ಯರನ್ನಾಗಿ ಮಾಡಿದ್ದರು. ಅದರಲ್ಲಿದ್ದ ಸದಸ್ಯರು ಒಟ್ಟು 15 ಮಂದಿ. 1935ರ ಆಗಸ್ಟ್ 20ರಂದು ಡಾ. ಮುಂಜೆ ಅವರು ವಿಶ್ವನಾಥ ರಾವ್ ಕೇಳ್ಕರ್ ಅವರಿಗೆ ಬರೆದಿರುವ ಪತ್ರದಿಂದ, ಡಾ. ಹೆಡಗೇವಾರರ ಸಂಘಟನಾ ಕೌಶಲ್ಯದ ಬಗ್ಗೆ ಅವರಿಗದೆಷ್ಟು ಅಭಿಮಾನವಿತ್ತೆಂಬುದು ಗೊತ್ತಾಗುತ್ತದೆ. ಅವರು ಆ ಪತ್ರದಲ್ಲಿ "ಶ್ರೀ ಬೋಬಡೆ ಮತ್ತು ಡಾ. ಹೆಡಗೇವಾರರನ್ನು ನಾನು ಕೇಂದ್ರೀಯ ಹಿಂದೂ ಸೈನಿಕ ಶಿಕ್ಷಾ ಪರಿಷತ್ತಿನ ಶಾಸಕೀಯ ಅಂಗದ ಸದಸ್ಯರನ್ನಾಗಿ ಸೇರಿಸಿಕೊಂಡಿದ್ದೇನೆ. ಈ ವಿಷಯದಲ್ಲಿ ನಾನು ಅವರೊಂದಿಗೆ ಚರ್ಚಿಸಿಯೂ ಇಲ್ಲ. ಅವರಿಂದ ಪೂರ್ವಸಮ್ಮತಿಯನ್ನು ಸಹ ಕೇಳಿಲ್ಲ. ಇದರ ಸದಸ್ಯರಾಗಬೇಕಾದಲ್ಲಿ ಮುಂಗಡವಾಗಿ ರೂ. ನೂರು ಕೊಡಬೇಕಾಗುತ್ತದೆ. ಡಾ. ಹೆಡಗೇವಾರರ ಪರವಾಗಿ ಶುಲ್ಕವನ್ನು ನಾನೇ ಪಾವತಿ ಮಾಡುವೆ. ಅವರು ಏನೇ ಆದರೂ ನನ್ನ ಜತೆಯಲ್ಲಿ ಅದರ ಶಾಸಕೀಯ ಅಂಗದ ಸದಸ್ಯರಾಗಿರಬೇಕೆಂಬುದು ನನ್ನ ಅಪೇಕ್ಷೆಯಾಗಿದೆ" ಎಂದು ಬರೆದಿದ್ದಾರೆ.

ಆದರೆ ಡಾ. ಹೆಡಗೇವಾರರು ಅದರಲ್ಲಿ ವಿಶೇಷ ಉತ್ಸಾಹವನ್ನೇನೂ ತೋರಲಿಲ್ಲ. ಅವರ ಲಕ್ಷ್ಯವೆಲ್ಲ ಇದ್ದುದು ಸಂಘದ ಮೇಲೆಯೇ. ಅದರ ಒಂದೆರಡು ಬೈಠಕ್‌ಗಳಲ್ಲಿ ಅವರು ಹಾಜರಿದ್ದುದೇನೋ ನಿಜವೇ. ಆದರೆ ಬಹುಪಾಲು ನಿಷ್ಕ್ರಿಯ ಸದಸ್ಯರಾಗಿದ್ದು ಕೇವಲ ಅದರ ಪಟ್ಟಿಯಲ್ಲಿ ಮಾತ್ರ ಅವರ ಹೆಸರಿತ್ತು ಎಂಬುದೇ ಹೆಚ್ಚು ಸೂಕ್ತ.

ಸಂಘದಲ್ಲಿ ಡಾ. ಮುಂಜೆ ಅವರಿಗಿದ್ದ ಸ್ಥಾನವಾದರೊ ಭಾಯಿ ಪರಮಾನಂದ, ವಿನಾಯಕ ದಾಮೋದರ ಸಾವರಕರ, ಲೋಕನಾಯಕ ಅಣೆ, ಜಯಕರ್,

ಎಲ್.ಬಿ. ಭೋಪಟಕರ್ ಮೊದಲಾದ ಹಿಂದೂ ಮಹಾಸಭಾದ ನಾಯಕರಿಗಿದ್ದಷ್ಟೇ ಸಂಘದ ಕಾರ್ಯಕ್ರಮಗಳಲ್ಲಿ ಅತಿಥಿಗಳಾಗಿ, ಕೆಲವೊಮ್ಮೆ ಭಾಷಣಕಾರರಾಗಿ ಅವರನ್ನು ಆಮಂತ್ರಿಸಲಾಗುತ್ತಿತ್ತು. ನೀತಿಗಳನ್ನು ನಿರೂಪಿಸುವುದರಲ್ಲಾಗಲಿ, ಕಾರ್ಯಕ್ರಮಗಳನ್ನು ನಿರ್ಧರಿಸುವುರಲ್ಲಾಗಿರಲಿ ಅತಿಥಿ ಗಣ್ಯರಿಗೆ ಯಾವುದೇ ಪಾತ್ರವಿರುತ್ತಿರಲಿಲ್ಲ. ಹಾಗೆ ನೋಡುವುದಾದಲ್ಲಿ ಡಾ. ಹೆಡಗೇವಾರರು ಸಂಘದ ಕಾರ್ಯಕ್ರಮಗಳಿಗೆ ಸಂಘದ ಪರವಾಗಿದ್ದವರನ್ನು ಮತ್ತು ವಿರುದ್ಧವಾಗಿ ಇದ್ದವರನ್ನೂ ಆಹ್ವಾನಿಸುತ್ತಿದ್ದರು. ಅಭಿಪ್ರಾಯಗಳ ವಿನಿಮಯದ ಒಂದು ವಿಶೇಷ ಪ್ರಯೋಗ ಮಾತ್ರವಾಗಿತ್ತದು. ಒಂದು ಕಾಲದಲ್ಲಿ ಸಂಘದ ಸರಕಾರ್ಯವಾಹರಾಗಿದ್ದ ಬಾಳಾಜಿ ಹುದ್ದಾರ್ ಅವರು ಮುಂದೆ ಮಾರ್ಕ್ಸ್‌ವಾದಿಯಾಗಿ ಸಂಘದ ಟೀಕಾಕಾರರಾದ ಮೇಲೂ ಸಹ ಸಂಘದ ಕಾರ್ಯಕ್ರಮಗಳಲ್ಲಿ ಆಹ್ವಾನಿತರಾಗಿರುತ್ತಿದ್ದರು. ಅದರರ್ಥವೇ, ಸಂಘವು ತನ್ನ ನೀತಿ ನಿರೂಪಿಸುವುದರಲ್ಲಾಗಲಿ ಕಾರ್ಯಕ್ರಮಗಳನ್ನು ನಿರ್ಧರಿಸುವುದರಲ್ಲಾಗಲಿ ಮತ್ತು ಸಂಘಟನೆಯ ಇನ್ನಿತರ ವಿಧದ ಕೆಲಸಗಳಲ್ಲಾಗಲಿ ಹೊರಗಿನ ಯಾವ ವ್ಯಕ್ತಿಗಳ ಮೇಲೂ ಅವಲಂಬಿತವಾಗಿರುತ್ತಿರಲಿಲ್ಲ ಎಂದು.

ಡಾ. ಮುಂಜೆ ಮತ್ತು ಡಾ. ಹೆಡಗೇವಾರರ ನಡುವೆ ವೈಚಾರಿಕ ಮಟ್ಟದಲ್ಲೂ ಸಾಕಷ್ಟು ಭಿನ್ನಾಭಿಪ್ರಾಯಗಳಿರುತ್ತಿದ್ದವು. ಆದರೆ ಇಬ್ಬರೂ ಸಹ ಬಹಿರಂಗವಾಗಿ ಅವುಗಳನ್ನು ತೋರಿಸಿಕೊಳ್ಳುತ್ತಿರಲಿಲ್ಲ ಎಂಬುದು ಬೇರೆ ಮಾತು. ಬ್ರಿಟಿಷ್ ಸಾಮ್ರಾಜ್ಯವಾದ ಮತ್ತು ಅಲ್ಪಸಂಖ್ಯಾತ ಸಮುದಾಯದ ಸಂಬಂಧದಲ್ಲಿ ಡಾ. ಮುಂಜೆ ಅವರ ನಿಲುವುಗಳನ್ನು ಡಾ. ಹೆಡಗೇವಾರರು ಎಂದೂ ಒಪ್ಪಿರಲಿಲ್ಲ. ಹಿಂದೂ ಮಹಾಸಭಾದ ನಾಯಕರ ಪ್ರತಿನಿಧಿ ಮಂಡಲವು ವೈಸ್‌ರಾಯ್ ಮತ್ತು ಇನ್ನಿತರ ಸಾಮ್ರಾಜ್ಯವಾದಿ ಆಡಳಿತಗಾರರನ್ನು ಭೇಟಿಯಾಗುತ್ತಿತ್ತು. ಅವರಿಗಿದ್ದ ಬಯಕೆಯೆಂದರೆ ಕಾಂಗ್ರೆಸ್‌ಗೆ ಸಮಾನಾಂತರವಾಗಿ ಮತ್ತು ಮುಸ್ಲಿಂ ಲೀಗ್‌ನ ರೀತಿಯಲ್ಲೇ ತಮ್ಮ ರಾಜಕೀಯ ಸ್ಥಾನಮಾನವನ್ನೂ ಮಾಡಿಕೊಳ್ಳಬೇಕೆಂಬುದು ಮಾತ್ರ. ಮಹಾಸಭಾದ ಪ್ರತಿನಿಧಿಯಾಗಿ ಡಾ. ಮುಂಜೆ ಅವರು ಪ್ರಥಮ ಮತ್ತು ದ್ವಿತೀಯ ದುಂಡು ಮೇಜು ಪರಿಷತ್ತಿನಲ್ಲಿ ಭಾಗವಹಿಸಲು ಲಂಡನ್‌ಗೆ ಹೋಗಿದ್ದುದೂ ಇದೇ ಹಿನ್ನೆಲೆಯಲ್ಲಿ. ಬ್ರಿಟಿಷ್ ಆಡಳಿತಾಧಿಕಾರಿಗಳ ಅಥವಾ ಸರ್ಕಾರದ ಬಳಿ ತನ್ನ ಪ್ರತಿನಿಧಿ ಮಂಡಲವನ್ನು ಭೇಟಿಗೆ ಕಳುಹಿಸದಿದ್ದ ಹಾಗೂ ಯಾವುದೇ ವಿಧದ ಸಂವಾದಕ್ಕಾಗಿ ಅಪೇಕ್ಷೆ ಪಡದಿದ್ದ ಏಕಮಾತ್ರ ಅಖಿಲ ಭಾರತೀಯ ಸಂಘಟನೆಯೆಂದರೆ ಸಂಘವೇ. ಇಷ್ಟು ಮಾತ್ರವಲ್ಲ. ಮುಂದೆ 1934ರಲ್ಲಿ ಸಂಘದ ಮೇಲೆ ಕಾನೂನಿನ ದಬಾವಣೆ ಹಾಗೂ ರಾಜಕೀಯ ಒತ್ತಡ ಹೇರುವ ಪ್ರಯತ್ನ ನಡೆದಾಗಲೂ, ಸಂಘವು ಸಾಮ್ರಾಜ್ಯವಾದಿ ಆಡಳಿತಗಾರರ ಬಳಿ ಯಾವುದೇ ಬೇಡಿಕೆ ಸಲ್ಲಿಸುವ ಅಥವಾ ವಿವರಣೆ ನೀಡುವ ಸಲುವಾಗಿ ಮುಂದಾಗಲಿಲ್ಲ. ಡಾ. ಹೆಡಗೇವಾರರು ಸಾಮ್ರಾಜ್ಯವಾದಿಗಳ ಜತೆ ಸಂವಾದಕ್ಕಾಗಿ ಆಯ್ಕೆ ಎಂದು ಮಾಡಿಕೊಂಡಿದ್ದ ಒಂದೇ ಮಾರ್ಗವೆಂದರೆ – ಅದು ಸಂಘರ್ಷದ್ದು. ಈ ಸಂಘರ್ಷವು ಹಿಂಸಾತ್ಮಕವೇ ಅಥವಾ ಅಹಿಂಸಾತ್ಮಕವೇ ಎಂಬುದು ಅವರ ಮಟ್ಟಿಗೆ ಮಹತ್ವದ್ದಾಗಿರಲಿಲ್ಲ. ಸಾಮ್ರಾಜ್ಯವಾದದ ವಿರುದ್ಧ ಸಂಘವನ್ನು ಒಂದು ಶುದ್ಧ ರಾಷ್ಟ್ರೀಯತೆಯ ಭೂಮಿಕೆಯ ಮೇಲೆ ರೂಪಿಸುವುದರಲ್ಲಿ ಅವರು ಅನುಸರಿಸುತ್ತಿದ್ದ ಮಾರ್ಗವು ನಿಜಕ್ಕೂ ಒಂದು ಕಠೋರ ವ್ರತವೇ ಎಂದರೂ ತಪ್ಪಾಗಲಾರದು.

ಮುಸಲ್ಮಾನ ಸಮಸ್ಯೆಯ ಬಗ್ಗೆ ಮಹಾಸಭಾದ ರೀತಿಯಲ್ಲಿ ಡಾ.ಹೆಡಗೇವಾರರು ಉದ್ರಿಕ್ತರಾಗುತ್ತಿದ್ದವರೂ ಅಲ್ಲ, ಹಿಡಿಯುಡಿಗೊಳ್ಳುತ್ತಿದ್ದವರೂ ಅಲ್ಲ. ತನ್ನ ದುರ್ಬಲತೆಯ

ಕಾರಣದಿಂದಾಗಿಯೇ ಹಿಂದೂ ಸಮಾಜಕ್ಕೆ ಆಗಾಗ ಹಲವಾರು ವಿಧದ ಸಮಸ್ಯೆಗಳು ಎದುರಾಗುತ್ತಿವೆ ಎಂಬುದರ ಅರಿವು ಅವರಿಗಿತ್ತು. ಅದಕ್ಕಿರುವ ಪರಿಹಾರವೆಂದರೆ ಸಮಾಜವನ್ನು ಬಲಗೊಳಿಸಿ, ಅದರಲ್ಲಿ ನಿರಂತರವಾಗಿ ರಾಷ್ಟ್ರೀಯತೆಯು ಪ್ರವಹಿಸುವಂತೆ ಮಾಡುವುದು ಮಾತ್ರ ಎಂಬುದನ್ನು ತಿಳಿದಿದ್ದರು ಅವರು. ಅದಕ್ಕಾಗಿ ಹಿಂದೂ ಮುಸ್ಲಿಂ ಸಮಸ್ಯೆಯ ಹೆಸರಲ್ಲಿ ಸಾಮ್ರಾಜ್ಯವಾದದೊಂದಿಗೆ ರಾಜಿ ಮಾಡುವಂತಹ ಪ್ರಸಂಗ ಬಂದಾಗಲೆಲ್ಲ ಅದನ್ನು ರಾಷ್ಟ್ರಹಿತಕ್ಕೆ ವಿರೋಧಿ ಎಂಬಂತೆ ಕಾಣುತ್ತಿದ್ದರು ಅವರು.

1932ರಲ್ಲಿ ನಡೆದಿದ್ದ ಒಂದು ಪ್ರಸಂಗ. ಡಾ. ಮುಂಜೆ ಮತ್ತು ಡಾ.ಹೆಡಗೇವಾರರ ಚಿಂತನೆಗಳಲ್ಲಿ ಇದ್ದ ಭಿನ್ನತೆಯ ಮೇಲೆ ಅದು ಬೆಳಕು ಚೆಲ್ಲುತ್ತದೆ. ಡಾ. ಮುಂಜೆ ಅವರ ದೃಷ್ಟಿಯಲ್ಲಿ ಬ್ರಿಟಿಷ್ ಸಾಮ್ರಾಜ್ಯವಾದವಿದ್ದುದು ಹಿಂದೂಗಳ ಮತ್ತು ಮುಸಲ್ಮಾನರ ನಡುವೆ ಮೂರನೆಯ ಶಕ್ತಿಯಾಗಿ. ಅದಕ್ಕಾಗಿ ಬ್ರಿಟಿಷ್ ಆಡಳಿತವನ್ನು ಹಿಂದೂ ಹಿತಕ್ಕಾಗಿ ಬಳಸುವುದು ಅಗತ್ಯವೆಂದೇ ಅವರು ಬಗೆಯುತ್ತಿದ್ದರು. 1932ರ ಫೆಬ್ರವರಿ 14ರಂದು ಹಿಂದೂ ಮಹಾ ಸಭೆಯ ಒಂದು ಕಾರ್ಯಕ್ರಮದಲ್ಲಿ ತಮ್ಮ ಭಾಷಣದಲ್ಲಿ ಡಾ. ಮುಂಜೆಯವರು ಹೇಳಿದ್ದುದು:

"ಬ್ರಿಟಿಷರೇನಾದರೂ ಆಡಳಿತ ಸೂತ್ರವನ್ನು ಭಾರತೀಯರಿಗೆ ವಹಿಸಿಕೊಡುವ–ರೆಂದಾದಲ್ಲಿ ಅವರು ಅದನ್ನು ಒಪ್ಪಿಸುವುದು ಯಾರ ಕೈಗಳಿಗೆ – ಹಿಂದೂಗಳಿಗೋ ಮುಸಲ್ಮಾನರಿಗೋ? ಮುಸಲ್ಮಾನರ ಕೈಗಳಿಗೆ ಅವರು ಒಪ್ಪಿಸುವುದಾದಲ್ಲಿ, ಅಫಘಾನಿಸ್ತಾನದ ಅಮೀರನ ಕೈಗಳಿಗೆ ಅದನ್ನು ಒಪ್ಪಿಸಲಾರರೆಂಬ ಬಗ್ಗೆ ಭರವಸೆ ಏನು? ಹಿಂದೂಗಳ ಕೈಗಳಿಗೆ ಅದನ್ನು ಒಪ್ಪಿಸಿದಲ್ಲಿ ಮುಸಲ್ಮಾನರ ಆಕ್ರಮಣವನ್ನು ತಡೆದು ಹಿಡಿಯಬಲ್ಲೆವೆನ್ನುವಷ್ಟು ಆತ್ಮವಿಶ್ವಾಸ ಹಿಂದೂಗಳಿಗಿದೆಯೇನು? ಅದಿಲ್ಲವಾದಲ್ಲಿ ಆಡಳಿತವನ್ನು ಹಸ್ತಾಂತರಿಸುವುದರಿಂದ ಹಿಂದೂಗಳಿಗೇನು ಲಾಭವಿದೆ?" [3]

ಅವರ ಈ ಭಾಷಣ ಡಾ. ಹೆಡಗೇವಾರರಿಗೆ ರಾಷ್ಟ್ರಹಿತಕ್ಕೆ ಪ್ರತಿಕೂಲವೆನಿಸಿತು. ಮುಂಜೆ ಅವರ ಸಂದೇಹಗ್ರಸ್ತ ಮನಸ್ಸು ಮತ್ತು ಬ್ರಿಟಿಷರನ್ನು ಮೂರನೇ ಶಕ್ತಿಯಾಗಿ ಗೌರವಿಸುವುದು ಅವರಿಗೆ ಸ್ವಾಭಾವಿಕವಾಗಿಯೇ ಒಪ್ಪಿಗೆಯಾಗಲಿಲ್ಲ. ಹಿಂದೂ–ಮುಸಲ್ಮಾನರ ಸಮಸ್ಯೆಗೆ ಸಂಬಂಧಿಸಿ ಬ್ರಿಟಿಷರು ಮಧ್ಯದ ಮೂರನೇ ಶಕ್ತಿ ಎಂಬುದನ್ನು ಸ್ವೀಕರಿಸಲು ಅವರು ಸಿದ್ಧರಿರಲಿಲ್ಲ. ಡಾ. ಮುಂಜೆ ಅವರ ಈ ಭಾಷಣದ ಬಗ್ಗೆ ತಮ್ಮ ಅಸಮ್ಮತಿಯನ್ನು ಸೂಚಿಸಲು ಡಾ. ಹೆಡಗೇವಾರರು ಮರುದಿನ ಪ್ರಾತಃಕಾಲವೇ ಅವರ ಮನೆಗೆ ಹೋದರು. ಆಗ ಅವರ ಜತೆಯಲ್ಲಿ ಅಲ್ಲಿಗೆ ಹೋಗಿದ್ದ ಸಂಘದ ಇನ್ನೋರ್ವ ಪ್ರಮುಖರಾದ ಮಾರ್ತಾಂಡ ಜೋಗ್ ಅವರು ಸಹ ಭಾರೀ ವಿರೋಧವನ್ನು ಪ್ರಕಟಿಸಿದರು. "ನಾನು ಭಾಷಣದಲ್ಲಿ ಹೇಳಿದ ಸಂಗತಿಗಳಲ್ಲಿ ಅವರಿಬ್ಬರಿಗೆ ಯಾವುದರ ಬಗ್ಗೆ ಆಕ್ಷೇಪವಿತ್ತೆಂಬುದು ನನಗೆ ತಿಳಿಯಲಾಗಲಿಲ್ಲ. ಸಂಘದ ವೇದಿಕೆ ಮತ್ತು ಅದರ ಪ್ರಭಾವವನ್ನು ನಾನು ಸ್ವಂತಕ್ಕಾಗಿ ಬಳಸುತ್ತಿರುವೆ ಎಂಬುದು ಅವರಿಗೆ ಅನಿಸುತ್ತಿದೆ ಎಂಬುದಂತೂ ಜೋಗ್ ಅವರ ವಿರೋಧದಿಂದ ನನಗೆ ಸ್ಪಷ್ಟವಾಯಿತು. ನನಗೀಗ ಕಣ್ಣು ತೆರೆದಂತಾಗಿದೆ. ಇನ್ನು ಮುಂದೆ ಸಂಘದ ವಿಷಯದಲ್ಲಿ ನನ್ನ ವ್ಯಕ್ತಿಗತ ಆಲೋಚನೆಗಳನ್ನು ಕೊಡುವುದನ್ನು ನಿಲ್ಲಿಸಿಬಿಡುವೆ. ಅದರ ಸಭೆಗಳಲ್ಲೂ ಮಾತನಾಡಲು

---

3. ಮುಂಜೆ ಪೇಪರ್ಸ್, ಡೈರಿ ಕ್ರ.4, ನೆಹರು ಸ್ಮೃತಿ ಸಂಗ್ರಹಾಲಯ ಏವಂ ಪುಸ್ತಕಾಲಯ, ನವದೆಹಲಿ

ನಾನಿನ್ನು ಒಪ್ಪುವುದಿಲ್ಲ. ನಾನು ಅವರನ್ನು ಬಳಸಿ ಶೋಷಿಸುತ್ತಿದ್ದೇನೆ ಎಂಬಂತೆ ಅವರು ತಿಳಿಯುವುದು ನನಗೆ ಬೇಕಾಗಿಲ್ಲ"[4] ಎಂದು ಆಗ ಅವರು ಹೇಳಿದರು.

ರಾಷ್ಟ್ರದ ಹಿತ ಮತ್ತು ಹಿಂದೂ ಸಂಘಟನೆಯ ವಿಚಾರದಲ್ಲಿ ಡಾ. ಹೆಡಗೇವಾರ ಮತ್ತು ಡಾ. ಮುಂಜೆ ಅವರ ಮಧ್ಯೆ ಇದ್ದ ಭಿನ್ನಾಭಿಪ್ರಾಯಗಳು ಈ ಘಟನೆಯಲ್ಲಿ ಪೂರಾ ಬೆಳಕಿಗೆ ಬಂದಿವೆ. ಡಾ. ಹೆಡಗೇವಾರರ ಸಂಕಲ್ಪವಿದ್ದುದು ಮುಸಲ್ಮಾನರ ಜಾತೀಯ ರಾಜಕಾರಣದ ಬಗ್ಗೆ ಹೆಚ್ಚು ಚಿಂತೆಮಾಡದೆ, ಹಿಂದೂಗಳ ಶಕ್ತಿಯನ್ನು ಆಧರಿಸಿಯೇ ಸಾಮ್ರಾಜ್ಯವಾದದ ವಿರುದ್ಧ ಹೋರಾಡುವ ಸಲುವಾಗಿ.

ಹಿಂದೂ ಸಂಘಟನೆಗೆ ಇರುವ ಪ್ರೇರಣೆ ರಾಜಕೀಯವೇ ಅಥವಾ ಬೇರೇನಾದರೂ ಇದೆಯೇ? ಇದು ಒಂದು ವಿವಾದದ ವಿಷಯವೇ ಅಲ್ಲ. ಬದಲಾಗಿ ಒಂದು ಗಂಭೀರವಾದ ವಿಚಾರ. ಅದರಿಂದ ವಿಮುಖವಾಗುವುದು ನ್ಯಾಯಸಮ್ಮತ ವಾಗುವುದು ಹೇಗೆ ಸಾಧ್ಯ? ಡಾ. ಮುಂಜೆ ಅವರು ಹಿಂದೂ ಸಂಘಟನೆಯನ್ನು ಕಾಂಗ್ರೆಸ್‌ಗೆ ಸ್ಪರ್ಧಿಯಾಗಿ ಮತ್ತು ಮುಸ್ಲಿಂ ಜಾತೀಯತೆಗೆ ವಿರೋಧಿಯಾಗಿ ಕಾಣುತ್ತಿದ್ದರು. ಆದರೆ ಡಾ. ಹೆಡಗೇವಾರರು ಹಿಂದೂ ಸಂಘಟನೆಯನ್ನು ಒಂದು ಸಾಮಾಜಿಕ, ಸಾಂಸ್ಕೃತಿಕ ಕಾರ್ಯವಾಗಿ ಮತ್ತು ಸಮಾಜದಲ್ಲಿ ರಾಷ್ಟ್ರೀಯತೆಯ ಭಾವನೆಯನ್ನು ಪ್ರವಹಿಸುವ ಹಾಗೂ ಅದನ್ನು ಶಕ್ತಿಶಾಲಿಯಾಗಿ ಮಾಡುವ ಒಂದು ಮಾಧ್ಯಮವನ್ನಾಗಿ ಕಾಣುತ್ತಿದ್ದರು. ಅಂತಹ ಸಂಘಟನೆಯ ರಾಜಕೀಯ ಪಾತ್ರವನ್ನು ಅವರು, ಗುಲಾಮ ಭಾರತದಲ್ಲಿ ಸ್ವಾತಂತ್ರ್ಯದ ಹೋರಾಟ ನಡೆಸುತ್ತಿದ್ದ ಕಾಂಗ್ರೆಸ್‌ನ ಜತೆ ಸಹಕರಿಸುವ ಮೂಲಕ, – ಅದೂ ಕೂಡ ಸಾಮ್ರಾಜ್ಯವಾದದ ವಿರುದ್ಧ ಕ್ರಾಂತಿಯೆಸಗಲು ಸ್ವತಃ ಸಂಘವು ಶಕ್ತಿಸಂಪನ್ನವಾಗುವವರೆಗೆ ಮಾತ್ರ – ನಿರ್ವಹಿಸಲು ಬಯಸುತ್ತಿದ್ದರು. ಇದೇ ಅವರಿಬ್ಬರ ನಡುವಿದ್ದ ಮುಖ್ಯ ವ್ಯತ್ಯಾಸ.

ಡಾ. ಮುಂಜೆ ಅವರಿಗೆ ಇನ್ನೊಂದು ಸ್ವಭಾವವಿತ್ತು. ಅದು ಸಾರ್ವಜನಿಕ ಹೇಳಿಕೆ ನೀಡುವಂತಹದು. ಕೆಲವೊಮ್ಮೆ ಸಂಘದ ಅಧಿಕೃತ ವಕ್ತಾರ ತಾವೇ ಎಂಬಂತೆ ಅವರು ಸಂಘದ ಪರವಾಗಿಯೂ ಸಮಾಚಾರ ಪತ್ರಿಕೆಗಳಿಗೆ ಹೇಳಿಕೆ ನೀಡುತ್ತಿದ್ದುದುಂಟು. ಇದಕ್ಕೆ ಸಂಪೂರ್ಣ ವ್ಯತಿರಿಕ್ತವಾಗಿ, ಡಾ. ಹೆಡಗೇವಾರರು ಪ್ರಚಾರ ಮಾಧ್ಯಮಗಳಿಂದ ಪೂರಾ ದೂರವಿರುತ್ತಿದ್ದವರು. ಅಂತಹ ಹೇಳಿಕೆಗಳನ್ನು ಅವರು ಖಂಡಿಸುತ್ತಲೂ ಇರಲಿಲ್ಲ. ಅವುಗಳಿಗೆ ಹೆಚ್ಚು ಗಮನಕೊಡದೆ ಸಂಘವನ್ನು ಯಾವುದೇ ವಿಧದ ವಾದವಿವಾದಗಳಿಗೆ ವಸ್ತುವಾಗದಂತೆ ಮಾಡುತ್ತಿದ್ದರು. ಅಷ್ಟಾದರೂ ಡಾ. ಮುಂಜೆ ಅವರಿಗೆ ಸಂಘದ ಜತೆ ಇದ್ದ ಸಂಬಂಧವನ್ನು ಗಂಟು ಹಾಕಿ ಅಂದಿನ ರಾಜಕಾರಣದಲ್ಲಿ ಕೆಲವೊಂದು ಭ್ರಮೆಗಳನ್ನು ಸೃಷ್ಟಿಸಲಾಗುತ್ತಿತ್ತು. ಮಧ್ಯಪ್ರಾಂತದ ವಿಧಾನ ಪರಿಷತ್ತಿನಲ್ಲಿ ಸರ್ಕಾರವು ಡಾ. ಮುಂಜೆ ಅವರನ್ನು ಸಂಘದ ಜತೆ ಸಂಬಂಧಿಸಿ ಉಲ್ಲೇಖಿಸಿದಾಗ, 'ಮಹಾರಾಷ್ಟ್ರ' ಪತ್ರಿಕೆಯು ತನ್ನ ಸಂಪಾದಕೀಯದಲ್ಲಿ ಹೀಗೆ ಬರೆಯಿತು:

"ಡಾ. ಮುಂಜೆ ಅವರು ಸಂಘದ ಸಂಸ್ಥಾಪಕರೆಂಬ ಮಾಹಿತಿಯನ್ನು ಗೃಹಮಂತ್ರಿ ಶ್ರೀ ರಾಘವೇಂದ್ರ ರಾವ್ ಅವರು ಎಲ್ಲಿಂದ ಪಡೆದರು?... ಸತ್ಯ ಸಂಗತಿಯೆಂದರೆ ಡಾ. ಮುಂಜೆ ಅವರಿಗೆ ಸಂಘದ ಸ್ಥಾಪನೆಯಲ್ಲಾಗಲಿ, ಅದರ ಸಂವಿಧಾನ ರಚನಾ ಸಂಘಟನೆಯ ವ್ಯವಸ್ಥೆಯಲ್ಲಾಗಲಿ ದೂರದ ಸಂಬಂಧ ಸಹ ಇಲ್ಲ. ಸಂಘದ

---

4 ಮುಂಜೆ ಪೇಪರ್ಸ್, [illegible]

ಆರಂಭದಿಂದಲೂ ಅದರ ಸೂತ್ರವಿರುವುದೆಲ್ಲ ಓರ್ವ ವ್ಯಕ್ತಿಯ ಕೈಗಳಲ್ಲಿ – ಅವರು ಡಾ. ಹೆಡಗೇವಾರರು."[5] ಮುಂದೆ ಸರ್ಕಾರವು ಕೂಡ ವಿಧಾನ ಪರಿಷತ್ತಿನಲ್ಲಿ ತನ್ನ ತಪ್ಪನ್ನು ಒಪ್ಪಿಕೊಂಡಿತು.

ವಿಧಾನಪರಿಷತ್ತಿನ ಓರ್ವ ಹಿರಿಯ ಸದಸ್ಯರಾಗಿದ್ದ ಬಾಬಾಸಾಹೇಬ್ ಖಾಪರ್ಡೆ ಅವರು ವಿಧಾನ ಪರಿಷತ್ತಿನಲ್ಲಿ ಕೇಳಿರುವ ಒಂದು ಪ್ರಶ್ನೆ ಇಂದಿಗೂ ಸಹ ಪ್ರಸ್ತುತವಾಗಿದೆ. ಅವರು ಕೇಳಿದುದು "ಮುಂಜೆ ಅವರ 'ಪಾಪ' ಗಳನ್ನು ಸಂಘದ ತಲೆಯಮೇಲೆ ಹೊರಿಸುತ್ತಿದ್ದೀರೇಕೆ?" ಮುಂದೆ ಅವರು, "ನಾನು ಸದನದ ಮುಂದೆ ಒಂದು ಸಂಗತಿ ಹೇಳಲಿಚ್ಛಿಸುವೆ. ಅದು ಡಾ. ಮುಂಜೆ ಅವರಿಗೆ ಸಂಘದ ಜತೆ ಕೊಡುವ ಪಡೆಯುವ ವ್ಯವಹಾರವೇನೂ ಇಲ್ಲ. ಅವರೇನೊ ತಮ್ಮನ್ನು ತಾವೇ ಸಂಘದ ಜತೆ ಜೋಡಿಸಿಕೊಂಡಿರಬಹುದು ಅಷ್ಟೇ."[6]

ಮುಂಜೆ ಮತ್ತು ಸಂಘದ ನಡುವೆ ಇದ್ದ ಯಥಾರ್ಥವಾದ ಸಂಬಂಧ ಈ ರೀತಿಯದು ಮಾತ್ರ. ಮಧ್ಯಪ್ರಾಂತದ ಪ್ರಮುಖರು ಮತ್ತು ಸಮಾಚಾರ ಪತ್ರಿಕೆಗಳು ಸ್ಪಷ್ಟವಾಗಿ ಹೇಳಿರುವುದು ಇದನ್ನೇ. ಅಷ್ಟಾದರೂ ಈ ಭ್ರಮೆ ಇಂದಿಗೂ ಸಹ ಮುಂದುವರಿದುಕೊಂಡೇ ಇದೆ.

## ಸಾಂಕೇತಿಕ ಪ್ರತೀಕಾರ

ಸಂಘ ಕಾರ್ಯದ ಪ್ರಭಾವ ಸಾಕಷ್ಟು ಬೆಳೆಯುವವರೆಗೆ ಡಾ.ಹೆಡಗೇವಾರರು ಮಹಾಸಭೆಯ ಆಕ್ರೋಶ, ಸ್ಪರ್ಧೆ, ಟೀಕೆ ಮತ್ತು ದುರಾಸೆ ಇತ್ಯಾದಿಗಳನ್ನು ಸಹಿಸಿಕೊಂಡೇ ಇದ್ದರು. ಆದರೆ ಹೊಸ ಹೊಸ ಸಂದೇಹಗಳ ಸೃಷ್ಟಿಯಾಗುತ್ತಲೇ ಇರುವುದು ಹೆಚ್ಚಾದಾಗ, ಮತ್ತು ಕಾರ್ಯಕರ್ತರ ಮನದಲ್ಲೂ ಪ್ರಶ್ನೆಗಳೇಳಲು ಆರಂಭವಾದಾಗ, ಅವರು ಒಮ್ಮೆ ಅವಕಾಶ ಹುಡುಕಿ ಎಲ್ಲವನ್ನೂ ಸ್ಪಷ್ಟಗೊಳಿಸಿದರು. 1938ರಲ್ಲಿ ಮೊಟ್ಟಮೊದಲ ಬಾರಿ ವರ್ಧಾದಲ್ಲಿ ಒಮ್ಮೆ ಮಹಾಸಭಾದ ನಾಯಕರನ್ನು ಶಾಖೆಯ ಕಾರ್ಯಕ್ರಮದಲ್ಲಿ ಆಹ್ವಾನಿಸಿ ಸಂಘ ಮತ್ತು ಮಹಾಸಭಾದ ಸಂಬಂಧಗಳ ಬಗ್ಗೆ ಅವರು ಸ್ಪಷ್ಟೀಕರಣ ನೀಡಿದರು. ಅವರು ಹೇಳಿದುದು:

"ಸಂಘವು ಹಿಂದೂಗಳ ಸಂಘಟನೆಯ ಕಾರ್ಯವನ್ನು ಕೈಗೆತ್ತಿಕೊಂಡಿದೆ. ಆದರೆ ಹಿಂದೂ ಮಹಾಸಭೆಯು ಒಂದು ರಾಜಕೀಯ ಪಕ್ಷವಾಗಿದೆ. ದೇಶವು ಗುಲಾಮಗಿರಿಯಲ್ಲಿದ್ದಾಗ ದೇಶಭಕ್ತರಾಗಿರುವವರು ರಾಜಕಾರಣದಲ್ಲಿ ಅತ್ಯಗತ್ಯವಾಗಿ ಭಾಗವಹಿಸಬೇಕೆಂಬುದು ನನ್ನ ಅಭಿಮತವಾಗಿದೆ. ಆದರೆ ಸಂಘವು ಹಿಂದೂಗಳಲ್ಲಿ ದೇಶಭಕ್ತಿಯ ಭಾವನೆಯನ್ನು ಬಡಿದೆಬ್ಬಿಸಿ ಅವರನ್ನು ಸಂಘಟಿಸುವ ಕಾರ್ಯವನ್ನು ಮಾಡುತ್ತಿದೆ. ಹೀಗಾಗಿ ಸ್ವಯಂಸೇವಕರಿಗೆ ಮಹಾಸಭಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಸಾಧ್ಯವಾಗುವುದಿಲ್ಲ. ಮಹಾಸಭೆಯು ಅವರಿಗೆ ಪ್ರೇರಣೆ ನೀಡಿದಲ್ಲಿ, ಅದನ್ನೇನೂ ಸಂಘವು ತಡೆಯುವುದಿಲ್ಲ. ಇದಂತೂ ಸತ್ಯ. ಮಹಾಸಭೆಯ ಕಾರ್ಯದಲ್ಲಿ ಭಾಗವಹಿಸುವಂತೆ ಸಂಘವು ತನ್ನ ಸ್ವಯಂಸೇವಕರಿಗೆ ನಿರ್ದೇಶನವನ್ನೂ ನೀಡುವುದಿಲ್ಲ."

---

5. ಮುಂಜೆ ಪೇಪರ್ಸ್, ಡೈರಿ ಕ್ರ4, ನೆಹರು ಸ್ಮೃತಿ ಸಂಗ್ರಹಾಲಯ ಏವಂ ಪುಸ್ತಕಾಲಯ, ನವದೆಹಲಿ, ವ್ಯಕ್ತಿಗತ ಡೈರಿ
6. ಮಧ್ಯಪ್ರಾಂತ ವಿಧಾನಸಭಾ ಕಾ ಶೀತಕಾಲೀನ ಬಜೆಟ್ ಸತ್ರ, ಮಾರ್ಚ್ 1934

1939ರ ಅಕ್ಟೋಬರ್ 22ರಂದು ಡಾ. ಹೆಡಗೇವಾರರ ಉಪಸ್ಥಿತಿಯಲ್ಲಿ ಗೋಲ್ವಾಳ್ಕರ್ ಅವರು, ಸಂಘದ ತಾಟಸ್ಥ್ಯ ಧೋರಣೆಯ ಬಗ್ಗೆ ಮಹಾಸಭೆಯು ಎತ್ತಿರುವ ಸವಾಲುಗಳಿಗೆ ಅಪ್ರತ್ಯಕ್ಷ ರೂಪದಲ್ಲಿ ಉತ್ತರ ನೀಡಿದರು. ಪ್ರಾಯಶಃ ಅದೇ ಮಹಾಸಭೆಗೆ ನೀಡಲಾದ ಕಟ್ಟಕಡೆಯ ಸಂದೇಶವೆನಿಸುತ್ತದೆ. ನಾಗಪುರದ ದಸರಾ ಉತ್ಸವದಲ್ಲಿ ಗೋಲ್ವಾಳ್ಕರ್‌ರು ಹೇಳಿದುದು:

“ಇಂದಿಗೆ ಸಂಘದ ಆರಂಭವಾಗಿ ಹದಿನಾಲ್ಕು ವರ್ಷಗಳು ಪೂರ್ಣಗೊಂಡವು. ನಾವೀಗ ಹದಿನೈದನೇ ವರ್ಷಕ್ಕೆ, ನಮ್ಮ ತಾರುಣ್ಯದ ಕಡೆಗೆ ಹೆಜ್ಜೆ ಇಡುತ್ತಿದ್ದೇವೆ. ನಾವು ಮಾಡಬಹುದಾದ ಚಟುವಟಿಕೆಗಳು ಅನೇಕವಿವೆ. ಆದರೆ ಸಂಘವು ಮತ್ತೆಲ್ಲವನ್ನೂ ಬಿಟ್ಟು ಕೇವಲ ಒಂದು ಕಾರ್ಯವನ್ನು ಮಾತ್ರ ತನಗಾಗಿ ಆಯ್ಕೆ ಮಾಡಿಕೊಂಡಿದೆ. ಅದು ಹಿಂದೂಗಳ ಸಂಘಟನೆಯದು. ಇಂದಿನ ಯಾವುದೇ ರಾಜಕೀಯ ದಳ ಅಥವಾ ಸಂಸ್ಥೆಯೊಂದಿಗೆ ನಮ್ಮನ್ನು ನಾವು ಬೆಸೆದುಕೊಂಡಿಲ್ಲ. 'ರಾಜಕೀಯ'ದ ಹಣೆಪಟ್ಟಿ ಹಚ್ಚಿಕೊಂಡಿರುವ ಸರ್ವವಿಧ ಕಾರ್ಯಗಳಿಂದಲೂ ನಾವು ದೂರವಿದ್ದೇವೆ. ನಾವು ನಮ್ಮದೇ ದಿಕ್ಕಿನಲ್ಲಿ, ನಮ್ಮದೇ ನೀತಿಗಳು ಮತ್ತು ಕಾರ್ಯಕ್ರಮಗಳಿಗನುಗುಣವಾಗಿ ಅನ್ಯರಿಗೆ ಯಾವುದೇ ಭ್ರಮೆಗೆ ಎಡೆಗೊಡದೆ ನಮ್ಮ ಕಾರ್ಯವನ್ನಷ್ಟೇ ಮಾಡುತ್ತಲೇ ಇರಬೇಕಾಗಿದೆ.”[7]

ಸಂಘದ ಅಲ್ಲಲ್ಲಿನ ಸ್ಥಾನೀಯ ಕಾರ್ಯಕರ್ತರು ಸಹ ಮಹಾಸಭೆಯ ಟೀಕೆಗಳಿಗೆ ಖಂಡತುಂಡವಾಗಿ ಉತ್ತರಿಸಲು ಮುಂದೆ ಆರಂಭಿಸಿದರು. ಭಾಗಾನಗರ ಸತ್ಯಾಗ್ರಹದ ನಂತರ ಮಹಾರಾಷ್ಟ್ರದಲ್ಲಿ ಜೋಗಳೇಕರ, ನಾಥೂರಾಮ ಗೋಡ್ಸೆ ಮೊದಲಾದ ಹಿಂದೂ ಮಹಾಸಭಾ ನಾಯಕರು ಸಂಘವನ್ನು ಹಿಂದೂತ್ವ ವಿರೋಧಿ ಎಂದು ಅಪಪ್ರಚಾರ ಮಾಡಲಾರಂಭಿಸಿದ್ದರು. ಶಾಖೆಗೆ ಹೋಗದಂತೆ ಸ್ವಯಂಸೇವಕರನ್ನು ನಿರುತ್ಸಾಹಿಗೊಳಿಸಲು ಅವರ ಪ್ರಯತ್ನ ನಡೆಯುತ್ತಿತ್ತು. ಗೋಡ್ಸೆಗೆ ಪುಣೆಯಲ್ಲಿ ಹೆಚ್ಚಿನ ಪ್ರಭಾವವಿತ್ತು. ಸಂಘವು ಹಿಂದೂ ಯುವಕರ ಶಕ್ತಿಯನ್ನು ಅಪವ್ಯಯಗೊಳಿಸುವಂತಹ ಕಾರ್ಯವೆಂದು ಅವರು ಟೀಕಿಸುತ್ತಿದ್ದರು. ಭಾಗಾನಗರ ಸತ್ಯಾಗ್ರಹದಲ್ಲಿ ಗೋಡ್ಸೆ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಸ್ವತಃ ಒಂದು ತಂಡದ ನಾಯಕರಾಗಿ ಹೈದರಾಬಾದಿಗೆ ಅವರು ಹೋಗಿದ್ದರು. ಅವರ ಅಪಪ್ರಚಾರದ ಬಗ್ಗೆ ತನ್ನ ಅಭಿಪ್ರಾಯ ತಿಳಿಸುತ್ತ ಸಂಘದ ನಾಯಕ ಭಾವುರಾವ್ ದೇಶಮುಖ್ ಅವರು ಪುಣೆಯಲ್ಲಿ ತಮ್ಮ ಭಾಷಣದಲ್ಲಿ ಹೇಳಿದುದು:

“ಮೊಟ್ಟಮೊದಲು ಆ ಎಲ್ಲ ಕಲುಷಿತಬುದ್ಧಿಯವರಿಗೆ ನಾನು ಹೇಳುವುದೇನೆಂದರೆ, ಸಂಘವು ಹಿಂದೂಗಳ ಸೇನೆ ಅಲ್ಲ ಮತ್ತು ಮಹಾಸಭೆಯ ಸೈನಿಕ ಸಂಘಟನೆಯೂ ಅಲ್ಲ. ಸಂಘದ ಪ್ರಯತ್ನವಿರುವುದು ಈ ದೇಶದ ಹಿಂದೂಗಳನ್ನು ನಿಜವಾದ ಅರ್ಥದಲ್ಲಿ ರಾಷ್ಟ್ರವಾದಿಗಳನ್ನಾಗಿ ಮಾಡುವುದಕ್ಕಾಗಿ. ಸಂಘ ಮತ್ತು ಇನ್ನಿತರ ಸಂಘಟನೆಗಳ ನಡುವೆ ಭೂಮಿ ಆಕಾಶಗಳಷ್ಟು ಅಂತರವಿದೆ. ಇಷ್ಟೊಂದು ದೊಡ್ಡ ಸಂಘಟನೆಯನ್ನು ಕಟ್ಟುವುದು ಅನ್ಯರಿಗೋ ನಮ್ಮ ಶ್ರಮ ಅಥವಾ ಸೇವೆ ಸಲ್ಲಿಸುವ ಸಲುವಾಗಿ ಅಲ್ಲ. ಸಂಘದಲ್ಲಿ ಅದೆಷ್ಟೋ ಉತ್ತಮ ರೀತಿಯ ಸೈನಿಕ ಶಿಕ್ಷಣ ನೀಡಲಾಗುತ್ತಿದ್ದರೂ, ಅದೇ

---

7. ಮರಾಠಾ, 3 ನವೆಂಬರ್ 1939

ಸಂಘದ ನಿಜವಾದ ಸ್ವರೂಪವಲ್ಲ. ಸಂಘದ ಕಾರ್ಯವು ಬೌದ್ಧಿಕವಾಗಿ ದೇಶದ ಮಾನಸದಲ್ಲಿ ರಾಷ್ಟ್ರೀಯತೆಯ ಭಾವವನ್ನು ಎರಕ ಹೊಯ್ಯುವಂತಹದಾಗಿದೆ"[8]

1939ರಿಂದ ಡಾ. ಹೆಡಗೇವಾರರ ಆರೋಗ್ಯ ಕುಸಿಯಲಾರಂಭಿಸಿತು. ಸಂಘದ ಮುಖ್ಯ ಆಧಾರಸ್ತಂಭವಾಗಿದ್ದವರೇ ಅವರು. ಸಂಘದ ಸ್ವಯಂಸೇವಕರ ಮೇಲೆ ಬಿದ್ದಿರುವ ರಾಜಕಾರಣಿಗಳ ಗೃಧ್ರದೃಷ್ಟಿ ಸಂಘದ ಕಾರ್ಯಕ್ಕೆ ತಡೆಯೊಡ್ಡುವಂತಹ-ದಾಗಬಹುದೆಂಬ ಭೀತಿ ಅವರಿಗೆ ನಿಶ್ಚಿತವಾಗಿಯೂ ಆಗಿರಬೇಕು. ಅದಕ್ಕಾಗಿ ತಮ್ಮ ಕೊನೆಯ ದಿನಗಳಲ್ಲಿ ಅವರು ಗೋಲ್ವಾಳ್ಕರ್, ರಾಮ ಗೋಸಾವಿ ಮತ್ತು ದೇಶಮುಖ್‌ರಂತಹ ಹಲವು ನಿಷ್ಣಾತ ವಕ್ತಾರರನ್ನು ಸಂಘದ ಮೇಲೆರಗುವ ಬೌದ್ಧಿಕ ದಾಳಿಯನ್ನು ಸಮರ್ಥವಾಗಿ ಎದುರಿಸುವ ಸಲುವಾಗಿ ತಯಾರುಮಾಡಿ ನಿಲ್ಲಿಸಿದ್ದರು. ಈ ರೀತಿಯಲ್ಲಿ ಮಹಾಸಭೆಯ ಮಹತ್ವಾಕಾಂಕ್ಷೆಯ ಬೆಂಕಿಯಲ್ಲಿ ಸುಟ್ಟು ಹೋಗದಂತೆ ಅವರು ಸಂಘವನ್ನು ಸುರಕ್ಷಿತವಾಗಿ ಉಳಿಸಿದರು. ಸಾಮ್ರಾಜ್ಯವಾದಿ ಆಡಳಿತದಿಂದ ತನ್ನ ಮೇಲಾದ ಆಕ್ರಮಣ ಹಾಗೂ ದಮನ ನೀತಿಯಿಂದ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದ್ದ ಸಂಘಕ್ಕೆ ಎರಡನೇ ಸವಾಲು ಎದುರಾದುದು ಸಮಾನ- ಧರ್ಮೀಯರೇ ಆದ ಮಹತ್ವಾಕಾಂಕ್ಷಿ ರಾಜಕಾರಣಿಗಳ ಕುತಂತ್ರದ್ದು. "ಡಾ.ಹೆಡಗೇವಾರರು ವೀರ ಸಾವರಕರರನ್ನು ಗೌರವದಿಂದ ಕಾಣುತ್ತಿದ್ದರು. ಆದರೆ ಅವರು ತಮ್ಮ ಸಂಘಟನೆಯನ್ನು ಹಿಂದೂ ಮಹಾಸಭೆಗೆ ಅಧೀನಗೊಳಿಸಲು ಎಂದೂ ಅವಕಾಶವನ್ನೇ ನೀಡಲಿಲ್ಲ. ಇದರ ಶ್ರೇಯ ಸಲ್ಲಬೇಕಾದುದು ಡಾ. ಹೆಡಗೇವಾರರಿಗೆ ಮಾತ್ರ" ಎಂದು ಕೇಳ್ಕರರು ಸರಿಯಾಗಿಯೇ ಬರೆದಿರಿಸಿದ್ದಾರೆ.[9]

## ಕಾಂಗ್ರೆಸ್‌ನ ವಿರೋಧ

ಮಧ್ಯಪ್ರಾಂತದಲ್ಲಿ ಸ್ಥಾನೀಯ ಮಟ್ಟದಲ್ಲಿ ಕಾಂಗ್ರೆಸ್ ನಾಯಕರು ಮತ್ತು ಕಾರ್ಯಕರ್ತರಿಂದಲೂ ಆಗಾಗ ಸಂಘಕ್ಕೆ ವಿರೋಧ ಆಗುತ್ತಿದ್ದುದುಂಟು. ಸಂಘವು ಕಾಂಗ್ರೆಸ್‌ನ ವಿರೋಧ ಎದುರಿಸಬೇಕಾಗಿ ಬರುತ್ತಿದ್ದುದು ಎರಡು ಕಾರಣಗಳಿಗಾಗಿ. ಠೇಂಗಡಿಯವರು ಹೇಳುವಂತೆ ಮೊದಲನೆಯದಾಗಿ ಡಾ. ಹೆಡಗೇವಾರರು ಮಹಾಸಭೆಯ ಅನೇಕ ಧುರೀಣರನ್ನು ಸಂಘಚಾಲಕರನ್ನಾಗಿ ಮಾಡಿದ್ದರು. ಅದು ಸಂಘದ ಬೆಳವಣಿಗೆಯ ಹಾದಿಯಲ್ಲಿರಿಸಲಾದ ಮೊದಲ ಹೆಜ್ಜೆಯಾಗಿತ್ತು. ಈ ಧುರೀಣರು ಆಗಾಗ ಕಾಂಗ್ರೆಸ್ ಮತ್ತು ಮಹಾತ್ಮಾಗಾಂಧಿ ಅವರ ಬಗ್ಗೆ ಬೇಜವಾಬ್ದಾರಿಯ ಹೇಳಿಕೆಗಳನ್ನು ನೀಡುತ್ತಿದ್ದರು. ಆ ಹೇಳಿಕೆಗಳಲ್ಲಿ ಸಂಘದ ಮಟ್ಟಿಗೆ ಗಳಿಸುವುದಾಗಲಿ ಕಳೆದುಕೊಳ್ಳುವುದಾಗಲಿ ಏನೂ ಇರುತ್ತಿರಲಿಲ್ಲ. ಆದರೆ ಸಂಘದ ಜತೆ ಅವರಿಗಿದ್ದ ಸಂಬಂಧದ ಕಾರಣದಿಂದಾಗಿ ಕಾಂಗ್ರೆಸ್‌ನಲ್ಲಿ ತಪ್ಪು ತಿಳಿವಳಿಕೆಗಳು ಸೃಷ್ಟಿಯಾಗುತ್ತಿದ್ದವು. ಸಂಘ ಮತ್ತು ಮಹಾಸಭಾ ಇವುಗಳ ನಡುವಿರುವ ಇರುವ ಭಿನ್ನ ಮತಗಳನ್ನು ಸಾರ್ವಜನಿಕವಾಗಿ ತಿಳಿಸದೇ ಇದ್ದುದರಿಂದ ಕಾಂಗ್ರೆಸ್‌ನ ನಾಯಕರ ಮನದಲ್ಲಿ ಸಂಘವು ಹಿಂದೂ ಸಮಾಜದ ಅರೆ ಸೈನಿಕ ಪಡೆಯೆಂಬ ಕಲ್ಪನೆಯೇ ತುಂಬಿಕೊಂಡಿತ್ತು.

ಎರಡನೆಯದಾಗಿ ಮಧ್ಯಪ್ರಾಂತದ ರಾಜಕಾರಣದ ಏಳುಬೀಳುಗಳ ಮತ್ತು ಗುಂಪುಗಾರಿಕೆಯ ನೆರಳು ಸಂಘದ ಮೇಲೂ ಬೀಳುತಿದ್ದುದು ಸ್ವಾಭಾವಿಕ. ಪ್ರಾಂತದ

---

8. ಕಾಳ, 8 ಏಪ್ರಿಲ್ 1940
9. ಡಿ.ವಿ. ಕೇಳ್ಕರ್, ಇಕನಾಮಿಕ್ ವೀಕ್ಲಿ, 4 ಫೆಬ್ರವರಿ 1950 – ಪು. 133

ರಾಜಕಾರಣದಲ್ಲಿ ಇಪ್ಪತ್ತರ ದಶಕದಲ್ಲಿ ಡಾ. ಮುಂಜೆ ಮತ್ತು ಅಭ್ಯಂಕರ್ ಇವರಿಬ್ಬರ ಗುಂಪುಗಳ ನಡುವೆ ಭಾರೀ ಪೈಪೋಟಿ ಇತ್ತು. ಈ ತಿಕ್ಕಾಟ ಅವರ ಸಭೆಗಳಲ್ಲಿ ಗಲಭೆ ಎಬ್ಬಿಸುವುದರಿಂದ ಮೊದಲ್ಗೊಂಡು ಪರಸ್ಪರ ಕೆಸರೆರಚಿ ಚಾರಿತ್ರ್ಯಹನನ ಮಾಡುವವರೆಗೂ ತಲುಪುತ್ತಿತ್ತು. ಮುಂಜೆ ಅವರಿಗೆ ಮಹಾತ್ಮಗಾಂಧಿ ಅವರ ಎಲ್ಲ ಕಾರ್ಯಕ್ರಮಗಳ ಬಗ್ಗೆ ಸಂಪೂರ್ಣ ಸಹಮತವಿರಲಿಲ್ಲ ಮತ್ತು ಅವರು ಗಾಂಧಿವಾದಿಯೂ ಆಗಿದ್ದವರಲ್ಲ. ಅಭ್ಯಂಕರ್ ಹಾಗೂ ಪೂರನ್‌ಚಂದ್ ರಾಂಕಾ ಅವರ ಗುಂಪಿಗೆ ನೆಹರು ಮತ್ತು ಗಾಂಧೀಯವರ ಬಗ್ಗೆ ಪರಮ ಭಕ್ತಿ ಇತ್ತು. "ಡಾ. ಹೆಡಗೇವಾರರ ವೈಕ್ತಿಗತವಾದ ಸಂಬಂಧವಿದ್ದುದು ಡಾ. ಮುಂಜೆ ಅವರೊಡನೆ ಮತ್ತು ಮುಂಜೆ ಅವರೇ ಸಂಘದ ಜನಕ" ಎಂಬ ತಪ್ಪುಗ್ರಹಿಕೆ ಕಾಂಗ್ರೆಸ್ ನಾಯಕರ ಮನಸ್ಸಿನಲ್ಲಿ ಆಳವಾಗಿ ಬೇರೂರಿತ್ತು. ಹೀಗಾಗಿ ಡಾ. ಮುಂಜೆ ಅವರಿಗೆ ಕಿರುಕುಳ ಕೊಡುವ ಕಾರ್ಯವಾಗಿಯೇ ಅಭ್ಯಂಕರ್ ಗುಂಪು ಸಂಘದ ವಿರುದ್ಧ ಏನೇನೋ ಅಪಪ್ರಚಾರ ಮಾಡುತ್ತಿತ್ತು ಮತ್ತು ಅದೇ ಕಾರಣಕ್ಕಾಗಿ ಕಾಂಗ್ರೆಸ್ಸು ಸಂಘವನ್ನು ದ್ವೇಷಿಸುತ್ತಿತ್ತು. ಅಭ್ಯಂಕರ್, ಬ್ರಿಜಲಾಲ್ ಬಿಯಾನಿ ಮತ್ತು ಪೂರನ್ ಚಂದ್ ರಾಂಕಾ ಅವರು ಸಂಘದ ಕಡು ಟೀಕಾಕಾರರಾಗಿದ್ದರು. ಅವರ ಪ್ರಭಾವವಿದ್ದ ವಾರ್ತಾ ಪತ್ರಿಕೆಗಳ ಮೂಲಕ ಸಂಘದ ವಿರುದ್ಧ ಏನೇನೋ ಆಕ್ಷೇಪಗಳ ಪ್ರಭಾವವು ಕಾಂಗ್ರೆಸ್‌ನ ಸಾಮಾನ್ಯ ಕಾರ್ಯಕರ್ತರ ಮೇಲಾಗುತ್ತಿದ್ದುದು ಸಹಜವೇ. ಕೆಲವೊಮ್ಮೆ ಮನಬಂದಂತೆ ಸಮಾಚಾರಗಳು ಪ್ರಕಟಿಸಲ್ಪಟ್ಟು, ಸಂಘ ಮತ್ತು ಕಾಂಗ್ರೆಸ್ ನಡುವೆ ದ್ವೇಷ ಬಿತ್ತುವ ಕೆಲಸಗಳು ನಡೆಯುತ್ತಿದ್ದವು. 1938ರ ಆಗಸ್ಟ್ 11ರಂದು ಪ್ರಕಟವಾಗಿದ್ದ ಇಂತಹ ಒಂದು ಸುದ್ದಿಯ ಬಗ್ಗೆ ತಮ್ಮ ಟಿಪ್ಪಣಿ ಸೇರಿಸಿ ಡಾ. ಹೆಡಗೇವಾರರು ಹೀಗೆ ಬರೆದಿದ್ದರು: "ಚಾಂದಾದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸಭೆಯನ್ನು ಕೆಡಿಸಲು ರಾಷ್ಟ್ರೀಯ ಸ್ವಯಂಸೇವಕ ಸಂಘವು ಹುನ್ನಾರ ನಡೆಸಿದೆ ಎಂಬ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟಗೊಂಡಿದೆ. ಈ ಸುದ್ದಿಯು ಪೂರಾ ನಿರಾಧಾರವಾದುದು. ಅದರಲ್ಲಿ ಲೇಶವೂ ಸತ್ಯವಿಲ್ಲ. ಈ ವಿಧದ ದೊಂಬಿಯ ಕೆಲಸಗಳಲ್ಲಿ ಸಂಘವು ಎಂದೂ ಪಾಲ್ಗೊಳ್ಳುವುದಿಲ್ಲ ಎಂದು ತಮಗೆಲ್ಲ ಗೊತ್ತೇ ಇದೆ."

ಕಾಂಗ್ರೆಸ್‌ನ ಆಂದೋಳನದಲ್ಲಿ ಪಾಲ್ಗೊಳ್ಳಲು ಸಂಘದಲ್ಲಿ ಪ್ರೇರಣೆ ನೀಡಲಾಗುತ್ತಿತ್ತು. ಮಧ್ಯಪ್ರಾಂತದಲ್ಲಿ ಸಂಘದ ನೂರಾರು ಸ್ವಯಂಸೇವಕರು ಕಾಂಗ್ರೆಸ್‌ನ ಸಕ್ರಿಯ ಸದಸ್ಯರಾಗಿದ್ದರು. ಆದರೆ ಮೂವತ್ತರ ದಶಕದಲ್ಲಿ ವಿವಾದಗಳು ಹೆಚ್ಚಿದಾಗ ಯುವತಮಾಳ ಜಿಲ್ಲೆಯ ಕಾಂಗ್ರೆಸ್ಸಿನ ಸಮಿತಿಯು ಒಂದು ಸುತ್ತೋಲೆ ಹೊರಡಿಸಿ ಸಂಘದ ಜತೆ ಸಂಬಂಧವಿರುವ ವ್ಯಕ್ತಿಗಳು ಕಾಂಗ್ರೆಸ್ ಕಮಿಟಿಯ ಸದಸ್ಯರಾಗುವಂತಿಲ್ಲ ಎಂದು ನಿರ್ದೇಶನ ನೀಡಿತು. ಈ ಪ್ರಸಂಗದಿಂದ ಡಾ. ಹೆಡಗೇವಾರರು ತುಂಬ ದುಃಖಿತರಾದರು. ಅವರು ಯುವತಮಾಳ ಜಿಲ್ಲಾ ಸಂಘಚಾಲಕ ಅಣ್ಣಾಸಾಹೇಬ ಜತಕರ್ ಅವರಿಗೆ 1937ರ ಜುಲೈ 5ರಂದು ಒಂದು ಪತ್ರ ಬರೆದು ಆ ಜಿಲ್ಲೆಯ ಕಾಂಗ್ರೆಸಿಗರು ರಾಷ್ಟ್ರೀಯ ಸ್ವಯಂಸೇವಕ ಸಂಘದ ಮೇಲೆ 'ದೌರ್ಜನ್ಯ'ವೆಸಗಿದ್ದಾರೆ ಎಂದು ತಿಳಿಸಿದರು. ಪತ್ರದಲ್ಲಿ ಮುಂದೆ "ಮೇಲೆ ಹೇಳಲಾಗಿರುವ ಮಾಹಿತಿ ಸತ್ಯವೆಂದಾದಲ್ಲಿ ಈ ಕುರಿತು ಇನ್ನೂ ಹೆಚ್ಚಿನ ಹಾಗೂ ವಿಸ್ತಾರವಾದ ಸುದ್ದಿಗಳನ್ನು ಇಲ್ಲಿಗೆ ಕೂಡಲೇ ತಲುಪಿಸುವ ವ್ಯವಸ್ಥೆ ಮಾಡಬೇಕು." ಎಂದು ಹೇಳಿದ್ದರು. ಹಿಂದುತ್ವಪರ ಸಂಘಟನೆಗಳ ಜತೆ ಕಾಂಗ್ರೆಸ್‌ನ ವ್ಯವಹಾರ ಅದೆಷ್ಟು ಸಣ್ಣತನದಾಗಿತ್ತು ಎಂಬುದಕ್ಕೆ 1936ರ ಡಿಸೆಂಬರ್‌ನಲ್ಲಿ ನಡೆದ ಫೈಜಪುರ ಅಧಿವೇಶನದ ಉದಾಹರಣೆಯೊಂದೇ ಸಾಕಾದೀತು. ಈ ಅಧಿವೇಶನದ ಧ್ವಜಾರೋಹಣದ ಪ್ರಸಂಗದಲ್ಲಿ ತ್ರಿವರ್ಣ ಧ್ವಜ 80 ಅಡಿ ಎತ್ತರದ ಕಂಬದ ಮೇಲೆ

ಅರ್ಧಕ್ಕೆ ಏರಿ ಅಲ್ಲೆ ಸಿಕ್ಕಿಹಾಕಿಕೊಂಡಿತು. ಅದನ್ನು ಸರಿಪಡಿಸಲು ಅನೇಕರು ನಡೆಸಿದ ಪ್ರಯತ್ನಗಳಾವುದೂ ಫಲಿಸಲಿಲ್ಲ. ಕೊನೆಯಲ್ಲಿ ಕಿಸನ್ ಸಿಂಹ ಪರದೇಶಿ ಎಂಬ ಪ್ರತಿನಿಧಿಯೊಬ್ಬ ಅತ್ಯಂತ ಸಾಹಸದಿಂದ ಕಂಬವೇರಿ, ಗಂಟನ್ನು ಸರಿಪಡಿಸಿ ಧ್ವಜ ಮೇಲೇರುವಂತೆ ಮಾಡಿದ. ಎಲ್ಲರೂ ಆತನನ್ನು ಅಭಿನಂದಿಸಲು ಮುಂದಾದರು. ಅಧಿವೇಶನದಲ್ಲಿ ಆತನನ್ನು ಸನ್ಮಾನಿಸಲು ಠರಾವು ಸಹ ಸ್ವೀಕಾರವಾಯಿತು. ಆದರೆ ತಾನು ಸಂಘದಲ್ಲಿ ಪಡೆದ ಪ್ರೇರಣೆಯಿಂದಾಗಿ ಅಂತಹ ಸಾಹಸ ಮಾಡಲು ಸಾಧ್ಯವಾಯಿತೆಂದಾಗ, ಸಂಘದ ಸ್ವಯಂಸೇವಕನನ್ನು ಕಾಂಗ್ರೆಸ್‌ನ ಅಧಿವೇಶನದಲ್ಲಿ ಸನ್ಮಾನಿಸುವುದೇ ಎಂಬ ಪ್ರಶ್ನೆ ಮುಂದಾಯಿತು. ಸೂಚಿತ ಸನ್ಮಾನ ನಡೆಯಲೇ ಇಲ್ಲ. ಕಾಂಗ್ರೆಸ್‌ಗೆ ಆಗ ಮುಸ್ಲಿಂ ತುಷ್ಟೀಕರಣದ ಗೀಳು ತಗುಲಿತ್ತು.

ಓರ್ವ ಸ್ವಯಂಸೇವಕನ ಈ ಸಾಹಸಪೂರ್ಣ ಸಹಕಾರದ ಬಗ್ಗೆ ಡಾ. ಹೆಡಗೇವಾರರು ತುಂಬ ಸಂತೋಷಪಟ್ಟರು. ಅಂತಹ ಅಸಾಧಾರಣ ಸಾಹಸಕ್ಕಾಗಿ ಅವರು ಸಂಘದ ಪರಂಪರೆಗೆ ವ್ಯತಿರಿಕ್ತವಾಗಿ ಆದರೂ ಕಿಶನ್ ಸಿಂಹನನ್ನು ದೇವಪುರ ಶಾಖೆಗೆ ಆಹ್ವಾನಿಸಿ, ಅಲ್ಲಿ ಅವನನ್ನು ತಮ್ಮ ಸಮೀಪ ಕುಳ್ಳಿರಿಸಿಕೊಂಡು ಸನ್ಮಾನವನ್ನೂ ಮಾಡಿದರು. ಆತನಿಗೆ ಉಡುಗೊರೆಯ ರೂಪದಲ್ಲಿ ಬೆಳ್ಳಿಯ ಒಂದು ಲೋಟವನ್ನೂ ಕೊಟ್ಟರು. "ರಾಷ್ಟ್ರದ ಕಾರ್ಯದಲ್ಲಿ ಎಲ್ಲೇ ವಿಘ್ನ ಬಂದರೂ, ಅದನ್ನು ದೂರಪಡಿಸಲು ಪ್ರಾಣದ ಹಂಗು ತೊರೆದು ಧಾವಿಸಬೇಕಾದುದು ಸಂಘದ ಸ್ವಯಂಸೇವಕರ ಸ್ವಾಭಾವಿಕ ಕರ್ತವ್ಯವೇ ಆಗಬೇಕು" ಎಂದು ಸಹ ಈ ಸಂದರ್ಭದಲ್ಲಿ ಅವರು ತಿಳಿಸಿದರು. ರಾಷ್ಟ್ರಧರ್ಮ ಎನ್ನುವುದು ಇದನ್ನೇ.

ಕಾಂಗ್ರೆಸ್ಸು ವಸಾಹತುಶಾಹಿಯ ವಿರುದ್ಧ ಹೋರಾಡುತ್ತಿದ್ದ ಕಾರಣಕ್ಕಾಗಿ ಡಾ. ಹೆಡಗೇವಾರರು ಅದರ ಬಗ್ಗೆ ಉತ್ಕಟ ಆದರ ತೋರಿಸುತ್ತಿದ್ದರೂ, ಸ್ವತಃ ಕಾಂಗ್ರೆಸ್‌ನ ಮೇಲ್ಮಟ್ಟದ ನಾಯಕರು ತಮ್ಮ ಮುಸ್ಲಿಂ ತುಷ್ಟೀಕರಣದ ಮನೋಭಾವದ ಪರಿಣಾಮವಾಗಿ ಸಂಘದ ವಿರುದ್ಧ ಅಸಮಾಧಾನ ತೋರುತ್ತಿದ್ದರು. ಮಧ್ಯಪ್ರಾಂತದ ಕೆಲವು ಕಡೆಗಳಲ್ಲಿ ಸಂಘದ ವಿರುದ್ಧ ಅವಮಾನಕಾರಿ ಹಾಗೂ ದ್ವೇಷಭರಿತ ಕ್ರಮಗಳನ್ನು ಕಾಂಗ್ರೆಸ್ ನಡೆಸುತ್ತಿದ್ದುದರಿಂದಾಗಿ, ಸಂಘದ ಕಾರ್ಯಕರ್ತರ ಮನದಲ್ಲಿ ಅದರ ಬಗ್ಗೆ ನಿಲುವು ಸಹ ಕ್ರಮೇಣ ಬದಲಾಗುವ ಲಕ್ಷಣಗಳು ಕಾಣಿಸತೊಡಗಿದ್ದವು. ಸಂಘದ ವಿಚಾರದಲ್ಲಿ ಸಹಾನುಭೂತಿಯಿಂದಿರುತ್ತಿದ್ದ ಡಾ. ಕಾಕಾಸಾಹೇಬ ಟೇಂಭೆ ಅವರು ತುಂಬ ಚಿಂತಿತರಾಗಿದ್ದರು. ಅವರು ಡಾ. ಹೆಡಗೇವಾರರಿಗೆ ಒಂದು ಪತ್ರ ಬರೆದು ಕಾಂಗ್ರೆಸ್‌ನ ಕಾರ್ಯಕ್ರಮ ಹಾಗೂ ವೈಚಾರಿಕ ಭೂಮಿಕೆಯನ್ನು ಕೂಡಾ ಕಠಿಣ ಶಬ್ದಗಳಲ್ಲಿ ಟೀಕಿಸಬೇಕೆಂದು ವಿನಂತಿಸಿದ್ದರು. ಇದರಿಂದಾಗಿ ಸ್ವಯಂಸೇವಕರಿಗಾದರೂ ಸಂತೋಷವಾಗುವುದೆಂದುಕೊಂಡಿದ್ದರು ಅವರು.

ಈ ಪತ್ರಕ್ಕೆ ಡಾ. ಹೆಡಗೇವಾರರು ಬರೆದಿರುವ ಉತ್ತರಪತ್ರದಿಂದ ಕಾಂಗ್ರೆಸ್ ಅನ್ನು ಕುರಿತು ಅವರು ತಮ್ಮ ಮನದಲ್ಲಿ ಕಟ್ಟಿದ ಬೆಲೆ ಎಷ್ಟೆಂಬುದಂತೂ ಗೊತ್ತಾಗುತ್ತದೆ. ಜತೆಯಲ್ಲಿ ಅವರ ಸ್ವಂತದ ದಾರ್ಶನಿಕ ಸ್ವರೂಪದ ಚಿತ್ರವೂ ಕಣ್ಣಿಗೆ ಕಟ್ಟುತ್ತದೆ. ಸಂಘದ ಕಾರ್ಯಕರ್ತರ ಮನದಲ್ಲಿ ಕಾಂಗ್ರೆಸ್‌ನ ಕುರಿತು ವಿರೋಧ ಬೆಳೆಯಲು ಅವರು ಇಷ್ಟಪಡುತ್ತಿರಲಿಲ್ಲ. ಅವರ ಮನದಲ್ಲಿದ್ದ ಪರ್ಯಾಯಗಳು ಎರಡೇ – ಇನ್ನೂ ಕಾಲಮೀರುವ ಮೊದಲೇ ಸಂಘದ ಶಕ್ತಿ ಬೃಹತ್ತಾಗಿ ಬೆಳೆದಲ್ಲಿ ಕ್ರಾಂತಿಯ ಮೂಲಕ ಬ್ರಿಟಿಷರ ಸಾಮ್ರಾಜ್ಯವನ್ನು ಪೂರಾ ಕಿತ್ತು ಹಾಕುವುದು ಹಾಗೂ ಅವರನ್ನು ಈ ದೇಶದಿಂದ ಹೊರಗಟ್ಟುವುದು ಅಥವಾ ಕಾಂಗ್ರೆಸ್‌ನ ಮುಂದಾಳುತನದಲ್ಲಿ ಸಾಮ್ರಾಜ್ಯವಾದದ

ವಿರುದ್ಧ ಹೋರಾಟದಲ್ಲಿ ಮುಂದುವರೆಯುವುದು. ಒಟ್ಟಿನಲ್ಲಿ ಸಾಮ್ರಾಜ್ಯವಾದದ ವಿರುದ್ಧ ಹೋರಾಟವು ಬಹುಕೇಂದ್ರಿತವಾಗಿ ಹಂಚಿಹೋಗಿ ದುರ್ಬಲಗೊಳ್ಳಬಾರದು. ಈ ಕಾರಣಕ್ಕಾಗಿಯೇ 'ಜಂಗಲ್ ಸತ್ಯಾಗ್ರಹ'ದಲ್ಲಿ ಸಂಘದ ಸ್ವಯಂಸೇವಕರು ಕಾಂಗ್ರೆಸ್ ನೇತೃತ್ವದಲ್ಲಿ ಮತ್ತು ಅದರ ನಿರ್ದೇಶನದಲ್ಲಿ, ಕಾಂಗ್ರೆಸ್‌ನ ಧ್ವಜದಡಿಯಲ್ಲಿಯೇ ಹೋರಾಡಿದ್ದರು. ಟೇಂಭೆಯವರಿಗೆ ಬರೆದ ತಮ್ಮ ಪತ್ರದಲ್ಲಿ ಡಾ. ಹೆಡಗೇವಾರರು, "ಜಗತ್ತಿನಲ್ಲಿ ಪ್ರತಿಯೊಬ್ಬನೂ ತನ್ನ ಸ್ವಭಾವಕ್ಕನುಗುಣವಾಗಿ ವ್ಯವಹರಿಸುತ್ತಾನೆ ಮತ್ತು ಮಾತಾಡುತ್ತಾನೆ ಸಹ. ಆತ ಯಾವುದೇ ಗುಂಪಿನ ವಿಚಾರವನ್ನು ಬೆಂಬಲಿಸುವವನೇ ಆಗಿರಬೇಕೆಂದೇನೂ ಇಲ್ಲ. ಯಾವನೋ ಒಬ್ಬ ಏನೋ ಹೇಳಿದನೆಂಬ ಮಾತ್ರಕ್ಕೆ ಆತ ಯಾವ ವಿಚಾರದವನು ಅಥವಾ ಯಾವ ಸಂಘಟನೆಯವನಾಗಿರುವನೆಂಬುದು ತಿಳಿದು, ಅಂತಹ ದಳಕ್ಕೆ ಅಥವಾ ಅದರ ಅನುಯಾಯಿಗಳಿಗೆ ದೋಷವನ್ನು ತಗುಲಿಸುವುದಾಗಲಿ, ಪ್ರಶಂಸೆ ಮಾಡುವುದಾಗಲಿ ಸರಿಯಲ್ಲ ಎಂಬುದು ನನ್ನ ಅನಿಸಿಕೆ. ಶುದ್ಧ, ಶಾಂತ ಹಾಗೂ ಸಾತ್ವಿಕ ವೃತ್ತಿಯ ಸಜ್ಜನರು ಯಾವುದೇ ದಳದವರಾದರೂ ಆ ದಳವನ್ನು ಕೆಟ್ಟದಾಗಿ ನಾನೆಂದೂ ನೋಡುವುದಿಲ್ಲ" ಎಂದು ಬರೆದಿದ್ದರು.

ಸಂಘದೊಡನೆ ಹೋಲಿಸಿದಾಗ, ಕಾಂಗ್ರೆಸ್‌ನ ಸೇವಾ ದಳದ ಕಾರ್ಯ ತುಂಬ ಹಿಂದಿತ್ತು. ಈ ಬಗ್ಗೆ ವ್ಯಥೆ ಪಟ್ಟು ಕಾಂಗ್ರೆಸ್ ಸೇವಾ ದಳದ ಸಂಸ್ಥಾಪಕ ಅಧ್ಯಕ್ಷ ಡಾ. ಎನ್. ಎಸ್. ಹರ್ಡೀಕರ್ ಅವರು 1929ರ ಆಗಸ್ಟ್‌ನಲ್ಲಿ ನಾಗಪುರದಲ್ಲಿ ನಡೆದ ಒಂದು ಸಭೆಯಲ್ಲಿ ಸಂಘದ ವಿರುದ್ಧ ಅಪ್ರತ್ಯಕ್ಷವಾಗಿ ಆಘಾತವೆಸಗಿದ್ದರು. ತಮ್ಮ ಮನದ ಮಾತ್ಸರ್ಯವನ್ನು ಅವರು ಅಡಗಿಸಿಕೊಳ್ಳದಾದರು. ಅವರು ಹೇಳಿದ್ದುದು:

"ನಾಗಪುರದಲ್ಲಿ ಯುವಕರ ಸಂಘಟನೆಯೊಂದಿದೆ ಎಂದು ನಾವು ಕೇಳಿದ್ದೇವೆ. ಪರಕೀಯರ ಆಳ್ವಿಕೆಯ ಜೊತೆ ನಮ್ಮ ಶರೀರದ ರಕ್ತವನ್ನು ಹೀರುತ್ತಿರಬೇಕಾದಲ್ಲಿ ನಮ್ಮ ಸಂಘಟನೆ ರಾಜಕೀಯವಲ್ಲ, ಕೇವಲ ಸಾಮಾಜಿಕ ಮಾತ್ರ ಎನ್ನುವುದು, ಅಂತಹ ಸಂಘಟನೆಯು ಇದ್ದೂ ಇಲ್ಲ ಎನ್ನುವಂತೆಯೇ ಆಗಿದೆ."

ಒಂದು ವರ್ಷದ ನಂತರ ಕಾಂಗ್ರೆಸ್‌ನ ಆಂದೋಳನದಲ್ಲಿ ಪಾಲ್ಗೊಳ್ಳುವ ಮೂಲಕ ಸಂಘವು ಡಾ. ಹರ್ಡೀಕರರ ಅಭಿಪ್ರಾಯವನ್ನು ಹುಸಿಗೊಳಿಸಿತು. ಡಾ. ಹರ್ಡೀಕರರಿಗೆ ಡಾ. ಹೆಡಗೇವಾರರ ಸಂಘಟನಾ ಕೌಶಲ್ಯದ ಪರಿಚಯ ಆಯಿತು. 1934ರ ಡಿಸೆಂಬರ್‌ನಲ್ಲಿ ಅವರು ಡಾ. ಹೆಡಗೇವಾರರಿಗೆ ಪತ್ರ ಬರೆದು ಸಂಘದ ಕಾರ್ಯಶೈಲಿ ಮತ್ತು ವೈಚಾರಿಕ ಭೂಮಿಕೆ ಇವುಗಳನ್ನು ಪ್ರತ್ಯಕ್ಷವಾಗಿ ಕಂಡು ತಿಳಿಯಲು ಅಪೇಕ್ಷಿಸಿದರು. ಅವರಿಗೆ ಡಿಸೆಂಬರ್ 12ರಂದು ಬರೆದ ತಮ್ಮ ಪತ್ರದಲ್ಲಿ ಡಾ. ಹೆಡಗೇವಾರರು, "ನೀವು ಸ್ವತಃ ಬಂದು ರಾಷ್ಟ್ರೀಯ ಸ್ವಯಂಸೇವಕ ಸಂಘವನ್ನು ಸಮೀಪದಿಂದ ವೀಕ್ಷಿಸಲು ಇಚ್ಛಿಸಿರುವುದು ನಮಗೆ ಸಂತೋಷವನ್ನುಂಟುಮಾಡಿದೆ.... ಡಿಸೆಂಬರ್ 22ರಿಂದ 27ರ ವರೆಗೆ ಪ್ರತಿಯೊಂದು ಜಿಲ್ಲಾ ಕೇಂದ್ರದಲ್ಲಿ ಶಿಬಿರಗಳು ನಡೆಯಲಿವೆ. ಅದಕ್ಕಾಗಿ ಡಿ. 22ರ ಪ್ರಾತಃಕಾಲದ ಮೇಲ್‌ನಲ್ಲಿ ಅಥವಾ ಮಧ್ಯಾಹ್ನದ ಎಕ್ಸ್‌ಪ್ರೆಸ್‌ನಲ್ಲಿ ದಯವಿಟ್ಟು ನಾಗಪುರಕ್ಕೆ ತಲುಪಿ. ಆಗ ಡಿ. 27ರ ವರೆಗೆ ಈ ಕ್ಷೇತ್ರದಲ್ಲಿ ನಡೆಯುವಂತಹ 3–4 ಶಿಬಿರಗಳನ್ನು ಕಾಣಲು ನಿಮಗೆ ಸಾಧ್ಯವಾಗಬಹುದು ಹಾಗೂ ಸಂಘದ ಕುರಿತು ಎಲ್ಲ ಮಾಹಿತಿಗಳನ್ನು ಸಂಗ್ರಹಿಸಲು ಅನುಕೂಲವೂ ಆಗಬಹುದು."

ಪ್ರಶಂಸೆಯಿರಲಿ ಅಥವಾ ಟೀಕೆಯಿರಲಿ, ಎರಡೂ ಪ್ರಸಂಗಗಳಲ್ಲಿ ಡಾ. ಹೆಡಗೇವಾರರು ತಮ್ಮ ಲಕ್ಷ್ಯ, ಕೆಲಸದ ರೀತಿ ನೀತಿ, ಸ್ವಭಾವ ಯಾವುದರಲ್ಲೂ ಸ್ವಲ್ಪವೂ

ವಿಚಲಿತರಾಗುತ್ತಿರಲಿಲ್ಲ. ಸಂಘದ ಕುರಿತು ಪ್ರಶಂಸೆ ಬಂದಾಗ ಜವಾಬ್ದಾರಿ ಇನ್ನಷ್ಟು ಹೆಚ್ಚಿತು ಎಂಬ ನಿಟ್ಟಿನಲ್ಲಿ, ಮತ್ತು ಟೀಕೆಗಳು ಎದುರಾದಾಗ ಅದು ಟೀಕಾಕಾರನ ಅಜ್ಞಾನದ ಸಂಕೇತ ಎಂಬಂತೆ ತಿಳಿಯುತ್ತ, ತಾವು ಮಾತ್ರ ದೃಢಚಿತ್ತದಿಂದ ಕಾರ್ಯದಲ್ಲಿ ಮುಂದುವರಿಯುತ್ತಲೇ ಇದ್ದವರು ಅವರು.

ಇಷ್ಟು ಬಿಚ್ಚು ಮನದ, ಸ್ಪಷ್ಟತೆಯ ಮತ್ತು ವಿಶ್ವಾಸಾರ್ಹತೆಯ ನಂತರವೂ ಕಾಂಗ್ರೆಸ್‌ನ ಅನೇಕ ನಾಯಕರು ಸಂಘದ ಕುರಿತು ಸಂದೇಹಗ್ರಸ್ತರಾಗಿಯೇ ಇದ್ದರು.

ಡಾ. ಹೆಡಗೇವಾರರಿಗೆ ತೀರಾ ಆಶ್ಚರ್ಯವೆನಿಸಿದುದು ಜಮನಾಲಾಲ್ ಬಜಾಜ್ ಸಹ ಅಪಪ್ರಚಾರದ ಪ್ರಭಾವಕ್ಕೊಳಗಾಗಿ ಡಾ. ಹೆಡಗೇವಾರರಿಗೆ ಪ್ರಶ್ನಾವಳಿ ರೂಪದ ಒಂದು ಪತ್ರ ಬರೆದು, ಖಾದಿ, ಅಸ್ಪೃಶ್ಯತಾ ನಿವಾರಣೆ, ಕಾಂಗ್ರೆಸ್ ಮತ್ತು ಮಹಾತ್ಮಾಗಾಂಧಿ ಅವರ ಬಗ್ಗೆ ಸಂಘದ ದೃಷ್ಟಿಕೋನ ಏನು ಇತ್ಯಾದಿ ತಿಳಿಯಬಯಸಿದಾಗ. 1934ರ ಆರಂಭದ ದಿನಗಳಲ್ಲಿ ನಡೆದ ಘಟನೆಯಿದು. ಅದಕ್ಕೆ ಉತ್ತರವಾಗಿ ಡಾ. ಹೆಡಗೇವಾರರು, “ಸಂಘವು ಏನು ಮಾಡಲಿದೆ ಎಂಬ ವಿಚಾರದಲ್ಲಿ ನಿಮ್ಮ ಸಂದೇಹಗಳನ್ನು ಪತ್ರ ಮೂಲಕ ನಿವಾರಿಸುವ ಬದಲಿಗೆ, ನೀವು ನಿಮ್ಮ ಸಮಯದ ಅನುಕೂಲ ತಿಳಿಸಿದಲ್ಲಿ, ನಾನು ಸ್ವತಃ ನಿಮ್ಮನ್ನು ಭೇಟಿಯಾಗಿ ನಿಮ್ಮ ಪ್ರಶ್ನೆಗಳಿಗೆ ಉತ್ತರ ನೀಡುವೆ” ಎಂದು ಬರೆದರು. ಡಾ. ಹೆಡಗೇವಾರರು 1916ರಷ್ಟು ಹಿಂದೆಯೇ ವರ್ಧಾದಲ್ಲಿ ಆರಂಭವಾಗಿದ್ದ ವರ್ಧಾ ಸ್ವಯಂಸೇವಕ ಪರಿಷತ್ತಿನಲ್ಲಿ ಜಮನಾಲಾಲ್ ಬಜಾಜ್ ಅವರ ಜತೆಯಲ್ಲೆ ಕಾರ್ಯಕರ್ತರಾಗಿದ್ದವರು. ವರ್ಧಾದಲ್ಲಿನ ಸಂಘದ ಶಾಖೆಯು ನಾಗಪುರದ ಶಾಖೆಯಷ್ಟೇ ಬಲವಾದುದಾಗಿತ್ತು. ಅದರ ಸಂಘಚಾಲಕರಾದ ಅಪ್ಪಾಜಿ (ಹರಿಕೃಷ್ಣ) ಜೋಶಿ ಅವರು ಕಾಂಗ್ರೆಸನ ಓರ್ವ ಪ್ರಮುಖರಾಗಿದ್ದವರೇ. ಅಷ್ಟಾದರೂ ಬಜಾಜ್ ಅವರು ಸಂಘದ ಬಗ್ಗೆ ತಿಳಿಯದವರಾಗಿದ್ದರೆಂಬುದು ಒಂದು ವಿಶೇಷವೇ.

1934ರ ಜನವರಿ 31ರಂದು ಜಮನಾಲಾಲ್ ಬಜಾಜ್ ಅವರು ಗಣಪತಿರಾವ್ ಟಿಕೇಕರ್ ಅವರ ಜತೆಯಲ್ಲಿ ನಾಗಪುರಕ್ಕೆ ಬಂದು ಡಾ. ಹೆಡಗೇವಾರರನ್ನು ಭೇಟಿಯಾದರು. ಖಾದಿ, ಅಸ್ಪೃಶ್ಯತೆ ಮತ್ತು ಇನ್ನಿತರ ಸಂಗತಿಗಳ ಬಗ್ಗೆ ಸಂಘದ ವ್ಯಾವಹಾರಿಕ ದೃಷ್ಟಿಕೋನವನ್ನು ಡಾ. ಹೆಡಗೇವಾರರು ಜಮನಾಲಾಲ್ ಬಜಾಜ್‌ರಿಗೆ ತಿಳಿಸಿದ ಮೇಲೆ, ಸುದೀರ್ಘ ಮಾತುಕತೆಗಳ ನಂತರ ಜಮನಾಲಾಲ್ ಬಜಾಜ್ ಅವರು ಸಮಾಧಾನಗೊಂಡು ವಾಪಸ್ ತೆರಳಿದರು.

ಹಿಂದೂ ಮಹಾಸಭೆ ಮತ್ತು ಕಾಂಗ್ರೆಸ್ ಎಂಬ ಈ ಎರಡು ಬೀಸುಗಲ್ಲುಗಳ ನಡುವೆ ಇದ್ದರೂ ಕೂಡ ಸಂಘಕಾರ್ಯವು ಪ್ರಗತಿಯನ್ನು ಸಾಧಿಸುತ್ತಲೇ ಮುಂದುವರಿಯಿತು. ಮಹಾಸಭೆಗೆ ಸಂಘದ ಕಾಂಗ್ರೆಸ್ ಪ್ರೇಮದ ಬಗ್ಗೆ ಕೋಪವಾದಲ್ಲಿ, ಕಾಂಗ್ರೆಸ್ಸು ಸಂಘವನ್ನು ಮಹಾಸಭೆಯ ಬಾಲಂಗೋಚಿ ಎಂದು ತಿಳಿಯುತ್ತ, ಅದನ್ನು ದೂರ ಮಾಡುವ ಪ್ರಯತ್ನದಲ್ಲಿ ತೊಡಗಿತ್ತು. ಈ ವಿಧದ ವಿರೋಧ, ಅಪಮಾನ, ಉಪಹಾಸ ಮತ್ತು ಆಕ್ರಮಣ ಇವೆಲ್ಲವನ್ನೂ ಎದುರಿಸುತ್ತಾ ಸಂಘವನ್ನು ಸಂತುಲಿತ, ಧೈರ್ಯಶಾಲಿ ಹಾಗೂ ಗುರಿಯೆಡೆಗೆ ಸದಾ ಮುನ್ನಡೆಯುತ್ತಾ ಇರುವ ಕಾರ್ಯವನ್ನಾಗಿ ಮಾಡಲು ಡಾ. ಹೆಡಗೇವಾರರು ಓರ್ವ ದಾರ್ಶನಿಕರ ರೀತಿಯಲ್ಲಿ ಪ್ರೇರಣೆ ನೀಡುತ್ತಲೇ ಇದ್ದರು. ಸಂಘಕ್ಕೆ ಅವರ ಈ ಶೀಲವಂತಿಕೆಯೇ ರಕ್ಷಾಕವಚವಾಗಿತ್ತು.

# ದಬ್ಬಾಳಿಕೆಯ ನಡುವೆ ಸಂಘದ ವಿಕಾಸ

ಕಾನೂನು ಭಂಗ ಆಂದೋಳನದ ಕಾರಣದಿಂದಾಗಿ ಸಂಘದ ವಸಾಹತುಶಾಹಿ ವಿರೋಧಿ ನಿಲುವು ಇಡೀ ದೇಶಕ್ಕೆ ಪರಿಚಯವಾಯಿತು. ಅಲ್ಲಿನ ತನಕ "ಇತರ ವ್ಯಾಯಾಮಶಾಲೆಗಳಂತೆಯೇ ಸಂಘವೂ ಒಂದು ಮತ್ತು ರಾಜಕೀಯ ವಿಷಯಗಳಲ್ಲಿ ಅದಕ್ಕೆ ಯಾವ ಸಂಬಂಧವೂ ಇಲ್ಲ" ಎಂಬ ಭ್ರಮೆ ಸರ್ಕಾರಕ್ಕಿತ್ತು. ಡಾ. ಹೆಡಗೇವಾರರ ಜತೆ ಸಂಘಕ್ಕಿದ್ದ ನೇರ ಸಂಬಂಧ ಮತ್ತು ಶಾಖೆಯಲ್ಲಿ ಸ್ವಯಂಸೇವಕರಿಗೆ ನೀಡಲಾಗುತ್ತಿದ್ದ ಸೈನಿಕ ರೀತಿಯ ಶಿಕ್ಷಣದ ಕಾರಣ ಒಂದಿಷ್ಟು ಸಂದೇಹವೇನೋ ಮೊದಲಿನಿಂದಲೂ ಇದ್ದಿತ್ತು. ಆದರೆ ಆಂದೋಳನದಲ್ಲಿ ಸಂಘವು ಸಹಭಾಗಿಯಾದ ನಂತರ ಸರ್ಕಾರದ ಸಂದೇಹವೆಲ್ಲವೂ ಸಂಪೂರ್ಣ ದೂರವಾಯಿತು. ಅಲ್ಲಿಂದ ನಂತರ ಸರ್ಕಾರವೂ ತನ್ನ ನಿಲುವನ್ನು ನಿರ್ಧರಿಸಿ, ಸಂಘದ ವಿರುದ್ಧ ದಮನಕಾರಿ ಕ್ರಮಗಳನ್ನು ಆರಂಭಿಸಿತು.

## ಸಂಘದ ಮೇಲೆ ಸಂದೇಹದ ದೃಷ್ಟಿ

1929ರಿಂದ ಪೊಲೀಸರು ಮತ್ತು ಶಾಸನವು ಸಹ ಸಂಘದ ಚಟುವಟಿಕೆಗಳ ಮೇಲೆ ಹದ್ದುಗಣ್ಣು ಇರಿಸಲು ಆರಂಭಿಸಿದ್ದವು. ಸಂಘದ ಉದ್ದೇಶವೇನೆಂಬ ಬಗ್ಗೆ ಸರ್ಕಾರಕ್ಕೆ ಏನೋ ಒಂದು ಶಂಕೆಯಿತ್ತು. 1929ರ ಮೇ ಮೊದಲ ಭಾಗದಲ್ಲಿ ಗುಪ್ತಚರ ವಿಭಾಗದ ಪಾಕ್ಷಿಕ ವರದಿಯಲ್ಲಿ "ವರ್ಧಾದಲ್ಲಿನ ಒಂದು ವಿದ್ಯಮಾನದ ಬಗ್ಗೆ ಲಕ್ಷ್ಯ ಸೆಳೆಯಲಾಗುತ್ತದೆ. ಅದು ನಾಗಪುರದ ಆರ್.ಎಸ್.ಎಸ್.ನ ಶಾಖೆಯ ರೀತಿಯಲ್ಲೇ ಕಾಣುವಂತಹ ರಾಷ್ಟ್ರೀಯ ಸ್ವಯಂಸೇವಕ ಸಂಘದ ಸ್ಥಾಪನೆಗೆ ಸಂಬಂಧಿಸಿದುದು. ಅಂದು ಸಮಾರಂಭದಲ್ಲಿ ಮುಖ್ಯ ಭಾಷಣಕಾರರಾಗಿದ್ದವರು ಡಾ. ಮುಂಜೆ, ಚೋಳ್ಕರ್ ಮತ್ತು ಪರಾಂಜಪೆ ಅವರು. ಈ ಭಾಷಣಕಾರರು ತಮ್ಮ ಭಾಷಣದಲ್ಲಿ ತಾತ್ಕಾಲಿಕವಾಗಿ ಸಂಘದ ಉದ್ದೇಶವು ಆತ್ಮ ರಕ್ಷಣೆಗಾಗಿ ಹಿಂದೂಗಳನ್ನು ಸಂಘಟಿಸುವುದು ಎಂದಿದ್ದರೂ, ಅಂತಿಮವಾಗಿ ಸ್ವರಾಜ್ಯ ಪ್ರಾಪ್ತಿಯೇ ತಮ್ಮ ಗುರಿ ಎಂದಿದ್ದಾರೆ" ಎಂಬ ದಾಖಲೆಯಿದೆ.

ಮುಂಬಯಿ ಸರ್ಕಾರವೂ ಅದೇ ವರ್ಷದಲ್ಲಿ ಸಂಘದ ಬಗ್ಗೆ ಮಧ್ಯಪ್ರಾಂತ ಸರ್ಕಾರದಿಂದ ಮಾಹಿತಿಗಳನ್ನು ವಿಚಾರಿಸಿತ್ತು. 1931ರಲ್ಲಿ ಕೇಂದ್ರ ಸರ್ಕಾರವು ಸಂಘದಲ್ಲಿ ನೀಡಲಾಗುತ್ತಿದ್ದ ಸೈನಿಕ ರೀತಿಯ ತರಬೇತಿಯ ಕುರಿತು ಅದು ಏನೇನು ಮಾಡುತ್ತಿದೆ ಎಂಬ ಮಾಹಿತಿಗಳನ್ನು ಪಡೆಯಲು ಪ್ರಯತ್ನಿಸಿತು. ಅದಕ್ಕಾಗಿ ಸರ್ಕಾರದ ಸುದ್ದಿ ವಿಭಾಗದ ಒರ್ವ ಹಿರಿಯ ಅಧಿಕಾರಿ ಸ್ವತಃ ನಾಗಪುರ ಮತ್ತು ಇನ್ನಿತರ ಕಡೆಗಳಿಗೆ

ಹೋಗಿ ಹಲವಾರು ಪ್ರಮುಖ ಹಾಗೂ ವಿಶ್ವಾಸಾರ್ಹ ವ್ಯಕ್ತಿಗಳನ್ನು ಕಂಡು ವಿಚಾರಿಸಿದರು. ಅವರು ತಮ್ಮ ವರದಿಯಲ್ಲಿ "ಒಂದು ಆತಂಕವಾದಿ ಸಂಘಟನೆಯಾಗುವಷ್ಟು ಸಾಮರ್ಥ್ಯ ಸಂಘದಲ್ಲಿದೆ" ಎಂದು ತಿಳಿಸಿದ್ದರು. ಈ ವರದಿಯಿಂದಾಗಿ ಸರ್ಕಾರದ ಸೇನಾ ವಿಭಾಗದಲ್ಲಿ ಒಂದಿಷ್ಟು ಕಳವಳ ಸಹ ವ್ಯಕ್ತಗೊಂಡಿತ್ತು.

ಕಟ್ಟಕಡೆಯಲ್ಲಿ 1932ರ ಜುಲೈನಲ್ಲಿ ಬ್ರಿಟಿಷ್ ಸರ್ಕಾರವು "ನಾಗಪುರದ ಒಂದೇ ಒಂದು ಚಿಂತಾಜನಕ ವಿದ್ಯಮಾನವೆಂದರೆ ರಾಷ್ಟ್ರೀಯ ಸ್ವಯಂಸೇವಕ ಸಂಘದ ಕುರಿತಾದದ್ದೇ. ಅದರ ನಾಯಕರು ಖಂಡಿತವಾಗಿಯೂ ಸರ್ಕಾರದ ವಿರುದ್ಧ ಆಂದೋಳನಗಳಲ್ಲಿ ತೊಡಗಿರುವವರೇ. ಹೀಗಾಗಿ ಈ ಸಂಘಟನೆಯ ಮೇಲೆ ಲಕ್ಷ್ಯವಿರಿಸಿಕೊಳ್ಳಬೇಕಾದ ಅಗತ್ಯವಿದೆ"[1] ಎಂಬ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿತು. ಸಂಘಟನೆಯೊಂದು ತರುಣರಿಗೆ ಅನುಶಾಸನದ ಹಾಗೂ ಸರ್ಕಾರದ ವಿರೋಧ ಆಂದೋಳನದ ಸಲುವಾಗಿ ತರಬೇತಿ ನೀಡುವುದು ಅಂದಿನ ಸಾಮ್ರಾಜ್ಯವಾದಿ ಸರ್ಕಾರದ ದೃಷ್ಟಿಯಲ್ಲಿ ಒಂದು ಸವಾಲಾಗಿ ಕಂಡಿದ್ದುದು ಸಹಜವೇ. ಅದಕ್ಕಾಗಿ ಸ್ವಾಭಾವಿಕವಾಗಿಯೇ ಅಂತಹ ಸಂಘಟನೆಯ ವಿರುದ್ಧ ದಮನಕಾರಿ ಕ್ರಮಗಳ ಸಲುವಾಗಿ ಸಜ್ಜುಗೊಳ್ಳತೊಡಗಿತು.

## ನಿಷೇಧ

1932ರ ಡಿಸೆಂಬರ್‌ನಲ್ಲಿ ಪ್ರಾಂತೀಯ ಸರ್ಕಾರದ ನೌಕರರು ಸಂಘದಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿಯೂ ಭಾಗವಹಿಸುವುದನ್ನು ನಿಷೇಧಿಸಿ ಮಧ್ಯಪ್ರಾಂತದ ಸರ್ಕಾರವು ತನ್ನ ಒಂದು ಸುತ್ತೋಲೆಯನ್ನು ಹೊರಡಿಸಿತು. ಆ ಸುತ್ತೋಲೆಯಲ್ಲಿನ ಆದೇಶ ಹೀಗಿತ್ತು:

"ಸರ್ಕಾರಿ ನೌಕರರ ಆಚಾರ ಸಂಹಿತೆಯಲ್ಲಿನ ನಿಯಮ 23ರಲ್ಲಿ ಸರ್ಕಾರಿ ನೌಕರರು ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವ ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರದ ನೀತಿಯನ್ನು ಹೇಳಲಾಗಿದೆ. ಅದರಂತೆ ಅವರು ಅಂತಹ ಎಲ್ಲ ಚಟುವಟಿಕೆಗಳಿಂದ ದೂರವಿರಬೇಕು. ರಾಷ್ಟ್ರೀಯ ಸ್ವಯಂಸೇವಕ ಸಂಘವೆಂಬ ಹೆಸರಿನ ಸಂಘಟನೆಯೊಂದು ಸ್ಪಷ್ಟವಾಗಿ ಜಾತೀಯ ಸ್ವರೂಪದ್ದಾಗಿದ್ದು ರಾಜಕೀಯ ಆಂದೋಳನಗಳಲ್ಲಿ ಅದು ಅಧಿಕಾಧಿಕವಾಗಿ ಭಾಗವಹಿಸುತ್ತಿರುವ ಕಾರಣದಿಂದಾಗಿ, ಅಂತಹ ಸಂಘಟನೆಯೊಂದಿಗೆ ಸರ್ಕಾರಿ ನೌಕರರು ಸಂಬಂಧವಿರಿಸಿಕೊಳ್ಳುವುದು ಅವರಿಗೆ ನಿಷ್ಪಕ್ಷವಾಗಿ ಕರ್ತವ್ಯ ನಿರ್ವಹಿಸಲು ಅಡ್ಡಿಪಡಿಸುವುದು ಎಂಬುದಾಗಿ ಸರ್ಕಾರದ ಖಚಿತವಾದ ಅಭಿಪ್ರಾಯವಾಗಿದೆ.

"ಅದಕ್ಕಾಗಿ ಯಾವುದೇ ಸರ್ಕಾರಿ ನೌಕರನು ರಾಷ್ಟ್ರೀಯ ಸ್ವಯಂಸೇವಕ ಸಂಘದ ಸದಸ್ಯನಾಗುವಂತಿಲ್ಲ ಮತ್ತು ಅದರ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತಿಲ್ಲ ಎಂದು ಸರ್ಕಾರವು ನಿರ್ಧರಿಸಿದೆ."[2]

---

1. ಮಧ್ಯಪ್ರಾಂತ ಏವಂ ಬರಾರ ಕೀ ರಾಜನೀತಿಕ ಸ್ಥಿತಿ ಪರ್ ರಿಪೋರ್ಟ್, ಜುಲೈ (ಉತ್ತರಾರ್ಧ)1932. 1/12/40 ನೆಹರು ಸ್ಮೃತಿ ಸಂಗ್ರಹಾಲಯ ಮತ್ತು ಪುಸ್ತಕಾಲಯ ನವದೆಹಲಿ
2. ಫೈಲ್ 88/33, ಗೃಹ (ರಾಜನೀತಿಕ) ರಾಷ್ಟ್ರೀಯ ಅಭಿಲೇಖಾಗಾರ, ನವದೆಹಲಿ

ಸರ್ಕಾರವು ಸಾಕಷ್ಟು ಯೋಚಿಸಿಯೇ ಈ ನಿಷೇಧವನ್ನು ಹೇರಿತ್ತು. ಮಧ್ಯಪ್ರಾಂತದಲ್ಲಿ ಕಾನೂನು ಭಂಗ ಆಂದೋಳನವು ಹೆಚ್ಚುಕಡಿಮೆ ಸಂಪೂರ್ಣವಾಗಿ ಅವಸಾನದ ಸ್ಥಿತಿಯಲ್ಲಿದ್ದಾಗ ಅದರಲ್ಲಿ ಪಾಲ್ಗೊಳ್ಳುವ ಮೂಲಕ ಡಾ. ಹೆಡಗೇವಾರರು ಅದಕ್ಕೆ ಜೀವ ತುಂಬಿದ್ದರೆಂಬುದರ ಅರಿವು ಸರ್ಕಾರಕ್ಕಿತ್ತು. ಅದಕ್ಕಾಗಿ ಈ ಆಂದೋಳನದ ಎರಡನೇ ಆಯಾಮ – ವೈಯಕ್ತಿಕವಾಗಿ ಕಾನೂನು ಭಂಗದ ಆಂದೋಳನದ ರೂಪದಲ್ಲಿ 1932ರಲ್ಲಿ – ಆರಂಭವಾಗುವ ಮುನ್ನ ಸಂಘವು ಅದರಲ್ಲಿ ಸಹಭಾಗಿಯಾಗದಂತೆ ಮಾಡುವ ಸಲುವಾಗಿಯೇ ಸರ್ಕಾರವು ಈ ದಮನಕಾರಿ ಕ್ರಮವನ್ನು ಕೈಗೊಂಡಿತ್ತು. ಇದರ ಸುಳಿವು ಡಾ. ಹೆಡಗೇವಾರರಿಗೆ ಸಿಕ್ಕಿತು. ಸಂಘಕ್ಕೆ ಸಂಬಂಧಿಸಿದಂತೆ ಸರ್ಕಾರದ ವಲಯಗಳಲ್ಲಿ ನಡೆಯುತ್ತಿದ್ದ ಮಾತುಕತೆಗಳ ಮಾಹಿತಿಗಳು ಅವರಿಗೆ ಆಗಾಗ ಲಭಿಸುತ್ತಿದ್ದವು. ಅವರೇನೋ ತಮ್ಮ ಭಾಷಣಗಳಲ್ಲಿ ಸಂಘವು ರಾಜಕೀಯದಿಂದ ದೂರವಿರುವ, ಶಾಂತ ಸ್ವರೂಪದ ಕಾರ್ಯ, ಆಂದೋಲನಾತ್ಮಕವಲ್ಲ ಇತ್ಯಾದಿ ಹೇಳುತ್ತಿದ್ದರು. ಆದರೂ ಸರ್ಕಾರಕ್ಕೆ ಅನಿಸುತ್ತಿದ್ದುದು ಡಾ. ಹೆಡಗೇವಾರರ ಯಾವುದೋ ಆಳವಾದ ಯೋಜನೆ ಅದರಲ್ಲಿದೆ ಎಂದೇ. ನಿಷೇಧ ಹೇರುವ ಕೆಲವೇ ದಿನಗಳ ಮೊದಲು ಡಾ. ಹೆಡಗೇವಾರರು ತಮ್ಮ ಒಂದು ಭಾಷಣದಲ್ಲಿ ಹೀಗೆ ಹೇಳಿದ್ದರು:

"1932ರದ್ದು 1930ರ ಆಂದೋಳನದ ಎರಡನೇ ಆಯಾಮವಾಗಿದೆ. ಅದಕ್ಕಾಗಿ ಸಂಘವು ಈ ಆಂದೋಳನದಲ್ಲಿ ಸಹಕರಿಸುವುದು ಎಂಬ ಭೀತಿ ಸರ್ಕಾರಕ್ಕಿರುವುದು ಸ್ವಾಭಾವಿಕವೇ. ಈ ಎಲ್ಲ ಸಂಸ್ಥೆಗಳನ್ನು ಕಾನೂನು ವಿರೋಧಿ ಎಂದು ಘೋಷಿಸಲು ಸರ್ಕಾರವು ನಿರ್ಧರಿಸಿರುವುದು ಸಹ ಅದಕ್ಕಾಗಿಯೇ. ನಾಗಪುರದಲ್ಲಿ ಸಂಘವು ಒಂದು ಶಕ್ತಿಶಾಲಿ ಸಂಘಟನೆಯಾಗಿರುವುದರಿಂದ ಅದರ ಮೇಲೆ ನಿಷೇಧ ಹೇರಲು ಸರ್ಕಾರವು ನಿರ್ಧರಿಸಿರುವುದಾಗಿ ವಿಶ್ವಸನೀಯ ಮೂಲಗಳಿಂದ ಗೊತ್ತಾಗಿದೆ. ಕೌನ್ಸಿಲ್‌ನ ಕೆಲವು ಹಿರಿಯ ಸದಸ್ಯರು ಈ ಸುದ್ದಿಯು ಸರ್ಕಾರದ ಆಂತರಿಕ ವಲಯದಿಂದ ಬಂದಿರುವುದಾಗಿ ನನಗೆ ತಿಳಿಸಿದ್ದಾರೆ. ಆದರೆ ಸಂಘದಲ್ಲಿ ಅತ್ಯಂತ ಶಾಂತಿಯುತವಾಗಿ ಹಾಗೂ ಅನುಶಾಸನಪೂರ್ಣವಾಗಿ ತರಬೇತಿ ನೀಡಲಾಗುತ್ತಿರುವುದರಿಂದ ಮಧ್ಯಪ್ರಾಂತದ ಸರ್ಕಾರವು ಅಂತಹ ಮೂರ್ಖತೆ ತೋರಲಾರದು ಎಂಬ ವಿಶ್ವಾಸ ನನಗಿದೆ. ಇದರ ಮೇಲೆ ನಿಷೇಧ ಹೇರಿ ಸರ್ಕಾರವು ಅನಗತ್ಯವಾಗಿ ರಗಳೆಯೊಂದನ್ನು ತನ್ನ ಮೇಲೆ ಎಳೆದುಕೊಳ್ಳಬೇಕೇಕೆ? ನಾನಂತೂ ಹೇಳುತ್ತಲೇ ಇದ್ದೇನೆ – ಸರ್ಕಾರದಿಂದ ಸಂಘವನ್ನು ನಿಲ್ಲಿಸಲು ಸಾಧ್ಯವಿಲ್ಲ. ಏಕೆಂದರೆ ಅದರಿಂದ ಸರ್ಕಾರವು ತನ್ನ ಕಾಲನ್ನೇ ಕೊಡಲಿಯಿಂದ ಕಡಿದುಕೊಂಡಂತಾದೀತು, ಅಷ್ಟೇ. ಸರ್ಕಾರವು ಸಂಘವನ್ನು ಕಾನೂನು ವಿರೋಧಿಯೆಂದು ಘೋಷಿಸಿ ನಿಷೇಧಿಸಿದ ದಿನವೇ ನಾಗಪುರದಲ್ಲಿ ಸಂಘದ ಶಾಖೆಗಳು ಇನ್ನೂರಾದಾವು. ಸಂಘದಲ್ಲಿರುವ ಸ್ವಯಂಸೇವಕರಷ್ಟೇ ಸಂಖ್ಯೆಯಲ್ಲಿ ಶಾಖೆಗಳೂ ಆದಾವು".

ಡಾ. ಹೆಡಗೇವಾರರು ಎಸೆದ ಈ ಸವಾಲು ಮತ್ತು ಕಾರ್ಯದಕ್ಷತೆಯ ವಿಸ್ತಾರದಿಂದಾಗಿ ಸ್ವಯಂಸೇವಕರಲ್ಲಿ ಆತ್ಮವಿಶ್ವಾಸ ಹೆಚ್ಚಿತು. 1932ರ ಅಕ್ಟೋಬರ್‌ನಲ್ಲಿ ನಡೆದ ವಿಜಯದಶಮಿಯ ಸಂದರ್ಭದಲ್ಲಿ 1200 ಗಣವೇಷಧಾರಿ ಸ್ವಯಂಸೇವಕರಿಂದ ಪಥಸಂಚಲನ ನಡೆಯಿತು. ಸಂಘದಲ್ಲಿ ಭಾರೀ ಸಂಖ್ಯೆಯಲ್ಲಿ ಸರ್ಕಾರಿ ನೌಕರರು

ಇದ್ದರು. ಈ ಗುಂಪಿನಲ್ಲಿರುವವರನ್ನು ಸಂಘದಿಂದ ಪ್ರತ್ಯೇಕಗೊಳಿಸಬೇಕು ಹಾಗೂ ಆ ಮೂಲಕ ಸಂಘದ ಬೆಳವಣಿಗೆಯನ್ನು ತಡೆಯಬೇಕು ಎಂಬುದು ಸರ್ಕಾರದ ಆ ಸುತ್ತೋಲೆಯ ಇಂಗಿತವಿದ್ದುದು ಸುಸ್ಪಷ್ಟ. 1932ರ ಡಿಸೆಂಬರ್‌ನಲ್ಲಿ ಗುಪ್ತಚರ ವಿಭಾಗವು ಸಲ್ಲಿಸಿದ್ದ ಪಾಕ್ಷಿಕ ವರದಿಯಲ್ಲಿ "ರಾಷ್ಟ್ರೀಯ ಸ್ವಯಂಸೇವಕ ಸಂಘವೆಂಬ ಹೆಸರಿನ ಹಿಂದೂ ಸಂಘಟನೆಯಲ್ಲಿ ಸರ್ಕಾರಿ ನೌಕರರು ಪಾಲ್ಗೊಳ್ಳುತ್ತಿರುವುದರಿಂದ ಅದರ ಮೇಲೆ ನಿಷೇಧ ಹೇರಲಾಗಿರುವುದು, ಅವರು ಹೆಚ್ಚೆಚ್ಚಾಗಿ ರಾಜಕೀಯ ಆಂದೋಳನಗಳಲ್ಲಿ ಭಾಗವಹಿಸುತ್ತಿರುವ ಕಾರಣಕ್ಕಾಗಿ" ಎಂದು ಖಚಿತ ಶಬ್ದಗಳಲ್ಲಿ ಹೇಳಲಾಗಿತ್ತು.

ಈ ನಿಷೇಧದ ಪರಿಣಾಮ ಸೀಮಿತ ಪ್ರಮಾಣದಲ್ಲಿ ಮಾತ್ರ ಆಯಿತು. ಅದನ್ನು ಸಂಘವಾಗಲಿ, ಸಂಘದ ಹಿತೈಷಿಗಳಾಗಲಿ ಗಂಭೀರವಾಗಿ ಪರಿಗಣಿಸಲೇ ಇಲ್ಲ. ಆದರೆ ಸರ್ಕಾರದ ಈ ಕ್ರಮವನ್ನು ಕುರಿತು ಮಧ್ಯಪ್ರಾಂತದ ವಿಧಾನ ಪರಿಷತ್ತಿನಲ್ಲಿ ಪ್ರಶ್ನೆಯೊಂದನ್ನು ಕೇಳಲಾಯಿತು. 1933ರ ಜನವರಿ 21ರಂದು ಎಂ.ಪಿ. ಕೋಲ್ತೆ ಅವರು ಈ ಸುತ್ತೋಲೆಯನ್ನು ವಾಪಸ್ ಪಡೆಯಬೇಕೆಂಬ ವಿನಂತಿಯೊಂದಿಗೆ ಕೆಳಗಿನ ಪ್ರಶ್ನೆಯನ್ನು ಕೇಳಿದರು:

ಕ) ಸಂಘವು ರಾಜಕೀಯದಲ್ಲಿ ಭಾಗವಹಿಸುವುದಿಲ್ಲ ಮತ್ತು ಧಾರ್ಮಿಕ ಹಾಗೂ ಸಾಮಾಜಿಕ ಚಟುವಟಿಕೆಗಳನ್ನು ನಡೆಸುತ್ತದೆ ಎಂಬುದು ನಿಜವಲ್ಲವೇ?

ಖ) ನಿಜವೆಂದಾದಲ್ಲಿ, ಸಂಘದಲ್ಲಿ ಸರ್ಕಾರಿ ನೌಕರರು ಭಾಗವಹಿಸುವ ಸಂಬಂಧದಲ್ಲಿ ವಿಧಿಸಲಾಗಿರುವ ನಿಷೇಧವನ್ನು ನೀವು ಕೃಪೆಯಿಟ್ಟು ವಾಪಸ್ ಪಡೆಯುವಿರಾ?

ಈ ಪ್ರಶ್ನೆಗೆ ನೀಡಲಾದ ಉತ್ತರದಲ್ಲಿ ಸರ್ಕಾರವು "ಸಂಘವು ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವುದಿಲ್ಲವೆಂಬ ಮಾಹಿತಿ ನಮಗಿಲ್ಲ" ಎಂದು ತಿಳಿಸಿತು[3].

ಈ ನಡುವೆ ಸರ್ಕಾರವು ಈ ನಿಷೇಧದ ವ್ಯಾಪ್ತಿಯನ್ನು ಇನ್ನಷ್ಟು ವಿಸ್ತರಿಸಿ ಸರ್ಕಾರಿ ನೌಕರರ ಸಮೀಪದ ಸಂಬಂಧಿಕರು ಮತ್ತು ಮಕ್ಕಳು ಸಹ ಸಂಘದಲ್ಲಿ ಭಾಗವಹಿಸಿದಂತೆ ಮಾಡುವ ಪ್ರಯತ್ನವನ್ನು ಆರಂಭಿಸಿತು. ಈ ನಿಷೇಧದ ಕುರಿತು ಡಾ. ಮುಂಜೆ ಅವರು ಅಂದಿನ ಗೃಹಮಂತ್ರಿ ರಾಘವೇಂದ್ರರಾವ್ ಅವರ ಬಳಿ ಪ್ರಸ್ತಾಪಿಸಿದಾಗ ಅವರು ತನ್ನ ಮೇಲಿನ ಹೊಣೆಯನ್ನು ಪ್ರಾಂತದ ಮುಖ್ಯಕಾರ್ಯದರ್ಶಿ ಅವರ ಹೆಗಲಿಗೆ ವರ್ಗಾಯಿಸಿ ತಾವು ಜಾರಿಕೊಂಡರು. ಮುಂಜೆ ಅವರು ಮುಖ್ಯಕಾರ್ಯದರ್ಶಿಯವರನ್ನೇ ಪ್ರಶ್ನಿಸಿದಾಗ, ಗೋರ್ಡನ್ ಅವರು "ಸರ್ಕಾರಿ ನೌಕರರಿಗೆ ಸಂಘದ ಸದಸ್ಯರಾಗಲು ಅವಕಾಶ ನೀಡುವುದಾದರೂ ಹೇಗೆ ಸಾಧ್ಯ?" ಎಂದು ಉಲ್ಟಾ ಪ್ರಶ್ನೆಯನ್ನೇ ಹಾಕಿದರು. ಆಗ ಮುಂಜೆ ಅವರು ಸರ್ಕಾರದ ಆದೇಶದ ವ್ಯಾವಹಾರಿಕ ಕಾರ್ಯಾನ್ವಯದ ಬಗ್ಗೆ ಲಕ್ಷ್ಯವನ್ನು ಸೆಳೆಯುತ್ತ, ಸರ್ಕಾರಿ ನೌಕರರ ಕುಟುಂಬದ ಸದಸ್ಯರನ್ನು ತಡೆಯುತ್ತಿದ್ದೀರೇಕೆ ಎಂದು ಪ್ರಶ್ನಿಸಿದಾಗ ಗೋರ್ಡನ್ ಅವರು "ನಮ್ಮ ಸುತ್ತೋಲೆ ಇರುವುದು ಸರ್ಕಾರಿ

---

3. ಹಿತವಾದ, 26 ಜನವರಿ 1933

ನೌಕರರಿಗೆ ಸಂಬಂಧಿಸಿ ಮಾತ್ರ. ಇತರರ ಬಗ್ಗೆ ನಾವು ಹೇಳುವಂತಹದೇನೂ ಇಲ್ಲ. ಅವರ ಮಕ್ಕಳ ಮತ್ತು ಸಂಬಂಧಿಕರ ಮೇಲೂ ನಿಷೇಧ ವಿಧಿಸಲಾಗಿದೆ ಎಂಬ ಬಗ್ಗೆ ನನಗೇನೂ ಗೊತ್ತಿಲ್ಲ" ಎಂಬ ಜಾರಿಕೆಯ ಉತ್ತರವನ್ನು ನೀಡಿದರು.[4]

ಪ್ರಾಂತದಲ್ಲಿನ ಎಲ್ಲ ಸಮಾಚಾರ ಪತ್ರಿಕೆಗಳು ಸರ್ಕಾರದ ಆದೇಶವನ್ನು ಟೀಕಿಸಿದವು. ಅದಕ್ಕೆ ಅಪವಾದವಾಗಿದ್ದುದು 'ಹಿತವಾದ' ಮಾತ್ರ. ಸರ್ಕಾರದ ನಿರ್ಧಾರವನ್ನು 'ಕೇಸರಿ'ಯು 'ಅವಿವೇಕ'ದ್ದು ಮತ್ತು 'ದಮನಕಾರಿ'ಯಾದುದು ಎಂದು ಹೇಳಿತು.[5] ಈ ನಿಷೇಧದಿಂದಾಗಿ ಸಂಘವು ಸ್ವಲ್ಪವೂ ವಿಚಲಿತವಾಗಲಿಲ್ಲವೆಂಬುದು ಸಂಘದ ಓರ್ವ ಹಿರಿಯ ಕಾರ್ಯಕರ್ತರಿಗೆ ಡಾ. ಹೆಡಗೇವಾರರು ಬರೆದಿದ್ದ ಒಂದು ಪತ್ರದಿಂದ ಗೊತ್ತಾಗುತ್ತದೆ. ಅದರಲ್ಲಿ

"ನಿಮ್ಮಂತಹ ಕಾರ್ಯಕರ್ತರು ಸಂಘದಲ್ಲಿರುವ ಕಾರಣಕ್ಕಾಗಿಯೇ ಇಂದಿನ ಈ ಪ್ರತಿಕೂಲ ಪರಿಸ್ಥಿತಿಯಲ್ಲೂ ಸಂಘವು ಪ್ರಗತಿಯ ದಿಕ್ಕಿನಲ್ಲಿ ಮುನ್ನಡೆಯಲು ಸಾಧ್ಯವಾಗಿದೆ..... ಸಂಘವನ್ನು ಜಾತೀಯ ಹಾಗೂ ರಾಜಕೀಯ ಸಂಘಟನೆಯೆಂದು ಸರ್ಕಾರದ ಆದೇಶದಲ್ಲಿ ಹೇಳಲಾಗಿದೆ. ಆದರೆ ಸಂಘವು ಜಾತೀಯ ಸಂಘಟನೆಯಲ್ಲ. ಸರ್ಕಾರದ ಈ ಆದೇಶದಿಂದಾಗಿ ನಾಗಪುರದಲ್ಲಿನ ಸಂಘ ಕಾರ್ಯದ ಮೇಲೆ ಯಾವುದೇ ಹಾನಿಕರ ಪರಿಣಾಮವಾಗಿಲ್ಲ. ಮುಂದೆ ಆಗುವುದೂ ಇಲ್ಲ" ಎಂದು ಅವರು ಬರೆದಿದ್ದರು[6].

## ಸಂಘ ಕಾರ್ಯದ ಬೆಳವಣಿಗೆ

ನಿಷೇಧದ ನಂತರ ಸಂಘದ ಕಾರ್ಯ ಇನ್ನಷ್ಟು ಬೆಳೆಯಿತು. ಡಾ.ಹೆಡಗೇವಾರರು ಎಂದಿನಂತೆ ತಮ್ಮ ಚಟುವಟಿಕೆಗಳಲ್ಲಿ ಮುಂದುವರಿದರು. ಸುತ್ತೋಲೆಯ ಬಗ್ಗೆ ಅವರು ತಲೆಕೆಡಿಸಿಕೊಳ್ಳಲೇ ಇಲ್ಲ. ಅವರಿಗಿದ್ದ ವ್ಯಾಪಕವಾದ ವೈಯಕ್ತಿಕ ಹಾಗೂ ಸಾಮಾಜಿಕ ಸಂಬಂಧಗಳಿಂದಾಗಿ ಪ್ರಾಂತದಲ್ಲಿನ ಅನೇಕ ಪ್ರಮುಖ ಸಾಮಾಜಿಕ ಮತ್ತು ರಾಜಕೀಯ ನಾಯಕರು ಸಂಘದ ಶಿಬಿರಗಳಿಗೆ ಬಂದು ಕಾರ್ಯವನ್ನು ಬಲವಾಗಿ ಸಮರ್ಥಿಸಿದರು. ಅಂತಹವರಲ್ಲಿ ಗೋವಿಂದರಾವ್ ಪ್ರಧಾನ್, ಎಸ್.ಬಿ. ತಾಂಬೆ, ಎನ್. ಸಿ. ಕೇಳ್ಕರ್ ಮತ್ತು ಎಂ. ಎಸ್. ಅಣೆ ಮೊದಲಾದವರನ್ನು ಮುಖ್ಯವಾಗಿ ಉಲ್ಲೇಖಿಸಬಹುದು. ನಾಗಪುರ ಮತ್ತು ವರ್ಧಾ ಅಲ್ಲದೆ ಪ್ರಾಂತದ ಇನ್ನಿತರ ಕಡೆಗಳಲ್ಲೂ ಇನ್ನಷ್ಟು ವೇಗವಾಗಿ ಕಾರ್ಯದ ವಿಸ್ತಾರವಾಗತೊಡಗಿತು. ಗೋಂದಿಯಾ, ಸಿಂದಿ, ತಲೇಗಾಂವ್‌ನಂತಹ ಸಣ್ಣ ಸಣ್ಣ ಊರುಗಳಲ್ಲಿ ಶಾಖೆಗಳು ಆರಂಭಗೊಂಡವು. ವರ್ಧಾದಲ್ಲಿ ಸೆಪ್ಟೆಂಬರ್ 26 ರಿಂದ 28ರ ವರೆಗೆ ಶಿಬಿರವೊಂದು ನಡೆಯಿತು. ದಿ. 28 ರಂದು ನಡೆದ ಸಭೆಯಲ್ಲಿ ಡಾ. ಹೆಡಗೇವಾರರ ಭಾಷಣ ಕೇಳಲು ಐದು ಸಾವಿರ ಜನ ಸೇರಿದ್ದರು. ಸಂಘದ ತರಬೇತಿ ಶಿಬಿರಗಳು ಗೋಂದಿಯಾ, ಪುಲಗಾಂವ್, ಅಲಿಪುರ, ಆರ್ವಿ, ನಾಚಣಗಾಂವ್,

---

4. ಮುಂಜೆ ಪೇಪರ್ಸ್, ಡೈರಿ ನಂ. 5, 14 ಮಾರ್ಚ್ 1933
5. ಕೇಸರಿ, 30 ಡಿಸೆಂಬರ್ 1932
6. ಹೆಡಗೇವಾರ್ ಕಾ ಗೋಪಾಲರಾವ್ ಚಿತಳೆ ಕೆ ನಾಮ ಪತ್ರ, 3 ಜನವರಿ 1933

ಸಿಂದಿ, ತಲೆಗಾಂವ್ ಮೊದಲಾದ ಕಡೆಗಳಲ್ಲೂ ಸೆಪ್ಟೆಂಬರ್‌ನಲ್ಲಿ ನಡೆದವು. ಸರ್ಕಾರದ ಆದೇಶದ ಪ್ರಭಾವ ಸಂಘದ ಮೇಲೆ ಸ್ವಲ್ಪವೂ ಆಗಲಿಲ್ಲ ಮತ್ತು ಸಂಘವು ಹೆದರಿಯೂ ಇಲ್ಲ ಎಂಬ ಸ್ಪಷ್ಟವಾದ ಸಂದೇಶವು ಸರ್ಕಾರಕ್ಕೆ ಇದರಿಂದಾಗಿ ತಲಪಿತು. 1929ರಲ್ಲಿ ಸಂಘವು ಶಾಖೆಗಳ ಸಂಖ್ಯೆ 37 ಇತ್ತು 1933ರಲ್ಲಿ 125ಕ್ಕೆ ಏರಿತು. 1933ರ ಸೆಪ್ಟೆಂಬರ್ 28ರಂದು ನಾಗಪುರದಲ್ಲಿ ನಡೆದ ಸಂಘದ ಒಂದು ಕಾರ್ಯಕ್ರಮದಲ್ಲಿ ಡಾ. ಹೆಡಗೇವಾರರು ಈ ಮಾಹಿತಿಯನ್ನು ಘೋಷಿಸಿದರು. ಸ್ವಯಂಸೇವಕರ ಸಂಖ್ಯೆಯೂ 12000ಕ್ಕೆ ತಲಪಿತ್ತು. ನಾಗಪುರದಲ್ಲೇ 16 ಪ್ರಮುಖ ಶಾಖೆಗಳಿದ್ದವು ಮತ್ತು 2000 ದಷ್ಟು ಸ್ವಯಂಸೇವಕರಿದ್ದರು. ವರ್ಧಾದಲ್ಲಿ 23 ಶಾಖೆಗಳಿದ್ದು, ಸ್ವಯಂಸೇವಕರು 300 ಇದ್ದರು[7]. ಈಗ ಸಂಘದ ಕಾರ್ಯ ಮಹಾರಾಷ್ಟ್ರ ಮತ್ತು ಮಧ್ಯಪ್ರಾಂತ ಇವುಗಳಲ್ಲಿ ಮಾತ್ರವಲ್ಲದೆ ಸಂಯುಕ್ತ ಪ್ರಾಂತ (ಈಗಿನ ಉತ್ತರ ಪ್ರದೇಶ) ಬಿಹಾರ, ಅಜ್ಮೇರ–ಮಾರವಾಡಗಳಲ್ಲೂ ವಿಸ್ತಾರಗೊಂಡಿತು. ಡಾ. ಹೆಡಗೇವಾರರು ಸಂಘದ ಕಾರ್ಯವಿಸ್ತಾರದ ಮಹತ್ವಾಕಾಂಕ್ಷೆಯನ್ನು ತಿಳಿಸಿ ಬರೆದ ಒಂದು ಪತ್ರದಲ್ಲಿ "ರಾಷ್ಟ್ರೀಯ ಸ್ವಯಂಸೇವಕ ಸಂಘದ ಕಾರ್ಯವನ್ನು ಯಾವುದೋ ಒಂದು ನಗರ ಅಥವಾ ಪ್ರಾಂತಕ್ಕೆ ಮಾತ್ರ ಸೀಮಿತಗೊಳಿಸಿ ಆರಂಭಿಸಲಾಗಿಲ್ಲ. ನಮ್ಮ ಸಂಪೂರ್ಣ ಹಿಂದೂಸ್ಥಾನವನ್ನು ಆದಷ್ಟು ಬೇಗ ಸುಸಂಘಟಿತಗೊಳಿಸಿ, ಅಖಿಲ ಹಿಂದೂಸಮಾಜವು ಸ್ವಸಂರಕ್ಷಣೆ ಮಾಡಿಕೊಳ್ಳುವಷ್ಟು ಶಕ್ತಿಶಾಲಿಯಾಗಿ ನಿರ್ಮಾಣವಾಗುವ ಉದ್ದೇಶವಿರಿಸಿಕೊಂಡೇ ಸಂಘದ ಆರಂಭವಾಗಿದೆ" ಎಂದು ಹೇಳಿದ್ದರು.

1933ರಲ್ಲಿ ನಾಗಪುರದ ವಿಜಯದಶಮಿ ಉತ್ಸವದಲ್ಲಿ 1000 ಸ್ವಯಂಸೇವಕರು ಪಥಸಂಚಲನದಲ್ಲಿ ಭಾಗವಹಿಸಿದರು. ಸಮಾರಂಭದಲ್ಲಿ ರಾಜಾ ಭೋಂಸ್ಲೆ, ಬಾಬಾರಾವ್ (ಗಣೇಶ ದಾಮೋದರ) ಸಾವರಕರ ಮತ್ತು ಮುಂಜೆ ಅವರು ಹಾಜರಿದ್ದರು. ಸಂಘದ ಜತೆ ಬಾಬಾರಾವ್ ಸಾವರಕರರ ಸಂಬಂಧ 1931ರಲ್ಲೆ ಆರಂಭವಾಗಿತ್ತು. ಅವರು ಅದೇ ವರ್ಷ ತಮ್ಮ ಸ್ವಯಂಸೇವಕ ಸಂಘ 'ತರುಣ ಹಿಂದೂ ಸಭಾ'ವನ್ನು ಸಂಘದ ಜತೆ ವಿಲೀನಗೊಳಿಸಿದರು. ಮಧ್ಯಪ್ರಾಂತದಲ್ಲಿ ಅದರ ಹಲವಾರು ಶಾಖೆಗಳಿದ್ದವು. ಅವರು ಸ್ವಇಚ್ಛೆಯಿಂದಲೇ ಈ ನಿರ್ಣಯವನ್ನು ಕೈಗೊಂಡಿದ್ದು, "ಡಾಕ್ಟರ್, ಇಂದು ನಾನು ತರುಣ ಹಿಂದೂ ಸಭಾವನ್ನು ವಿಸರ್ಜಿಸುತ್ತಿರುವೆ. ನೀವು ಇದನ್ನು ಸಂಘದಲ್ಲಿ ಸೇರಿಸಿಕೊಳ್ಳಿ. ಇನ್ನು ಮುಂದೆ ನನ್ನ ಬಳಿಯಿರುವ ಅಲ್ಪಸ್ವಲ್ಪ ಶಕ್ತಿಯನ್ನು ನಾನು ಸಂಘದ ಕೆಲಸಕ್ಕಾಗಿಯೇ ವ್ಯಯಿಸುವೆ" ಎಂದು ಘೋಷಿಸಿದರು. ಸ್ವಂತಕ್ಕೆ ಯಾವುದೇ ಸ್ಥಾನಮಾನವನ್ನು ಅಪೇಕ್ಷಿಸದೆ ಸಾವರಕರರು ತಮ್ಮ ಕೊನೆ ಉಸಿರಿನವರೆಗೆ ಸಂಘದಲ್ಲಿ ಕ್ರಿಯಾಶೀಲರಾಗಿದ್ದರು.

ಸಂಘದ ಕಾರ್ಯ ವಿಸ್ತಾರ ಸರ್ಕಾರಕ್ಕೆ ತಲೆನೋವಾಗಿ ಪರಿಣಮಿಸಿತ್ತು. ಭಾರತ ಸರ್ಕಾರದ ಕಾರ್ಯದರ್ಶಿ ಎಂ. ಜಿ. ಹಾಲೆಟ್ ಅವರು 1933ರ ಜನವರಿ 27ರಂದು ಸಂಘದ ಕುರಿತು ವಿಸ್ತಾರವಾದ ಮಾಹಿತಿಗಳನ್ನು ಸಂಗ್ರಹಿಸಲು ಒಂದು ಆದೇಶವನ್ನು

---

7. ಕೇಸರಿ, 10 ಅಕ್ಟೋಬರ್ 1933

ಹೊರಡಿಸಿದರು. ಸಂಘದ ಬೆಳವಣಿಗೆಯನ್ನು ತಡೆಯುವುದಕ್ಕಾಗಿ ಮಧ್ಯಪ್ರಾಂತ ಸರ್ಕಾರವು ಕೈಗೊಂಡ ಕ್ರಮಗಳ ಬಗ್ಗೆ ಹಾಲೆಟ್ ಅವರು ಜನವರಿ 23ರಂದು ತಮ್ಮ ತೀವ್ರ ಅಸಮಾಧಾನವನ್ನು ಪ್ರಕಟಿಸಿದರು. ಅವರು ತಮ್ಮ ಟಿಪ್ಪಣಿಯಲ್ಲಿ "ಇಂತಹ ಅರೆ ಸೈನಿಕ ಸಂಘಟನೆಯನ್ನು ಆರಂಭಿಸಲು ಪ್ರಾಂತೀಯ ಸರ್ಕಾರವು ಅನುಮತಿಯನ್ನು ನೀಡಿದುದಾದರೂ ಹೇಗೆ?"ಎಂದು ಪ್ರಶ್ನಿಸಿದ್ದರು. ಡಾ. ಹೆಡಗೇವಾರರ ಸಂಘಟನಾ ಕೌಶಲ್ಯದ ಬಗ್ಗೆ ಬ್ರಿಟಿಷ್ ಸರ್ಕಾರವು ನಡೆಸಿದ್ದ ಅವಲೋಕನದಲ್ಲಿ "ಓರ್ವ ಸಂಘಟಕರಾಗಿ ಡಾ. ಹೆಡಗೇವಾರರು ಅತ್ಯಂತ ಸಾಮರ್ಥ್ಯವಂತರಾಗಿದ್ದು, ಅವರ ಸ್ವಯಂಸೇವಕ ಸಂಘಟನೆಯು ಉನ್ನತಮಟ್ಟದ ಅನುಶಾಸನ ಹಾಗೂ ಕುಶಲತೆಯಿಂದ ಕೂಡಿದುದೂ ಆಗಿದೆ" ಎಂದು ಹೇಳಿದೆ. ಸಾಮ್ರಾಜ್ಯವಾದಿ ಸರ್ಕಾರವು ಅವರನ್ನು 'ಸಂಘದ ಹಿಟ್ಲರ್" ಎಂದು ಸಂಬೋಧಿಸುತ್ತಿತ್ತು.

ಮಧ್ಯಪ್ರಾಂತದಲ್ಲಿ ಇನ್ನೂ ಹಲವಾರು ಸ್ವಯಂಸೇವಕ ಸಂಘಟನೆಗಳೂ ಇದ್ದವು. ಆದರೆ ಅವುಗಳಿಗೆ ಸಂಬಂಧಿಸಿದ ಸರ್ಕಾರದ ನೀತಿ ಪೂರಾ ಭಿನ್ನವಾಗಿತ್ತು. ಸಂಘವೊಂದರ ಜತೆ ಮಾತ್ರ ಸರ್ಕಾರವು ಭೇದಭಾವ ತೋರಿಸುತ್ತಿರುವುದು ಸ್ಪಷ್ಟವಾಗಿ ಗೋಚರಿಸುವಂತಿತ್ತು. ಹನುಮಾನ ವ್ಯಾಯಾಮಶಾಲಾ, ಹನುಮಾನ ವ್ಯಾಯಾಮ ಪ್ರಸಾರಕ ಮಂಡಲಿ, ಪ್ರತಾಪ ವ್ಯಾಯಾಮ ಶಾಲಾ ಮೊದಲಾದುವು ಇವುಗಳಲ್ಲಿ ಪ್ರಮುಖವಾಗಿದ್ದುವು. ಸಂಘದ ರೀತಿಯಲ್ಲೇ ಅವುಗಳಲ್ಲಿ ಸೈನಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು. 1933ರ ಏಪ್ರಿಲ್‌ನ ಗುಪ್ತಚರ ವಿಭಾಗದ ಒಂದು ವರದಿಯಲ್ಲಿ ಮಧ್ಯಪ್ರಾಂತ, ಸಂಯುಕ್ತ ಪ್ರಾಂತ, ಕರ್ನಾಟಕ ಮತ್ತು ಪಂಜಾಬ್‌ನಲ್ಲಿ ಹನುಮಾನ್ ವ್ಯಾಯಾಮ ಮಂಡಲದ 150 ಶಾಖೆಗಳಿವೆ ಎಂದು ಹೇಳಲಾಗಿದೆ. ಅದರ ವಿವಿಧ ಕಾರ್ಯಕ್ರಮಗಳಿಗೆ ಸರ್ಕಾರವೇ ಧನ ಸಹಾಯ ನೀಡುತ್ತಿತ್ತು. ಅದರ ಸೈನಿಕ ಶಿಕ್ಷಣವನ್ನು ನೋಡುವ ಸಲುವಾಗಿ ಸರ್ಕಾರಿ ಅಧಿಕಾರಿಗಳು ಹೋಗುತ್ತಿದ್ದುದೂ ಉಂಟು. ಅದು ಮಾಡುವ 'ಉತ್ತಮ ಕೆಲಸ'ಗಳಿಗಾಗಿ ಪ್ರಶಂಸೆಯನ್ನು ಮಾಡಿರುವುದು ಸಹ ಇದೆ. ಅದರ ತರಬೇತಿದಾರ ಲಕ್ಷ್ಮಣ ಕೊಕರ್ಡೇಕರ್ ಅವರನ್ನು ಹೆಚ್ಚಿನ ತರಬೇತಿಗಾಗಿ ಒಮ್ಮೆ ಜರ್ಮನಿಗೆ ಕಳುಹಿಸಿದ್ದುದೂ ದಾಖಲೆಯಿದೆ. ಈ ಸಂಘಟನೆಗೆ ಜರ್ಮನಿಯ ಜತೆ ಇದ್ದ ಸಂಬಂಧದ ಬಗ್ಗೆ ಸರ್ಕಾರಕ್ಕೆ ಅಷ್ಟಾಗಿ ಚಿಂತೆ ಇರಲಿಲ್ಲ.

ತದ್ವಿರುದ್ಧವಾಗಿ ಸಂಘಕ್ಕೆ ಹೊರಜಗತ್ತಿನೊಡನೆ ಕಿಂಚಿತ್ತೂ ಸಂಬಂಧವಿರಲಿಲ್ಲ. ಅಷ್ಟಾದರೂ ಸರ್ಕಾರವು ಅದನ್ನೇ ತನ್ನ ಕೋಪಕ್ಕೆ ಗುರಿಯಾಗಿ ಮಾಡಿಕೊಂಡಿತ್ತು. ಹೊರಗಿನ ಇನ್ಯಾವ ಸಂಸ್ಥೆಯಿಂದಲೂ ಪ್ರೇರಣೆ ಪಡೆಯದೆ, ಇನ್ಯಾರದೋ ಕೆಲಸದ ಶೈಲಿಯನ್ನು ಅನುಕರಿಸದೆ ಸಂಘವು ತನ್ನದೇ ರೀತಿಯಲ್ಲಿ ಕೆಲಸದಲ್ಲಿ ತೊಡಗಿತ್ತು. ಡಾ. ಹೆಡಗೇವಾರರು "ಬೇರೆ ರಾಷ್ಟ್ರಗಳ ಸಂಘಟನೆಗಳ ಜತೆ ಹಿಂದೂಸ್ಥಾನದ ಸಂಘಟನೆಗಳನ್ನು ಹೋಲಿಸುವುದು ಉಚಿತವಲ್ಲ. ಅವು ಸ್ವತಂತ್ರ ರಾಷ್ಟ್ರಗಳಾಗಿದ್ದು, ನಾವು ಗುಲಾಮಗಿರಿಯಲ್ಲಿರುವ ರಾಷ್ಟ್ರವಾಗಿದ್ದೇವೆ. ಹೀಗಿರಬೇಕಾದಲ್ಲಿ ವಿದೇಶಗಳಲ್ಲಿ

---

8. ಫೈಲ್ 88/33, ಪರಿಶಿಷ್ಟ ಪು. 3–4

ಓಡಾಡಿಕೊಂಡು ಬರುವುದರಿಂದ ಲಾಭವೇನಿದೆ? ನಮ್ಮ ಇತಿಹಾಸದ ಅಧ್ಯಯನ ನಡೆಸಿದಲ್ಲಿ, ಇಲ್ಲೇ ಹಲವಾರು ಸ್ಫೂರ್ತಿಪ್ರದ ಪ್ರಸಂಗಗಳು ಕಾಣಸಿಗುತ್ತವೆ. ನಾವು ನಮ್ಮ ಇತಿಹಾಸವನ್ನು ಆಧರಿಸಿದಂತಹ ಮನೋಧರ್ಮವನ್ನು ಬೆಳೆಸಿಕೊಳ್ಳಬೇಕು" ಎನ್ನುತ್ತಿದ್ದರು.

ಸಾಮ್ರಾಜ್ಯವಾದಿ ಆಡಳಿತವು ನ್ಯಾಯದ ಪರವಾಗಿ ಇರಲೇ ಇಲ್ಲ. ಇನ್ನು ಭಾರತದ ಹಿತದ ಪರವಾಗಿ ಇರುವುದಂತೂ ದೂರವೇ ಉಳಿಯಿತು. ಅದರಿಂದಾಗಿ ಇಲ್ಲಿ ರಾಷ್ಟ್ರವಾದಿ ಶಕ್ತಿಗಳು ತಲೆಯೆತ್ತಿದಾಗಲೆಲ್ಲ, ಅವುಗಳನ್ನು ತುಳಿಯುವುದಕ್ಕಾಗಿಯೇ ಆಡಳಿತವು ಮುಂದಾಗುತ್ತಿತ್ತು. ಸರ್ಕಾರದ ಬಳಿ ದಮನದ ಹಲವಾರು ವಿಧಾನ-ಗಳಿದ್ದವು. ಅದು ಸಂಘದ ವಿರುದ್ಧ ಒಂದೊಂದಾಗಿ ಅವುಗಳ ಪ್ರಯೋಗವನ್ನು ಆರಂಭಿಸಿತು.

## ಸಂಘಸ್ಥಾನದ ವಶ

ನಾಗಪುರದ ಸಂಘ ಶಾಖೆ ನಡೆಯುತ್ತಿದ್ದುದು ಮೋಹಿತೆವಾಡದಲ್ಲಿ. ಕಾನೂನು ಭಂಗ ಚಳವಳಿಯ ನಿಮಿತ್ತ ಡಾ. ಹೆಡಗೇವಾರರು ಮತ್ತು ಸ್ವಯಂಸೇವಕರು ಸೆರೆಮನೆಯಲ್ಲಿದ್ದಾಗ, ನ್ಯಾಯಾಲಯದವತಿಯಿಂದಲೇ ಮೋಹಿತೆವಾಡದ ಒಡೆಯರಾದ ಸ್ವಸರದಾರ ಮೋಹಿತೆಯವರ ಮಕ್ಕಳಿಂದ ಒಂದು ದೂರು ಅರ್ಜಿಯನ್ನು ಪಡೆದು ಸರ್ಕಾರವು ಸಂಘಸ್ಥಾನವನ್ನು ತನ್ನ ಸ್ವಾಧೀನಪಡಿಸಿಕೊಂಡಿತು. ಸರ್ಕಾರದ ಒತ್ತಡಕ್ಕೊಳಗಾಗಿಯೇ ಸಲ್ಲಿಸಲಾಗಿದ್ದ ಅರ್ಜಿ ಅದು. ಆಗ ರಾಜಾ ಲಕ್ಷ್ಮಣರಾವ್ ಭೋಂಸ್ಲೆ ಅವರು ತಮ್ಮ ಹಾಥಿಖಾನದಲ್ಲಿ ಸಂಘದ ಶಾಖೆ ನಡೆಸಲು ಬೇರೊಂದು ಸ್ಥಳ ನೀಡಿದರು. ಆದರೆ ಅವರ ನಿಧನದ ನಂತರ, ಅವರ ಅಪ್ರಾಪ್ತವಯಸ್ಕ ಮಗನ ವತಿಯಿಂದ ಆತಂಕವನ್ನು ಸೃಷ್ಟಿಸಿ, 1933ರ ಜುಲೈ 19ರಂದು ಅಲ್ಲಿನ ಶಾಖೆಯನ್ನು ನಿಲ್ಲಿಸಲು ಆದೇಶವನ್ನು ಹೊರಡಿಸಲಾಯಿತು. ಸಂಘವು ಇದನ್ನು ನ್ಯಾಯಾಲಯದಲ್ಲಿನ ಅನಗತ್ಯದ ವಿವಾದದ ವಸ್ತುವಾಗಿ ಮಾಡದೆ, ಆ ಘಟನೆಯನ್ನೇ ಪೂರಾ ಅಲಕ್ಷಿಸಿತು. ಸಂಘದ ಆರಂಭದ ನಂತರ ಬಂದಿರುವ ಒಂದು 'ಅಸಾಮಾನ್ಯ ಸಂಕಟ'ವೆಂಬಂತೆ ಇದನ್ನು ನೋಡಿದ ಡಾ. ಹೆಡಗೇವಾರರು "ಈ ವಿಧದ ಕ್ರಮಗಳಿಂದ ಸಂಘದ ಕಾರ್ಯವನ್ನು ತಡೆಯಬಹುದೆಂದು ಸರ್ಕಾರವೇನಾದರೂ ಯೋಜಿಸಿದ್ದಲ್ಲಿ, ಅದು ಸರ್ಕಾರದ ಭ್ರಮೆ ಮಾತ್ರ" ಎಂದು ಬರೆದಿದ್ದಾರೆ.

ಮೋಹಿತೆವಾಡದ ಬಳಕೆಯ ಬಗ್ಗೆ ವಿಧಿಸಲಾಗಿದ್ದ ನಿಷೇಧವನ್ನು ಅಲಕ್ಷಿಸಿ ಸಂಘವು ತನ್ನ ಚಟುವಟಿಕೆಗಳಲ್ಲಿ ಎಂದಿನಂತೆ ಮುಂದುವರಿಯಿತು. 1933ರ ಜುಲೈ 20ರಂದು ಅಲ್ಲಿ ಇನ್ನೂರು ಸ್ವಯಂಸೇವಕರು ಸೇರಿ ಶಾಖಾ ನಡೆಸಿ ಆಳುವ ಸರ್ಕಾರಕ್ಕೆ ತಮ್ಮ ನಿಲುವಿನ ಪರಿಚಯ ಮಾಡಿಸಿದರು.

## ಎರಡನೆಯ ಆಘಾತ

ತದನಂತರ ವಸಾಹತುಶಾಹಿ ಸರ್ಕಾರವು ಸಂಘದ ವಿರುದ್ಧ ಇನ್ನೂ ತೀಕ್ಷ್ಣ ಕ್ರಮಗಳನ್ನು ಕೈಗೊಳ್ಳಲು ನಿರ್ಧರಿಸಿತು. 1933ರ ಡಿಸೆಂಬರ್ 20ರಂದು ಸ್ಥಾನೀಯ

ಸ್ವಯಮಾಡಳಿತ ವಿಭಾಗದ ವತಿಯಿಂದ ಸಂಘದ ವಿರುದ್ಧ ಇನ್ನೊಂದು ಸುತ್ತೋಲೆಯನ್ನು ಹೊರಡಿಸಿತು. ಅದರಲ್ಲಿ

"ಜಿಲ್ಲಾ ಪರಿಷತ್ತಿನ ಅನೇಕ ಶಿಕ್ಷಕರು ರಾಷ್ಟ್ರೀಯ ಸ್ವಯಂಸೇವಕ ಸಂಘದ ಸದಸ್ಯರಾಗಿದ್ದಾರೆ ಎಂಬುದಾಗಿ ಸರ್ಕಾರಕ್ಕೆ ತಿಳಿದು ಬಂದಿದೆ. ಈ ಸಂಘಟನೆಯ ಜಾತೀಯ ಸ್ವರೂಪದ ಕಾರಣದಿಂದಾಗಿ ಸರ್ಕಾರಿ ನೌಕರರು ಅದರ ಸದಸ್ಯರಾಗುವುದಾಗಲಿ, ಅದರ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವುದಾಗಲಿ ಮಾಡದಂತೆ ತಡೆಯನ್ನು ವಿಧಿಸಲಾಗಿದೆ. ಮಧ್ಯಪ್ರಾಂತದ ಸ್ಥಾನೀಯ ಸ್ವಶಾಸನ ಸಚಿವ ಖಾತೆಯ ಅಭಿಪ್ರಾಯದಂತೆ, ಸ್ಥಾನೀಯ ಆಡಳಿತ ನೌಕರರು ಸಹ ಈ ಸಂಘಟನೆಯ ಜತೆ ಯಾವುದೇ ವಿಧದ ಸಂಬಂಧವಿರಿಸಿಕೊಳ್ಳುವುದು ಸರಿಯಲ್ಲ. ಅವರು ಸಮಾಜದ ಎಲ್ಲ ವರ್ಗಗಳನ್ನು ಪ್ರತಿನಿಧಿಸುವಂತಹ ಸಂಸ್ಥೆಗಳಲ್ಲಿ ಕೆಲಸಕ್ಕಾಗಿ ನಿಯುಕ್ತರಾಗಿರುವವರು. ಸಾಮಾನ್ಯ ಮತದಾರನಿಂದ ಆಯ್ಕೆಯಾಗುವಂತಹ ಈ ಸ್ಥಾನೀಯ ಸಂಸ್ಥೆಗಳಿಗೆ ತೆರಿಗೆ ವಸೂಲಿ ಮಾಡುವ ಅಧಿಕಾರ ಪ್ರಾಪ್ತವಾಗಿರುತ್ತದೆ. ಈ ಕಾರಣಕ್ಕಾಗಿ ತಮ್ಮ ನೌಕರರು ಯಾವುದೇ ಜಾತೀಯ ಸಂಘಟನೆಯಲ್ಲಿ ಭಾಗವಹಿಸಲು ಸ್ಥಾನೀಯ ಸಂಸ್ಥೆಗಳು ಅವಕಾಶ ನೀಡುವುದು ಪೂರಾ ಅನುಚಿತವಾಗುತ್ತದೆ. ನಿಮ್ಮ ವಿಭಾಗದಲ್ಲಿರುವ ಎಲ್ಲ ಸ್ಥಾನೀಯ ಸಂಸ್ಥೆಗಳಿಗೆ ಈ ವಿಚಾರವನ್ನು ಚೆನ್ನಾಗಿ ಮನದಟ್ಟುಗೊಳಿಸಿ. ಅವರು ತಮ್ಮ ನೌಕರರಿಗೆ ಈ ನಿಟ್ಟಿನಲ್ಲಿ ಸ್ಪಷ್ಟವಾಗಿ ಆದೇಶ ನೀಡುವಂತೆ ಸೂಚನೆ ಕೊಡಬೇಕೆಂದು ನಿಮ್ಮ ಬಳಿ ನಾನು ವಿನಂತಿಸುತ್ತಿದ್ದೇನೆ" ಎಂದು ತಿಳಿಸಲಾಗಿತ್ತು.

ಈ ಸುತ್ತೋಲೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕೆಂಬ ಆದೇಶದ ಜತೆಯಲ್ಲಿ ಪ್ರಾಂತದ ಎಲ್ಲ ಪ್ರದೇಶಗಳಿಗೆ ಕಳುಹಿಸಲಾಗಿತ್ತು. ಹಲವಾರು ಸ್ಥಾನೀಯ ಸಂಸ್ಥೆಗಳು ಇದಕ್ಕೆ ಕಾರ್ಯರೂಪ ಕೊಡಲು ಆರಂಭ ಸಹ ಮಾಡಿದ್ದವು. ಉದಾಹರಣೆಗಾಗಿ, ವರ್ಧಾದಲ್ಲಿ ಸಂಘದ ಆಲಿಪುರ ಘಟಕಕ್ಕೆ ಶಾಲೆಯ ಮೈದಾನದಲ್ಲಿ ದಸರಾ ಉತ್ಸವದ ಆಚರಣೆಗೆ ಅನುಮತಿಯನ್ನು ನಿರಾಕರಿಸಲಾಯಿತು. "ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಶಾಲೆಯ ಮೈದಾನದಲ್ಲಿ ಸಂಘದ ಸಮ್ಮೇಳನವನ್ನು ನಡೆಸಲು ಅವಕಾಶ ನೀಡಬಾರದೆಂದು ನಿರ್ಧರಿಸಿದ್ದಾರೆ. ಅದಕ್ಕಾಗಿ ಉಪ ಪೊಲೀಸ್ ಅಧೀಕ್ಷಕರ ಬಳಿ ದೂರು ಸಲ್ಲಿಸಿ ಅವರಿಂದ ಸಹಕಾರವನ್ನೂ ಅವರು ಪಡೆದಿದ್ದಾರೆ"[9] ಎಂದು 'ಹಿತವಾದ' ಪತ್ರಿಕೆಯು ತಿಳಿಸಿತ್ತು. ಸರ್ಕಾರದ ಈ ದಮನಕಾರಿ ಕ್ರಮಗಳ ಕಾರಣಕ್ಕಾಗಿ ಡಾ.ಹೆಡಗೇವಾರರು ಸರ್ಕಾರದ ಮುಂದೆ ಡೊಗ್ಗಾಲು ಹಾಕಲಿಲ್ಲ. ಮಾತ್ರವಲ್ಲ ಅವರ ಆತ್ಮವಿಶ್ವಾಸವು ಕಿಂಚಿತ್ತೂ ಕುಸಿಯಲಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ ಸಂಘದ ಚಟುವಟಿಕೆಗಳನ್ನು ಇನ್ನಷ್ಟು ಚುರುಕುಗೊಳಿಸಲಾಯಿತು. ಪ್ರಾಂತದಲ್ಲಿನ ವಿವಿಧ ಜನಪ್ರಿಯ ರಾಜಕಾರಣಿಗಳು, ಸಮಾಜ ಸೇವಕರು ಮತ್ತು ಸಾಹಿತಿಗಳನ್ನು ಸಂಘದ ಶಾಖೆಗಳಿಗೆ ಹಾಗೂ ಶಿಬಿರಗಳಿಗೆ ಆಹ್ವಾನಿಸಲು ಆರಂಭಿಸಲಾಯಿತು. ಅಖಿಲ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಕಾಕಾಸಾಹೇಬ ಖಾಡಿಲ್ಕರ್ ಅವರು

---

9. ಹಿತವಾದ, 8 ಅಕ್ಟೋಬರ್ 1933, ಪು. 5

ಸಮ್ಮೇಳನಕ್ಕೆ ಬಂದಿದ್ದ ಪ್ರತಿನಿಧಿಗಳ ಸಹಿತ ಸಂಘದ ಶಿಬಿರಕ್ಕೆ ಬಂದರು. ಅವರು ಸ್ವಯಂಸೇವಕರನ್ನು ಉದ್ದೇಶಿಸಿ ಭಾಷಣವನ್ನೂ ಮಾಡಿದರು. ತಮ್ಮ ಭಾಷಣದಲ್ಲಿ ಅವರು, "ನಾವು ಸಾಹಿತಿಗಳು ಮಾತಿನ ವೀರರಾಗಿದ್ದೇವೆ. ಆದರೆ ಸಂಘವಾದರೋ ಪ್ರತ್ಯಕ್ಷವಾಗಿ ಶಕ್ತಿಯ ಉಪಾಸನೆಯನ್ನು ಮಾಡುತ್ತಿದೆ. ಇಲ್ಲಿ ಕಾಣುತ್ತಿರುವುದು ಪ್ರತ್ಯಕ್ಷ ಶಕ್ತಿಯ ಮೂರ್ತಸ್ವರೂಪವೇ. ಸಾವಿರಾರು ಭಾಷಣಗಳಿಂದ ಮತ್ತು ಲೇಖನಗಳಿಂದ ನಾವು ಸಾಧಿಸಲಾಗದುದನ್ನು, ಜನರ ಮನದಲ್ಲಿ ಅಂಕಿತಗೊಳಿಸಲಾಗದುದನ್ನು ಸಂಘದ ಈ ಕಾರ್ಯದಿಂದ ಮಾಡಲು ಸಾಧ್ಯವಾಗಿದೆ. ಮಹಾವಿಚಾರಗಳು ಮನದಲ್ಲಿ ಇಳಿಯುವುದು ಪ್ರತ್ಯಕ್ಷವಾಗಿ ದೃಶ್ಯರೂಪದಲ್ಲಿ ಅವುಗಳನ್ನು ಕಂಡಾಗಲೇ. ಸಂಘವು ಇದಕ್ಕೊಂದು ಅತ್ಯಂತ ಪ್ರಭಾವಿಯಾದ ಉದಾಹರಣೆಯಾಗಿದೆ"[10] ಎಂದಿದ್ದರು. ಭಾವುಸಾಹೇಬ ಕಾಲೀಕರ್, ಮಾಧವರಾವ್ ಚಿಟಣವೀಸ್, ಟಿ.ಜೆ. ಕೇದಾರ, ಎಂ.ಎಸ್. ಅಣೆ, ಹರಿಭಾವು ಮುಂಜೆ, ಸರದಾರ ಯಶವಂತರಾವ್ ಗುಜರ್, ಬಲವಂತರಾವ್ ದೇಶಮುಖ್‌ರಂತಹ ರಾಜಕೀಯ ನಾಯಕರು ಸಂಘದ ಉತ್ಸವಗಳಲ್ಲಿ ಭಾಗವಹಿಸಿ ಸರ್ಕಾರಿ ಸುತ್ತೋಲೆಯನ್ನು ಟೀಕಿಸಿದರು.

ಸರ್ಕಾರವು ಜಾರಿಗೊಳಿಸಿದ್ದ ಈ ಎರಡೂ ಸುತ್ತೋಲೆಗಳಲ್ಲಿ ಒಂದು ಮೂಲಭೂತ ವ್ಯತ್ಯಾಸವಿತ್ತು. 1932ರಲ್ಲಿ ಹೊರಡಿಸಲಾಗಿದ್ದ ಸುತ್ತೋಲೆಯಲ್ಲಿ ಸಂಘವನ್ನು 'ಜಾತೀಯ' ಮತ್ತು 'ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವ' ಎಂಬ ಎರಡು ಸಂಗತಿಗಳನ್ನು ಆಧಾರವನ್ನಾಗಿ ಮಾಡಲಾಗಿತ್ತು. ಆದರೆ 1933ರ ಸುತ್ತೋಲೆಯಲ್ಲಿ ಕೇವಲ 'ಜಾತೀಯ ಸಂಘಟನೆ' ಎಂಬ ಆರೋಪ ಮಾತ್ರವಿತ್ತು.

## ಅಗ್ನಿ ಪರೀಕ್ಷೆ

ಸಂಘದ ಕೆಚ್ಚು, ಶಕ್ತಿ ಮತ್ತು ಜನಪ್ರಿಯತೆ ಇವುಗಳನ್ನು ಪರೀಕ್ಷಿಸುವ ಸಲುವಾಗಿಯೇ ಸರ್ಕಾರವು ಕ್ರಮಕ್ರಮವಾಗಿ ದಮನದ ಪ್ರಯತ್ನಗಳನ್ನು ಹೆಚ್ಚಿಸುತ್ತಿರುವುದಾಗಿ ಡಾ. ಹೆಡಗೇವಾರರಿಗೆ ಅನಿಸಿತು. ಮೊದಲ ಸುತ್ತೋಲೆಯನ್ನು ಅವರು ಪೂರಾ ಕಡೆಗಣಿಸಿದ್ದರು. ಆದರೆ ಎರಡನೇ ಸುತ್ತೋಲೆಯ ನಂತರ ಅವರೂ ಸಾಮ್ರಾಜ್ಯವಾದಿ ಸರ್ಕಾರಕ್ಕೆ ಸಂಘದ ಶಕ್ತಿಯ ಪರಿಚಯ ಮಾಡಿಸುವ ಅಗತ್ಯವಿದೆ ಎಂದು ಬಗೆದು ಹೋರಾಟಕ್ಕಾಗಿ ಟೊಂಕ ಕಟ್ಟಿದರು.

1934ರ ಜನವರಿಯಲ್ಲಿ ವಿಧಾನ ಪರಿಷತ್ತಿನ ಅಧಿವೇಶನ ಕೊನೆಗೊಂಡಿತ್ತು. ಆಗ ಡಾ. ಹೆಡಗೇವಾರರು ತಮ್ಮ ಹೆಚ್ಚಿನ ಸಮಯವನ್ನು ಪರಿಷತ್ತಿನ ಸದಸ್ಯರ ಭೇಟಿಗಾಗಿ ಮೀಸಲಿರಿಸಿದರು. ಇನ್ನೊಂದು ಕಡೆ ಪತ್ರಗಳ ಮೂಲಕ ಸ್ಥಾನಸ್ಥಾನಗಳಲ್ಲಿರುವ ಸಂಘದ ಪ್ರಮುಖರಿಗೂ ಅವರು ನಿರ್ದೇಶನಗಳನ್ನು ನೀಡುತ್ತಿದ್ದರು. ಸಂಘದ ಓರ್ವ ಪ್ರಮುಖರಾದ ಉಮಾಕಾಂತ ಆಪಟೆ ಅವರಿಗೆ ಬರೆದ ಪತ್ರದಲ್ಲಿ "ಈ ಸುತ್ತೋಲೆಯ ಕಾರಣದಿಂದಾಗಿ ಭೀತಿಗೊಳಗಾಗುವ ಪ್ರಶ್ನೆಯೇ ಇಲ್ಲ. ಇಂತಹ ಸುತ್ತೋಲೆಯನ್ನು ವಿರೋಧಿಸಿ ಜಿಲ್ಲಾ

---

10. ಜ್ಞಾನ ಪ್ರಕಾಶ, 29 ಡಿಸೆಂಬರ್ 1933, ಪು. 4

ಪರಿಷತ್ತು ಮತ್ತು ನಗರಪಾಲಿಕೆಗಳು ಠರಾವುಗಳನ್ನು ಸ್ವೀಕರಿಸುವಂತೆ ಮಾಡಿ ಅಂತಹ ಖಂಡನೆಯ ಠರಾವುಗಳನ್ನು ಸರ್ಕಾರಕ್ಕೆ ತಲುಪಿಸುವ ವ್ಯವಸ್ಥೆ ಮಾಡಬೇಕಾಗಿದೆ" ಎಂದು ಹೇಳಿದ್ದಾರೆ. ಸರ್ಕಾರವು ಸಂಘದ ಮೇಲೆ ಹೊರಿಸಿರುವ ಆರೋಪದ ಬಗ್ಗೆ ಅವರು ಇನ್ನೊಂದು ಪತ್ರದಲ್ಲಿ, "ಸಂಘದ ವಿರೋಧಿಗಳು ಎದುರಿಸುತ್ತಿರುವ ಫಜೀತಿಯೆಂದರೆ, ಆರೋಪಿಸಿದ ದೋಷಗಳನ್ನು ಅವರಿಗೆ ಸಾಬೀತುಪಡಿಸಲಾಗುವುದಿಲ್ಲ ಮತ್ತು ಸಂಘದ ಬೆಳವಣಿಗೆಯನ್ನು ಸಹಿಸಲು ಸಹ ಆಗುವುದಿಲ್ಲ. ಸಂಘವು ಎಂದೂ ಜಾತೀಯವಾಗಿಲ್ಲ ಮತ್ತು ಯಾವುದೇ ಜಾತೀಯ ಚಳವಳಿಯಲ್ಲಿ ಸಂಘವು ಪಾಲ್ಗೊಂಡೂ ಇಲ್ಲ. ಜತೆಯಲ್ಲಿ ಇತರ ಜಾತಿ ಮತ್ತು ಮತೀಯರ ವಿರುದ್ಧ ದ್ವೇಷ ಅಥವಾ ತಿರಸ್ಕಾರದ ಭಾವನೆಯನ್ನು ಸಂಘವು ಬೆಳೆಸಿಯೂ ಇಲ್ಲ. ಆದಕ್ಕಾಗಿ ಸಂಘವನ್ನು ಜಾತೀಯವೆನ್ನಲಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಹೊಸ ಸುತ್ತೋಲೆಯು ಅನಗತ್ಯ ಮತ್ತು ನ್ಯಾಯಸಮ್ಮತವಲ್ಲ" ಎಂದು ಬರೆದಿದ್ದರು.

ಡಾ. ಹೆಡಗೇವಾರರ ಯೋಜನೆಗೆ ಕಾರ್ಯರೂಪ ನೀಡುವ ಕೆಲಸಗಳು ಆರಂಭವಾದುವು. ಪ್ರಾಂತದಲ್ಲಿನ ಸ್ಥಳೀಯ ಸಂಸ್ಥೆಗಳು ಸುತ್ತೋಲೆಯ ವಿರುದ್ಧ ಠರಾವುಗಳನ್ನು ಸ್ವೀಕರಿಸಿ ಸರ್ಕಾರಕ್ಕೆ ಕಳುಹಿಸಲು ತೊಡಗಿದವು. ಅಕೋಲಾ ಜಿಲ್ಲಾ ಪರಿಷತ್ತು ಸಂಘವನ್ನು 'ಜಾತೀಯ'ವೆಂಬಂತೆ ಬಿಂಬಿಸಬೇಕೆಂಬ ಸರ್ಕಾರದ ಪ್ರಯತ್ನವನ್ನು ನಿಂದಿಸುವ ಒಂದು ಠರಾವನ್ನು ಸ್ವೀಕರಿಸಿದುದಲ್ಲದೆ, ಅದರಲ್ಲಿ ಡಾ.ಹೆಡಗೇವಾರರನ್ನು "ಜಾತಿಭೇದದಿಂದ ಮೇಲೆದ್ದು ತರುಣರನ್ನು ಸಂಘಟಿಸುವ ಕಾರ್ಯ" ಮಾಡುತ್ತಿರುವುದಕ್ಕಾಗಿ ತನ್ನ ಮೆಚ್ಚುಗೆಯನ್ನೂ ಸೂಚಿಸಿತು.

1933ರ ಮಾರ್ಚ್ 10ರಂದು ನಾಗಪುರದ ನಗರಪಾಲಿಕೆಯು ಸಂಘವನ್ನು ಸಮರ್ಥಿಸಿ ಠರಾವನ್ನು ಸ್ವೀಕರಿಸಿತು. ಅದು ನಾಗಪುರದಲ್ಲಿ ದಂಗೆಯನ್ನು ತಡೆದು ಶಾಂತಿಸ್ಥಾಪನೆ ಮಾಡುವ ಸಲುವಾಗಿ ಡಾ. ಹೆಡಗೇವಾರರು ನಡೆಸಿದ ಪ್ರಯತ್ನಗಳನ್ನು ಉಲ್ಲೇಖಿಸಿ ಅವರ ಬಗ್ಗೆ ಪ್ರಶಂಸೆಯ ಮಾತುಗಳನ್ನು ಹೇಳಿತು. ಮಾರ್ಚ್ 21 ರಂದು ಸಾವನೇರ ನಗರಪಾಲಿಕೆಯು ಸ್ವೀಕರಿಸಿದ ಠರಾವಿನಲ್ಲಿ, "ರಾಷ್ಟ್ರೀಯ ಸ್ವಯಂಸೇವಕ ಸಂಘ ಎಂಬ ಹೆಸರಿನ ಸಂಸ್ಥೆಯು ಜಾತೀಯವಲ್ಲ ಎಂಬುದು ನಗರಪಾಲಿಕೆಯ ಸಮಿತಿಯ ಅಭಿಪ್ರಾಯವಾಗಿದೆ. ಅದರ ಚಟುವಟಿಕೆಗಳೂ ಆತಂಕಕಾರಿಯಾದವುಗಳಲ್ಲ. ನಗರಪಾಲಿಕೆಯ ನೌಕರರು ಸಂಘದ ಚಟುವಟಿಕೆಗಳಲ್ಲಿ ಭಾಗವಹಿಸುವುದರಿಂದ ನಗರಪಾಲಿಕೆಯ ಕೆಲಸಕಾರ್ಯಗಳಲ್ಲಿ ಈವರೆಗೆ ಯಾವ ತೊಂದರೆಯೂ ಉಂಟಾಗಿಲ್ಲ. ಮುಂದೆ ಉಂಟಾಗುವ ಸಂಭವವೂ ಇಲ್ಲ ಎಂಬುದು ಸಹ ಸಮಿತಿಗೆ ಖಚಿತವಾಗಿದೆ. ಈ ಸಂಸ್ಥೆಯು ತರುಣರಿಗೆ ಶಾರೀರಿಕ ಮತ್ತು ನೈತಿಕ ಶಿಕ್ಷಣ ಕೊಡುತ್ತಿರುವುದರಿಂದ ಅದು ನಿಜಕ್ಕೂ ತುಂಬ ಉಪಯುಕ್ತವಾಗಿರುವ ಸಂಸ್ಥೆಯಾಗಿದೆ. ಹೀಗಾಗಿ ಸಮಿತಿಯು ಸುತ್ತೋಲೆಗೆ ತನ್ನ ವಿರೋಧವನ್ನು ಪ್ರಕಟಿಸುವುದಲ್ಲದೆ ಅದನ್ನು ವಾಪಸ್ ಪಡೆಯಬೇಕೆಂದು ವಿನಂತಿಸುತ್ತದೆ" ಎಂದು ಹೇಳಲಾಗಿದೆ.

---


11. ಹಿತವಾದ, 25 ಮಾರ್ಚ್ 1934

ವರ್ಧಾ, ಭಂಡಾರಾ, ಕಾಟೋಲ ಮತ್ತು ಉಮರೇಡ್‌ನ ನಗರಪಾಲಿಕೆಗಳೂ ಇದೇ ವಿಧದ ಠರಾವನ್ನು ಸ್ವೀಕರಿಸಿದವು. ವರ್ಧಾ ಜಿಲ್ಲಾ ಪರಿಷತ್ತು ಸಂಘವು ಒಂದು ಜಾತೀಯ ಸಂಘಟನೆಯಲ್ಲ ಎಂಬ ಅಭಿಪ್ರಾಯ ಹೊಂದಿದ್ದರೂ, ಪರಿಷತ್ತಿನಲ್ಲಿ ಸರ್ಕಾರದ ಸಮರ್ಥಕರದೇ ಬಹುಮತವಿತ್ತು. ಸರ್ಕಾರದ ಒತ್ತಡಕ್ಕೆ ಮಣಿದು 1933ರ ಆಗಸ್ಟ್ 7ರಂದು ಜಿಲ್ಲಾ ಪರಿಷತ್ತು ತನ್ನ ನೌಕರರ ಮೇಲೆ ಸಂಘದ ಚಟುವಟಿಕೆಗಳಲ್ಲಿ ಭಾಗವಹಿಸುವ ವಿಷಯದಲ್ಲಿ ಪ್ರತಿಬಂಧ ಹೇರಿತು. ಈ ನಿಷೇಧಕ್ಕೆ ಸಂಘದ ಕ್ರಾಂತಿಕಾರಿ ಚಟುವಟಿಕೆಗಳನ್ನು ಕಾರಣವಾಗಿ ಹೇಳಲಾಗಿತ್ತು. ವರ್ಧಾದಲ್ಲಿ ಸಂಘದ ಸ್ವಯಂಸೇವಕರು 3000ಕ್ಕಿಂತ ಹೆಚ್ಚು ಇದ್ದರು. ಅವರಲ್ಲಿ ಭಾರೀ ಸಂಖ್ಯೆಯಲ್ಲಿ ಸ್ಥಾನೀಯ ಸಂಸ್ಥೆಗಳ ನೌಕರರು ಮತ್ತು ಶಿಕ್ಷಕರಿದ್ದರು. 1933ರ ವಿಜಯದಶಮಿಯ ಉತ್ಸವದ ನಂತರ ಹೆಚ್ಚಿನ ಸಂಖ್ಯೆಯಲ್ಲಿ ಜಿಲ್ಲಾ ಪರಿಷತ್ತಿನ ಶಾಲೆಗಳ ಶಿಕ್ಷಕರು ಮತ್ತು ಇತರ ನೌಕರರನ್ನು ಕೆಲಸದಿಂದ ವಜಾ ಮಾಡಲಾಯಿತು[12]. ಈ ರೀತಿಯಲ್ಲಿ ಕಾನೂನು ಭಂಗದ ಚಳವಳಿಯ ನಂತರ ವೇಗವಾಗಿ ಬೆಳೆಯುತ್ತಿದ್ದ ಸಂಘದ ವಿಸ್ತಾರಕ್ಕೆ ತಡೆಯೊಡ್ಡಿ ಅದನ್ನು ದುರ್ಬಲಗೊಳಿಸಲು ಸರ್ಕಾರವು ಇನ್ನಿಲ್ಲದ ವಿಧದ ಪ್ರಯತ್ನಗಳಲ್ಲಿ ತೊಡಗಿತು. 1932 ರಿಂದ 1934ರ ನಡುವಿನ ಎರಡು ವರ್ಷಗಳು ವಾಸ್ತವಿಕವಾಗಿ ಸಂಘ ಮತ್ತು ಸರ್ಕಾರದ ನಡುವೆ ಪ್ರತ್ಯಕ್ಷವಾದ ಮುಖಾಮುಖಿ ಹೋರಾಟದ ಕಾಲವೇ ಆಗಿದ್ದವು. ಈ ಎರಡು ವರ್ಷಗಳಲ್ಲಿ ಡಾ. ಹೆಡಗೇವಾರರ ಪ್ರೇರಣೆಯಿಂದಾಗಿ ಸಂಘವು ಕಲ್ಲುಬಂಡೆಯಂತೆ ನಿಂತು ಸಾಮ್ರಾಜ್ಯವಾದಿ ಆಡಳಿತದ ಜತೆ ಹೋರಾಟ ನಡೆಸಿತು. ಈ ಹೋರಾಟದಿಂದಾಗಿ ಸರ್ಕಾರಿ ಸುತ್ತೋಲೆಯ ವಿರುದ್ಧ ಸಾಮಾಜಿಕ ಮತ್ತು ರಾಜಕೀಯ ಮಟ್ಟದಲ್ಲಿ ಏಕವಿಧವಾಗಿ ಜನಾಭಿಪ್ರಾಯ ಸಹ ರೂಪುಗೊಂಡಿತು. ಪ್ರಾಂತದ ವಿಧಾನ ಪರಿಷತ್ತಿನಲ್ಲೂ ಸರ್ಕಾರದ ಮುಖದ ನೀರಿಳಿಸುವಂತಹ ಚರ್ಚೆ ನಡೆಯಿತು. ಇವೆಲ್ಲವೂ ಪ್ರಾಂತದಲ್ಲಿ ಸಂಘವು ಜನಮನ್ನಣೆ ಪಡೆದಿರುವುದಕ್ಕೆ ಹಾಗೂ ಡಾ. ಹೆಡಗೇವಾರರ ಜನಪ್ರಿಯತೆಗೆ ಸಾಕ್ಷಿ ಹೇಳುವಂತಿದ್ದವು.

12. ಹಿತವಾದ, 26 ನವೆಂಬರ್ 1933

## ಐತಿಹಾಸಿಕ ಚರ್ಚೆ

ಸ್ಥಳೀಯ ಸಂಸ್ಥೆಗಳ ನೌಕರರು ಮತ್ತು ಶಿಕ್ಷಕರು ಸಹ ಸಂಘದ ಚಟುವಟಿಕೆಗಳಲ್ಲಿ ಭಾಗವಹಿಸದಂತೆ 1933ರ ಡಿಸೆಂಬರ್‌ನಲ್ಲಿ ಇನ್ನೊಂದು ಸುತ್ತೋಲೆ ಹೊರಡಿಸಿ ನಿಷೇಧ ಹೇರಿದಾಗ, ವಿಧಾನ ಪರಿಷತ್ತಿನ ಮುಂದಿನ ಮುಂಗಡ ಪತ್ರ ಅಧಿವೇಶನದಲ್ಲಿ ಭಾರೀ ಕಿರಿಕಿರಿಯನ್ನು ಎದುರಿಸಬೇಕಾಗಿ ಬರಬಹುದೆಂಬುದರ ಕಲ್ಪನೆ ಮಧ್ಯಪ್ರಾಂತದ ಸರ್ಕಾರಕ್ಕೆ ಕಿಂಚಿತ್ತೂ ಇರಲಿಲ್ಲ. ಅದರ ಈ ಅಹಂಕಾರಕ್ಕೆ ಹಿನ್ನೆಲೆಯಾಗಿದ್ದುದು ಈ ಹಿಂದಿನ ಅನುಭವವೇ. 1932ರಲ್ಲಿ ಮೊದಲ ಸುತ್ತೋಲೆ ಹೊರಡಿಸಿ ಪ್ರಾಂತೀಯ ಸರ್ಕಾರಿ ನೌಕರರು ಸಂಘದಲ್ಲಿ ಪಾಲ್ಗೊಳ್ಳಬಾರದೆಂಬ ನಿಷೇಧ ಹೇರಿದಾಗ ಪ್ರಾಂತದ ರಾಜಕಾರಣದಲ್ಲಿ ಅಷ್ಟೇನೂ ಗಲಿಬಿಲಿಯುಂಟಾಗಿರಲಿಲ್ಲ. ಎರಡನೇ ಸುತ್ತೋಲೆ ಹೊರಡಿಸಿದಾಗ ಜಿಲ್ಲಾ ಪರಿಷತ್ತು ಮತ್ತು ನಗರಪಾಲಿಕೆಗಳ ಮೂಲಕ, ಸಂಘವನ್ನು ಸಮರ್ಥಿಸಿ ಠರಾವುಗಳು ಸ್ವೀಕಾರವಾಗಿವೆ ಮತ್ತು ಅವು ತನಗೆ ತಲುಪಿವೆ ಎಂಬ ಸಮಾಚಾರವನ್ನು ಸಹ ಸರ್ಕಾರವು ಅಷ್ಟೇನೂ ಗಂಭೀರವಾಗಿ ತೆಗೆದುಕೊಂಡಿರಲಿಲ್ಲ. ಬ್ರಿಟಿಷ್ ಆಡಳಿತಕ್ಕೆ ಪೂರಾ ನಿಷ್ಠಾವಂತರಾಗಿದ್ದ ಪ್ರಾಂತದ ಗೃಹಮಂತ್ರಿ ರಾಘವೇಂದ್ರ ರಾವ್ ಅವರು, ತಮ್ಮ ಒಡಕು ಸೃಷ್ಟಿಸುವ ರಾಜಕಾರಣ ಕೌಶಲ್ಯದ ಬಗ್ಗೆ ಭಾರೀ ಭರವಸೆ ಇಟ್ಟುಕೊಂಡವರಾಗಿದ್ದರು. ಸರ್ಕಾರವನ್ನು ಹಲವಾರು ಬಾರಿ ಅವರು ರಾಜಕೀಯ ಬಿರುಗಾಳಿಯಿಂದ ರಕ್ಷಿಸಿದ್ದೂ ಉಂಟು. ಅವರಿಗೆ ಸರ್ಕಾರವು ಗೃಹಖಾತೆಯ ಹೊಣೆಯನ್ನು ವಹಿಸಿದ್ದುದು ಸಹ ಅವರ ಇಂತಹ ಕುಶಲತೆಯ ಕಾರಣಕ್ಕಾಗಿಯೇ.

ಮುಂಗಡ ಪತ್ರ ಅಧಿವೇಶನಕ್ಕಿಂತ ಮುಂಚಿನ ಎರಡು ತಿಂಗಳವರೆಗೆ ಡಾ.ಹೆಡಗೇವಾರರು ವ್ಯಾಪಕವಾಗಿ ಜನಸಂಪರ್ಕ ನಡೆಸಿದರು. ಪ್ರಾಂತದ ರಾಜಕಾರಣಿಗಳಿಗೆ ಸಂಘವೇನೂ ಅಪರಿಚಿತವಾಗಿರಲಿಲ್ಲ. ಎಲ್ಲರಿಗೂ ಅದು ಚೆನ್ನಾಗಿಯೇ ತಿಳಿದಿತ್ತು. ಆದರೆ ಎಲ್ಲರಿಗೂ ಮೊಟ್ಟಮೊದಲ ಬಾರಿಗೆ ಸಂಘದ ಸಂಸ್ಥಾಪಕರ ಮುಖದಿಂದಲೇ ನೇರವಾಗಿ ಮತ್ತು ವಿವರವಾದ ಮಾತುಕತೆಯ ಮೂಲಕ ಸಂಘದ ಬಗ್ಗೆ ತಿಳಿಯಲು ಅವಕಾಶ ದೊರೆಯಿತು. ಎಲ್ಲರ ಜತೆ ಮಾಡಲಾಗಿದ್ದ ತಮ್ಮ ಭೇಟಿಯಲ್ಲಿ ಡಾ. ಹೆಡಗೇವಾರರು ಸರ್ಕಾರದ ಅತಿರೇಕದ ವಿಶ್ವಾಸ ಮತ್ತು ರಾಘವೇಂದ್ರ ರಾವ್ ಅವರ ಅಹಂಕಾರವನ್ನು ನೆಲಸಮ ಮಾಡುವಂತಹ ಪ್ರಯತ್ನ ಮಾಡಿದರು.

1934ರ ಮುಂಗಡ ಪತ್ರ ಅಧಿವೇಶನ ನಿಜಕ್ಕೂ ಅಸಾಮಾನ್ಯವೆನಿಸಿತು. ಕೌನ್ಸಿಲ್‌ನಲ್ಲಿ ಸರ್ಕಾರವು ಅನಿರೀಕ್ಷಿತವಾದ ವಿರೋಧವನ್ನು ಎದುರಿಸಬೇಕಾಯಿತು. ಮಧ್ಯಪ್ರಾಂತದ ರಾಜಕಾರಣವು ಗುಂಪು ಜಗಳಕ್ಕೆ ಸುವಿಖ್ಯಾತವಾದುದು. ಅಲ್ಲಿದ್ದ ಗುಂಪುಗಳ ಸಂಖ್ಯೆ ಪ್ರತ್ಯಕ್ಷವಾಗಿ ಸದನದಲ್ಲಿದ್ದ ರಾಜಕಾರಣಿಗಳಿಗಿಂತ ಹೆಚ್ಚು ಎಂಬ ಪ್ರತೀತಿ ಇತ್ತು. ಸದಸ್ಯರ

ಬ್ರಾಹ್ಮಣ, ಬ್ರಾಹ್ಮಣೇತರ, ಮರಾಠಿ, ಹಿಂದಿ, ತಿಲಕವಾದಿ, ಗಾಂಧಿವಾದಿ, ಮುಸಲ್ಮಾನ ಇತ್ಯಾದಿ ಏನೇನೋ ಸಂಕುಚಿತ ವಾದಗಳನ್ನು ಆಧರಿಸಿ ಭಿನ್ನಭಿನ್ನ ಗುಂಪುಗಳಾಗಿ ಒಡೆದು ಹೋಗಿದ್ದರು. ಆದರೆ ಸಂಘದ ವಿಚಾರದಲ್ಲಿ ತಂತಮ್ಮ ಒಳಜಗಳವನ್ನು ಮರೆತು ಹಿಂದೆಂದೂ ಕಂಡಿರದ ಏಕತೆಯನ್ನು ಪ್ರದರ್ಶಿಸಿದರು. ಸಂಘದ ಸಮರ್ಥನೆ ಮತ್ತು ಸುತ್ತೋಲೆಗೆ ವಿರೋಧವನ್ನು ಪ್ರಾಂತದ ಪ್ರತಿಯೊಂದು ವರ್ಗದ ಹಾಗೂ ಪ್ರತಿಯೊಂದು ಕ್ಷೇತ್ರದ ಪ್ರತಿನಿಧಿಗಳು ಸ್ಪಷ್ಟ ಮತ್ತು ನಿರ್ಭೀತ ಧ್ವನಿಯಲ್ಲಿ ಮಾಡಿದರು. ವಿಶ್ವವಿದ್ಯಾಲಯದ ವಿದ್ವಾಂಸರು, ಔದ್ಯೋಗಿಕ ಮಜೂರರು, ಮುಸಲ್ಮಾನರು, ಮಹಿಳೆಯರು, ಹಿಂದುಳಿದ ವರ್ಗದವರು, ಬ್ರಾಹ್ಮಣರು, ಬ್ರಾಹ್ಮಣೇತರರು ಹೀಗೆ ಎಲ್ಲರಲ್ಲೂ ಸಹಮತವಿರುವುದನ್ನು ಕಂಡು ಸರ್ಕಾರವು ಸುಸ್ತಾಯಿತು. ಸಾಮ್ರಾಜ್ಯವಾದಿ ಮನೋಭಾವದವರಿಗೆ ಪ್ರತಿನಿಧಿಯಾಗಿದ್ದ ರಾಘವೇಂದ್ರರಾವ್ ಅವರಿಗೆ ಕೌನ್ಸಿಲ್‌ನ ಒಳಗೆ ಡಾ. ಹೆಡಗೇವಾರರ ರಾಷ್ಟ್ರವಾದಿ ಕಾರ್ಯದ ವಿರಾಟ ಸ್ವರೂಪ ಪ್ರತ್ಯಕ್ಷವಾಗಿ ಕಾಣುವಂತಾಯಿತು. ಸಂಘವನ್ನು ಲಘುವಾಗಿ, ಇನ್ನೂ ಎಳಸು ಮತ್ತು ರಾಜಕಾರಣದಲ್ಲಂತೂ ಅನಾಥ ಇತ್ಯಾದಿ ರೀತಿಯಲ್ಲಿ ಕಾಣುತ್ತಿದ್ದ ಸರ್ಕಾರಕ್ಕೆ ತನ್ನ ತಪ್ಪಿನ ಬಗ್ಗೆ ಪಶ್ಚಾತ್ತಾಪಪಡಲು ಸಹ ಕೌನ್ಸಿಲ್‌ನ ಸದಸ್ಯರು ಅವಕಾಶವನ್ನೇ ನೀಡಲಿಲ್ಲ. ವಿರೋಧವು ಅಷ್ಟು ತೀವ್ರ, ಸತ್ಯ ಆಧರಿತ ಮತ್ತು ತರ್ಕಯುಕ್ತವೂ ಆಗಿದ್ದ ಕಾರಣದಿಂದಾಗಿ ಸರ್ಕಾರವು ಸೋತದಷ್ಟೇ ಅಲ್ಲ, ಅತ್ಯಂತ ನಾಚಿಕೆಗೇಡಿನ ಅವಮಾನವನ್ನು ಕಾಣುವಂತಾಯಿತು. ಪ್ರಶ್ನೋತ್ತರದ ಮತ್ತು ಚರ್ಚೆಯ ಪ್ರಸಂಗದಲ್ಲಿ ಸದಸ್ಯರು ಸರ್ಕಾರವನ್ನು ಉತ್ತರಿಸಲಾಗದ ಸ್ಥಿತಿಗೆ ಗುರಿಪಡಿಸಿ ಸರ್ಕಾರನಿಷ್ಠರ ಬೌದ್ಧಿಕ ದಿವಾಳಿತನವನ್ನು ಬಯಲಿಗೆಳೆದರು.

ಸಂಘಟನೆಯೊಂದಕ್ಕೆ ಒಂದು ವಿಶೇಷತೆಯಾಗಿ ಅದರ ರಾಷ್ಟ್ರೀಯವಾದಿ ಚಾರಿತ್ರ್ಯವೇ ಇರಲು ಸಾಧ್ಯವಿದೆ. ಆದರೆ ಅದರ ಸಂಸ್ಥಾಪಕರ ನೈತಿಕತೆ, ನಿರ್ಮಲವಾದ ಚಾರಿತ್ರ್ಯ ಮತ್ತು ರಾಷ್ಟ್ರ ಸಮರ್ಪಿತ ಬದುಕಿನ ಪೂರಾ ವಿಶ್ವಾಸಾರ್ಹತೆಯೂ ಸೇರಿದಲ್ಲಿ ಆಗ ಅದಕ್ಕೆ ಇನ್ನಷ್ಟು ಶಕ್ತಿ, ಪ್ರಭಾವ ಮತ್ತು ಜನಪ್ರಿಯತೆಯೂ ಕೂಡಿಬಂದು ಅದರ ಸದಸ್ಯರ ಪ್ರಮಾಣಕ್ಕಿಂತ ಹಲವು ಪಟ್ಟು ಅದು ಹೆಚ್ಚಾಗಬಲ್ಲದು. ಡಾ. ಹೆಡಗೇವಾರರ ಜೀವನ ಅದಕ್ಕೊಂದು ಉದಾಹರಣೆಯೇ ಆಗಿದೆ.

ಭಾರತದಲ್ಲಿ ವಸಾಹತುಶಾಹಿ ಆಡಳಿತದ ಸಂಸದೀಯ ಇತಿಹಾಸದಲ್ಲೆ ಒಂದು ಸಂಘಟನೆಯ ಸ್ಥಾಪನೆ, ಅದರ ಸಂಸ್ಥಾಪಕರು, ಅದರ ಸ್ವರೂಪ, ಸಿದ್ಧಾಂತ ಮತ್ತು ಸದಸ್ಯರು ಇತ್ಯಾದಿ ವಿಷಯಗಳಲ್ಲಿ ಎಡಬಿಡದೆ ಮೂರು ದಿನಗಳ ಕಾಲ ಚರ್ಚೆ ನಡೆದುದು ಅದೇ ಮೊದಲ ಬಾರಿಗೆ ಮತ್ತು ಪ್ರಾಯಶಃ ಅದೇ ಕೊನೆಯ ಬಾರಿಗೆ ಇರಲೂಬಹುದು. 1934ರ ಬಜೆಟ್ ಅಧಿವೇಶನದ ಪ್ರಸಂಗದಲ್ಲಿ ಮಾರ್ಚ್ 3, 7 ಮತ್ತು 8ರಂದು ಪ್ರಾಂತದ ಕೌನ್ಸಿಲ್‌ನಲ್ಲಿ ಸಂಘದ ಕುರಿತು ನಡೆದ ಚರ್ಚೆಯು, ವಸಾಹತುಶಾಹಿ ಆಡಳಿತದ ವಿರುದ್ಧ ಹೋರಾಟದಲ್ಲಿ ಸಂಘದ ಬದ್ಧತೆಯನ್ನು ಪರಿಚಯಿಸುವಂತಹ ಒಂದು ಅತ್ಯಂತ ಮಹತ್ವದ ಐತಿಹಾಸಿಕ ದಾಖಲೆಯೇ ಆಗಿದೆ. ಆದರೆ ಖೇದಕರ ಆಶ್ಚರ್ಯವೆಂದರೆ ಸ್ವಾತಂತ್ರ್ಯ ಪ್ರಾಪ್ತಿಯ ನಂತರ, ಅದಕ್ಕಾಗಿ ನಡೆದ ಹೋರಾಟದಲ್ಲಿ ಸಂಘದ ಪಾತ್ರವೇನಿತ್ತು ಎಂಬ ಬಗ್ಗೆ ನಡೆದ ಅನೇಕ ಚರ್ಚೆಗಳಲ್ಲಿ ಈ ಘಟನೆಯ ಉಲ್ಲೇಖ ಸಹ ಆಗಿಲ್ಲ ಎಂಬುದೇ.

## ಪ್ರಶ್ನೋತ್ತರ ಕಾಲದಲ್ಲಿ

ಸುತ್ತೋಲೆಯಲ್ಲಿ ಸಂಘವನ್ನು ಜಾತೀಯವೆಂದು ಆರೋಪಿಸಲಾಗಿತ್ತು. ಅಧಿವೇಶನದ ಆರಂಭದಲ್ಲಿ ಮಾರ್ಚ್ 3ರಂದು ಸದಸ್ಯರು ಪ್ರಶ್ನೋತ್ತರ ಕಾಲದಲ್ಲಿ

ಈ ವಿಷಯವನ್ನು ಎತ್ತಿಕೊಂಡರು. ಸದಸ್ಯರು ಸರ್ಕಾರದಿಂದ 'ಜಾತೀಯ' ಪದದ ಅರ್ಥದ ಬಗ್ಗೆ ವಿವರಣೆಯನ್ನು ಕೇಳಿದರು. ಸರ್ಕಾರವು ಜಾರಿಕೊಳ್ಳಲು ಪ್ರಯತ್ನಿಸಿತು. ಆದರೆ ಸಂಘವನ್ನು ಜಾತೀಯ ಸಂಘಟನೆಯೆಂದಾಗಿ ಯಾವ ಆಧಾರದ ಮೇಲೆ ಗುರುತಿಸಲಾಗಿದೆ ಎಂಬ ಬಗ್ಗೆ ವಿವರ ತಿಳಿಸಲು ಸದಸ್ಯರು ಒತ್ತಾಯಿಸಿದಾಗ, ರಾಘವೇಂದ್ರರಾವ್ ಅವರು, "ಸಂಘದ ಪ್ರಮುಖರ ಭಾಷಣದಿಂದ ಅವರು ತಮ್ಮ ಧ್ಯೇಯ ಹಾಗೂ ಕಾರ್ಯಪದ್ಧತಿಗೆ ಮಾದರಿಯಾಗಿ ಜರ್ಮನಿಯ ನಾಝಿವಾದ ಅಥವಾ ಹಿಟ್ಲರ್‌ಶಾಹಿಯನ್ನು ಸ್ವೀಕರಿಸಿರುವುದಾಗಿ ಅನಿಸುತ್ತದೆ" ಎಂದು ಉತ್ತರಿಸಿದರು. ಅದಕ್ಕೆ ಸವಾಲೊಡ್ಡಿದ ಸದಸ್ಯರು ಅವರ ಅಂತಹ ಭಾಷಣವನ್ನು ಸಭೆಯಲ್ಲಿ ಪ್ರಸ್ತುತಪಡಿಸಬೇಕೆಂಬ ಬೇಡಿಕೆಯನ್ನು ಮುಂದಿರಿಸಿದಾಗ ರಾವ್ ಅವರು ಅಸಹಾಯಕರಾದರು. ಆಗ ಸಭಾಧ್ಯಕ್ಷರು ಮಧ್ಯ ಪ್ರವೇಶಿಸಿ ಈ ಕುರಿತು ಮುಂದೆ ಎಂದಾದರೂ ಚರ್ಚೆ ನಡೆಸಬಹುದು ಎಂದು ಹೇಳಿ ಅಂದಿನ ಮಟ್ಟಿಗೆ ಪ್ರಸಂಗಕ್ಕೆ ಮುಕ್ತಾಯ ಹೇಳಿದರು. "ಯಾವುದಾದರೂ ಮುಸ್ಲಿಂ ಸಂಘಟನೆಯು ಜಾತೀಯವಾಗಿ ಸರ್ಕಾರಕ್ಕೆ ಕಂಡಿರುವುದಿದೆಯೇ?" ಎಂಬ ಪ್ರಶ್ನೆಯಿಂದಲೂ ಅವರು ನುಣುಚಿಕೊಂಡರು. ರಾವ್ ಸಂಘದ ಮೇಲೆ ಆರೋಪಿಸುತ್ತಿದ್ದುದು 'ನಾಝೀವಾದ'ದ ಪಲ್ಲವಿಯೊಂದನ್ನೇ.

ಸಂಘದ ಜನಪ್ರಿಯತೆ ಎಷ್ಟಿದೆ ಹಾಗೂ ಡಾ. ಹೆಡಗೇವಾರರ ಕುರಿತು ತನ್ನ ಅಂದಾಜು ಪೂರಾ ತಪ್ಪಿದೆ ಎಂಬುದರ ಅರಿವು ಪ್ರಶ್ನೋತ್ತರ ಕಾಲಾವಧಿಯಲ್ಲಿ ಸರ್ಕಾರಕ್ಕೆ ಉಂಟಾಯಿತು. ಅಷ್ಟಾದರೂ ಇನ್ನೂ ಮುಂದೆ ಆಗಲಿರುವುದರ ಸುಳಿವು ಅದಕ್ಕೆ ಕಿಂಚಿತ್ತೂ ಆಗಲಿಲ್ಲ.

## ಕಡಿತ ನಿರ್ಣಯ

ಬಜೆಟ್ ಅಧಿವೇಶನದಲ್ಲಿ ಮಾರ್ಚ್ 7ರಂದು 'ಸಾಮಾನ್ಯ ಆಡಳಿತ' ವಿಷಯದ ಬಗ್ಗೆ ಸದನದಲ್ಲಿ ಚರ್ಚೆ ಆರಂಭವಾದಂತೆಯೇ, ಓರ್ವ ಹಿರಿಯ ಸದಸ್ಯರಾಗಿದ್ದ ವಿ.ಡಿ. ಕೋಲತೆ ಅವರು ಸಂಘದ ಬಗ್ಗೆ ಜಾರಿಗೊಳಿಸಲಾದ ಸುತ್ತೋಲೆಯನ್ನು ವಿರೋಧಿಸಿ 'ಬೇಡಿಕೆ ಕ್ರಮಾಂಕ 8'ರ ವಿರುದ್ಧ ಒಂದು ರೂಪಾಯಿ ಕಡಿತದ ನಿರ್ಣಯವನ್ನು ಮಂಡಿಸಿದರು. ಈ ಕಡಿತ ನಿರ್ಣಯವನ್ನು ಮಂಡಿಸುತ್ತ ಅವರು ಹೇಳಿದುದು 'ಬೇಡಿಕೆ ಕ್ರಮಾಂಕ 8ರ ರೀತ್ಯಾ ಒಂದು ರೂಪಾಯಿ ಕಡಿತಕ್ಕಾಗಿ ನಾನು ನಿರ್ಣಯವನ್ನು ಮಂಡಿಸುವುದರ ಕಾರಣವೇನೆಂದರೆ, ಸರ್ಕಾರಿ ನೌಕರರು ಸಂಘದಲ್ಲಿ ಭಾಗವಹಿಸುವುದನ್ನು ನಿಷೇಧಿಸಿ 1932ರಲ್ಲಿ ಸರ್ಕಾರದ ವತಿಯಿಂದ ಜಾರಿಗೊಳಿಸಲಾದ ಸುತ್ತೋಲೆಯ ಬಗ್ಗೆ ಚರ್ಚೆಯಾಗುವ ಅಗತ್ಯವಿದೆ. ಈ ಸುತ್ತೋಲೆಯನ್ನು ಜಾರಿಗೊಳಿಸಲು ಸರ್ಕಾರವು ನೀಡಿರುವ ಕಾರಣವೆಂದರೆ, ತನ್ನ ಅಭಿಪ್ರಾಯದಂತೆ ಸಂಘದ ಚಟುವಟಿಕೆಗಳು 'ಕಮ್ಯುನಲ್' ಆಗಿರುವುದರಿಂದ ಸರ್ಕಾರಿ ನೌಕರರು ಅದರಲ್ಲಿ ಭಾಗವಹಿಸಬಾರದು ಎಂಬುದಾಗಿದೆ. ಪ್ರಶ್ನೋತ್ತರ ಕಾಲಾವಧಿಯಲ್ಲಿ ನಾವು 'ಕಮ್ಯುನಲಿಸಂ' ಪದದ ಅರ್ಥವನ್ನು ಸನ್ಮಾನ್ಯ ಗೃಹಸಚಿವರಿಂದ ತಿಳಿಯಲು ಅಪೇಕ್ಷೆಪಟ್ಟೆವು. ಆದರೆ ದೌರ್ಭಾಗ್ಯದಿಂದ ನಮಗೆ ಅದರ ಅರ್ಥವಾಗಲಿ, ವಿವರಣೆಯಾಗಲಿ ಲಭಿಸಲಿಲ್ಲ. ಶಬ್ದಕೋಶದಲ್ಲಿ ನೀಡಲಾಗಿರುವ ವಿವರಣೆಯಿಂದ 'ಕಮ್ಯುನಲ್' ಅಥವಾ 'ಕಮ್ಯುನಲಿಸಂ' ಎಂಬ ಪದವು ಉತ್ಪತ್ತಿಯಾದುದು 'ಕಮ್ಯೂನ್' ಎಂಬ ಶಬ್ದದಿಂದ ಎಂದು ಗೊತ್ತಾಗಿದೆ. 'ಕಮ್ಯೂನ್' ಎಂದರೆ ಒಂದು ವಿಶಿಷ್ಟ ಪ್ರಕಾರದ ಸರ್ಕಾರ/ವ್ಯವಸ್ಥೆ ಎಂದಾಗುತ್ತದೆ.... ನಮಗನಿಸುವಂತೆ 'ಕಮ್ಯುನಲ್' ಪದಕ್ಕೆ ಬೇರೊಂದು ಅರ್ಥ ಸರ್ಕಾರದ ಬಳಿಯಿದೆ ಹಾಗೂ ಅದನ್ನು ನಮಗೆ ತಿಳಿಸಲು ಸರ್ಕಾರವು

ಇಚ್ಛಿಸುತ್ತಿಲ್ಲ. ಸಾಮಾನ್ಯವಾದ ಶಬ್ದಕೋಶದಲ್ಲಿರುವ ಅರ್ಥವೇ ಸರ್ಕಾರದ ಬಳಿಯಲ್ಲೂ ಇರುವುದೇ ಆದಲ್ಲಿ, ಸರ್ಕಾರಿ ನೌಕರರು ಈ ಸಂಘಟನೆಯಲ್ಲಿ ಭಾಗವಹಿಸಿದಲ್ಲಿ ತಮ್ಮ ಕರ್ತವ್ಯದ ನಿರ್ವಹಣೆಯಲ್ಲಿ ಅವರಿಗೆ ಯಾವುದೇ ತೊಂದರೆಯಾಗದಿರುವುದರಿಂದ ಅವರನ್ನು ತಡೆಯಲಾಗುತ್ತದೆ ಏಕೆ ಎಂಬ ಕಾರಣ ನನಗಂತೂ ಗೊತ್ತಾಗುವುದಿಲ್ಲ... ಈಗೀಗ 'ಕಮ್ಯುನಲ್' ಪದದ ಅರ್ಥವನ್ನು "ಯಾವುದೊ ಒಂದು ಸಮುದಾಯದ ಹಿತದ ಪೋಷಣೆ ಮಾಡುತ್ತ ಇನ್ನೊಂದು ಸಮುದಾಯದ ವಿರುದ್ಧ ತಿರಸ್ಕಾರವನ್ನು ಸೃಷ್ಟಿಸುವುದು" ಎಂಬಂತೆ ಮಾಡಲಾಗಿದೆ. 'ಕಮ್ಯುನಲ್' ಪದದ ಅರ್ಥವನ್ನು ಈ ನಿಟ್ಟಿನಲ್ಲಿ ತೆಗೆದುಕೊಂಡಿರುವುದೇ ಆದಲ್ಲಿ, ಈಗ ಯಾವ ಸಂಘದ ವಿರುದ್ಧವಾಗಿ ಈ ಸುತ್ತೋಲೆಯನ್ನು ಹೊರಡಿಸಲಾಗಿದೆಯೊ, ಅದಕ್ಕೆ ಈ ಅರ್ಥ ಅನ್ವಯವಾಗುತ್ತದೆಯೇ ಅಥವಾ ಇಲ್ಲವೇ ಎಂಬ ಬಗ್ಗೆಯೂ ನಾವು ತಿಳಿಯಬೇಕಾಗಿದೆ. ಸಂಘದ ಚಟುವಟಿಕೆಗಳನ್ನು ಅವಲೋಕಿಸಿದಾಗ ಗೊತ್ತಾಗುವ ಸಂಗತಿಯೆಂದರೆ, ಅದಕ್ಕೆ ಮೂರು ಉದ್ದೇಶಗಳಿವೆ. ಮೊದಲನೆಯದು ಹಿಂದೂ ಸಮಾಜದ ಸ್ಥಿತಿಯನ್ನು ಸುಧಾರಿಸುವುದು. ಎರಡನೆಯದು ಹಿಂದೂ ತರುಣರಿಗೆ ಶಾರೀರಿಕ ತರಬೇತಿಯನ್ನು ನೀಡುವುದು; ಮತ್ತು ಮೂರನೆಯದು ಹಿಂದೂಗಳಲ್ಲಿ ಅನುಶಾಸನದ ಸ್ವಭಾವವನ್ನು ಬೆಳೆಸುವುದು. ಈ ಮೂರು ಸಂಗತಿಗಳನ್ನು ಗಣನೆಗೆ ತೆಗೆದುಕೊಂಡಲ್ಲಿ ಪ್ರಾಂತೀಯ ಸರ್ಕಾರವಾಗಲಿ, ಸ್ಥಳೀಯ ಸಂಸ್ಥೆಗಳಾಗಲಿ ತಮ್ಮ ನೌಕರರು ಸಂಘದ ಚಟುವಟಿಕೆಗಳಲ್ಲಿ ಭಾಗವಹಿಸದಂತೆ ತಡೆಯಲು ಯಾವುದೇ ಕಾರಣಗಳಿಲ್ಲ ಎಂಬುದು ಗೊತ್ತಾಗುವುದು.

"ಹಿಂದೂಗಳ ಸ್ವಯಂಸೇವಕ ಸಂಘಟನೆಯಿರುವಂತೆ ಮುಸಲ್ಮಾನರದೂ ಇದೆ. ದಲಿತರದೂ ಇದೆ.... ಅವುಗಳಲ್ಲಿ ಭಾಗವಹಿಸಲು ಯಾವುದೇ ಅಡ್ಡಿಯಿಲ್ಲವೆಂದಾದಲ್ಲಿ, ಸರ್ಕಾರವು ತನ್ನ ನೌಕರರು ಸಂಘದಲ್ಲಿ ಭಾಗವಹಿಸುವುದನ್ನು ಮಾತ್ರ ತಡೆಯುವುದೇಕೆ ಎಂಬುದು ನನಗೆ ಅರ್ಥವಾಗುವುದಿಲ್ಲ."

ಸರ್ಕಾರವು ವಿಭಿನ್ನ ಸ್ವಯಂಸೇವಕ ಸಂಘಗಳ ಜತೆ ಭೇದ ಭಾವದಿಂದ ವರ್ತಿಸುತ್ತಿದೆಯಷ್ಟೇ ಅಲ್ಲದೆ ತನ್ನ ನೌಕರರನ್ನು ಗುಲಾಮರನ್ನಾಗಿಸುತ್ತಿದೆ ಎಂಬ ಆರೋಪವನ್ನು ಅವರು ಸರ್ಕಾರದ ಮೇಲೆ ಹೊರಿಸಿದರು.

ಸುತ್ತೋಲೆಯ ಸಮರ್ಥನೆಗಾಗಿ ತನ್ನ ವಾದವನ್ನು ಮಂಡಿಸಿ ಚರ್ಚೆಯನ್ನು ಮುಂದುವರಿಸಬೇಕಾದುದು ಈಗ ಸರ್ಕಾರದ ಹೊಣೆಯಾಯಿತು. ಮುಖ್ಯಕಾರ್ಯದರ್ಶಿ ರೌಟನ್ ಅವರು ಕಡಿತ ನಿರ್ಣಯವನ್ನು ವಿರೋಧಿಸುತ್ತ "ಸರ್ಕಾರಿ ನೌಕರರ ಆಚಾರ ಸಂಹಿತೆಯ ನಿಯಮ 21ರ ರೀತ್ಯಾ ಅವರು ತಮ್ಮ ಕರ್ತವ್ಯದ ನಿರ್ವಹಣೆಯಲ್ಲಿ ನಿಷ್ಪಕ್ಷ ಹಾಗೂ ಸ್ವತಂತ್ರವಾಗಿ ಇರಬೇಕಾದ ಅಗತ್ಯವಿರುವುದರಿಂದ ಯಾವುದೇ ರಾಜಕೀಯ ಸಂಘಟನೆಗಳ ಜತೆ ಅವರು ಸಂಬಂಧ ಹೊಂದಿರಬಾರದು. ಈ ನೀತಿಯು ಇತರ ಜಾತೀಯ ಸಂಘಟನೆಗಳಿಗೂ ಅನ್ವಯವಾಗುತ್ತದೆ" ಎಂದು ಹೇಳಿದರು. ಮುಂದೆ ಅವರು ಸಂಘವನ್ನು ಕುರಿತಾದ ತಮ್ಮದೇ ಕಪೋಲಕಲ್ಪಿತವಾದ ಸರ್ಕಾರಿ ಇತಿಹಾಸವನ್ನು ಹೇಳುತ್ತ, "ಸಂಘವನ್ನು ಸ್ಥಾಪಿಸಿರುವವರ ಬಗ್ಗೆ ಕೆಲವು ಮಾತುಗಳನ್ನು ನಾನು ಹೇಳಬೇಕಾಗಿದೆ. 1918ರಲ್ಲಿ ಜಾತೀಯ ದಂಗೆಗಳಾದಾಗ ಡಾ. ಮುಂಜೆ ಅವರು ಇದರ ಸ್ಥಾಪನೆಯನ್ನು ಮಾಡಿದರು. ಇದರ ಉದ್ದೇಶವಿರುವುದು ಜಾತೀಯ ಹಿತಗಳ ರಕ್ಷಣೆ ಮಾಡುವಂತಹದು. ಇದರ ಸ್ಥಾಪನೆಯಾದಾಗ ಉದ್ದೇಶವಿದ್ದುದಂತೂ ಜಾತೀಯವೆಂಬುದು ನಿಶ್ಚಿತ. ಇತ್ತೀಚೆಗೆ ತಾನೇ ಅವರು ಡಾ. ಹೆಡಗೇವಾರರ

ಉಪಸ್ಥಿತಿಯಲ್ಲಿ ನಡೆದ ಒಂದು ಸಭೆಯಲ್ಲಿ 'ಹಿಂದೂಸ್ಥಾನವಿರುವುದು ಹಿಂದೂಗಳಿಗಾಗಿ ಮತ್ತು ಮುಂದೆ ಬರಲಿರುವ ಸರ್ಕಾರದಲ್ಲೂ ಹಿಂದೂಗಳದೇ ಆಧಿಪತ್ಯ ಇರುತ್ತದೆ. ಹಿಂದೂಗಳಲ್ಲದವರಿಗೆ ರಾಜಕೀಯ ಅಧಿಕಾರಗಳನ್ನು ಮತ್ತು ಸೌಕರ್ಯಗಳನ್ನು ನೀಡಬೇಕೇ ಯಾ ಬೇಡವೇ ಎಂಬುದು ಸಹ ಹಿಂದೂಗಳನ್ನು ಅವಲಂಬಿಸಿದೆ' ಎಂದು ಹೇಳಿದ್ದಾರೆ. ಹೀಗೆ ವಿಭಿನ್ನ ಸಮುದಾಯಗಳ ಅಧಿಕಾರಗಳ ಬಗ್ಗೆ ವಿಶೇಷವಾದ ಚರ್ಚೆ ಮತ್ತು ವಿಚಾರ ವಿನಿಮಯಗಳು ಸಂಘದಲ್ಲಿ ನಡೆಯುತ್ತವೆ. ಇಂತಹ ಪರಿಸ್ಥಿತಿಯಲ್ಲಿ ಸರ್ಕಾರಿ ನೌಕರರು ಪೂರ್ಣವಾಗಿ ತಟಸ್ಥರಾಗಿರುವುದು ಅತ್ಯಗತ್ಯವಿದೆ" ಎಂದರು.

'ಕಮ್ಯುನಲ್' ಪದದ ವಿವರಣೆಯನ್ನು ನೀಡುತ್ತ ರೌಟನ್ ಅವರು ಮುಂದೆ, "ಭಂಡಾರಾದ ನನ್ನ ಗೆಳೆಯರು 'ಕಮ್ಯುನಲ್' ಶಬ್ದವನ್ನು ವಿವರಿಸುವುದರಲ್ಲಿ ಸರ್ಕಾರದ ವಿಫಲತೆಯನ್ನು ಉಲ್ಲೇಖಿಸಿದ್ದಾರೆ. ಆದರೆ ಅವರು ಯಾವ ವಿವರಣೆಯನ್ನು ನೀಡಿದ್ದಾರೋ, ಅದನ್ನೇ ಸರ್ಕಾರವು ಸಹ ಪ್ರಯೋಗಿಸುತ್ತದೆ. ಇತರ ಸಮುದಾಯಗಳ ಬಗ್ಗೆ ದ್ವೇಷವನ್ನು ಹರಡಿಸುವುದೇ 'ಕಮ್ಯುನಲ್' ಸಂಸ್ಥೆಗಳ ತಾತ್ಪರ್ಯವೆಂದು ಅವರು ಹೇಳಿದ್ದಾರೆ. ಯಾವುದೇ ಸಮುದಾಯದ ಕೇವಲ ಹಿತಕ್ಕಾಗಿ ಮಾತ್ರ ಕೆಲಸ ಮಾಡುವಂತಹವುಗಳನ್ನು ಇಲ್ಲಿ ಒಳಪಡಿಸಲಾಗುವುದಿಲ್ಲ. ಉದಾಹರಣೆಗಾಗಿ ಅಂಜುಮಾನ್‌ನಂತಹ ಲೌಕಿಕ ಸಂಸ್ಥೆಗಳನ್ನು ಇದರಲ್ಲಿ ಒಳಪಡಿಸಿಲ್ಲ" ಎಂದು ತಿಳಿಸಿದರು.

ರೌಟನ್ ಅವರ ಈ ಭಾಷಣದಿಂದ ಗೃಹಸಚಿವರ ಆತ್ಮವಿಶ್ವಾಸ ಹೆಚ್ಚಿತು. ಅವರು "ಸುತ್ತೋಲೆಯು ಸಂಘದ ಚಟುವಟಿಕೆಗಳನ್ನು ಆಧರಿಸಿದೆ" ಎಂದರು. ಸದಸ್ಯರು ಯಾವುದೇ ಅಲ್ಪಸಂಖ್ಯಾತ ಸಮುದಾಯದ ವತಿಯಿಂದ ಸಂಘದ ವಿರುದ್ಧ ದೂರು ಸಲ್ಲಿಸಲ್ಪಟ್ಟಿದೆಯೇ ಎಂಬ ಬಗ್ಗೆ ಅವರಿಂದ ತಿಳಿಯಲು ಅಪೇಕ್ಷಿಸಿದಾಗ, ರಾವ್ ಅವರು ಭಂಡಾರಾ ಜಿಲ್ಲೆಯ ಅಲ್ಪಸಂಖ್ಯಾತ ಸಮುದಾಯದವರು ಸಂಘದ ಬಗ್ಗೆ ತಮ್ಮ ಆತಂಕ ವ್ಯಕ್ತಪಡಿಸಿರುವುದನ್ನು ತಿಳಿಸಿದರು. ಆದರೆ ಬರಾರ ನಗರ ಪಾಲಿಕೆಯ ನಗರೀಯ ಮುಸಲ್ಮಾನ ಕ್ಷೇತ್ರದ ಪ್ರತಿನಿಧಿಯಾಗಿ, ಪ್ರಾಂತದ ಮತ್ತು ಸದನದಲ್ಲೂ ಸರ್ವ ಜನಪ್ರಿಯ ನಾಯಕರೂ ಆಗಿದ್ದ ಎಂ.ಎಸ್. ರಹಮಾನ್ ಅವರು ಭಾಷಣಕ್ಕಾಗಿ ಎದ್ದು ನಿಂತಾಗ, ರಾವ್ ಅವರ 'ಅಲ್ಪಸಂಖ್ಯಾತವಾದ'ವೆಲ್ಲ ಸಂಪೂರ್ಣವಾಗಿ ನೆಲಕಚ್ಚಿತು. ಸರ್ವ ರಾಷ್ಟ್ರವಾದಿ ಹಾಗೂ ಮುಸಲ್ಮಾನರೂ ಆಗಿ ಅವರು ಹೇಳಿದ ಮಾತುಗಳು 'ಒಡೆದು ಆಳುವ' ಸಾಮ್ರಾಜ್ಯವಾದಿ ನೀತಿಯ ಬುಡವನ್ನೇ ಕತ್ತರಿಸಿ ಹಾಕುವಂತಿದ್ದವು. ಮೊಟ್ಟಮೊದಲನೆಯದಾಗಿ ಅವರು, ಯಾವುದೇ ಮುಸಲ್ಮಾನ ಸಂಘಟನೆಯ ವತಿಯಿಂದ ಸಂಘದ ವಿರುದ್ಧ ಮನವಿ ಸಲ್ಲಿಸಿದ್ದು, ಅದರಲ್ಲಿ ಸಂಘವನ್ನು ನಿಷೇಧಿಸಬೇಕೆಂಬ ಬೇಡಿಕೆ ಬಂದಿದೆಯೇ ಎಂಬ ಬಗ್ಗೆ ಗೃಹಸಚಿವರಿಂದ ತಿಳಿಯಲು ಅಪೇಕ್ಷೆ ಪಟ್ಟರು. ಸರ್ಕಾರದ ಉತ್ತರ 'ಇಲ್ಲ'ವೆಂದಾದಾಗ ಸಂಘದ ರಾಷ್ಟ್ರವಾದಿ ಹಾಗೂ ಸಕಾರಾತ್ಮಕ ಹಿಂದುತ್ವದ ಬಗ್ಗೆ ಮೆಚ್ಚುಗೆಯನ್ನು ಪ್ರಕಟಪಡಿಸುತ್ತಾ ರಹಮಾನ್ ಅವರು ಹೇಳಿದರು:

"ಇಂತಹ ವಿಷಯಗಳ ಬಗ್ಗೆ ಮಾತಾಡುವುದೇನೋ ಒಳ್ಳೆಯದೇ. ಆದರೆ ಮೌನವಾಗಿರುವುದು ಇನ್ನೂ ಒಳ್ಳೆಯದು ಎಂಬುದು ನನ್ನ ಅನುಭವ. ನಾನು ಈ ವಿಷಯದಲ್ಲಿ ಮಾತಾಡಲು ಇಷ್ಟಪಡುವುದಿಲ್ಲ. ಆದರೂ ಕೆಲವು ಸದಸ್ಯರ ಆಗ್ರಹವನ್ನು ಗೌರವಿಸಿ ಈಗ ಮಾತಾಡುತ್ತಿರುವೆ. ಆಂಗ್ಲೋ ಇಂಡಿಯನ್ನರ, ಮುಸಲ್ಮಾನರ, ಹಿಂದೂಗಳ ಮತ್ತು ಔದ್ಯೋಗಿಕ ಸಮುದಾಯಗಳ ಸಂಘಟನೆಗಳಿರುತ್ತವೆ. ಅವುಗಳೆಲ್ಲ ಜಾತೀಯ ಎನ್ನಲಾಗುತ್ತವೆಯೇ? 'ದಿ ಆಂಗ್ಲೋ ಇಂಡಿಯನ್ ಪಂಚಾಯತ್' ಅನ್ನು ಜಾತಿ

ಜಾತೀಯ ಸಂಸ್ಥೆ ಅನ್ನಬಹುದು. ಆಲ್ ಇಂಡಿಯಾ ಮುಸ್ಲಿಂ ಕಾನ್ಫರೆನ್ಸ್, ಮಾರವಾಡಿ ಸುಧಾರ ಲೀಗ್ ಮೊದಲಾದವುಗಳನ್ನು ಜಾತೀಯ ಸಂಘಟನೆಗಳೆನ್ನಬಹುದು. ಕಾರಣವೆಂದರೆ ಅವೆಲ್ಲವೂ ಸಮಾಜದ ಯಾವುದೋ ವಿಶಿಷ್ಟ ಸಮುದಾಯಗಳನ್ನು ಪ್ರತಿನಿಧಿಸುತ್ತವೆ..... ತನ್ನ ಸಮುದಾಯದ ಹಿತದ ಪೋಷಣೆಗಾಗಿ ಇರುವಂತಹ ಮುಸ್ಲಿಂ ಸಂಘಟನೆಯೊಂದನ್ನು ವಿವೇಕಿಯಾಗಿರುವ ಯಾವುದೇ ವ್ಯಕ್ತಿಯಾದರೂ ತಪ್ಪಾಗಿ ಗ್ರಹಿಸುವನು ಎಂದು ನನಗನಿಸುವುದಿಲ್ಲ. ಅದೇ ರೀತಿಯಲ್ಲಿ ಆಕ್ರಮಣಕಾರಿಯಲ್ಲದ ಮತ್ತು ದ್ವೇಷಪೂರ್ಣ ಭಾವನೆಯಿಲ್ಲದ ಯಾವುದೇ ಹಿಂದೂ ಸಂಘಟನೆಯನ್ನೂ ಪ್ರಾಮಾಣಿಕ ಮುಸಲ್ಮಾನ ತಪ್ಪಾಗಿ ತಿಳಿಯಲಾರ. ಕಡಿತ ನಿರ್ಣಯವನ್ನು ನಾನು ಬೆಂಬಲಿಸುತ್ತೇನೆ."

ಅವರ ನಂತರ ಟಿ. ಎಚ್. ಕೇದಾರ ಅವರು ತಮ್ಮ ಆಕ್ರಮಣಕಾರಿ ಶೈಲಿಯಲ್ಲಿ ಸರ್ಕಾರವನ್ನು ಕಟಕಟೆಯಲ್ಲಿ ನಿಲ್ಲಿಸಿದರು. ಅವರು "ಸಂಘದ ಸ್ಥಾಪನೆ 1918ರಲ್ಲಾಯಿತು ಎಂದು ಸರ್ಕಾರ ಹೇಳುತ್ತದೆ. ಅಲ್ಲಿಂದ 1932ರ ವರೆಗೆ ಸಂಘವನ್ನು ಜಾತೀಯವೆಂದು ಘೋಷಿಸಲು ಸರ್ಕಾರಕ್ಕೆ ಒಮ್ಮೆಯೂ ಸಹ ಅವಕಾಶ ಸಿಗಲಿಲ್ಲವೇ?" ಎಂದು ಮೊದಲು ಪ್ರಶ್ನಿಸಿದರು. ಪೊಲೀಸರು ಸಲ್ಲಿಸಿರುವ ತಪ್ಪು ವರದಿಯನ್ನು ಆಧರಿಸಿ ಸರ್ಕಾರವು ನಿರ್ಧಾರವನ್ನು ಕೈಗೊಂಡಿದೆ ಎಂದು ಹೇಳಿದ ಅವರು ಸರ್ಕಾರದ ಬಳಿ ಜಾತೀಯವೆಂದು ಹೇಳಬಹುದಾದ ಯಾವುದಾದರೂ ಸಂಘದ ಸಾಹಿತ್ಯವಿದೆಯೇ, ಇದ್ದಲ್ಲಿ ಅದನ್ನು ಸದನದಲ್ಲಿ ಪ್ರಸ್ತುತಪಡಿಸಲಿ ಎಂದು ಸವಾಲೆಸೆದರು. ವಸಾಹತುಶಾಹಿ ಆಡಳಿತದ ಕಾರ್ಯಶೈಲಿಯನ್ನೇ ತನ್ನ ಗುರಿಯಾಗಿಸಿದ ಅವರು "ನ್ಯಾಯ ವಿಚಾರಣೆಗೆ ಸಂಬಂಧಿಸಿದ ಸಾಮಾನ್ಯ ಸೂತ್ರವನ್ನು ಸರ್ಕಾರವೇಕೆ ಪಾಲಿಸುವುದಿಲ್ಲ? ತಮ್ಮ ಪರವಾಗಿ ವಾದ ಮಂಡಿಸಲು ಸಂಘದ ಸ್ಥಾಪಕರಿಗೆ ಒಂದು ಅವಕಾಶವನ್ನು ಕೂಡ ಸರ್ಕಾರವು ಕೊಟ್ಟಿಲ್ಲ. ಸಚಿವಾಲಯದಲ್ಲೆ ಕುಳಿತು ಸಂಘವನ್ನು ಜಾತೀಯವೆಂದು ಘೋಷಿಸಿ ಅದಕ್ಕನುಗುಣವಾಗಿ ನಿರ್ಧಾರ ಕೈಗೊಳ್ಳುವುದು ಸರಿಯೇನು?" ಎಂದು ಸರ್ಕಾರವನ್ನು ತರಾಟೆಗೆ ತೆಗೆದುಕೊಂಡರು.

ನಗರೀಯ ಔದ್ಯೋಗಿಕ ಮಜೂರರ ಪ್ರತಿನಿಧಿ ಆರ್.ಡಬ್ಲ್ಯೂ.ಫುಲೆ ಅವರು ತಮ್ಮ ಭಾಷಣದಲ್ಲಿ ಸಂಘದ ಉದ್ದೇಶದ ಮೇಲೆ ಬೆಳಕು ಚೆಲ್ಲುತ್ತ, ಸಂಘದ ನಾಯಕರ ಜತೆ ತಾವು ನಡೆಸಿದ ಮಾತುಕತೆಯಲ್ಲಿ ಬೇರೆ ಸಮುದಾಯದವರಿಗೆ ಈವರೆಗೆ ಸಂಘದಲ್ಲಿ ಪ್ರವೇಶವನ್ನು ನಿಷೇಧಿಸಿಲ್ಲವೆಂಬುದು ಗೊತ್ತಾಗಿರುವುದಾಗಿ ಹೇಳಿದರು. 'ಹಿಂದೂಸ್ಥಾನವು ಹಿಂದೂಗಳಿಗೆ ಸೇರಿದುದು' ಎಂಬ ಸಂಘದ ಸಿದ್ಧಾಂತವು ವ್ಯಾಪಕವಾದ ಅರ್ಥವುಳ್ಳದ್ದು ಎಂದು ಹೇಳಿದ ಅವರು, ಅದರ ನಿಜವಾದ ಅರ್ಥ "ಭಾರತವು ಭಾರತೀಯರಿಗೆ ಸೇರಿದುದು" ಎಂಬುದಷ್ಟೇ ಆಗಿದೆ ಎಂಬ ವಿವರಣೆಯನ್ನು ನೀಡಿದರು." ಸಂಘದಲ್ಲಿ ಪ್ರವೇಶ ಪಡೆಯಲು ಇಚ್ಛಿಸಿದ ಯಾವುದೇ ಮುಸಲ್ಮಾನ ಅಥವಾ ಕ್ರೈಸ್ತ ವ್ಯಕ್ತಿಗೆ ಪ್ರವೇಶವನ್ನು ನಿರಾಕರಿಸಿರುವಂತಹ ಉದಾಹರಣೆ ಯಾವುದಾದರೂ ಸರ್ಕಾರದ ಬಳಿಯಿದೆಯೇ? ಎಂದು ಸಹ ಅವರು ಪ್ರಶ್ನಿಸಿದರು.

ತದನಂತರ ಸರ್ಕಾರೇತರ (ನಾಮಕರಣ) ಮಹಿಳಾ ಸದಸ್ಯೆ ರಮಾಬಾಯಿ ತಾಂಬೆ ಅವರು ಸಂಘವನ್ನು ಸಮರ್ಥಿಸಿ ಮಾತನಾಡಿದರು. "ಈ ಕಡಿತ ನಿರ್ಣಯವನ್ನು ಸಮರ್ಥಿಸುವ ಮೂಲಕ ಹಿಂದೂ ತರುಣರನ್ನು ಸರ್ಕಾರದ ದಮನಕಾರಿ ನೀತಿಯಿಂದ ರಕ್ಷಿಸಲು ನಾನು ಇಚ್ಛಿಸುವೆ" ಎಂದು ಭಾಷಣ ಆರಂಭಿಸಿದ ಅವರು "ಸಂಘವು ಒಂದು

ಅತ್ಯಂತ ಉಪಯುಕ್ತವಾದ ಸಂಸ್ಥೆಯಾಗಿದೆ. ಅದು ಮಧ್ಯಪ್ರಾಂತದಲ್ಲಿ ಆರಂಭವಾಗಿದ್ದರೂ, ಸಂಪೂರ್ಣ ಹಿಂದೂಸ್ಥಾನದಲ್ಲಿ ವಿಸ್ತರಿಸಲಿದೆ ಮತ್ತು ಎಲ್ಲ ಸಮುದಾಯಗಳನ್ನೂ ಸಂಘಟಿಸುವ ಕೆಲಸ ಮಾಡಲಿದೆ. ವಿವಿಧ ಸಮುದಾಯಗಳನ್ನು ಸಂಘಟಿಸುವುದರಲ್ಲಿ ತಪ್ಪೇನಾದರೂ ಇದೆಯೇ? ನೀವೇನಾದರೂ 'ಹೌದು' ಎಂದಲ್ಲಿ ಸರ್ಕಾರವು ನಮಗೆ ಸಂಘಟಿತರಾಗಲು ಬಿಡುವುದಿಲ್ಲ ಎಂದು ನಾನು ಇಲ್ಲೇ ಹೇಳುವೆ" ಎಂದರು.

ಸುತ್ತೋಲೆಯನ್ನು ಜಾರಿಗೊಳಿಸಿದ ವರ್ಷ 1932ರ ತನಕ ಸಂಘದ ವಿರುದ್ಧ ಆತಂಕಕಾರಿ ಎನ್ನಬಹುದಾದ ಯಾವುದೇ ಪುರಾವೆಯನ್ನು ಸದನದಲ್ಲಿ ಪ್ರಸ್ತುತ ಪಡಿಸಲು ಸರ್ಕಾರವು ವಿಫಲವಾದಾಗ, ಅದರ ನಿಜವಾದ ಉದ್ದೇಶ ಇನ್ನಷ್ಟು ಬಯಲಾಯಿತು. ಕಟ್ಟಕಡೆಯಲ್ಲಿ ಸುತ್ತೋಲೆಗೆ ಪುರಾವೆ ಒದಗಿಸಲು ಅದು 1933ರ ಜನವರಿಯಲ್ಲಿ ಮಕರ ಸಂಕ್ರಾಂತಿ ಉತ್ಸವದ ಸಂದರ್ಭದಲ್ಲಿ ಮಾಡಲಾದ ಭಾಷಣಗಳನ್ನು ಆಧಾರವಾಗಿ ನೀಡಿತು. ಅಂದಿನ ಉತ್ಸವದಲ್ಲಿ ಆಹ್ವಾನಿತರಾಗಿದ್ದ ಇಬ್ಬರು ಅತಿಥಿಗಳಾದ ಡಾ. ಮುಂಜೆ ಮತ್ತು ಮೋರೊ ಪಂತ ಜೋಶಿ ಮಾಡಿದ್ದ ಭಾಷಣಗಳು ಅವು. ಅವೆರಡನ್ನು ಜಾತೀಯವೆಂದು ಮಂಡಿಸಲಾಯಿತು. ಜೋಶಿ ಅವರ ಭಾಷಣದ ಒಂದಿಷ್ಟು ಭಾಗವನ್ನು ರೌಟನ್ ಅವರು ಉಲ್ಲೇಖಿಸಿದರು. "ಸಂಘವು ಜಾತೀಯವೆಂಬುದನ್ನು ಮುಚ್ಚಿಡುವುದರಿಂದ ಲಾಭವೇನೂ ಇಲ್ಲ. ಅದನ್ನು ಒಪ್ಪುವುದರಲ್ಲಿ ಅವಮಾನ ಪಡಬೇಕಾದುದು ಏನೂ ಇಲ್ಲ. ಮುಖ್ಯವಾದ ಸಂಗತಿಯೆಂದರೆ, ಸಂಘವು ಯಾವುದೇ ಸಮುದಾಯಕ್ಕೆ ಹಾನಿಯೆಸಗದೆ ತನ್ನ ಸಮುದಾಯದ ದೋಷಗಳನ್ನು ಕೊನೆಗೊಳಿಸಲು ಸಂಕಲ್ಪಿಸಿದೆ"– ಜೋಶಿ ಅವರು ತಮ್ಮ ಭಾಷಣದಲ್ಲಿ ಹೇಳಿದ್ದ ಸಂಗತಿಯಿದು. ಡಾ. ಮುಂಜೆ ಅವರು ತಮ್ಮ ಭಾಷಣದಲ್ಲಿ ಇದನ್ನು ಸಮರ್ಥಿಸಿದ್ದರು. ಸಂಘದ ಜಾತೀಯತೆಯನ್ನು ಸಾಬೀತುಪಡಿಸಲು ಸರ್ಕಾರವು ಪ್ರಸ್ತುತ ಪಡಿಸಿದ ಪುರಾವೆ ಇದು.

ಜೋಶಿ ಅವರು ಸಂಘದ ಕಾರ್ಯಕ್ರಮದ ಸಂಯೋಜಕರಾಗಿದ್ದರೇ ಅಥವಾ ಸಭೆಯ ಅಧ್ಯಕ್ಷರು ಮಾತ್ರವಾಗಿದ್ದರೇ ಎಂಬುದನ್ನು ರಮಾಬಾಯಿ ತಾಂಬೆಯವರು ಪ್ರಶ್ನಿಸಿದಾಗ, ಅವರು ಕೇವಲ ಅಧ್ಯಕ್ಷರು ಮಾತ್ರವಾಗಿದ್ದರು ಎಂಬುದನ್ನು ಸರ್ಕಾರವು ಒಪ್ಪಿಕೊಂಡಿತು. ಸಭೆಗೆ ಅತಿಥಿಗಳಾಗಿ ಬಂದವರ ಭಾಷಣಗಳನ್ನು ಅದರಲ್ಲೂ ಭಾಷಣಗಳ ಪೊಲೀಸ್ ವರದಿಯನ್ನು ಆಧರಿಸಿ ಸಂಘದ ನಿಂದನೆಗೆ ಹೊರಟಿದೆ ಎಂಬ ವಾಕ್ಪ್ರಹಾರಗಳನ್ನು ಸದಸ್ಯರಿಂದ ಎದುರಿಸಬೇಕಾಗಿ ಬಂದಾಗ ಸರ್ಕಾರಕ್ಕೆ ಪೂರಾ ಫಜೀತಿಗಿಟ್ಟುಕೊಂಡಿತು. ಅಷ್ಟೇ ಅಲ್ಲ, 1933ರಲ್ಲಿ ಎಂದರೆ ಭವಿಷ್ಯದಲ್ಲಿ ಮಾಡಲಾದ ಭಾಷಣಗಳನ್ನು ಆಧರಿಸಿ ಸರ್ಕಾರವು ಮೊದಲೇ 1932ರಲ್ಲೆ ಸಂಘದ ವಿರುದ್ಧ ಸುತ್ತೋಲೆ ಹೊರಡಿಸಿತೇ ಎಂಬ ಚುಚ್ಚು ಮಾತುಗಳನ್ನು ಕೇಳಿದ ಮೇಲಂತೂ ಸರ್ಕಾರದ ಸ್ಥಿತಿ ತೀರಾ ನಾಚಿಕೆಗೇಡಿನದಾಯಿತು.

ಕೋಲತೆ ಅವರು ಪುನಃ ಕೆಲವು ಮೂಲಭೂತ ಪ್ರಶ್ನೆಗಳನ್ನೆತ್ತಿ ಸರ್ಕಾರವನ್ನು ಕಟಕಟೆಗೆ ತಂದು ನಿಲ್ಲಿಸಿದರು. ಅವರನ್ನು ಸಮರ್ಥಿಸಿ ಬಿ.ಜಿ. ಖಾಪರ್ಡೆ, ಆರ್.ಎ.ಕಾನಿಟ್ಕರ್, ಸಿ.ಬಿ. ಪಾರೇಖ್, ಯು.ಎನ್. ಠಾಕೂರ್, ಠಾಕೂರ್ ಮನಮೋಹನ ಸಿಂಗ್, ಎಂ.ಬಿ. ಮಂಗಲಮೂರ್ತಿ, ಎಸ್.ಜಿ. ಸಪಕಲ್, ಡಬ್ಲ್ಯು. ವೈ. ದೇಶಮುಖ್ ಮೊದಲಾದವರು ಸಹ ಭಾಷಣ ಮಾಡಿದರು. ಕೋಲತೆ ಅವರು, "ಸಂಘದ ಸ್ಥಾಪನೆ 1918ರಲ್ಲಾಯಿತು ಎಂದು ಹೇಳಲಾಗಿದೆ. ಇದು ಅಪ್ಪಟ ತಪ್ಪು. ಅದೇ ರೀತಿಯಲ್ಲಿ ಡಾ. ಮುಂಜೆ ಅವರು ಸಂಸ್ಥಾಪಕರು ಎಂದು ಸಹ ಹೇಳಲಾಗಿದೆ. ನನಗೆ ತಿಳಿದಿರುವಂತೆ ಡಾ. ಮುಂಜೆ ಅವರ

ಸಂಸ್ಥಾಪಕರೂ ಅಲ್ಲ. ಅದಕ್ಕೆ ಪ್ರೇರಣೆಯ ಮೂಲವಾಗಿರುವವರೂ ಅಲ್ಲ. ಸಂಘದ ಬಗ್ಗೆ ಸಹಾನುಭೂತಿಯಿಂದ ಇರುವುದಾಗಲಿ, ಅದರ ಕೆಲಸದಲ್ಲಿ ಸಹಕರಿಸುವುದಾಗಲಿ ಮಾಡಿದಲ್ಲಿ, ಅಂತಹವರು ಅದರ ಸಂಸ್ಥಾಪಕರೆಂದಾಗುತ್ತದೆ ಎಂಬುದು ನನಗಂತೂ ಅರ್ಥವಾಗದ ಸಂಗತಿ. ಇಲ್ಲಿ ಉಲ್ಲೇಖಿಸಲಾಗಿರುವ ಭಾಷಣಗಳು, ಸಂಘದ ಕೆಲಸದ ಜತೆ ಸಂಬಂಧವಿರದಂತಹ ಮಹನೀಯರು ಮಾಡಿದಂತಹವು. ಅವರ ಭಾಷಣಗಳು ಸಂಘದ ನೀತಿಧೋರಣೆಗಳನ್ನು ಪ್ರತಿಬಿಂಬಿಸುವಂತಹವು ಅಲ್ಲ" ಎಂದು ಸರ್ಕಾರದ ಗಮನ ಸೆಳೆದರು.

ಡಾ. ಹೆಡಗೇವಾರರ ಒಂದು ಭಾಷಣದ ಬಗ್ಗೆ ಸರ್ಕಾರವು ವ್ಯಕ್ತಪಡಿಸಿದ ಆತಂಕದ ಕುರಿತು ಬಿ.ಜಿ. ಖಾಪರ್ಡೆ ಅವರು ಬೇರೊಂದು ವಿವರಣೆ ನೀಡಿದರು: "ಭಾರತವು ಹಿಂದೂಗಳ ದೇಶವೆಂದು ಹೇಳಿದಲ್ಲಿ, ಅದರರ್ಥ ಕೇವಲ ಹಿಂದೂಗಳದೇ ಎಂದೇನೂ ಆಗುವುದಿಲ್ಲ. ರಾಜಕೀಯದಲ್ಲಿ ಭಾಗವಹಿಸಲು ಅದರಿಂದ ಅಡ್ಡಿಯೇನೂ ಆಗುವುದಿಲ್ಲ."

ಡಾ. ಹೆಡಗೇವಾರರು ಹಿಟ್ಲರನ ಸಮರ್ಥಕರು ಎಂಬ ಆರೋಪದ ಬಗ್ಗೆ ಮಾತಾಡುತ್ತ ಖಾಪರ್ಡೆ ಅವರು ಡಾ. ಹೆಡಗೇವಾರರು ಹಿಟ್ಲರನಂತೆ ವ್ಯವಹರಿಸುತ್ತಿದ್ದಾರೆ ಎಂದು ಆರೋಪಿಸಲಾಗಿದೆ. ಹಿಟ್ಲರನ ವಿಚಾರಗಳನ್ನು ಅವರು ಕೂಡಾ ಪ್ರತಿಪಾದಿಸುತಿದ್ದಾರೆ ಎಂದು ಸಹ ಹೇಳಲಾಗಿದೆ. ಹಿಟ್ಲರನನ್ನು ಅವರು ಪ್ರಸ್ತಾಪಿಸಿದ್ದಾರೆ ಎಂದು ಹೇಳಲಾಗಿರುವ ಅವರ ತಥಾಕಥಿತ ಭಾಷಣದ ಬಗ್ಗೆ ವಿವರಗಳನ್ನು ತಿಳಿಯಲು ನಾನು ಪ್ರಯತ್ನಿಸಿದಾಗ ಡಾ. ಹೆಡಗೇವಾರರು ತಮ್ಮ ಯಾವುದೇ ಭಾಷಣದಲ್ಲಿ ಹಿಟ್ಲರನ ಹೆಸರನ್ನು ಸಹ ಹೇಳಿಲ್ಲವೆಂಬುದು ನನಗೆ ಗೊತ್ತಾಗಿದೆ. ಈ ಬಗ್ಗೆ ನಾನು ಸಭೆಗೆ ಪೂರಾ ಭರವಸೆ ನೀಡುವೆ. ಕಾರಣವೆಂದರೆ ಇದನ್ನು ಸ್ವತಃ ಡಾ. ಹೆಡಗೇವಾರರೇ ನನಗೆ ಹೇಳಿದ್ದಾರೆ. "ಡಾ. ಹೆಡಗೇವಾರರು ಹಿಟ್ಲರನಷ್ಟೇ ಅಪಾಯಕಾರಿ" ಮತ್ತು "ಇದೇ ಮೊದಲ ಬಾರಿಗೆ ಅವರು ಅಂತಹದೇ ಒಂದು ಸ್ವಯಂಸೇವಕ ಸಂಘಟನೆಯನ್ನು ಸ್ಥಾಪಿಸಿದ್ದಾರೆ" ಎಂದು ಹೇಳಲಾಗುತ್ತಿದೆ. ಇದನ್ನು ನಾವು ತರ್ಕಶಾಸ್ತ್ರದ ಸೂತ್ರದಲ್ಲಿ ಹಾಕಿ ನೋಡೋಣ... ನಾನು ತರ್ಕಶಾಸ್ತ್ರವನ್ನು ಇನ್ನೂ ಮರೆತಿಲ್ಲ. ವ್ಯಕ್ತಿಯೊಬ್ಬ ಇನ್ನೋರ್ವನ ಬಳಿ ನಿನ್ನ ತಂದೆಗೆ ಭಾರೀ ಮೀಸೆಯಿದೆ. ಅದಕ್ಕಾಗಿ ಆತ.... (ನಗು) ಅದೇ ರೀತಿಯಲ್ಲಿ ಡಾ. ಹೆಡಗೇವಾರರ ಒಂದು ಸ್ವಯಂಸೇವಕ ಸಂಘಟನೆಯಿದೆ ಮತ್ತು ಹಿಟ್ಲರನ ಬಳಿಯೂ ಇದೆ. ಅದಕ್ಕಾಗಿ ಡಾ. ಹೆಡಗೇವಾರರು ಹಿಟ್ಲರ್ ಆಗಿದ್ದಾರೆ – ಇದು ಅರ್ಥವಿಲ್ಲದ ತಪ್ಪು ತರ್ಕವಾಗುತ್ತದೆ. ಡಾ. ಹೆಡಗೇವಾರರ ಬಳಿ ಸ್ವಯಂಸೇವಕ ಸಂಘಟನೆಯಿದೆ. ಖಿಲಾಫತ್‌ನ ಸಮರ್ಥಕರದೂ ಸ್ವಯಂಸೇವಕ ಸಂಘಟನೆಯಿದೆ. ಅದಕ್ಕಾಗಿ ಖಿಲಾಫತ್ ಸಮರ್ಥಕರನ್ನು ಹೆಡಗೇವಾರ ಮತ್ತು ಹಿಟ್ಲರ್ ಇತ್ಯಾದಿ ಹೆಸರಲ್ಲಿ ಏಕೆ ಕರೆಯಬಾರದು? ಯಾರೋ ಒಬ್ಬರ ಹೆಸರು ಕೆಡಿಸಿ ಫಾಸಿಗೇರಿಸಿದಂತೆಯೇ ಅಲ್ಲವೇ ಇದು?" ಎಂದು ಸರ್ಕಾರವನ್ನು ತರಾಟೆಗೆ ತೆಗೆದುಕೊಂಡರು.

ಚರ್ಚೆಯಲ್ಲಿ ಸುತ್ತೋಲೆಯನ್ನು ಜಾರಿಗೊಳಿಸುವುದರಲ್ಲಿ ಸರ್ಕಾರಕ್ಕಿದ್ದ ಜಾತೀಯ ಮನೋಭಾವನೆ ಪೂರಾ ಬಹಿರಂಗಗೊಂಡಿತು. ಯು.ಎನ್. ಠಾಕೂರ್ ಅವರು ತಮ್ಮ ಭಾಷಣದಲ್ಲಿ, 1932ರ ಸುತ್ತೋಲೆಯನ್ನು 1933ರಲ್ಲಿ ಇನ್ನಷ್ಟು ವ್ಯಾಪಕಗೊಳಿಸಿ ಸ್ಥಾನೀಯ ನಿಗಮಗಳ ನೌಕರರಿಗೂ ಅನ್ವಯವಾಗುವಂತೆ ತಾವು ಸರ್ಕಾರದ ಸದಸ್ಯತ್ವ ಪಡೆದ ಕೂಡಲೇ ಮಾಡಿದಂತಹ ವ್ಯಕ್ತಿ ಶರೀಫ್‌ರವರು, ತಾವೇ ಒಂದು ಅತಿ ಜಾತೀಯವಾದಿ ಸಂಸ್ಥೆ 'ತಂಜೀಮ್' ಜತೆ ಸಂಬಂಧವಿಟ್ಟುಕೊಂಡಿರುವವರು ಎಂದು ಸದನಕ್ಕೆ ತಿಳಿಸಿದರು.

ನಾಗಪುರ ವಿಶ್ವವಿದ್ಯಾಲಯದ ಪ್ರತಿನಿಧಿ ಡಾ. ಎಂ.ಡಿ. ಮಂಗಲಮೂರ್ತಿ ಅವರು ತಮ್ಮ ಭಾಷಣದಲ್ಲಿ "ಗುಪ್ತಚರ ವಿಭಾಗದವರು ಮೊದಲಿನಿಂದಲೂ ಸಂಘದ ಹಿಂದೆ ಹಗಲು ರಾತ್ರಿಯೆನ್ನದೆ ಬೆನ್ನು ಹತ್ತಿರಬೇಕಾದಲ್ಲಿ, ಈ ಹದಿನಾಲ್ಕು ವರ್ಷಗಳ ಕಾಲ ಸರ್ಕಾರ ಮೌನವಾಗಿತ್ತೇಕೆ? 1932ರಲ್ಲಿ ಈಗ ಇದ್ದಕ್ಕಿದ್ದಂತೆ ಸಂಘವನ್ನು ಜಾತೀಯವೆಂದು ಘೋಷಿಸಿದ್ದೇಕೆ?" ಎಂದು ಸರ್ಕಾರವನ್ನು ಪ್ರಶ್ನಿಸಿದರು. ಸಂಘದ ಸಂವಿಧಾನದಲ್ಲಾಗಲಿ, ಸಂಘಟನೆಯಲ್ಲಾಗಲಿ ಮತ್ತು ಉದ್ದೇಶದಲ್ಲೂ ಆಗಲಿ ಜಾತೀಯತೆ ಕಿಂಚಿತ್ತೂ ಇಲ್ಲ ಎಂದು ವಿಶ್ವಾಸಪೂರ್ವಕವಾಗಿ ಅವರು ಹೇಳಿದರು. 1927ರಲ್ಲಿ ನಾಗಪುರದಲ್ಲಿ ನಡೆದಿದ್ದ ದಂಗೆಯ ಉದಾಹರಣೆ ನೀಡುತ್ತ ಅವರು, ಸರ್ಕಾರವು ಸಂಘದ ಮೇಲೆ ಹೊರಿಸಿದ್ದ ಆರೋಪಕ್ಕೆ ಪೂರಾ ಭಿನ್ನವಾಗಿ ಆ ಪ್ರಸಂಗದಲ್ಲಿ ಸ್ವಯಂಸೇವಕರು ನಡೆದುಕೊಂಡಿದ್ದರು. ಮತ್ತು ಸ್ವಯಂಸೇವಕರು ದಂಗೆಯನ್ನು ತಡೆಯಲು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದುದೇ ವಾಸ್ತವಿಕ ಸಂಗತಿ ಎಂಬುದನ್ನು ಆಗ್ರಹಪೂರ್ವಕ ತಿಳಿಸಿದರು. ಕೊನೆಯಲ್ಲಿ ಸರ್ಕಾರದ ಉದ್ದೇಶದ ಮೇಲೆ ಆಕ್ರಮಣ ಮಾಡುತ್ತಾ "ತನ್ನ ಕ್ರಮದ ಬಗ್ಗೆ ಪ್ರಾಯಶಃ ಸರ್ಕಾರವೇ ಪೂರ್ಣವಾಗಿ ಸಂತುಷ್ಟ ಇರುವಂತೆ ಅನಿಸುವುದಿಲ್ಲ. ಸರ್ಕಾರಿ ಪಕ್ಷದಲ್ಲಿರುವರರ ಭಾಷಣಗಳನ್ನು ಕೇಳಿದಾಗ ನಿಜಕ್ಕೂ ಅವರ ಮನದಲ್ಲಿರುವುದೇ ಯಾವುದೋ ಒಂದು ಹಾಗೂ ತಮ್ಮ ಈ ಕ್ರಮಕ್ಕೆ ಅವರು ನೀಡುವಂತಹ ವಿವರಣೆಯೇ ಮತ್ತೊಂದು ಅನಿಸುತ್ತದೆ. ಸುತ್ತೋಲೆಯನ್ನು ಜಾರಿಗೊಳಿಸುವಲ್ಲಿ ಸರ್ಕಾರದ ಉದ್ದೇಶ ಅದರ ಘೋಷಿತ ಉದ್ದೇಶಕ್ಕಿಂತ ಭಿನ್ನವಾಗಿರುವಂತೆ ಕಾಣಿಸುತ್ತದೆ" ಎಂದು ಸವಾಲೆಸೆದರು.

ಚರ್ಚೆಯಲ್ಲಿ ಸರ್ಕಾರದ ಕ್ರಮದ ವಿರುದ್ಧ ಮಾತಾಡಿದವರು ಒಟ್ಟು ಹದಿನಾಲ್ಕು ಮಂದಿ. ಸರ್ಕಾರದ ಪರವಾಗಿ ರಾವ್ ಮತ್ತು ರೌಟನ್ ಬಿಟ್ಟಲ್ಲಿ ಮಾತಾಡುವವರು ಯಾರೂ ಇರಲಿಲ್ಲ.

ನಿಯಮದಂತೆ ಕಡಿತ ನಿರ್ಣಯದ ಮೇಲೆ ಮತದಾನ ನಡೆಯಬೇಕಾಗಿತ್ತು. ಸರ್ಕಾರದ ಸೋಲು ಔಪಚಾರಿಕವಾಗಿ ಆಗುವುದಷ್ಟೇ ಬಾಕಿ ಉಳಿದಿತ್ತು. ಸರ್ಕಾರದ ಬಳಿಯಿದ್ದ ಒಂದು ಪರ್ಯಾಯವೆಂದರೆ, ಮತದಾನ ಮಾಡಿಸದೆ, ಸದಸ್ಯರ ಬೇಡಿಕೆಗೆ ಒಪ್ಪಿಗೆ ನೀಡುವುದು. ಕೊನೆಯಲ್ಲಿ ಅದೇ ಆಯಿತು. ಸರ್ಕಾರವು ಎರಡೂ ಸುತ್ತೋಲೆಗಳನ್ನು ವಾಪಸ್ ತೆಗೆದುಕೊಂಡಿತು. ಇದು ಸಂಘಕ್ಕೆ ದೊರೆತಿದ್ದ ಭಾರೀ ವಿಜಯ. ಜಾತೀಯತೆಯ ಹೆಸರಲ್ಲಿ ಸಂಘವನ್ನು ಒಡೆದು ನುಚ್ಚುನೂರು ಮಾಡಬೇಕೆಂದಿದ್ದ ವಸಾಹತುಶಾಹಿ ಸರ್ಕಾರದ ಪ್ರಯತ್ನ ಪೂರಾ ಜಲಹೋಮವಾಯಿತು. ಚರ್ಚೆ ನಡೆಯುತ್ತಿದ್ದ ಎರಡೂ ದಿನಗಳಲ್ಲಿ ಡಾ. ಹೆಡಗೇವಾರರು ಕೌನ್ಸಿಲಿನ ಪ್ರೇಕ್ಷಕರ ಗ್ಯಾಲರಿಯಲ್ಲಿದ್ದರು. ಸಮಾಚಾರ ಪತ್ರಿಕೆಗಳಲ್ಲೂ ಸಂಘಕ್ಕೆ ವ್ಯಾಪಕವಾದ ಸಮರ್ಥನೆ ಲಭಿಸಿತು.

ಆದರೆ ವಿಷಯ ಅಲ್ಲಿಗೆ ಇತ್ಯರ್ಥಗೊಳ್ಳುವಂತಿರಲಿಲ್ಲ. ಅವರ ವಿರುದ್ಧ ಮೂರು ಅವಿಶ್ವಾಸ ನಿರ್ಣಯಗಳನ್ನು ಸದನದಲ್ಲಿ ಮಂಡಿಸಲಾಯಿತು. ಮೊದಲನೆಯದನ್ನು ಕೆ.ಪಿ. ಪಾಂಡೆ, ಎರಡನೆಯದನ್ನು ಖಾಪರ್ಡೆ ಮತ್ತು ಮೂರನೆಯದನ್ನು ಕೆ.ಎಸ್.ನಾಯ್ಡು ಅವರು ಮಂಡಿಸಿದರು. ಪಾಂಡೆ ಅವರ ನಿರ್ಣಯಕ್ಕೆ 30 ಮತ್ತು ಉಳಿದ ಎರಡು ನಿರ್ಣಯಗಳಿಗೆ 29 ಸದಸ್ಯರುಗಳ ಬೆಂಬಲ ಸೂಚಿತವಾಗಿದ್ದವು. ನಿರ್ಣಯಗಳ ಮಂಡನೆಗೆ ಸ್ವೀಕೃತಿ ದೊರೆಯಲು 22 ಮಂದಿಯ ಬೆಂಬಲವಷ್ಟೇ ಸಾಕಾಗಿತ್ತು. ಹೀಗಾಗಿ ಮೂರು ಠರಾವುಗಳೂ ಸದನದ ಕಾರ್ಯಸೂಚಿಯಲ್ಲಿ ಸೇರಿಕೊಂಡವು. ಮಾರ್ಚ್ ೯ರಂದು ಅವು ಚರ್ಚೆಗೆ ಬಂದವು. ರಮಾಬಾಯಿ ತಾಂಬೆ ಅವರು, "ಮಾನ್ಯ ಶಂಕರು ಈ ಸುತ್ತೋಲೆ

ಹೊರಡಿಸಿದುದರ ಬಗ್ಗೆ ಹೇಳಿಕೆ ನೀಡಿ ತೃಪ್ತಿಪಡಿಸಿದಲ್ಲಿ, ತೆರೆದ ಮನದಿಂದ ಮತ ಚಲಾಯಿಸುವೆ" ಎಂದು ಸದನದಲ್ಲಿ ತಿಳಿಸಿದರು. ಚರ್ಚೆಯ ಪೂರ್ತಿ ಮೌನವಹಿಸಿದ್ದ ಶರೀಫ್ ಅವರಿಗೆ ಆಗ ನಿಜಕ್ಕೂ ಫಜೀತಿಗಿಟ್ಟುಕೊಂಡಿತು. ಅವರಿಗೆ ತನ್ನ ಸ್ಥಾನವನ್ನು ಹೇಗಾದರೂ ಉಳಿಸಿಕೊಳ್ಳಬೇಕಾಗಿತ್ತು. ಅದಕ್ಕಾಗಿ ಮಾತಾಡದೆ ನಿರ್ವಾಹವೇ ಇಲ್ಲ ಎಂಬ ಸ್ಥಿತಿ ಏರ್ಪಟ್ಟಿತು. ಅವರು ಸುತ್ತೋಲೆ ಕೇವಲ ಸಲಹೆ ರೂಪದ್ದು ಮಾತ್ರ ಮತ್ತು ಸಂಘ ಸಹಿತ ಇನ್ನೆಲ್ಲ ಸಂಘಟನೆಗಳಿಗೂ ಅನ್ವಯವಾಗುವಂತಹದು ಎಂದು ತಿಳಿಸಿದರು. ಮುಂದೆ ಮತವಿಭಜನೆಯಾದಾಗ ಅವಿಶ್ವಾಸವನ್ನು ಸಮರ್ಥಿಸುವ ಮತ್ತು ವಿರೋಧಿಸುವ ಎರಡು ಕಡೆಗಳಿಗೂ ಸಮಸಮವಾಗಿ 34 ಮತಗಳು ಲಭಿಸಿದವು. ಕೊನೆಯಲ್ಲಿ ಸಭಾಧ್ಯಕ್ಷರು ತಮ್ಮ ನಿರ್ಣಾಯಕ ಮತ ಚಲಾಯಿಸಿ ಸರ್ಕಾರವನ್ನು ಬಚಾವ್ ಮಾಡಿದರು[1].

1934 ಮಾರ್ಚ್ 18ರಂದು ಗುರುಪೂರ್ಣಿಮಾ ಉತ್ಸವವನ್ನು ಸಂಘವು 'ವಿಜಯದಿವಸ'ದ ರೂಪದಲ್ಲಿ ಆಚರಿಸಿತು. ಅಂದು ನಾಗಪುರದಲ್ಲಿ ನಡೆದ ರ್‍ಯಾಲಿಯಲ್ಲಿ ಇಡೀ ಪ್ರಕರಣದ ಬಗ್ಗೆ ಡಾ. ಹೆಡಗೇವಾರರು ತಮ್ಮ ಚಿಂತನೆಯನ್ನು ಪ್ರಕಟಿಸಿದರು. ಅಂದಿನ ಕಾರ್ಯಕ್ರಮದಲ್ಲಿ 800 ಗಣವೇಷಧಾರಿ ಸ್ವಯಂಸೇವಕರು ಮತ್ತು ಇನ್ನೂ ಸಾವಿರಾರು ಸಾರ್ವಜನಿಕರು ಸಹ ಉಪಸ್ಥಿತರಿದ್ದರು. ಡಾ. ಹೆಡಗೇವಾರರು ತಮ್ಮ ಭಾಷಣದಲ್ಲಿ "ಇತ್ತೀಚಿನ ದಿನಗಳಲ್ಲಿ ಮಧ್ಯಪ್ರಾಂತದಲ್ಲಿ ಸರ್ಕಾರದ ದಬ್ಬಾಳಿಕೆ ಬಿರುಸುಗೊಂಡಿರುವುದು ಎಲ್ಲರಿಗೂ ತಿಳಿದೇ ಇದೆ. ಸಂಘದ ವಿರುದ್ಧ ಸರ್ಕಾರವು ಹೊರಡಿಸಿದ್ದ ಸುತ್ತೋಲೆಯೇ ಇದಕ್ಕೊಂದು ಉದಾಹರಣೆ. ಸಂಘಕ್ಕೆ ಹಾನಿಯುಂಟು ಮಾಡಲು ಅವರಿಗೆ ಸಾಧ್ಯವಾಗಲಿಲ್ಲವೆಂಬುದು ಬೇರೆ ಮಾತು. ಕೌನ್ಸಿಲ್‌ನಲ್ಲಿ ಈ ವಿಷಯದಲ್ಲಿ ಚರ್ಚೆ ನಡೆಯುತ್ತಿದ್ದಾಗ, ಅದನ್ನು ಕೇಳಲು ನಾನು ಸ್ವತಃ ಅಲ್ಲಿ ಹಾಜರಿದ್ದೆ. ಚರ್ಚೆಯ ಸಂದರ್ಭದಲ್ಲಿ ಗೃಹ ಸಚಿವ ರಾವ್ ಅವರು, ಸಂಘವು ಹಿಟ್ಲರ್ ಮತ್ತು ನಾಝೀವಾದದ ಸಮರ್ಥಕ ಎಂದು ಆರೋಪಿಸಿದರು. ಆದರೆ ಚರ್ಚೆಯ ಯಾವ ಸಂದರ್ಭದಲ್ಲೂ ಸರ್ಕಾರಕ್ಕೆ ನಾನಾಗಲೀ ಅಥವಾ ಸಂಘದ ಯಾರೇ ಓರ್ವ ಹೊಣೆಗಾರ ಕಾರ್ಯಕರ್ತನಾಗಲೀ ಎಂದಾದರೂ ಹಿಟ್ಲರನ ಅಥವಾ ನಾಝಿವಾದದ ಸಂಬಂಧದಲ್ಲಿ ಏನಾದರೂ ಹೇಳಿದ್ದೇವೆಯೇ ಎಂಬುದನ್ನು ಸಾಬೀತುಪಡಿಸಲಾಗಲಿಲ್ಲ. ಸರ್ಕಾರದ ಬಳಿಯಿರುವ ಮಾಹಿತಿಗಳ ಸತ್ಯವನ್ನು ಸಾಬೀತುಪಡಿಸಲು ಅದು ಸುಳ್ಳು ಪುರಾವೆಯನ್ನು ಪ್ರಸ್ತುತಪಡಿಸಬೇಕಾಗುತ್ತದೆ ಎಂಬುದು ನನ್ನ ಅನಿಸಿಕೆಯಾಗಿದೆ.... ಪ್ರಶ್ನೋತ್ತರದ ಸಂದರ್ಭದಲ್ಲೂ ನಾನು ನಾಝಿವಾದದ ಸಮರ್ಥಕನೆಂಬುದನ್ನು ಸಾಬೀತುಪಡಿಸಲು ಸರ್ಕಾರವು ಸುಳ್ಳು ಸಾಕ್ಷಿಗಳನ್ನು ಬಳಸಬಹುದೆಂಬ ಸಂದೇಹ ನನಗಿತ್ತು. ಸರ್ಕಾರದ ಬಳಿ ಅಂತಹ ಸುಳ್ಳು ಸಾಕ್ಷಿಗಳು ಯಾವುದೂ ಇರಲೇ ಇಲ್ಲ. ಹೀಗಾಗಿ ಸಂಘವು ತನಗೆ ಅಂಟಿಸಲ್ಪಟ್ಟಿದ್ದ ಎಲ್ಲ ಕಲೆಗಳನ್ನು ಕಳೆದುಕೊಂಡು ನಿಷ್ಕಳಂಕವಾಗಿ ಈಗ ಮೂಡಿ ಬಂದಿದೆ" ಎಂದು ಹೇಳಿದರು.

ಮುಂದೆ ಹೆಡಗೇವಾರ್ ಅವರು ತಾವು ನಾಝಿವಾದದ ಸಮರ್ಥಕನೆಂಬುದರ ಪುರಾವೆಯಾಗಿ ಸಾಕ್ಷಿ ರೂಪದಲ್ಲಿ ಸರ್ಕಾರವು ತಮ್ಮ ಭಾಷಣವನ್ನು ಅಲ್ಲಲ್ಲಿ ತನಗೆ ಬೇಕಾದಂತೆ ತಿರುಚಿ ಸದನದಲ್ಲಿ ಪ್ರಸ್ತುತಪಡಿಸಿದುದನ್ನು ಉಲ್ಲೇಖಿಸಿ ಅದರ ಬಗ್ಗೆಯೂ ಕೂಡ ವಿವರಣೆ ನೀಡಿದರು.

---

1. ದಿ ಇಂಡಿಯನ್ ಮಾನ್ಯುವಲ್ ರಿಜಿಸ್ಟರ್ ಖಂಡ 1, ಜನವರಿ – ಜೂನ್ 1934, ಪು.240

"ಶ್ರೀ ರಾವ್ ಅವರು ನನ್ನ ಭಾಷಣದಲ್ಲಿ ಒಂದು ವಾಕ್ಯ "ಹಿಂದೂಸ್ಥಾನವು ಹಿಂದೂಗಳ ದೇಶವೆಂದಿರುವುದನ್ನು ಉಲ್ಲೇಖಿಸಿ, ಅದೇ ಅತ್ಯಂತ 'ಆತಂಕಕಾರಿ'ಯಾದುದು ಹಾಗೂ 'ಹಿಟ್ಲರ್‌ವಾದಿ ಮಾನಸಿಕತೆ'ಯನ್ನು ಸಂಕೇತಿಸುವಂತಹದು ಎಂದರು. ಬ್ರಿಟನ್ ಬ್ರಿಟಿಷರ, ಫ್ರಾನ್ಸ್ ಫ್ರೆಂಚರ, ಜರ್ಮನಿ ಜರ್ಮನರ ಮತ್ತು ಅಫಘಾನಿಸ್ತಾನ ಅಫಘಾನರದಾಗಿರುವಂತೆ ಹಿಂದೂಸ್ಥಾನವು ಸದಾಕಾಲಕ್ಕೂ ಹಿಂದೂಗಳ ದೇಶವಾಗಿಯೇ ಉಳಿಯುವುದು. ಅದೇ ರೀತಿಯಲ್ಲಿ ಹಿಂದೂಗಳ ರಾಷ್ಟ್ರವು ಹಿಂದೂಸ್ಥಾನವಾಗಿದೆ. ಸಂಘವು ಗುಪ್ತಸಂಘಟನೆಯೇನೂ ಅಲ್ಲ. ನಮ್ಮೆಲ್ಲರ ಕಾರ್ಯಕ್ರಮಗಳು ತೆರೆದ ಬಯಲಲ್ಲೇ ನಡೆಯುತ್ತವೆ. ಆದರೆ ಸರ್ಕಾರದ ನೀತಿಯಾದರೋ ವ್ಯಕ್ತಿಯೊಬ್ಬನನ್ನು ದೋಷಿ ಎಂಬುದಾಗಿ ಘೋಷಿಸಿ ನಂತರ ಆತನನ್ನು ಫಾಸಿಗೇರಿಸುವಂತಹದಾಗಿದೆ. ಈ ನೀತಿಗನುಗುಣವಾಗಿಯೇ ಅದು ಸಂಘವನ್ನು 'ಜಾತೀಯ' ಹಾಗೂ 'ಆತಂಕಕಾರಿ' ಎಂದು ಘೋಷಿಸಿತ್ತು. ನಿಜಕ್ಕೂ ಸರ್ಕಾರದ ಉದ್ದೇಶವಿದ್ದುದು ಸಂಘವನ್ನು ತುಳಿದು ಹಾಕಬೇಕೆಂಬುದೇ. ಕೋಲತೆ ಅವರು ಮಂಡಿಸಿದ್ದ ಕಡಿತ ನಿರ್ಣಯಕ್ಕೆ ಉತ್ತರ ರೂಪದಲ್ಲಿ ಸರ್ಕಾರವು 1932ರಲ್ಲಿ ತಾನು ಕೈಗೊಂಡ ಕ್ರಮಕ್ಕೆ 1933ರಲ್ಲಿ ಮೋರೋ ಪಂತ ಜೋಶಿ ಅವರು ಮತ್ತು ಡಾ.ಮುಂಜೆ ಅವರು ಮಾಡಿರುವ ಭಾಷಣಗಳನ್ನು ಪುರಾವೆಯಾಗಿ ಮಾಡಿತು. ಜೋಶಿ ಮತ್ತು ಮುಂಜೆ ಅವರು ಇಂತಹ ಭಾಷಣ ಮಾಡಲಿದ್ದಾರೆ ಎಂದು ಸರ್ಕಾರಕ್ಕೆ ಪ್ರಾಯಶಃ ಒಂದು ವರ್ಷ ಮೊದಲೇ ಗೊತ್ತಿದ್ದಿರಬೇಕು ಅನಿಸುತ್ತದೆ. ಸರ್ಕಾರದ ದಾಖಲೆಯಂತೆ ಸಂಘದ ಸ್ಥಾಪನೆಯಾದುದು 1918ರಲ್ಲಿ ಎಂದಿದೆ. ಆಗ ನಾಗಪುರದಲ್ಲಿ ಜಾತೀಯ ದಂಗೆಯಾಗಿತ್ತು ಎಂಬುದು ಸರ್ಕಾರದ ಅಂಬೋಣ. ಆಗ ಸಂಘವಂತೂ ಹುಟ್ಟಿಯೂ ಇರಲಿಲ್ಲ. ಮಾತ್ರವಲ್ಲ ಹಿಂದೂ ಮತ್ತು ಮುಸಲ್ಮಾನರ ನಡುವೆ ಯಾವುದೇ ಜಾತೀಯ ಜಗಳ ಆಗಿರಲೂ ಇಲ್ಲ. ಒಟ್ಟಿನಲ್ಲಿ ಇದೆಲ್ಲವೂ ಸರ್ಕಾರದ ಬೌದ್ಧಿಕ ದಿವಾಳಿತನವನ್ನು ಪರಿಚಯಿಸುತ್ತದೆ, ಅಷ್ಟೇ."[2]

ಅಂದಿನ ಸಭೆಯಲ್ಲಿ ನಾಗಪುರದ ಮತ್ತು ಪ್ರಾಂತದ ಅನೇಕ ಹಿರಿಯ ನಾಯಕರು ಹಾಜರಿದ್ದರು. ಅವರಲ್ಲಿ ಎಸ್.ಬಿ.ತಾಂಬೆ, ರಮಾಬಾಯಿ ತಾಂಬೆ, ಟಿ.ಎಚ್. ಕೇದಾರ, ನಾ.ಭಾ.. ಖರೆ, ಎಂ.ಎಸ್. ಅಣೆ ಹಾಗೂ ವಿಶ್ವನಾಥರಾವ್ ಕೇಳ್ಕರ್ ಮೊದಲಾದ ಪ್ರಮುಖರಿದ್ದರು. ಈ ಸಂದರ್ಭದಲ್ಲಿ ಅಣೆ ಅವರು ವ್ಯಂಗ್ಯವಾಗಿ "ಸರ್ಕಾರವು ಭವಿಷ್ಯ ಪುರಾಣದ ಅಧ್ಯಯನದಲ್ಲಿ ತೊಡಗಿರುವಂತಿದೆ" ಎಂದು ಹೇಳಿದ್ದರು.

ಈ ಘಟನೆಯಿಂದಾಗಿ ನಾಗಪುರದಲ್ಲಾದ ಪ್ರಭಾವದ ಕುರಿತು ಡಾ. ಹೆಡಗೇವಾರರು 1934ರ ಮಾರ್ಚ್ 16ರಂದು ಬರೆದ ಪತ್ರದಲ್ಲಿ "ಕಳೆದ 15 ದಿನಗಳು ನಾಗಪುರ ನಗರವನ್ನೇ ಅಲ್ಲಾಡಿಸಿದಂತಹ ಗಲಿಬಿಲಿಯಿಂದ ಕೂಡಿದ್ದವು. ಎಲ್ಲಿ ನೋಡಿದರೂ ಜನರು ಸಂಘದ ಕುರಿತಾಗಿಯೇ ಮಾತಾಡುತ್ತಿರುವುದು ಕಾಣಬರುತ್ತಿತ್ತು. ಸರ್ಕಾರದ ಅಧಿಕಾರಿಗಳನ್ನು ಬಿಟ್ಟು ಮಿಕ್ಕವರೆಲ್ಲರೂ – ಅವರಲ್ಲಿ ಸರ್ಕಾರದಿಂದ ನಾಮಕರಣ ಹೊಂದಿದ ಮುಸಲ್ಮಾನರು, ಪಾರಸಿಗಳು, ಬ್ರಾಹ್ಮಣೇತರರು ಮೊದಲಾದವರೆಲ್ಲರೂ ಸೇರಿದ್ದವರೇ – ಎಲ್ಲರೂ ಸಹ ಸಂಘದ ವಿಷಯಕ್ಕೆ ಸಂಬಂಧಿಸಿ ಮಂಡಿಸಲಾದ ಕಡಿತ ನಿರ್ಣಯದ ಪರವಾಗಿ ಇದ್ದವರು ಅಷ್ಟೇ ಅಲ್ಲ, ಮುಸಲ್ಮಾನ ಮತ್ತು ಪಾರ್ಸಿ ಸದಸ್ಯರು ಕೂಡಾ ಸಂಘವನ್ನು ಪ್ರಶಂಸಿಸಿ ಸದನದಲ್ಲಿ ಭಾಷಣ ಮಾಡಿದರು. ಈ ರೀತಿಯಲ್ಲಿ

---

2. ಮಹಾರಾಷ್ಟ್ರ, 21 ಮಾರ್ಚ್ 1934, ಪು. 4

ಮಧ್ಯಪ್ರಾಂತದ ಕೌನ್ಸಿಲ್‌ನಲ್ಲಿ ಸಂಘವು ಅಭೂತಪೂರ್ವ ವಿಜಯವನ್ನು ಗಳಿಸಿತು..... ಬಾಬಾಸಾಹೇಬ ಖಾಪರ್ಡೆಯವರು 'ಸುತ್ತೋಲೆಯನ್ನು ಜಾರಿಗೊಳಿಸುವುದರ ಮೂಲಕ ಸರ್ಕಾರವು ಸಂಘಕ್ಕೆ ಅಪರಿಮಿತವಾದ ಲಾಭವನ್ನು ಗಳಿಸಿಕೊಟ್ಟಿದೆ. ಸಂಘಕಾರ್ಯದ ಬೆಳವಣಿಗೆಗೆ ಸಹಕರಿಸಿದೆ' ಎಂದು ಸರಿಯಾಗಿಯೇ ಹೇಳಿದ್ದಾರೆ."[3]

ಒಂದು ಸಂಗತಿಯಂತೂ ಸರ್ಕಾರಕ್ಕೆ ಸ್ಪಷ್ಟವಾಯಿತು. ಅದು, ಸಂಘದ ತಳಹದಿ ಭದ್ರವಾಗಿಯೇ ಇದೆ ಮತ್ತು ಅದರ ಸಂಸ್ಥಾಪಕರು ದಿನನಿತ್ಯದ ರಾಜಕಾರಣದಿಂದ ನಿರ್ಲಿಪ್ತರಾಗಿದ್ದಾರೆ. ಆದಾಗ್ಯೂ ಸ್ವಂತಕ್ಕೆ ಮಹತ್ವಾಕಾಂಕ್ಷೆಗಳಿಲ್ಲದ ಅವರ ಸಾರ್ವಜನಿಕ ಜೀವನವು ಭಿನ್ನಭಿನ್ನ ಗುಂಪುಗಳಲ್ಲಿ ಹಂಚಿ ಹೋಗಿರುವ ರಾಷ್ಟ್ರವಾದಿಗಳನ್ನೆಲ್ಲ ಒಂದುಗೂಡಿಸುವುದರಲ್ಲಿ ಸಂಪೂರ್ಣವಾಗಿ ಸಮರ್ಥವಿದೆ ಎಂಬುದಾಗಿ. ಈ ಸುತ್ತೋಲೆಯ ಮೂಲಕ ಮುಸಲ್ಮಾನರನ್ನು ಪ್ರಸನ್ನಗೊಳಿಸಬೇಕೆಂಬ ಸರ್ಕಾರದ ಯೋಜನೆಯೂ ಪೂರಾ ಮಣ್ಣುಮುಕ್ಕಿತು. ಕಾರಣವೆಂದರೆ ಪ್ರಾಂತದ ಅತ್ಯಂತ ಜನಪ್ರಿಯರಾಗಿದ್ದ ಮುಸಲ್ಮಾನ ನಾಯಕರೇ ಸಂಘದ ಬಗ್ಗೆ ತಮ್ಮ ಸದ್ಭಾವನೆಯನ್ನು ಪ್ರಕಟಿಸಿದ್ದರು ಮತ್ತು ಸಂಘದ ಜಾತೀಯತಾರಹಿತವಾದ ಚಾರಿತ್ರ್ಯಕ್ಕೆ ಪ್ರಮಾಣ ಪತ್ರವನ್ನು ನೀಡಿದವರಾಗಿದ್ದರು.

ವ.ಣ.ಶೇಂಡೆ ಅವರು ಈ ರೀತಿಯಲ್ಲಿ ಬರೆದಿರಿಸಿದ್ದಾರೆ: "ನಮ್ಮ ಈ ಸಂಘವು ಸರ್ವವಿಧ ಅಗ್ನಿ ಪರೀಕ್ಷೆಗಳಿಂದ ಹೊರಬಂದು ಹೆಚ್ಚೆಚ್ಚು ಉಜ್ವಲವಾಗಿ ಕಾಣಲು ಆರಂಭಿಸಿದೆ.... ಸಂಘದ ಎಲ್ಲ ವಿರೋಧಿಗಳು ಮತ್ತು ಅಗೋಚರ ಟೀಕಾಕಾರರು ಸಹ ನಿರ್ಬಲವಾಗಿದ್ದಾರೆ. ಸಂಘದ ವಿಚಾರ ಮತ್ತು ಕಾರ್ಯದ ಪದ್ಧತಿಯು ಎಲ್ಲ ವಿಧ ಸಂಕಟಗಳನ್ನು ಎದುರಿಸುವ ಸಲುವಾಗಿ ಪೂರ್ಣವಾಗಿ ಸಮರ್ಥವೆಂಬುದು ಈಗ ಸಿದ್ಧವಾಗಿದೆ. ಅಲ್ಲಿಂದ ನಂತರ ಸಂಘದ ಕಾರ್ಯವಿಸ್ತಾರ ಇತರ ಪ್ರಾಂತಗಳಿಗೂ ಸಲೀಸಾಗಿ ವಿಸ್ತರಿಸಲು ಆರಂಭವಾಯಿತು."[4] ಡಾ. ಹೆಡಗೇವಾರರ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುತ್ತಾ, ಅವರ ಕುರಿತು ಪ್ರಕಟವಾದ ಮೊದಲ ಪುಸ್ತಕದಲ್ಲಿ ಶೇಂಡೆ ಅವರು ಡಾ. ಹೆಡಗೇವಾರರ ವೈಚಾರಿಕ ದೃಢತೆ ಮತ್ತು ದೂರದೃಷ್ಟಿಯ ಬಗ್ಗೆ ಬರೆದಿರುವುದು ಹೀಗಿದೆ:

"ಸೈದ್ಧಾಂತಿಕವಾಗಿ ಲವಲೇಶವೂ ರಾಜಿ ಮಾಡುವವರಲ್ಲ. ಮುಂದುಗಡೆ ಕಾರ್ಯಕ್ಷೇತ್ರ ರೂಪದ ವಿಶಾಲವಾದ ಸಮುದ್ರದಲ್ಲಿ ವಿವಿಧ ರೀತಿಯ ಸಮಸ್ಯೆಗಳು, ಜಟಿಲವಾದ ಸವಾಲುಗಳು, ವಿಚಿತ್ರವಾದ ಸನ್ನಿವೇಶಗಳು ಮತ್ತು ಚಳವಳಿಗಳು ಮೊದಲಾದವುಗಳ ಭಾರೀ ಬಿರುಗಾಳಿಗಳೇ ಮೇಲೇಳುತ್ತಿದ್ದವು. ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲೂ, ಸಂಘರೂಪಿ ನಾವೆಯನ್ನು ತನಗೆ ಅಡ್ಡ ಬರುವಂತಹ ಬಂಡೆಗಳಿಂದ ಮತ್ತು ಬಿರುಗಾಳಿಯಿಂದ ಸುರಕ್ಷಿತವಾಗಿ ಉಳಿಸುತ್ತ ಹುಟ್ಟು ಹಾಕಬಲ್ಲ ಡಾ. ಹೆಡಗೇವಾರರಂತಹ ಕುಶಲ ನಾವಿಕನಿರಬೇಕಾದಲ್ಲಿ, ಕಾರ್ಯದ ಪ್ರಗತಿಯನ್ನು ತಡೆಯಬಲ್ಲವನು ಯಾರು ತಾನೇ ಇರಲು ಸಾಧ್ಯ?"[5]

---

3. ಹೆಡಗೇವಾರ್ ಪೇಪರ್ಸ್, ಡಾ. ಹೆಡಗೇವಾರ್ ದ್ವಾರಾ ಕಾಶಿನಾಥ್ ಲಿಮಯೇ ಕೋ ಲಿಖಾ ಪತ್ರ, 16 ಮಾರ್ಚ್ 1934.
4. ವ.ಣ. ಶೇಂಡೆ, ಪರಮಪೂಜನೀಯ ಡಾ। ಹೆಡಗೇವಾರ್, ತೃತೀಯ ಆವೃತ್ತಿ 1943 ಪು.21
5. ವ.ಣ. ಶೇಂಡೆ, ಪರಮಪೂಜನೀಯ ಡಾ। ಹೆಡಗೇವಾರ್, ತೃತೀಯ ಆವೃತ್ತಿ 1943 ಪು.21

# ಸಾಮ್ರಾಜ್ಯವಾದದ ವಿರುದ್ಧ ಸಂಘ

ಇಸವಿ 1933–34ರ ನಂತರ ಸಂಘದ ಕಡೆ ನೋಡುವ ರೀತಿಯೇ ಎಲ್ಲರಲ್ಲೂ ಬದಲಾಗತೊಡಗಿತು. ಸಂಘದ ಸಾಮರ್ಥ್ಯದ ಬಗ್ಗೆ ಸರ್ಕಾರವು ನೋಡುವ ರೀತಿಯೇ ಒಂದಾದರೆ, ಸಂಘದ ಹಿತೈಷಿಗಳಾಗಿರುವವರದು ಪೂರಾ ಭಿನ್ನವಾದ ರೀತಿಯಾಯಿತು. ಮಧ್ಯಪ್ರಾಂತ ಸರ್ಕಾರವು ತನ್ನ ಸಂಘವಿರೋಧಿ ಯೋಜನೆಯಲ್ಲಿ ಸಂಪೂರ್ಣ ವಿಫಲಗೊಂಡ ನಂತರದ ವರ್ಷಗಳಲ್ಲಿ ಸಂಘದ ಕಾರ್ಯ ಆ ಪ್ರಾಂತದಲ್ಲಿ ಮತ್ತು ಆ ಪ್ರಾಂತದ ಹೊರಗೂ ಸಹ ವೇಗವಾಗಿ ವಿಸ್ತರಿಸಲಾರಂಭಿಸಿತು. ಹೀಗಾಗಿ ಕೇಂದ್ರ ಸರ್ಕಾರವು ಸಂಘವನ್ನು 'ಭಾರೀ ಅಪಾಯಕಾರಿ' ಎಂಬುದಾಗಿ ಗುರುತಿಸಿ, ಸಂಘದ ಬೆಳವಣಿಗೆಯನ್ನು ತಡೆದು ನಿಲ್ಲಿಸಲು ಎಲ್ಲ ಪ್ರಾಂತಗಳಿಗೆ ನಿರ್ದೇಶನ ನೀಡಿ, ಆ ಸಂಬಂಧವಲ್ಲಿ ಯೋಜನೆ ರೂಪಿಸುವುದರಲ್ಲಿ ಮಗ್ನವಾಯಿತು. ಒಟ್ಟಿನಲ್ಲಿ 1934ರಿಂದ 1940ರ ವರೆಗಿನ ಕಾಲಾವಧಿಯು ಸಂಘ ಮತ್ತು ಬ್ರಿಟಿಷ್ ಸಾಮ್ರಾಜ್ಯ ಇವುಗಳ ನಡುವೆ ಪರಸ್ಪರ ಸಂಘರ್ಷದ್ದೇ ಆಯಿತೆನ್ನಬಹುದು. ಸಂಘವು ರಾಷ್ಟ್ರಮಟ್ಟದಲ್ಲಿ ವಿಸ್ತಾರಗೊಳ್ಳಲು ಆರಂಭವಾದದ್ದು ಸಹ ಈ ಕಾಲಾವಧಿಯಲ್ಲೇ.

ಸವಿನಯ ಕಾನೂನು ಭಂಗ ಚಳವಳಿಯ ನಂತರ, ರಾಷ್ಟ್ರದ ರಾಜಕಾರಣದಲ್ಲಿ ಒಂದು ರೀತಿಯಲ್ಲಿ ಸ್ಥಿರತೆ ಕಾಣಿಸಿತು. ಇದರ ಲಾಭ ಪಡೆದ ಡಾ. ಹೆಡಗೇವಾರರು ಈ ಕಾಲಾವಧಿಯನ್ನು ಸಂಘದ ಕಾರ್ಯಶಕ್ತಿಯನ್ನು ಹೆಚ್ಚು ದೃಢಗೊಳಿಸಲು ಬಳಸಿಕೊಂಡರು. ಸಂಘಕ್ಕೆ ಅಖಿಲ ಭಾರತೀಯ ಸ್ವರೂಪವನ್ನು ನೀಡಿ, ಮುಂದೆ ನಡೆಯಬಹುದಾದ ಸಾಮ್ರಾಜ್ಯಶಾಹಿ ವಿರೋಧಿ ಚಳವಳಿಯಲ್ಲಿ ಸಂಘದ ಸಹಭಾಗಿತ್ವವಷ್ಟೇ ಅಲ್ಲ, ಅದರದೇ ಮುಂದಾಳುತನವೂ ಇರಬೇಕೆಂಬ ಬಯಕೆಯೊಂದಿಗೆ, ಅದನ್ನು ನಿರ್ಧರಿಸುವ ದಿಟ್ಟಿನಲ್ಲಿ ಅವರು ಕ್ರಿಯಾಶೀಲರಾದರು. ತಮ್ಮ ಈ ಪ್ರಯತ್ನದಲ್ಲಿ ಅವರಿಗೆ ಸಾಕಷ್ಟು ಸಫಲತೆಯೂ ಲಭಿಸಿತು. ಆದರೆ ಅವರ ಅಕಾಲಿಕ ಮೃತ್ಯುವು, ಅವರದಾಗಬಹುದಿದ್ದ ಅತ್ಯಂತ ಮಹತ್ವಪೂರ್ಣವಾದ ಪಾತ್ರವು ರಾಷ್ಟ್ರದ ರಾಜಕಾರಣಕ್ಕೆ ಲಭಿಸದಂತೆ ಮಾಡಿತು. ಅವರು ನಿಧನರಾದ ವರ್ಷ 1940ರಲ್ಲಿ ಸಂಘ ಬೆಳೆದು ನಿಂತಿದ್ದ ಸ್ವರೂಪದ ಬಗ್ಗೆ ಸರ್ಕಾರದ ವರದಿಯಲ್ಲಿ "ಕಾಂಗ್ರೆಸ್ ಮತ್ತು ಅದರ ಜತೆ ಸಂಬಂಧಿತ ಸ್ವಯಂಸೇವಕ ಸಂಘಟನೆಗಳನ್ನು ಹೊರತು ಪಡಿಸಿದಲ್ಲಿ, ಭಾರತದಲ್ಲಿ ಅತಿ ದೊಡ್ಡ ಹಾಗೂ ಕುಶಲವಾದ ಸಂಘಟನೆಯೆಂದರೆ ಸಂಘವೇ. ಸಂಖ್ಯೆ ಮತ್ತು ಮಹತ್ವದ ದಿಟ್ಟಿನಲ್ಲಿ ನೋಡಿದಲ್ಲಿ ಕಾಂಗ್ರೆಸ್‌ನ ನಂತರದ ಸ್ಥಾನ ರಾ.ಸ್ವ. ಸಂಘದ್ದಾಗಿದೆ"[1] ಎಂದು ಹೇಳಲಾಗಿತ್ತು.

---

1. ಫೈಲ್ ನಂ. 4/1/40 ಗೃಹ ರಾಜಕೀಯ (I), ರಾಷ್ಟ್ರೀಯ ಪತ್ರಾಗಾರ, ನವದೆಹಲಿ

ಇಸವಿ 1930ರ ನಂತರ ಸಂಘದ ಕುರಿತ ತಪ್ಪು ಕಲ್ಪನೆಗಳು ಸಹ ಕ್ರಮೇಣ ದೂರವಾಗತೊಡಗಿದವು. ಆರಂಭದಲ್ಲಿ ಹಲವು ದಿನಗಳ (ವರ್ಷಗಳ) ವರೆಗೂ ಅನೇಕ ಉತ್ತಮ ಹಿತೈಷಿಗಳ ಮನದಲ್ಲೂ ಸಂಘದ ಬಗ್ಗೆ ಏನೇನೋ ಕಲ್ಪನೆಗಳಿದ್ದವು. ಹೆಚ್ಚಿನವರಿಗೆ ಸಂಘವು ಒಂದು ಅಖಾಡಾದಂತೆ ಕಾಣುತ್ತಿದ್ದಲ್ಲಿ, ಇನ್ನುಳಿದವರಿಗೆ ಅದೊಂದು ಸೇವಾ ಸಮಿತಿಯಾಗಿ, ಅಥವಾ ಸ್ಕೌಟ್ ದಳವೆಂಬಂತೆ ಕಾಣಿಸುತ್ತಿತ್ತು. ಅನೇಕ ಸಜ್ಜನರು ಸಂಘವನ್ನು ತಮ್ಮದೇ ಎಂಬಂತೆ ತಿಳಿಯುತ್ತ, ಅಧಿಕಾರವಾಣಿಯಿಂದ ಅಥವಾ ಆಗ್ರಹಪೂರ್ವಕವಾಗಿ ತಾವು ನಡೆಸುವ ಸಭೆ, ಸಮ್ಮೇಳನಗಳಿಗೆ, ತಮ್ಮ ಮನೆಗಳಲ್ಲಿನ ವಿವಾಹ ಸಮಾರಂಭಗಳಿಗೆ, ತಮ್ಮ ಯಾವುದೋ ಶೋಭಾಯಾತ್ರೆಗೆ, ಆಯಾ ಪ್ರಸಂಗದ ಶೋಭೆ ಹೆಚ್ಚಿಸುವ ಸಲುವಾಗಿ ಸ್ವಯಂಸೇವಕರು ಕೆಲಸ ಮಾಡಬೇಕು, ಸಂಘದ ಬ್ಯಾಂಡ್ ಬರಬೇಕು ಇತ್ಯಾದಿ ಬೇಡಿಕೆಗಳನ್ನು ಮುಂದೊಡ್ಡುತಿದ್ದುದೂ ಉಂಟು. ಬುದ್ಧಿವಂತರೆನಿಸಿಕೊಳ್ಳುವವರಲ್ಲೂ ಅನೇಕರು ಸಂಘವೆಂದರೆ ಕೋವಿ, ಗುಂಡು ಹಾಗೂ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವಂತಹ ಕ್ರಾಂತಿಕಾರಿಗಳ ಒಂದು ಗುಂಪು ಎಂದು ತಿಳಿಯುತ್ತಿದ್ದವರೂ ಇದ್ದರು. ಸಂಘದ ಯಥಾರ್ಥ ಸ್ವರೂಪದ ಕುರಿತು ಇಷ್ಟೊಂದು ಘೋರ ಅಜ್ಞಾನದ ಬಗ್ಗೆ ಬಹಳ ದುಃಖಪಡುತ್ತಿದ್ದವರು ಡಾ. ಹೆಡಗೇವಾರರು. "ಅಂತಹವರ ಬಗ್ಗೆ ಅವರಿಗೆ ಕೆಲವೊಮ್ಮೆ ಕರುಣೆ ಉಂಟಾಗುತ್ತಿದ್ದಲ್ಲಿ, ಇನ್ನೂ ಕೆಲವೊಮ್ಮೆ ಅವರಿಗೆ ನಗು ಬರುತ್ತಿತ್ತು" ಎಂದು ಶೇಂಡೆ ಬರೆದಿದ್ದಾರೆ. ಹಿಂದೂರಾಷ್ಟ್ರವಾದಿಗಳಲ್ಲಿ, ಅದರಲ್ಲೂ ವಿಶೇಷವಾಗಿ ಮಹಾಸಭಾದವರು ಹಾಗೂ ಸಾಮ್ರಾಜ್ಯವಾದಿಗಳು ಸಂಘದ ಉದ್ದೇಶವನ್ನು ಅರ್ಥ ಮಾಡಿಕೊಂಡಿರುವುದರಲ್ಲಿ ಇರುವ ವ್ಯತ್ಯಾಸದ ಕಡೆ ಬೆರಳು ತೋರುತ್ತಾ ಶೇಂಡೆ ಅವರು, "ಸಂಘವು ಏನು, ಅದು ಯಾವ ಕಾರ್ಯಕ್ಕಾಗಿ ಹುಟ್ಟಿಕೊಂಡಿದೆ ಎಂಬುದನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದರಲ್ಲಿ ಸಂಘದ ವಿರೋಧಿಗಳಿಗಿಂತ ಸಂಘದ ಹಿತೈಷಿಗಳೇ ನಿಧಾನರಾದರು. ಇದು ಹಿಂದೂಸ್ಥಾನದ ದುರ್ದೈವವಲ್ಲದೆ ಇನ್ನೇನು?" ಎಂದು ಹೇಳಿದ್ದಾರೆ.[2]

ಈ ಕಾಲಾವಧಿಯಲ್ಲಿ ಸಂಘದ ಕಾರ್ಯವಿಸ್ತಾರದಲ್ಲಿ ಅತಿ ಹೆಚ್ಚು ಅಡಚಣೆಯುಂಟಾದುದು ಮಧ್ಯಪ್ರಾಂತದ ವ್ಯಾಯಾಮ ಶಾಲೆಗಳಿಂದ. ಅವು ಸಂಘವನ್ನು ತಮ್ಮ ಪ್ರತಿಸ್ಪರ್ಧಿಯಾಗಿ ತಿಳಿಯುತ್ತಾ ಅದರ ಬೆಳವಣಿಗೆ ಕಂಡು ಕರುಬುತ್ತಿದ್ದವು. ಸಂಘದ ಶಾಖೆಗಳು ನಡೆಯದಂತೆ ಮಾಡಲು ಅವು ಕೆಲವೊಂದು ಹಿಂಸಾ ಮಾರ್ಗಗಳನ್ನು ಬಳಸುತ್ತಿದ್ದುದೂ ಉಂಟು. ಈ ಎಲ್ಲ ವ್ಯಾಯಾಮಶಾಲೆಗಳದು ಸಮಾನವಾಗಿ ಇರುತ್ತಿದ್ದ ದೂರು ಒಂದೇ – ಅದು ಸಂಘದ ಶಾಖೆಯ ಕಾರಣದಿಂದಾಗಿ ತಮ್ಮಲ್ಲಿ ಬರುವಂತಹವರ ಸಂಖ್ಯೆ ಕಡಿಮೆಯಾಗುತ್ತಿದೆ ಎಂದೇ.[3] ಅಂದಿನ ಸ್ಥಿತಿಯನ್ನು ವಿವರಿಸುತ್ತ ಡಾ. ಮುಂಜೆ ಅವರು ಬರೆದಿರಿಸಿರುವುದು: "ಅವರೆಲ್ಲರಿಗೆ ಸಂಘದ ಬಗ್ಗೆ ಮತ್ಸರವಿತ್ತು ಮತ್ತು ಡಾ. ಹೆಡಗೇವಾರರ ಬಗ್ಗೆ ಸಹ ಸುಯೋಗ್ಯವಾದ ಭಾವನೆಯಿರುತ್ತಿರಲಿಲ್ಲ." 1930–31ರ ಸುಮಾರಿಗೆ ವ್ಯಾಯಾಮಶಾಲೆಗಳ ಪ್ರಮುಖರಿಗೆ ಸಂಘವು ಒಂದು ವ್ಯಾಯಾಮ ಶಾಲೆಯಾಗಲಿ, ಅಖಾಡಾವಾಗಲಿ ಅಲ್ಲ ಎಂಬುದರ ಅರಿವಾಯಿತು. 1929ರಲ್ಲಿ ಕಾಂಗ್ರೆಸ್ ನಾಯಕ ತೇಜರಾಮ್ ಅವರು ಪ್ರತಾಪ ವ್ಯಾಯಾಮ ಶಾಲೆಯ ವಾರ್ಷಿಕೋತ್ಸವದ

---

2. ಫೈಲ್ ಕ್ರ 4.1.40 ಗೃಹ ರಾಜನೀತಿಕ (1) ಪು. 20 ರಾಷ್ಟ್ರೀಯ ಅಭಿಲೇಖಾಗಾರ, ನವದೆಹಲಿ.
3. ಜಿ.ವಿ. ದೇಶಮುಖ್, ಕಾಳ, ಸಮುದ್ರಾಂತಿಲ ರತ್ನೆ, ವೀಣಾ ಪ್ರಕಾಶನ, ನಾಗಪುರ, ಪುಟ–159.

ಉದ್ಘಾಟನಾ ಸಮಾರಂಭದಲ್ಲಿ "ವ್ಯಾಯಾಮ ಶಾಲೆಗಳ ಉದ್ದೇಶವಿರುವುದು ಕೇವಲ ಶಾರೀರಿಕ ತರಬೇತಿಯದು ಮಾತ್ರ. ಅವುಗಳಿಗೆ ಯಾವುದೇ ಸೈದ್ಧಾಂತಿಕ ಅಥವಾ ನೈತಿಕ ಹಿನ್ನೆಲೆಯೆಂಬುದು ಇಲ್ಲ. ಹೀಗಾಗಿ ಸಂಘವು ವ್ಯಾಯಾಮಶಾಲೆಗಿಂತ ಭಿನ್ನವಾದುದು" ಎಂದು ಹೇಳಿದ್ದರು.

ನಾಲ್ಕು ವರ್ಷಗಳ ನಂತರ ಇನ್ನೋರ್ವ ಕಾಂಗ್ರೆಸ್ ನಾಯಕರಾದ ಜಮನಾಲಾಲ್ ಬಜಾಜ್ ಅವರು ಸಹ ಇದೇ ಅಭಿಪ್ರಾಯವನ್ನು ಬೆಂಬಲಿಸುತ್ತ "ಯಾವುದೇ ನೈತಿಕ ಅಥವಾ ಸೈದ್ಧಾಂತಿಕ ಹಿನ್ನೆಲೆ ಇಲ್ಲದಿದ್ದಲ್ಲಿ, ಆ ಶಕ್ತಿಯನ್ನು ಸಮಾಜದ ಹಿತಕ್ಕಾಗಿ ಉಪಯೋಗಿಸಲು ಆಗುವುದಿಲ್ಲ" ಎಂದಿದ್ದರು.

ಸಂಘದ ಕೆಲಸ ಮಧ್ಯಪ್ರಾಂತದಲ್ಲಿ ರಭಸದಿಂದ ಹಾಗೂ ಇನ್ನಿತರ ಪ್ರಾಂತಗಳಲ್ಲೂ ಕ್ರಮಕ್ರಮವಾಗಿ ವಿಸ್ತರಿಸುತ್ತಲೇ ಇತ್ತು. 1935ರಲ್ಲಿ ನಾಗಪುರದ ಚಳಿಗಾಲದ ಶಿಬಿರದಲ್ಲಿ 1500 ಸ್ವಯಂಸೇವಕರು ಭಾಗವಹಿಸಿದ್ದರು. 1936ರಲ್ಲಿ ಇಡೀ ದೇಶದಲ್ಲಿ 200 ಶಾಖೆಗಳಿದ್ದು ಸ್ವಯಂಸೇವಕರ ಸಂಖ್ಯೆಯೂ 25,000 ದಷ್ಟಿತ್ತು. 1938ರಲ್ಲಿ ಶಾಖೆಗಳ ಸಂಖ್ಯೆ 350ಕ್ಕೆ ಏರಿತು. ಮತ್ತು ಸ್ವಯಂಸೇವಕರ ಸಂಖ್ಯೆ 40,000ಕ್ಕೆ ತಲುಪಿತ್ತು. 1939ರಲ್ಲಿ ಶಾಖೆಗಳ ಸಂಖ್ಯೆ ಮತ್ತು ಸ್ವಯಂಸೇವಕರ ಸಂಖ್ಯೆ ಕ್ರಮವಾಗಿ 500 ಮತ್ತು 60,000 ಹಾಗೂ 1940ರ ಆರಂಭದಲ್ಲಿ ಇನ್ನೂ 200 ಶಾಖೆಗಳು ಹೆಚ್ಚಾದರೆ ಸ್ವಯಂಸೇವಕರು 20,000 ದಷ್ಟು ಹೆಚ್ಚಾಗಿದ್ದರು. 1941ರ ಪೂರ್ವಾರ್ಧದಲ್ಲಿ ಸದಸ್ಯರ ಸಂಖ್ಯೆ 1,50,000 ಮುಟ್ಟಿತು.

ಅದೇ ರೀತಿಯಲ್ಲಿ ಸಂಘದ ಓ.ಟಿ.ಸಿ. (ತರಬೇತಿ ವರ್ಗಗಳು) ಗಳಲ್ಲಿ ಆಯ್ದ ಶಿಕ್ಷಣಾರ್ಥಿಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಏರುತ್ತಲೇ ಇತ್ತು. ಶಾಲಾ ವಿದ್ಯಾರ್ಥಿ ಸ್ವಯಂಸೇವಕರಿಗಾಗಿ ಪ್ರತ್ಯೇಕವಾದ ಓ.ಟಿ.ಸಿ.ಗಳನ್ನು ನಡೆಸಲಾಗುತ್ತಿತ್ತು. 1939ರ ಡಿಸೆಂಬರ್‌ನಲ್ಲಿ ಪೂಣಾದಲ್ಲಿ ಅಂತಹ ಒಂದು ಶಿಬಿರ ನಡೆಯಿತು. ಅದರಲ್ಲಿ ಭಾಗವಹಿಸಿದ್ದ ಬಾಲಕರು ಒಟ್ಟು 500. ಸರ್ಕಾರದ ವರದಿಯೇ ಹೇಳುವಂತೆ ಹೆಚ್ಚಿನ ಮಹತ್ವದ್ದಾಗಿರುತ್ತಿದ್ದುದು ಬೇಸಿಗೆಯಲ್ಲಿ ನಾಗಪುರದಲ್ಲಿ ನಡೆಸಲಾಗುತಿದ್ದ ಶಿಬಿರವೇ. ಅದರಲ್ಲಿ ಪ್ರಶಿಕ್ಷಣ ಪಡೆಯುತ್ತಿದ್ದವರು ದೇಶಾದ್ಯಂತದಿಂದ ಬರುತ್ತಿದ್ದ ಹಾಗೂ ಆಯ್ದ ವಿಶ್ವಾಸಾರ್ಹ ಸ್ವಯಂಸೇವಕರು. ಸಂಘದ ಎಲ್ಲ ಹಿರಿಯ ನಾಯಕರೂ ಅದರಲ್ಲಿ ಇರುತ್ತಿದ್ದರು. 1938ರಲ್ಲಿ ಅಲ್ಲಿಗೆ ಅನ್ಯಪ್ರಾಂತಗಳಿಂದ ಬಂದಿದ್ದ ಸ್ವಯಂಸೇವಕರು 350. 1939ರಲ್ಲಿ ಈ ಸಂಖ್ಯೆ ಇನ್ನೂ ಏರಿ 750ಕ್ಕೆ ತಲುಪಿತು. ಇನ್ನೂ ಮುಂದಿನ ವರ್ಷ ನಡೆದ ಶಿಬಿರದಲ್ಲಿ 1232 ಶಿಕ್ಷಣಾರ್ಥಿಗಳಿದ್ದರು. ಡಾ. ಹೆಡಗೇವಾರರ ನಿಧನಕ್ಕೆ ಕೆಲವೇ ದಿನಗಳ ಮೊದಲು ನಡೆದ ಈ ಶಿಬಿರದಲ್ಲಿ ಒಂದು ರೀತಿಯಲ್ಲಿ ಸಂಘದ ಅಖಿಲ ಭಾರತ ಸ್ವರೂಪವು ಪ್ರಕಟಗೊಂಡಿತ್ತೆನ್ನಬಹುದು. 'ಮರಾಠಾ' ಪತ್ರಿಕೆಯು, "ಓ.ಟಿ.ಸಿ.ಯ ಸಮಾರೋಪ ಸಮಾರಂಭವನ್ನು ನೋಡುವ ಸಲುವಾಗಿ ನಿರೀಕ್ಷೆ ಮೀರಿದ ಪ್ರಮಾಣದಲ್ಲಿ ಜನರು ಬಂದಿದ್ದರು. ಈ ಸಮಾರಂಭದಲ್ಲಿ ನಾಗಪುರದ ಮತ್ತು ಇತರ ಪ್ರಾಂತಗಳಿಂದಲೂ ಬಂದಿದ್ದ ಅನೇಕ ಗಣ್ಯರು ಉಪಸ್ಥಿತರಿದ್ದರು" ಎಂದು ಬರೆದಿತ್ತು.

ಡಾ. ಹೆಡಗೇವಾರರ ಬದುಕಿನಲ್ಲಿ ಅದೇ ಕೊನೆಯ ಸಂಘದ ಕಾರ್ಯಕ್ರಮವಾಯಿತು. ಕಾಯಿಲೆಯಿಂದಾಗಿ 24 ದಿನಗಳ ಕಾಲ ಮಲಗಿದ್ದಲ್ಲಿಯೇ ಇದ್ದರು. ಪೂರ್ಣ ವಿಶ್ರಾಂತಿಗಾಗಿ ವೈದ್ಯರ ಕಟ್ಟುನಿಟ್ಟಾದ ಸೂಚನೆಯಿದ್ದರೂ ನಾಗಪುರದ ಓ.ಟಿ.ಸಿ.ಯಲ್ಲಿರಲು ಅವರು

ಬಹಳಷ್ಟು ಹಂಬಲಿಸುತ್ತಿದ್ದರು. ಅದಕ್ಕಾಗಿ ಕಟ್ಟಕಡೆಯಲ್ಲಿ ಅವರಿಗೆ ಅನುಮತಿಯನ್ನು ನೀಡಲಾಯಿತು. 1940ರ ಜೂನ್ 9ರಂದು ಅವರು ತಮ್ಮ ಅಂತಿಮ ಸಂದೇಶವನ್ನು ನೀಡಿದರು. ತಮ್ಮ ಅಂದಿನ ಭಾಷಣದಲ್ಲಿ ಅವರು ಸಂಘವನ್ನು ಒಂದು ವೈಚಾರಿಕ ಆಂದೋಳನವನ್ನಾಗಿ ಅರಿಯದೆ ಕೇವಲ ಕಾರ್ಯಕರ್ತರ ಪಡೆ ಮಾತ್ರವೆಂಬಂತೆ ತಿಳಿಯುತ್ತಿದ್ದವರೆಲ್ಲರ ಭ್ರಮೆಯನ್ನು ಪೂರ್ಣವಾಗಿ ನಿವಾರಿಸಿದರು. ಅವರು ಹೇಳಿದರು:

"ಸಂಘದ ದೃಷ್ಟಿಯಲ್ಲಿ ಈ ವರ್ಷವು ಅತ್ಯಂತ ಸೌಭಾಗ್ಯದ್ದು. ಇಂದು ನನ್ನ ಕಣ್ಣ ಮುಂದೆ ಹಿಂದೂ ರಾಷ್ಟ್ರದ ಒಂದು ಸಣ್ಣ ಮೂರ್ತ ಸ್ವರೂಪವನ್ನೇ ಕಾಣುತ್ತಿದ್ದೇನೆ.

"ನಿಮ್ಮ ಮತ್ತು ನನ್ನ ಪರಸ್ಪರ ಪರಿಚಯ ಸ್ವಲ್ಪವೂ ಇಲ್ಲದಿದ್ದರೂ, ನನ್ನ ಹೃದಯ ನಿಮ್ಮ ಕಡೆಗೆ ಮತ್ತು ನಿಮ್ಮ ಹೃದಯ ನನ್ನ ಕಡೆಗೆ ಸೆಳೆಯುವಂತೆ ಮಾಡುತ್ತಿರುವ ಆ ಶಕ್ತಿ ಯಾವುದು? ರಾಷ್ಟ್ರೀಯ ಸ್ವಯಂಸೇವಕ ಸಂಘದ ವಿಚಾರವೇ ಅಷ್ಟು ಪ್ರಭಾವಶಾಲಿಯಾದುದು. ಅದರ ಕಾರಣದಿಂದಾಗಿ ಸ್ವಯಂಸೇವಕರು ಪರಸ್ಪರ ಪರಿಚಯವೇ ಇಲ್ಲದಿದ್ದರೂ, ಒಬ್ಬರು ಇನ್ನೊಬ್ಬರನ್ನು ಕಂಡು ಮುಖದಲ್ಲಿ ತುಸು ನಗು ತೋರಿದ ಮಾತ್ರದಿಂದಲೇ ಪರಸ್ಪರ ಗುರುತಿಸಿಕೊಳ್ಳಬಲ್ಲರು.... ಭಾಷೆ ಮತ್ತು ವ್ಯವಹಾರದ ರೀತಿ ಭಿನ್ನವಾದರೂ ಪಂಜಾಬ, ಬಂಗಾಳ, ಮದ್ರಾಸ್, ಬೊಂಬಾಯಿ, ಸಿಂಧ್ ಮೊದಲಾದ ಪ್ರಾಂತಗಳಿಂದ ಬಂದಿರುವ ಸ್ವಯಂಸೇವಕರು ಒಬ್ಬರಿನ್ನೊಬ್ಬರನ್ನು ಪ್ರೀತಿಸುತ್ತಾರೇಕೆ? ಅವರು ರಾಷ್ಟ್ರೀಯ ಸ್ವಯಂಸೇವಕ ಸಂಘಕ್ಕೆ ಸೇರಿದವರು ಎಂಬ ಕಾರಣಕ್ಕಾಗಿಯೇ ಅಂತಹ ಪ್ರೀತಿ ಉಂಟಾಗುತ್ತದೆ..... ಸಂಪೂರ್ಣ ಭಾರತವೇ ಸಂಘಮಯವಾಗುವಂತಹ ಸುವರ್ಣದಿನ ನಿಶ್ಚಿತವಾಗಿಯೂ ಬರಲಿದೆ. ಆಗ ಹಿಂದೂಗಳನ್ನು ವಕ್ರದೃಷ್ಟಿಯಿಂದ ನೋಡುವಂತಹ ಸಾಹಸ ಜಗತ್ತಿನಲ್ಲೆ ಇನ್ನಾರಿಗೂ ಉಳಿಯದು..... ನಾವು ಯಾರ ಮೇಲೂ ಆಕ್ರಮಣ ನಡೆಸಲು ಬಯಸುವವರಲ್ಲ. ಆದರೆ, ನಮ್ಮ ಮೇಲೆ ಯಾರೂ ಆಕ್ರಮಣ ನಡೆಸಲಾಗದಷ್ಟು ಎಚ್ಚರದಿಂದ ನಾವಿರಬೇಕಾದ ಅಗತ್ಯವೂ ಇದೆ.

"ತನು-ಮನ-ಧನಪೂರ್ವಕ ಸಂಘದ ಕೆಲಸ ಮಾಡುವ ಸಲುವಾಗಿ ನಿಮ್ಮ ದೃಢವಾದ ನಿರ್ಧಾರವನ್ನು ಅಖಂಡವಾಗಿ ಉಳಿಸುವಂತಹ ಎಚ್ಚರವನ್ನು ಕಾಪಾಡಿಕೊಳ್ಳಿ.... ಸಂಘದ ಕಾರ್ಯಕ್ರಮವನ್ನು ಚೆನ್ನಾಗಿ ನಡೆಸಿದ ಮಾತ್ರದಿಂದ ಮತ್ತು ಪ್ರತಿನಿತ್ಯ ನಿಯಮಿತವಾಗಿ ಸಂಘಸ್ಥಾನದಲ್ಲಿ ಉಪಸ್ಥಿತನಿದ್ದ ಮಾತ್ರದಿಂದಲೇ ಸಂಘದ ಎಲ್ಲ ಕೆಲಸವಾಗುವುದಿಲ್ಲ ಎಂಬುದು ಗೊತ್ತಿರಲಿ. ನಾವು ಆಸೇತುಹಿಮಾಚಲ ಹರಡಿರುವ ಈ ವಿರಾಟ ಹಿಂದೂ ಸಮಾಜವನ್ನು ಸಂಘಟಿಸಬೇಕಾಗಿದೆ. ನಿಜಕ್ಕೂ ಸಂಘದ ಮಹತ್ವಪೂರ್ಣವಾದ ಕಾರ್ಯದ ಕ್ಷೇತ್ರವಾಗಿರುವುದು ಸಂಘದ ಹೊರಗಿರುವ ಹಿಂದೂ ಸಮಾಜವೇ. ಸಂಘವಿರುವುದು ಕೇವಲ ಸ್ವಯಂಸೇವಕರಿಗಾಗಿ ಅಲ್ಲ. ಆದರೆ ಸಂಘದ ಹೊರಗಿರುವ ಜನರಿಗಾಗಿಯೂ ಅದು ಇದೆ. ಅವರೆಲ್ಲರಿಗೂ ರಾಷ್ಟ್ರದ ಉನ್ನತಿಯ ನಿಜವಾದ ಮಾರ್ಗವನ್ನು ತಿಳಿಸಿಕೊಡಬೇಕಾದುದು ನಮ್ಮ ಕರ್ತವ್ಯವಾಗಿದೆ. ಆ ಮಾರ್ಗವು ಕೇವಲ ಸಂಘಟನೆಯದು ಮಾತ್ರ. ಹಿಂದೂ ಸಮಾಜದ ಅಂತಿಮ ಕಲ್ಯಾಣವಾಗುವುದು ಸಂಘಟನೆಯ ಮೂಲಕವೇ."

ತಮ್ಮ ಅಂತಿಮ ಸಂದೇಶದಲ್ಲಿ ಡಾ. ಹೆಡಗೇವಾರರು ಹಿಂದೂ ಸಂಘಟನೆಯ ಸಕಾರಾತ್ಮಕ ರಾಷ್ಟ್ರೀಯ ಉದ್ದೇಶವನ್ನು ತಿಳಿಸಿ, ಸಂಪೂರ್ಣ ಹಿಂದೂ ಸಮಾಜವನ್ನು

ಸಂಘಟಿಸುವಂತಹ ಗುರಿಯನ್ನು ಮುಂದಿರಿಸಿದರು. ಆ ದಿನಗಳಲ್ಲಿ ಸಂಘದ ಜನಪ್ರಿಯತೆ ಅತಿ ವೇಗದಿಂದ ಹೆಚ್ಚುತ್ತಲೇ ಇತ್ತು. ಸಂಘದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದ ತರಬೇತಿ ಪಡೆದಿದ್ದ ಸ್ವಯಂಸೇವಕರನ್ನು ಹೊರತುಪಡಿಸಿ, ಹೆಚ್ಚಿನ ಸಂಖ್ಯೆಯ ಸಾರ್ವಜನಿಕರ ಸಮುದಾಯವನ್ನು ಕಂಡ ಮಾತ್ರದಿಂದಲೇ ಅದನ್ನು ತಿಳಿಯಬಹುದಾಗಿತ್ತು. 1938ರ ಡಿಸೆಂಬರ್ 30ರಂದು ನಾಗಪುರದಲ್ಲಿ ನಡೆದಿದ್ದ ಶಿಬಿರವೊಂದರ ಸಮಾರೋಪ ಸಮಾರಂಭದಲ್ಲಿ 10 ರಿಂದ 15 ಸಾವಿರದಷ್ಟು ಸಾರ್ವಜನಿಕರು ಭಾಗವಹಿಸಿದ್ದರು.[4]

ಡಾ. ಹೆಡಗೇವಾರರು ಸಂಘ ಕಾರ್ಯದ ವಿಸ್ತಾರವನ್ನು ಯೋಜನಾಬದ್ಧ ರೀತಿಯಲ್ಲಿ ಮಾಡುತ್ತಿದ್ದರು. ತಮ್ಮ ಸಮಕಾಲೀನ ಹಿಂದುತ್ವವಾದಿ ನಾಯಕ-ರೆಲ್ಲರಿಂದಲೂ ಗಣನೀಯವಾದ ಸಹಕಾರವನ್ನು ಅವರು ಪಡೆಯುವಂತಿದ್ದರಾದರೂ ಸಂಘಕಾರ್ಯದಲ್ಲಿ ಹೊರಗಿನಿಂದ ಯಾರೂ ಹಸ್ತಕ್ಷೇಪ ಮಾಡದಂತೆ ಎಚ್ಚರವನ್ನೂ ವಹಿಸುತ್ತಿದ್ದರು. ಹಿರಿಯ ನಾಯಕರೆನಿಸಿಕೊಳ್ಳುವವರೆಲ್ಲರಲ್ಲೂ ಶ್ರೇಷ್ಠ ವಿಚಾರಗಳೇನೋ ಇರುತ್ತವೆ. ಆದರೆ ತಮ್ಮ ವ್ಯಕ್ತಿಗತವಾದ ಶ್ರೇಷ್ಠ ವಿಚಾರಗಳ ಮತ್ತು ಪ್ರತ್ಯಕ್ಷ ಬದುಕಿನ ಶೈಲಿಯ ಇತಿಮಿತಿಗಳು ಅವರನ್ನು ಜನಸಾಮಾನ್ಯರ ನಡುವೆ ಸತತವಾಗಿ ಹಾಗೂ ಪರಿಶ್ರಮಪೂರ್ವಕವಾಗಿ ಸಂಘಟನೆಯ ಕೆಲಸ ಮಾಡುವಲ್ಲಿ ಅಡ್ಡಿಪಡಿಸುತ್ತಿವೆ ಎಂಬುದರ ಅರಿವು ಡಾ. ಹೆಡಗೇವಾರರಿಗೆ ಇತ್ತು. ಅದಕ್ಕಾಗಿ ಅಂತಹ ಹಿರಿಯರಿಂದ ಅವರು ಅಪೇಕ್ಷೆಪಡುತ್ತಿದ್ದುದು ಸಂಘದ ಕಾರ್ಯಕ್ರಮಗಳಲ್ಲಿ ಅಧ್ಯಕ್ಷತೆ ಮತ್ತು ಕಾರ್ಯದ ವಿಸ್ತಾರಕ್ಕಾಗಿ ಅವರ ಪ್ರಭಾವದ ನೆರವು ಮಾತ್ರ. 1934ರ ಆಗಸ್ಟ್ 27ರಂದು ಸಂಘದ ಪ್ರಚಾರಕ ದಾದಾರಾವ್ ಪರಮಾರ್ಥ ಅವರಿಗೆ ಬರೆದಿದ್ದ ಒಂದು ಪತ್ರದಲ್ಲಿ ಅವರು ಆಗ್ರಹಪೂರ್ವಕ ಹೇಳಿರುವುದು ಇಲ್ಲಿದೆ:

"ಬೊಂಬಾಯಿ ತಲುಪಿದ ನಂತರ ನೀವು ಡಾ. ಸಾವರ್‌ಕರ್‌ಜಿ (ನಾರಾಯಣ ರಾವ್) ಮತ್ತು ಗೋಪಾಲರಾವ್‌ಜಿ ಅವರನ್ನು ಜೊತೆಗೂಡಿಸಿಕೊಂಡು ಬ್ಯಾರಿಸ್ಟರ್ ಜಯಕರ್ ಅವರನ್ನು ಕಾಣಲು ಹೋಗಬೇಕು. ಅಲ್ಲಿ ನಾಗಪುರದ ದಸರಾ ಮಹೋತ್ಸವದಲ್ಲಿ ಅಧ್ಯಕ್ಷ ಸ್ಥಾನ ಅಲಂಕರಿಸಲು ಬರುವಂತೆ ಬ್ಯಾರಿಸ್ಟರ್ ಸಾಹೇಬ್ ಅವರನ್ನು ಆಗ್ರಹಪೂರ್ವಕವಾಗಿ ವಿನಂತಿಸಬೇಕು."

1933-34ರ ನಂತರ ಹೆಚ್ಚಿನ ಸಂಖ್ಯೆಯಲ್ಲಿ ರಾಷ್ಟ್ರೀಯ ನಾಯಕರು ಸಂಘದ ಶಾಖೆಗಳಿಗೆ ಮತ್ತು ಶಿಬಿರಗಳಿಗೆ ಬರಲು ಆರಂಭಿಸಿದರು. ಇಂತಹ ವ್ಯಾಪಕ ಲೋಕಸಂಪರ್ಕದ ಮೂಲಕ, ಸಂಘವನ್ನು ತುಳಿದುಹಾಕಬೇಕೆನ್ನುವ ಸಲುವಾಗಿ ಸರ್ಕಾರವು ನಡೆಸುತ್ತಿದ್ದ ಪ್ರಯತ್ನಗಳು ಹಾಗೂ ಅನ್ಯ ಹಿಂದೂತ್ವವಾದಿ ಸಂಘಟನೆಗಳು ಸಂಘವು ಏನು ಮಹಾ ಎಂಬ ಭಾವನೆಯೊಂದಿಗೆ ಟೀಕಿಸುವ ಅಥವಾ ಸಂಘದ ವಿರುದ್ಧ ಅಪಪ್ರಚಾರ ನಡೆಸುವ ಪ್ರಯತ್ನಗಳು - ಇವೆರಡೂ ಸಂಗತಿಗಳನ್ನು ನಿಭಾಯಿಸಲು ಡಾ. ಹೆಡಗೇವಾರರು ಲಕ್ಷ್ಯ ಹರಿಸಿದರು. ಜತೆಯಲ್ಲಿ ಇದರಿಂದ ಇನ್ನೊಂದು ವಿಧ ಲಾಭವೂ ಆಗತೊಡಗಿತು. ಅದು, ಅಪಪ್ರಚಾರದಿಂದಾಗಿ ಸಂಘದ ಬಗ್ಗೆ ರೂಪುಗೊಂಡ ತಪ್ಪಭಿಪ್ರಾಯಗಳ ನಿವಾರಣೆ.

---

4. ಕೇಸರಿ 8 ಜನವರಿ 1939

1934ರ ಆಗಸ್ಟ್ 23ರಂದು 'ಕೇಸರಿ'ಯ ಸಂಪಾದಕ ಎನ್. ಸಿ. ಕೇಳ್ಕರ್ ಅವರು ನಾಗಪುರದ ಶಾಖೆಗೆ ಬಂದಿದ್ದರು. ಅಲ್ಲಿ ಅವರ ಭಾಷಣವೂ ಆಯಿತು. ಈ ಬಗ್ಗೆ ಡಾ. ಹೆಡಗೇವಾರರು ಬರೆದಿರಿಸಿದುದು ಹೀಗೆ: "ಮೊದಲ ಬಾರಿಗೆ ಕೇಳ್ಕರರು ನಾಗಪುರದ ಶಾಖೆಗೆ ಆಗಮಿಸಿದರು. ಅವರ ಆಗಮನ ತೀರಾ ಅನಿರೀಕ್ಷಿತವಾಗಿತ್ತು. ಶಾಖೆಯ ಕಾರ್ಯಕ್ರಮಗಳನ್ನು ಕಂಡು ಅವರು ಅತ್ಯಂತ ಪ್ರಭಾವಿತರಾಗಿರುವಂತೆ ಅನಿಸುತ್ತದೆ. ಮಾತುಕತೆಯಲ್ಲಿ ಅವರದನ್ನು ಒಪ್ಪಿಕೊಂಡೂ ಇದ್ದಾರೆ."

ಅಕೋಲಾದಿಂದ ಪ್ರಕಟವಾಗುವಂತಹ 'ಪ್ರಜಾಪಕ್ಷ'ದ ಸಂಪಾದಕ ಗೋಪಾಲರಾವ್ ಚಿತಲೆ ಅವರಂತೂ ಡಾ. ಹೆಡಗೇವಾರರ ಅನನ್ಯ ಅನುಯಾಯಿಯಾಗಿದ್ದು ಸಂಘಕಾರ್ಯದಲ್ಲಿ ಪ್ರತ್ಯಕ್ಷವಾಗಿ ಪಾಲ್ಗೊಳ್ಳುತ್ತಿದ್ದವರೇ. ಮತ್ತು ಅನೇಕ ಪ್ರಮುಖ ಪತ್ರಿಕೆಗಳ ಸಂಪಾದಕರು ಸಂಘದ ಕಾರ್ಯದ ಮತ್ತು ವಿಚಾರದ ಪ್ರಚಾರವನ್ನು ಸಹ ಆ ದಿನಗಳಲ್ಲಿ ಆರಂಭಿಸಿದ್ದರು. 'ಕೇಸರಿ', 'ಮಹಾರಾಷ್ಟ್ರ', 'ಮರಾಠಾ', 'ಜ್ಞಾನಪ್ರಕಾಶ್', 'ಸಾವಧಾನ', 'ದಿನಮಿತ್ರ', 'ಪ್ರಜಾಪಕ್ಷ' ಮತ್ತು 'ಕಾಳ' ಇಂತಹ ಪ್ರಮುಖ ಪತ್ರಿಕೆಗಳು ಇದರಲ್ಲಿ ಸೇರಿವೆ. 'ದಿನಮಿತ್ರ'ದ ಸಂಪಾದಕ ರಾವ್ ಸಾಹೇಬ ಮುಕುಂದ ಅವರು ಕೂಡ ಕೇಳ್ಕರ್ ಮತ್ತು ಓಗ್ಲೆಯವರಂತೆ ಸಂಘದ ಕಾರ್ಯಕ್ರಮದಲ್ಲಿ ಸ್ವತಃ ಉಪಸ್ಥಿತರಿರಲು ಆರಂಭಿಸಿದ್ದರು. ಆದರೆ ಅದೇ ಕಾಲಾವಧಿಯಲ್ಲಿ ಸಂಘವನ್ನು ತಮಗೆ ತೋಚಿದಂತೆ ಟೀಕಿಸಿ ವಿರೋಧಿಸುವಂತಹ ಪತ್ರಿಕೆಗಳೂ ಇಲ್ಲದಿರಲಿಲ್ಲ. ಅವುಗಳಲ್ಲಿ ಪ್ರಮುಖವಾಗಿದ್ದವು 'ನವಯುಗ' ಮತ್ತು 'ಮಾತೃಭೂಮಿ' ಎಂಬವು. ಆದರೆ, ಕೇಳ್ಕರ್ ಮತ್ತು ಹಿಂದೂ ಮಹಾಸಭಾದ ಇನ್ನೋರ್ವ ನಾಯಕ ಎಲ್.ಬಿ. ಭೋಪಟ್ಕರ್ ಅವರಂತೂ ಅನೇಕ ಸ್ಥಾನಗಳಲ್ಲಿ ಸಂಘದ ಕಾರ್ಯಕ್ರಮಗಳಿಗೆ ಆಹ್ವಾನಿತರಾಗಿ ಹೋಗುತ್ತಿದ್ದುದೂ ಉಂಟು.

ಸಂಘಕಾರ್ಯವನ್ನು ರಾಷ್ಟ್ರಮಟ್ಟದಲ್ಲಿ ಸುದೃಢಗೊಳಿಸುವ ಸಲುವಾಗಿ ಡಾ. ಹೆಡಗೇವಾರರು 1934ರಲ್ಲಿ ಮಾಡಿದ್ದ ನಿರ್ಧಾರವು ಅವರ ಒಂದು ಪತ್ರದಿಂದ ಗೊತ್ತಾಗುತ್ತದೆ. 1934ರ ಆಗಸ್ಟ್ 15ರಂದು ಅವರು ಬರೆದಿದ್ದ ಆ ಪತ್ರದಲ್ಲಿ ಹೀಗಿದೆ: "ನಾಗಪುರದಲ್ಲಿ ನಡೆದಿದ್ದ ಬೇಸಿಗೆಯ ವರ್ಗದ ಕೊನೆಯ ದಿನದ ಕಾರ್ಯಕ್ರಮವನ್ನು ನೋಡಲು ಬಂದಿದ್ದ ಸಂಘಚಾಲಕರುಗಳ ಬೈಠಕ್ ಒಂದು ನಡೆಯಿತು. ಈ ಬೈಠಕ್‌ನಲ್ಲಿ ಪ್ರತಿಯೊಂದು ಜಿಲ್ಲೆಯ ಪ್ರತಿ ತಾಲೂಕಿನಲ್ಲಿ ಕನಿಷ್ಠ ಹತ್ತು ಶಾಖೆಗಳನ್ನಾದರೂ ಆರಂಭಿಸಬೇಕು ಎಂದು ನಿರ್ಧರಿಸಲಾಗಿದೆ. ಅದಕ್ಕನುಗುಣವಾಗಿ ನಾವೀಗ ಕೆಲಸದಲ್ಲಿ ತೊಡಗಿದ್ದೇವೆ... ಸಂಘದ ಕಾರ್ಯವು ನಿಧಾನಗತಿಯಿಂದ ಮತ್ತು ಬಿಡುವು ದೊರೆತಾಗ ಮಾತ್ರ ಮಾಡುವಂತಹ ರೀತಿಯದಲ್ಲ. ನಾವು ಸಂಪೂರ್ಣ ಮಹಾರಾಷ್ಟ್ರವನ್ನು ಆದಷ್ಟು ಶೀಘ್ರ ಸಂಘಟಿಸಬೇಕಾಗಿದೆ ಮತ್ತು ಕಾರ್ಯದ ಅಂತಹ ಮಾದರಿಯನ್ನು ಇತರ ಪ್ರಾಂತಗಳ ಮುಂದೆಯೂ ಪ್ರಸ್ತುತಪಡಿಸಿ, ಮುಂದಿನ 5–10 ವರ್ಷಗಳಲ್ಲಿ ಸಂಪೂರ್ಣ ಹಿಂದೂಸ್ಥಾನವನ್ನೇ ನಾವು ಸುಸಂಘಟಿತಗೊಳಿಸಬೇಕಾಗಿದೆ."

ಈ ಹಿನ್ನೆಲೆಯಲ್ಲಿ ಡಾ. ಹೆಡಗೇವಾರರು ಸ್ವತಃ ಇತರ ಪ್ರಾಂತಗಳಲ್ಲೂ ಪ್ರವಾಸವನ್ನು ಆರಂಭಿಸಿದರು. ಸಂಘದ ಪ್ರಚಾರಕರನ್ನು ಮಧ್ಯಪ್ರಾಂತದಿಂದ ದೇಶದ ಇತರ ಭಾಗಗಳಿಗೆ – ಸಂಯುಕ್ತಪ್ರಾಂತ, ದೆಹಲಿ, ಅಜ್ಮೇರ್, ಮಾರವಾಡ, ಪಂಜಾಬ, ಮದ್ರಾಸ್ ಮೊದಲಾದವುಗಳಿಗೆ – ಕಳುಹಿಸಲು ಆರಂಭಿಸಿತು. ಈ ಕುರಿತು ಅವರು ಓರ್ವ ಹಿತೈಷಿಗೆ ಬರೆದಿದ್ದ ಪತ್ರದಲ್ಲಿ ಹೇಳಿದುದು ಹೀಗೆ:

"ರಾಷ್ಟ್ರೀಯ ಸ್ವಯಂಸೇವಕ ಸಂಘದ ಕಾರ್ಯವನ್ನು ನಾವು ಆರಂಭಿಸಿದುದು ಯಾವುದೋ ಒಂದು ನಗರ ಅಥವಾ ಪ್ರಾಂತಕ್ಕಾಗಿ ಮಾತ್ರ ಸೀಮಿತಗೊಳಿಸಿ ಅಲ್ಲ. ನಮಗೆ ಸಂಪೂರ್ಣ ಹಿಂದೂಸ್ಥಾನವು ಆದಷ್ಟು ಶೀಘ್ರ ಸುಸಂಘಟಿತವಾಗಿ, ಹಿಂದೂ ಸಮಾಜವೆಲ್ಲ ಸ್ವಸಂರಕ್ಷಣೆ ಮಾಡಿಕೊಳ್ಳುವಷ್ಟು ಬಲಶಾಲಿಯಾಗಬೇಕು ಎಂಬ ಉದ್ದೇಶವಿದೆ. ಯಾವುದೋ ಒಂದು ನಗರದಲ್ಲಿ ಐದಾರು ಬಾಲಕರನ್ನು ಒಟ್ಟುಗೂಡಿಸಿ ಆಡಿದ ಮಾತ್ರದಿಂದ ಆಗುವಂತಹ ಕೆಲಸ ಅಲ್ಲ ಇದು. ಅದಕ್ಕಾಗಿ ನಿಮ್ಮಂತಹ ಖ್ಯಾತಿವೆತ್ತ ಸಮಾಜದ ಪ್ರಮುಖರು ಪ್ರತ್ಯಕ್ಷ ಕಾರ್ಯಕ್ಷೇತ್ರದಲ್ಲಿಳಿದು, ಕಾರ್ಯದ ಬೆಳವಣಿಗೆಗಾಗಿ ಉತ್ಸಾಹದ ಭಾರೀ ಅಲೆ ಎಬ್ಬಿಸಬೇಕಾದ ಅಗತ್ಯವಿದೆ."

ಆದರೆ ರಾಜಕೀಯ ಮಟ್ಟದಲ್ಲಿ ವಿರೋಧ ಎದುರಾಗುತ್ತಿತ್ತು. ಸಮಾಜವಾದಿ ಮತ್ತು ಮಹಾಸಭಾದ ಅನೇಕ ನಾಯಕರು ಸಂಘವನ್ನು ಇಷ್ಟಪಡುತ್ತಿರಲಿಲ್ಲ. ಆದಾಗ್ಯೂ ಅವರ ವಿರೋಧವನ್ನು ಡಾ. ಹೆಡಗೇವಾರರು ಹೆಚ್ಚೇನೂ ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲ. ಕಾಶಿಯಲ್ಲಿ ಸಮಾಜವಾದಿಗಳು ತಮ್ಮ ವಿರುದ್ಧ ಮಾಡಿದ ಅಪಪ್ರಚಾರದ ಬಗ್ಗೆ ಅಭಿಪ್ರಾಯ ತಿಳಿಸುತ್ತ 1930ರ ಅಕ್ಟೋಬರ್ 30ರಂದು ಅವರು ಬರೆದಿರುವುದು – "ನಾನು ಕಾಶಿಗೆ ಹೋಗುವ ಒಂದು ದಿನ ಮೊದಲೇ ಅಲ್ಲಿನ ಹಿಂದೂ ವಿಶ್ವವಿದ್ಯಾಲಯದ ಕೆಲವು ವಿದ್ಯಾರ್ಥಿಗಳು ಒಂದು ಕರಪತ್ರಗಳನ್ನು ಪ್ರಕಟಿಸಿ ಹಂಚಿದ್ದರು. ಪತ್ರದ ಕಾರಣದಿಂದಾಗಿ ನಾವು ಕೋಪಗೊಳ್ಳಬಹುದು ಮತ್ತು ನಮ್ಮ ಕೆಲಸವೂ ಕೆಡಬಹುದು ಎಂಬ ನಿರೀಕ್ಷೆ ಅವರಿಗೆ ಇದ್ದಿರಬಹುದು. ನಾನು ಅಲ್ಲಿಗೆ ತಲಪಿದಂತೆಯೇ ಅಲ್ಲಿನ ಸಂಘಕಾರ್ಯಕರ್ತರು ಆ ಸಮಾಜವಾದಿಗಳು ಹಂಚಿದಂತಹ ಕರಪತ್ರಗಳನ್ನು ನನಗೆ ತೋರಿಸಿದರು. ನಮ್ಮ ಸಾಮಾನ್ಯ ರೂಢಿಯಂತೆ ಆ ಪತ್ರವನ್ನು ನಾವು ನೋಡಿಯೇ ಇಲ್ಲವೆಂಬಂತೆ ಮಾಡಿ, ಅದನ್ನು ಪೂರಾ ಅಲಕ್ಷಿಸಬೇಕೆಂದು ನಮ್ಮವರಿಗೆಲ್ಲ ನಾನು ಹೇಳಿದೆ." ಡಾ. ಹೆಡಗೇವಾರರ ಸಂಘಟನಾ ಕೌಶಲ್ಯದ ತಾಜಾ ಉದಾಹರಣೆಗಳಿವು. ಸಾರ್ವಜನಿಕ ರಂಗದಲ್ಲಿರುವ ಯಾವುದೇ ವ್ಯಕ್ತಿಯನ್ನಾದರೂ ಅವರ ಬಗ್ಗೆ ಪೂರ್ವಾಗ್ರಹವಿರಿಸಿಕೊಳ್ಳದೆ ಸಂಘದ ಕಾರ್ಯಕ್ರಮಗಳಿಗೆ ಡಾ. ಹೆಡಗೇವಾರರು ಆಹ್ವಾನಿಸುತ್ತಿದ್ದರು. 'ಕೃತಜ್ಞ ಸ್ಮರಣ' ಎಂಬ ಒಂದು ಪುಸ್ತಕದಲ್ಲಿ ಠೇಂಗಡಿಯವರು ಸಂಘದ ಸಹಕಾರಿಗಳಾಗಿದ್ದ ಅಂತಹವರ ಪಟ್ಟಿಯನ್ನೇ ಕೊಟ್ಟಿದ್ದಾರೆ. ಅದರಲ್ಲಿ ಎಲ್ಲ ಜಾತಿ, ವರ್ಗ ಮತ್ತು ಭಿನ್ನ ವಿಚಾರದವರೂ ಇದ್ದಾರೆ. ಕಾಂಗ್ರೆಸ್‌ನಲ್ಲಿರುವವರು ಸಂಘವನ್ನು ವಿರೋಧಿಸುತ್ತಿದ್ದಾಗ ಡಾ. ಹೆಡಗೇವಾರರು ಮಹಾರಾಷ್ಟ್ರದ ಕಾಂಗ್ರೆಸ್‌ನ ಪ್ರಮುಖ ನೇತಾರರಾಗಿರುವ ಪ್ರೊ. ಎಂ.ಜಿ. ಜೋಗಳೇಕರ ಅವರನ್ನು 1935ರ ಅಕ್ಟೋಬರ್‌ನಲ್ಲಿ ಗೋಂದಿಯಾದಲ್ಲಿ ನಡೆಯಲಿದ್ದ ಮಧ್ಯಪ್ರಾಂತದ ಶಿಬಿರದ ಉದ್ಘಾಟನೆಗಾಗಿ ಆಹ್ವಾನಿಸಿದರು. ಜೋಗಳೇಕರರು ತಮ್ಮ ಭಾಷಣದಲ್ಲಿ ಹೇಳಿದುದು: "ನಾನೋರ್ವ ಕಾಂಗ್ರೆಸ್ ವ್ಯಕ್ತಿ. ಸಂಘದ ಜತೆ ನನಗೆ ಭಿನ್ನಾಭಿಪ್ರಾಯವಿದ್ದರೂ, ರಾಷ್ಟ್ರದ ಬಗ್ಗೆ ಅದಕ್ಕಿರುವ ಭಕ್ತಿ ಮತ್ತು ಚೌಕಾಶಿಯೇ ಇಲ್ಲದ ಬದ್ಧತೆ ಇವುಗಳ ಬಗ್ಗೆ ನನಗೆ ಕಿಂಚಿತ್ತೂ ಸಂದೇಹವಿಲ್ಲ. ರಾಷ್ಟ್ರದ ಏಳ್ಗೆ ಮತ್ತು ಹಿತಸಾಧನೆಗಾಗಿ ಸಂಘವು ತರುಣರಿಗೆ ಪ್ರಶಿಕ್ಷಣ ನೀಡಿ ಅಂತಹ ಕೆಲಸಕ್ಕಾಗಿ ಪ್ರೋತ್ಸಾಹವನ್ನು ನೀಡುತ್ತಿದೆ" ಎಂದಿದ್ದರು.

5. ಕೇಸರಿ 11 ಅಕ್ಟೋಬರ್ 1938

ಪ್ರಶಿಕ್ಷಣ ನೀಡಿ ಅಂತಹ ಕೆಲಸಕ್ಕಾಗಿ ಪ್ರೋತ್ಸಾಹವನ್ನು ನೀಡುತ್ತಿದೆ"[5] ಎಂದಿದ್ದರು. ನ.ವ. ಗುಣಾಜಿ, ದಾದಾಸಾಹೇಬ ಮಾವಳಂಕರ್, ನಾನಾಸಾಹೇಬ ಸರದೇಸಾಯಿ, ಗೋವರ್ಧನದಾಸ ಗೋಕುಲದಾಸ್, ಆರ್.ಎನ್. ಕಾನಿಟ್ಕರ್, ನಾನಾಸಾಹೇಬ ದಾತೆ, ಹಾಲಾಜಿ ಪಂತ ಹಿರ್ದಾ, ದಾದಾಸಾಹೇಬ ನವರೆ, ಬಾಳ್ವೇಕರ್, ಕಮಲಾಬಾಯಿ ಮೊದಲಾದ ಮಧ್ಯಪ್ರಾಂತದ ಮತ್ತು ಮಹಾರಾಷ್ಟ್ರದ ಕಾಂಗ್ರೆಸ್ ನಾಯಕರು ಸಂಘದ ಕಾರ್ಯಕ್ರಮಗಳಲ್ಲಿ ಬಂದು ಸಂಘದ ಶುದ್ಧ ರಾಷ್ಟ್ರೀಯ ಭೂಮಿಕೆಯ ಬಗ್ಗೆ ತಮ್ಮ ಮೆಚ್ಚುಗೆಯನ್ನು ಹೇಳಿದ್ದ ದಾಖಲೆಗಳಿವೆ.[6] ಸಂಘ ಕಾರ್ಯದ ವಿಸ್ತಾರಕ್ಕಾಗಿ ಯೋಜನೆ ಮಾಡಲಾಗುತ್ತಿದ್ದ ಪ್ರಾಂತಗಳಿಂದ ಅಲ್ಲಲ್ಲಿರುವ ಪ್ರಮುಖ ವ್ಯಕ್ತಿಗಳನ್ನು ನಾಗಪುರ, ವರ್ಧಾ, ಪುಣೆ ಮೊದಲಾದ ಕಾರ್ಯದ ಬಲವಾದ ಕೇಂದ್ರಗಳಲ್ಲಿನ ಸಂಘದ ಉತ್ಸವಗಳು ಅಥವಾ ಇನ್ನಿತರ ಮಹತ್ವದ ಕಾರ್ಯಕ್ರಮಗಳಿಗೆ ಅಧ್ಯಕ್ಷತೆ ವಹಿಸಲು ಆಹ್ವಾನಿಸುವುದು ಈ ನಿಟ್ಟಿನಲ್ಲಿ ಮಾಡಲಾಗಿದ್ದ ವಿಶೇಷ ಯೋಜನೆ. ತದನಂತರ ಅವರಿಗಿರುವ ಸಂಬಂಧಗಳ ಲಾಭ ಪಡೆದು ಕಾರ್ಯದ ಮೊದಲ ಹಂತದ ಆರಂಭಕ್ಕಾಗಿ ಪ್ರಚಾರಕರನ್ನು ಕಳುಹಿಸಲಾಗುತ್ತಿತ್ತು. ಜಮುನಾದಾಸ ಮೆಹತಾ, ಸಾರ್ಜೆಂಟ್ ಸಂಜೀವ ಕಾಮತ್, ಸಾರ್ಜೆಂಟ್ ಬಿ.ಸಿ. ಚಟರ್ಜಿ, ಗೋಕುಲಚಂದ್ ನಾರಂಗ್, ಡಿ.ವಿ. ವರದರಾಜುಲು ನಾಯ್ಡು ಮತ್ತು ಮದನಮೋಹನ ಮಾಳವೀಯ ಮೊದಲಾದವರು ಸಂಘದ ಕಾರ್ಯಕ್ರಮಗಳಿಗೆ ಅಧ್ಯಕ್ಷರಾಗಿ ಬಂದು, ಅನಂತರ ಕಾರ್ಯಕ್ಕೆ ಪರೋಕ್ಷವಾಗಿ ಸಹಕಾರವನ್ನು ನೀಡುವಂತಾದುದು ಈ ಯೋಜನೆಯ ಫಲವಾಗಿಯೇ.

ಸಂಘದ ಕೆಲಸಕ್ಕಾಗಿ ಅವರು ಎಲ್ಲರಿಂದಲೂ ಸಹಕಾರ ಪಡೆಯುತ್ತಿದ್ದರು. ಆದರೆ ಯಾವುದೇ ಸಂದರ್ಭದಲ್ಲೂ ಸಂಘದ ವಿಚಾರದ ಪಾವಿತ್ರ್ಯ ಕಾಪಾಡುವುದರಲ್ಲಾಗಲಿ, ಸಂಘಟನೆಗೆ ಸಂಬಂಧಿಸಿದ ವಿಷಯಗಳ ಸ್ವನಿರ್ಧಾರದಲ್ಲಾಗಲಿ ಎಂದೂ ರಾಜಿ ಮಾಡಿಕೊಂಡವರಲ್ಲ. ರಾಷ್ಟ್ರದ ಕಾರ್ಯಕ್ಕಾಗಿ ತಾನು ಆಯ್ಕೆ ಮಾಡಿಕೊಂಡಿರುವ ಶ್ರೇಷ್ಠವಾದ ಮಾರ್ಗದಲ್ಲಿ ಅದರ ಪಥಿಕನಾಗಿರುವವನೇ ಅದರ ನಿಷ್ಠಾವಂತ ಸಾಧಕನೂ ಆಗಿರುತ್ತಾನೆ ಎಂಬುದನ್ನು ದೃಢವಾಗಿ ನಂಬಿದ್ದವರು ಅವರು. ಅವರೊಮ್ಮೆ ಹೇಳಿದ್ದರು: "ಯಾರೋ ಒಬ್ಬ ವಿಶೇಷ ವ್ಯಕ್ತಿಯ ಕಾರಣದಿಂದಾಗಿ ಸಂಘ ನಡೆಯುತ್ತದೆ ಎಂದು ಯಾರೂ ಅಹಂಕಾರ ಪಡಬಾರದು. ಸಂಘದ ಕೆಲಸ ಯಾರೋ ಒಬ್ಬನದಲ್ಲ. ಬದಲಾಗಿ ಒಟ್ಟು ಸಮುದಾಯವೇ ನಡೆಸುವಂತಹ ಕೆಲಸ ಇದು. ಈ ಕೆಲಸ ಮಾಡಲು ತರುಣರಿರಲಿ, ವೃದ್ಧರಿರಲಿ, ತಂತಮ್ಮ ಇಚ್ಛೆಗನುಗುಣವಾಗಿ ಮುಂದುವರೆಯಬೇಕು. ಸಂಘವು ಏನು ಮಾಡಿದೆ ಎಂಬ ಪ್ರಶ್ನೆ ಕೇಳುವವರಿಗೆ ನಾನೇ ತಿರುಗಿ ಒಂದು ಪ್ರಶ್ನೆಯನ್ನು ಕೇಳುತ್ತೇನೆ – ಸಂಘಕ್ಕಾಗಿ ನೀವೇನು ಮಾಡಲು ತಯಾರಿರುವಿರಿ?" ಎಂದು.

## ಡಾ. ಹೆಡಗೇವಾರರು ಮತ್ತು ಯುದ್ಧ

ಎರಡನೇ ಜಾಗತಿಕ ಸಮರಕ್ಕಿಂತ ಮೊದಲೇ ಡಾ. ಹೆಡಗೇವಾರರು ಅಂತಾರಾಷ್ಟ್ರೀಯ ಸ್ತರದ ರಾಜಕೀಯ ಘಟನೆಗಳನ್ನು ಕುರಿತು ಸೂಕ್ಷ್ಮವಾದ ಅವಲೋಕನ ನಡೆಸಿದ್ದರು. ಮೊದಲ ಜಾಗತಿಕ ಸಮರದ ಸಂದರ್ಭದಲ್ಲೂ ಅವರು ಒಂದು ಕ್ರಾಂತಿಯ ಯೋಜನೆಯ

---

6. ಎಲ್ಲವೂ 'ಮಹಾರಾಷ್ಟ್ರ' ಮತ್ತು 'ಕೇಸರಿ'ಯಲ್ಲಿ ಪ್ರಕಟವಾದ ಸುದ್ದಿಗಳನ್ನು ಆಧರಿಸಿವೆ

ರೂಪರೇಷೆ ಹಾಕಿಕೊಂಡಿದ್ದುದು ರಹಸ್ಯವೇನಲ್ಲ. ಆದರೆ ಆಗ ವ್ಯಾಪಕವಾದ ಬೆಂಬಲ ದೊರೆಯದಿದ್ದ ಕಾರಣದಿಂದಾಗಿ ಅದಕ್ಕೆ ಕಾರ್ಯರೂಪ ನೀಡಲು ಅವರಿಗೆ ಆಗಿರಲಿಲ್ಲ. ವಸಾಹತುಶಾಹಿಯ ವಿರುದ್ಧ ನಡೆಸಲಾಗುವ ಕ್ರಾಂತಿ ಯಶಸ್ವಿಯಾಗಬೇಕಾದಲ್ಲಿ ಅತ್ಯಗತ್ಯವಾಗಿರುವ ಸಂಗತಿಗಳು ಎರಡು ಎಂಬುದನ್ನು ಅವರು ಅನುಭವದಿಂದ ತಿಳಿದಿದ್ದರು - ಮೊದಲನೆಯದಾಗಿ ಸಮರ್ಪಿತ ಮನೋಭಾವದ ತರುಣರ ಒಂದು ಸಂಘಟನೆ ಬೇಕು ಮತ್ತು ಎರಡನೆಯದಾಗಿ ಸಾಮ್ರಾಜ್ಯವಾದಿ ಆಡಳಿತದ ಲಕ್ಷ್ಯ ಹೊರಗಿನ ಇನ್ನಾವುದೋ ಘಟನೆಯತ್ತ (ಅಂತಾರಾಷ್ಟ್ರೀಯ ರಾಜಕೀಯ ವಿದ್ಯಮಾನ) ಹರಿದಿರಬೇಕು. ತಮ್ಮ ಸಂಘಟನೆಗೆ ರಾಷ್ಟ್ರೀಯ ಸ್ವರೂಪ ನೀಡುವಂತಹ ಹಾಗೂ ಅದನ್ನು ದೃಢ ಮತ್ತು ಬಲಶಾಲಿಗೊಳಿಸುವತ್ತ ಅವರು ಹಗಲು ರಾತ್ರಿಯೆನ್ನದೆ ಅವಿಶ್ರಾಂತವಾಗಿ ಪರಿಶ್ರಮಿಸುತ್ತಿದ್ದುದು ಅದಕ್ಕಾಗಿಯೇ. ಅವರ ಮನಸ್ಸನ್ನು ಸದಾ ಚುಚ್ಚುತ್ತಿದ್ದುದು ನಮ್ಮ ರಾಷ್ಟ್ರದ ಗುಲಾಮಗಿರಿಯೇ. ಅವರು 'ಯಾಚಿ ದೇಹಿ ಯಾಚಿ ಡೋಳಾ' (ಇದೇ ಶರೀರ ಇದೇ ಕಣ್ಣುಗಳಿಂದ) ದೇಶದ ಸ್ವಾತಂತ್ರ್ಯವನ್ನು ಕಾಣಬೇಕೆಂದು ತಳಮಳಿಸುತ್ತಿದ್ದುದು ಸಹ ಅದಕ್ಕಾಗಿಯೇ.

ಯುದ್ಧವಾಗುವುದು ಖಾತ್ರಿಯೆನಿಸಿ ಅದರ ಆರಂಭದ ಕ್ಷಣ ಸಮೀಪಿಸುತ್ತಿದ್ದಂತೆಯೇ ಅವರ ಮನದ ಚಿಂತೆಯೂ ತೀವ್ರಗೊಳ್ಳಲಾರಂಭಿಸಿತು. ಆ ದಿನಗಳಲ್ಲಿ ಅವರ ಮನದ ಉತ್ಕಟ ಇಚ್ಛೆಯಾಗಿದ್ದುದು ಇಂತಹ ಸದವಕಾಶ ಕೈತಪ್ಪಿ ಹೋಗಬಾರದು ಎಂಬ ಬಗ್ಗೆ ಮಾತ್ರ. ಅದರಿಂದಾಗಿ ಸಂಘದ ಕಾರ್ಯ ಅತ್ಯಧಿಕವಾಗಿ ಶಕ್ತಿಶಾಲಿಯಾಗಬೇಕೆಂಬ ಹಂಬಲದಿಂದ ಅವರು ಚಡಪಡಿಸಿದ್ದರು. ಹಿಂದೂ ರಾಷ್ಟ್ರದ ಭವಿಷ್ಯವೇ ಆಗಿನ ಕ್ಷಣದಲ್ಲೇ ಇದೆ ಎಂದು ಅವರಿಗನಿಸುತ್ತಿತ್ತು. ತಮ್ಮ ಒಂದು ಭಾಷಣದಲ್ಲಿ ಅವರು ಹೇಳಿದುದು:

"ಸಂಘಕ್ಕೀಗ ಹದಿನಾಲ್ಕು ವರ್ಷಗಳಾದವು. ಈವರೆಗೆ ನಾವು ಮಾಡಿರುವ ಕೆಲಸ ಎಷ್ಟೆಂಬುದು ನಮಗೆಲ್ಲ ತಿಳಿದೇ ಇದೆ. ನಮಗೆ ಎದುರಾಗುತ್ತಿರುವ ಭಾರಿಭಾರೀ ಸಂಕಟಗಳನ್ನು ಗಣನೆಗೆ ತೆಗೆದುಕೊಂಡಲ್ಲಿ, ನಾವು ಈವರೆಗೆ ಮಾಡಿರುವ ಕೆಲಸವು ಸಹ, ಅವುಗಳ ಪ್ರಮಾಣದಲ್ಲಿ ನಿಶ್ಚಿತವಾಗಿಯೂ ದೊಡ್ಡದೇ ಆಗಿದೆ. ಆರಂಭದಲ್ಲಿ ನಾವು ಮಾಡಿರುವ ನಿರ್ಧಾರವೆಂದರೆ, ಹಿಂದೂಸ್ಥಾನವು ಹಿಂದೂಗಳ ದೇಶವೆಂದಾದಲ್ಲಿ ಅದರ ಮೇಲ್ಮೆ ಸಾಧಿಸಬೇಕಾದ ಹೊಣೆಯೂ ನಮ್ಮದೇ ಆಗಿದೆ. ಇದು ನಮ್ಮ ಮನೆಯಾಗಿರುವುದರಿಂದ ಇದಕ್ಕೆ ಸಂಬಂಧಿಸಿದ ನಮ್ಮ ಹೊಣೆಯಿಂದ ತಪ್ಪಿಸಿಕೊಳ್ಳುವಂತಿಲ್ಲ. ಯಾರಿಗೆ ಈ ದೇಶದ ಬಗ್ಗೆ ಪ್ರೀತಿಯೂ ಇಲ್ಲ ಮತ್ತು ಭಕ್ತಿಯೂ ಇಲ್ಲವೋ, ಅಂತಹ ಹೊರಗಿನವರು ನಮಗೆ ಎಂದಾದರೂ ಸಹಾಯ ಮಾಡಿಯಾರು ಎಂಬುದನ್ನು ನಾವು ನಿರೀಕ್ಷಿಸುವುದು ವ್ಯರ್ಥವಷ್ಟೇ ಅಲ್ಲ, ಅನುಚಿತವೂ ಆಗಿದೆ. ಹೀಗಾಗಿ ನಮ್ಮ ಉದ್ಧಾರವನ್ನು ನಾವೇ ಮಾಡಬೇಕೆಂದಾದಲ್ಲಿ ನಮಗೆ ಸಂಘಟನೆಯ ಈ ಮಾರ್ಗ ಬಿಟ್ಟು ಬೇರಾವ ಉಪಾಯವೂ ಇಲ್ಲ."

ಮುಂದೆ ಅವಲೋಕನ ಮಾಡುತ್ತಾ ಅವರು "ಹದಿನಾಲ್ಕು ವರ್ಷಗಳಿಂದ ನಾವು ಈ ಕಾರ್ಯದಲ್ಲಿ ತೊಡಗಿದ್ದೇವೆ. ಇದೇನೂ ಸಣ್ಣ ಕಾಲಾವಧಿಯಲ್ಲ. ಆದರೆ ನಾವು ನಮ್ಮ ಗುರಿಯ ಸಮೀಪಕ್ಕಾದರೂ ತಲುಪಿದ್ದೇವೆಯೇ ಎಂಬ ಬಗ್ಗೆ ಸಹ ಯೋಚಿಸಬೇಕಾಗಿದೆ. ಭಾರತದಲ್ಲಿ ಪಂಜಾಬ, ಬಂಗಾಳ, ಬಿಹಾರ ಮೊದಲಾದ ಕೆಲವು ಪ್ರಾಂತಗಳಿಗೆ ಮತ್ತು ಮಧ್ಯಪ್ರಾಂತ ಹಾಗೂ ಮುಂಬಯಿ ಪ್ರದೇಶದಲ್ಲಿ ಪ್ರತಿಯೊಂದು

ಜಿಲ್ಲೆ ಮತ್ತು ತಾಲೂಕಿನವರೆಗೆ ನಮ್ಮ ಕಾರ್ಯ ತಲುಪಿದ್ದು, ಎಲ್ಲ ಕಡೆಗಳಲ್ಲಿ ನಮ್ಮ ಶಾಖೆಗಳು ಚೆನ್ನಾಗಿ ನಡೆಯುತ್ತಿವೆ. ನಾನು ಮೇಲಿಂದ ಮೇಲೆ ಹೇಳುವ ಸಂಗತಿ ಒಂದೇ - ನಾವು ತಲುಪಬೇಕಾಗಿರುವ ಗುರಿಯನ್ನು ಲಕ್ಷ್ಯದಲ್ಲಿರಿಸಿ, ಇಂದಿನ ನಮ್ಮ ಕಾರ್ಯದ ಬೆಳವಣಿಗೆ ಮತ್ತು ಅದರ ವೇಗವನ್ನು ಹೋಲಿಸಿ ನೋಡಿ. ನಮ್ಮ ಪ್ರಗತಿ ಎಷ್ಟಾಗಿದೆ? ನಾವು ಮಾಡಿ ತೋರಿಸಬೇಕಾಗಿದ್ದ ಪ್ರಗತಿಯ ಹೋಲಿಕೆಯಲ್ಲಿ ನಾವು ಸಾಧಿಸಿರುವುದೆಷ್ಟು? ನಾವು ಎಷ್ಟು ಹಿಂದೂಳಿದಿದ್ದೇವೆ? ಇವೆಲ್ಲ ನಮ್ಮನ್ನು ನಾವೇ ವಿಚಾರಿಸಿಕೊಳ್ಳಬೇಕಾಗಿರುವ ಸಂಗತಿಗಳು."

ಅಂದಿನ ರಾಜಕೀಯ ಸನ್ನಿವೇಶಗಳು ಮತ್ತು ವಸಾಹತುಶಾಹಿಯ ವಿರುದ್ಧ ಕ್ರಾಂತಿಯ ಮಹತ್ವಾಕಾಂಕ್ಷೆಯನ್ನು ಕಣ್ಣಮುಂದಿರಿಸಿ, ಸಂಘದ ಯೋಜನೆಯ ಕಡೆ ಬೆರಳು ತೋರಿಸುತ್ತ ಅವರು ಹೇಳಿದ ಮಾತುಗಳು ಹೀಗಿವೆ. "ನಮ್ಮ ಕಾರ್ಯ ಪೂರ್ತಿಯಾಗುವುದನ್ನು ನಮ್ಮ ಕಣ್ಣುಗಳಿಂದಲೇ ಕಾಣಬೇಕೆಂಬ ಪಣವನ್ನು ಸಂಘವು ತೊಟ್ಟಿದೆ.... ಕಾರ್ಯವು ಬಹಳ ಕಠಿಣ ಎಂದು ಕೆಲವರು ಹೇಳುವುದುಂಟು. ಇದರಲ್ಲಿ ಅನೇಕ ವಿಧ ತೊಂದರೆಗಳಿವೆ ಎಂಬುದು ಅವರ ಅನಿಸಿಕೆ. ನನಗನಿಸುವುದೇನೆಂದರೆ, ಕಷ್ಟಗಳೇನೋ ಇರಬಹುದು. ಆದರೆ ನಮಗದು ಮೊದಲೇ ತಿಳಿದಿರಲೂ ಬೇಕು. ನಮ್ಮ ಮಾರ್ಗ ಕಲ್ಲುಮುಳ್ಳುಗಳಿಂದ ಕೂಡಿದ್ದು ಎಂಬುದು ಗೊತ್ತಿರಬೇಕು. ಅದನ್ನು ಹೂಗಳ ಹಾಸಿಗೆ ಎಂಬ ಆಸೆಯನ್ನು ನಾವೆಂದು ಇರಿಸಿಕೊಂಡಿದ್ದೇವೆ? ದೇಶಕ್ಕೆ ಅದರ ಮೊದಲಿನ ಗೌರವವನ್ನು ತಂದುಕೊಡುವುದು ಕೇವಲ ಒಣಹರಟೆಯ ಮಾತೇನಲ್ಲ ಮತ್ತು ಅದು ಮಾರುಕಟ್ಟೆಯಲ್ಲಿ ದೊರೆಯುವ ಅಗ್ಗದ ಮಾಲೂ ಅಲ್ಲ. ಅದೊಂದು ಬಹು ಬೆಲೆ ಬಾಳುವ ರತ್ನವೇ ಆಗಿದ್ದು, ಅದನ್ನು ಖರೀದಿಸಲು ಅದರ ಪೂರಾ ಬೆಲೆಯನ್ನು ನೀಡಲೇಬೇಕಾಗುತ್ತದೆ. ಒಂದು ಚಿಕ್ಕಾಸು ಕಡಿಮೆ ಕೊಟ್ಟರೂ ಅದು ಸಿಗುವುದಿಲ್ಲ. ಅದರ ಬೆಲೆಯನ್ನು ತರಲು ಸರ್ವಸ್ವ ತ್ಯಾಗಮಾಡಲು ಮತ್ತು ಅಗತ್ಯವಿರುವಷ್ಟು ಪರಿಶ್ರಮಿಸಲು ನಿಮ್ಮನ್ನು ಬಿಟ್ಟು ಇನ್ನಾರಿದ್ದಾರೆ? ಅದನ್ನು ಮಾಡಬಲ್ಲವರಾದರೂ ಯಾರು? ಇದನ್ನು ಮಾಡಬೇಕಾಗಿರುವವರು ನೀವು ಮಾತ್ರ ಮತ್ತು ನೀವೇ ಅದನ್ನು ಮಾಡಬೇಕಾಗಿದೆ."

ಸ್ವರಾಜ್ಯಪ್ರಾಪ್ತಿಯೇ ಸಂಘದ ಗುರಿ ಎಂಬುದನ್ನು ಈ ಸಂದರ್ಭದಲ್ಲಿ ಅವರು ಘೋಷಿಸಿದರು. ಸ್ವರಾಜ್ಯದ ಬಗ್ಗೆ ಅವಿಶ್ವಾಸ ಪ್ರಕಟಿಸಿದವರ ವಿಚಾರಗಳನ್ನು ಒಪ್ಪದ ಅವರು ಮಾತು ಮುಂದುವರಿಸುತ್ತ "ಈ ಕಾರ್ಯವನ್ನು ನಾವೀಗ ಮಾಡದೇ ಹೋದಲ್ಲಿ ಮುಂದೆ ಭವಿಷ್ಯದಲ್ಲಿ ನಮಗೆ ಸಫಲತೆ ದೊರೆಯುವುದು ಇನ್ನೂ ಅಸಂಭವ. ಸ್ವರಾಜ್ಯವು ಎರಡೇ ದಿನಗಳಲ್ಲಿ ಅಥವಾ ಒಂದೆರಡು ತಿಂಗಳಲ್ಲಿ ಲಭಿಸುವುದು ಸಾಧ್ಯವೆಂದು ನಾವೆಂದೂ ಹೇಳಿಲ್ಲ. ಆದರೆ ಈ ಕಾರ್ಯವನ್ನು ತಲೆತಲಾಂತರಗಳವರೆಗೆ, ಯುಗಯುಗಗಳ ಕಾಲ, ಫಲ ಏನೂ ಬೇಕಾದರೂ ಆಗಲಿ, ಮಾಡುತ್ತಲೇ ಇರುತ್ತೇವೆಂದು ಸಹ ನಾವು ಹೇಳಿಲ್ಲ. ನಮ್ಮ ಪ್ರಯತ್ನವಾದರೊ, ನಾವು ಬದುಕಿರುವಾಗಲೇ ನಮ್ಮ ಗುರಿ ಸಾಧಿತವಾಗಿರುವುದನ್ನು ಕಾಣಬೇಕೆಂಬುದು ಮತ್ತು ಅದು ಅತ್ಯಗತ್ಯವಾಗಿ ಆಗಲೇಬೇಕಾದುದು ಸಹ ಆಗಿದೆ" ಎಂದರು.

ಕೊನೆಯಲ್ಲಿ ಅವರು ಎರಡನೇ ಜಾಗತಿಕ ಸಮರದಿಂದಾಗಿ ರೂಪುಗೊಂಡ ಸ್ಥಿತಿಯಲ್ಲಿ ಸಂಘದ ಪಾತ್ರದ ಬಗ್ಗೆಯೂ ಬೆಳಕು ಚೆಲ್ಲಿದರು. ಯುದ್ಧದಲ್ಲಿ ಬ್ರಿಟನ್ ಪಾಲ್ಗೊಳ್ಳುತ್ತಿರುವುದರಿಂದ ಭಾರತದಲ್ಲಿ ಅದರ ಸ್ಥಿತಿ ದುರ್ಬಲಗೊಂಡಿರುವುದು.

ಭಗವಂತನೇ ನಮಗೆ ಅನುಗ್ರಹಿಸಿದ ಒಂದು ಸ್ವರ್ಣ ಘಳಿಗೆ ಎಂಬುದು ಅವರ ಅನಿಸಿಕೆಯಾಗಿತ್ತು. ಸಾಮ್ರಾಜ್ಯವಾದಿಗಳಿಗೆ ಎರಗಿರುವ ಸಂಕಟವು ಭಾರತದಲ್ಲಿ ರಾಷ್ಟ್ರೀಯ ಹೋರಾಟಕ್ಕೆ ಒಂದು ಸದವಕಾಶವಾಗಿದೆ ಎಂದು ತಿಳಿದಿದ್ದರು ಅವರು. ತಮ್ಮ ಇನ್ನೊಂದು ಭಾಷಣದಲ್ಲಿ "ಇಂದಿನ ಸನ್ನಿವೇಶ ಭಯಾನಕ ಮತ್ತು ಸಂಕಟಪೂರ್ಣವಾದುದು ಎಂದು ಅನೇಕರು ಹೇಳುತ್ತಾರೆ. ಆದರೆ ನನಗನಿಸುವಂತೆ ಇಂದಿನಷ್ಟು ಅತ್ಯಂತ ಅನುಕೂಲ ಪರಿಸ್ಥಿತಿ ಈ ಹಿಂದೆ ಎಂದೂ ಲಭಿಸಿರಲಿಲ್ಲ. ನಿಜಕ್ಕೂ ಪ್ರಾಣವನ್ನು ಪಣವಾಗಿರಿಸಿ ಕೆಲಸ ಮಾಡಲು ನಮಗಿದೇ ಅತ್ಯಂತ ಸುಯೋಗ್ಯ ಸಮಯವಾಗಿದೆ. ಇಂದಿನಷ್ಟು ಅನುಕೂಲ ಸಮಯ ಈ ಹಿಂದೆ ಎಂದೂ ಬಂದಿರಲಿಲ್ಲ. ಮುಂದೆ ಬರುವುದೂ ಇಲ್ಲ. ಗಟ್ಟಿ ಎನಿಸಬಹುದಾದ ಕೆಲಸ – ಮಾಡುವುದೇ ಅದಲ್ಲ. ಇದೀಗ ನಮ್ಮಲ್ಲಿ ಶಕ್ತಿಯನ್ನು ಒಗ್ಗೂಡಿಸಿ ಮಾಡಬೇಕಾಗಿದೆ. ಇಲ್ಲವಾದಲ್ಲಿ ಏನೂ ಪ್ರಯೋಜನ ಆಗುವುದಿಲ್ಲ. ಕಳೆದ ಹದಿನಾಲ್ಕು ವರ್ಷಗಳಲ್ಲಿ ನಾವು ನಮ್ಮ ಕೆಲಸದಲ್ಲಿ ಎಂದೂ ಸೋಲು ಕಂಡಿಲ್ಲ. ನಾವೆಂದೂ ಹೆಜ್ಜೆಯನ್ನು ಹಿಂದೆ ಹಾಕಿಲ್ಲ. ಹೀಗಿದ್ದ ಮೇಲೆ ಇಂದಿನಂತಹ ಸದವಕಾಶ ದೊರೆತಾಗ ನಾವು ಹಿಂದೆ ಸರಿಯುವುದಾದರೂ ಹೇಗೆ ಸಾಧ್ಯ?" ಎಂದಿದ್ದರು.

ಆದರೆ ವಿಧಿಯ ಇಚ್ಛೆ ಎನ್ನೋಣವೇ. ಅಥವಾ ತಮ್ಮ ಆರೋಗ್ಯದ ಕಡೆ ಡಾ. ಹೆಡಗೇವಾರರು ಅಲಕ್ಷ್ಯ ಮಾಡಿದ ಕಾರಣವೆನ್ನೋಣವೇ? ಅಂತೂ 1939ರಿಂದಲೇ ಅವರ ದೇಹಸ್ಥಿತಿ ಕೆಡಲಾರಂಭಿಸಿತು. ಕಾಯಿಲೆಯಿಂದಾಗಿ ಅವರ ಶರೀರ ಪೂರಾ ದುರ್ಬಲಗೊಂಡಿತು. ಯಾರು ರಾಷ್ಟ್ರವನ್ನು ಸ್ವತಂತ್ರಗೊಳಿಸುವ ಸಲುವಾಗಿ ಸಂಘಟನೆಯ ಕಾರ್ಯವನ್ನು ಸಜ್ಜುಗೊಳಿಸುವ ನಿಟ್ಟಿನಲ್ಲಿ ಒಂದು ಮಹಾಯಜ್ಞವನ್ನು ಆರಂಭಿಸಿದ್ದರೋ, ಅವರೇ ಸ್ವತಃ ಅಸಹಾಯಕರಾದರು. ಈ ಕಾರಣಕ್ಕಾಗಿ ಅವರು ಅನುಭವಿಸುತ್ತಿದ್ದ ಮಾನಸಿಕ ವೇದನೆಯನ್ನು, ಅವರಷ್ಟೇ ತಳಮಳಿಸುತಿದ್ದ ಇನ್ನೋರ್ವ ವ್ಯಕ್ತಿ ಮಾತ್ರ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತಿತ್ತೇನೋ. 1939ರ ಸೆಪ್ಟೆಂಬರ್‌ನಲ್ಲಿ ಯುದ್ಧ ಆರಂಭವಾಗಿದ್ದು, ಅದರ ಕಾವಿನಿಂದ ಬ್ರಿಟನ್ ಬೇಯುತ್ತಿದ್ದರೆ, ಇತ್ತ ಡಾ. ಹೆಡಗೇವಾರರ ಮನಸ್ಸು ಸಹ ಅತೀವ ವೇದನೆಯಿಂದ ಕುದಿಯುತಿತ್ತು. ಸಂಘದ ಈ ಹಿಂದಿನ ಸರಕಾರ್ಯವಾಹ ಎಚ್.ವಿ. ಕುಲಕರ್ಣಿ ಅವರು ಬರೆಯುತ್ತಾರೆ:

"ಎರಡನೇ ಮಹಾಸಮರ ಆರಂಭವಾದ ಮೇಲೆ ಒಂದು ರಾತ್ರಿ ಡಾಕ್ಟರ್‌ಜಿ ಅವರು ನನಗೆ ಹೇಳಿ ಕಳುಹಿಸಿದರು. ಅವರಾಗ ಅರೆ ನಿದ್ರೆಯಲ್ಲಿದ್ದರು. ಆದರೂ ಅವರ ಮುಖದ ಮೇಲೆ ಆಳವಾದ ಚಿಂತೆಯ ಲಕ್ಷಣಗಳು ಕಾಣಿಸುತಿದ್ದವು. ಅವರು ನನ್ನ ಬಳಿ ಒಂದು ಸಂದೇಹವನ್ನು ವ್ಯಕ್ತಪಡಿಸಿದರು. "ಅದೆಂದರೆ ಸ್ವಾತಂತ್ರ್ಯಪ್ರಾಪ್ತಿಯ ಇನ್ನೊಂದು ಸುವರ್ಣಾವಕಾಶವನ್ನು ನಾವು ಕಳೆದುಕೊಳ್ಳುತ್ತಿದ್ದೇವೋ ಏನೋ?" ಅವರು ಹೇಳಿದರು: "ಯುದ್ಧಕ್ಕಿಂತ ಮೊದಲೇ ನಾವು ಸಾಕಷ್ಟು ಶಕ್ತಿಯನ್ನು ಕೂಡಿಹಾಕಬೇಕಾಗಿದ್ದುದು ನಮ್ಮ ಕರ್ತವ್ಯವೇ ಆಗಿತ್ತು. ಯುದ್ಧವಾಗುವ ಮೊದಲೇ ಅದರ ಬಗ್ಗೆ ನಾನು ಭವಿಷ್ಯವಾಣಿ ಹೇಳಿದ್ದೆ. ಆದರೆ ಭಗವಂತನ ಇಚ್ಛೆ ಬೇರೆಯೇ ಇದ್ದಿರಬೇಕು."

## ಕ್ರಾಂತಿಗೆ ಕರೆ

ಸಂಘದ ಶಾಖೆಗಳಲ್ಲಿ ಮತ್ತು ತರಬೇತಿ ಶಿಬಿರಗಳಲ್ಲಿ ನೀಡಲಾಗುವ ವೈಚಾರಿಕ, ಮಾನಸಿಕ ಮತ್ತು ಶಾರೀರಿಕ ಶಿಕ್ಷಣ ಪದ್ಧತಿಗಳಲ್ಲಿ ಅಂದು ಇದ್ದ [illegible]

ಒಂದೇ - ಅದು ದೇಶ ಸ್ವತಂತ್ರವಾಗಬೇಕೆಂಬುದು. ಕ್ರಾಂತಿಯ ಕನಸುಗಳನ್ನು ಶಬ್ದ ಮತ್ತು ಭಾವನೆಗಳಲ್ಲಿ ಪ್ರತ್ಯಕ್ಷ ಪ್ರಕಟಿಸದೆಯೂ ಡಾ. ಹೆಡಗೇವಾರರು ಅದರಲ್ಲಿ ಸಂಘದ ಮುಂದಾಳುತನವನ್ನು ತಮ್ಮ ಮನದಲ್ಲಿ ಸಿದ್ಧಗೊಳಿಸಿಕೊಂಡೇ ಇರಿಸಿದ್ದರು. ವಾಸ್ತವಿಕವಾಗಿ ಸಂಘದ ಅನೇಕ ಪ್ರಮುಖರು ಕ್ರಾಂತಿಕಾರಿ ಹಿನ್ನೆಲೆಯುಳ್ಳವರಾಗಿದ್ದವರೇ. ಸ್ವತಃ ಡಾ. ಹೆಡಗೇವಾರರಂತೂ ಕ್ರಾಂತಿಕಾರಿ ಆಂದೋಳನದಲ್ಲಿ ಸಕ್ರಿಯವಾಗಿದ್ದುದು ಸರ್ವವಿದಿತ. ಅವರಲ್ಲದೆ ಇನ್ನೂ ಅನೇಕ ಪ್ರಮುಖರ ಪೂರ್ವ ಚರಿತ್ರೆಯೂ ಅದೇ ರೀತಿಯದಾಗಿತ್ತು. ದಾದಾರಾವ್ ಪರಮಾರ್ಥ್ ಅವರೂ 'ಕ್ರಾಂತಿಕಾರಿ ಚಳವಳಿ'ಯ ಸಮರ್ಥಕರಾಗಿದ್ದವರು. 1924ರಲ್ಲಿ ಪೊಲೀಸರು ಅವರ ಮನೆಯ ಮೇಲೆ ದಾಳಿಯೆಸಗಿ ಅಲ್ಲಿಂದ ಅನೇಕ 'ಹಿಂಸೆಗೆ ಪ್ರಚೋದಕ' ಸಾಮಗ್ರಿಗಳನ್ನು ಮತ್ತು ನಿಷೇಧಿತ ಸಾಹಿತ್ಯಗಳನ್ನು ವಶಪಡಿಸಿಕೊಂಡಿದ್ದರು. 1925ರಲ್ಲಿ ಭಗತ್ ಸಿಂಗ್, ರಾಜಗುರು ಮತ್ತು ಸುಖದೇವ್ ಅವರನ್ನು ಪರಮಾರ್ಥರು ಸ್ವತಃ ಕಂಡಿದ್ದರು. 1927ರಲ್ಲಿ ರಾಜಗುರು ಅವರ ಜತೆಯಲ್ಲಿ ಕ್ರಾಂತಿಕಾರಿಗಳ ರಹಸ್ಯ ಬೈಠಕ್‌ಗಳಲ್ಲಿ ಅವರು ಪಾಲ್ಗೊಳ್ಳುತ್ತಿದ್ದುದೂ ಉಂಟು. ಸಂಘದ ಇನ್ನೋರ್ವ ಪ್ರಮುಖ ಉಮಾಕಾಂತ ಆಪಟೆ ಅವರು ಶಾಲಾಧ್ಯಾಪಕರಾಗಿದ್ದವರು. ಅವರ ಕ್ರಾಂತಿಕಾರಿ ವಿಚಾರಗಳ ಕಾರಣದಿಂದಾಗಿ 1924ರಲ್ಲಿ ಅವರನ್ನು ನೌಕರಿಯಿಂದ ವಜಾ ಮಾಡಲಾಗಿತ್ತು. ಕ್ರಾಂತಿಕಾರಿಗಳ ಬಗ್ಗೆ ಸಂಘದಲ್ಲಿ ಸಾಮಾನ್ಯವಾಗಿ ಅತಿ ಹೆಚ್ಚಿನ ಒಲವು ಇರುತ್ತದೆ. 1929ರಲ್ಲಿ ಸ್ಯಾಂಡರ್ಸ್‌ನ ಹತ್ಯೆಯ ನಂತರ, ರಾಜಗುರು ಅವರು ಭೂಗತರಾಗಿ ನಾಗಪುರಕ್ಕೆ ಬಂದಿದ್ದಾಗ, ಡಾ.ಹೆಡಗೇವಾರರು ಅವರನ್ನು ಅತ್ಯಂತ ಎಚ್ಚರದೊಂದಿಗೆ ಅಡಗಿಸಿಡುವ ವ್ಯವಸ್ಥೆ ಮಾಡಿದ್ದರು. ಡಾ. ಹೆಡಗೇವಾರರ ಮಾತನ್ನು ಗೌರವಿಸಿ ಅವರು ಪುಣೆಗೆ ಹೋಗದೆ ಉಳಿದಿದ್ದಲ್ಲಿ ಪ್ರಾಯಶಃ ಪೊಲೀಸರ ಕೈಗೆ ಸಿಗುತ್ತಲೂ ಇರಲಿಲ್ಲ. ಘೋಡ್ಕೆ ಅವರು ಬರೆದಿರುವಂತೆ, "ಭಾರತೀಯ ಕ್ರಾಂತಿಕಾರಿಗಳು ಮತ್ತು ಸಂಘದ ನಡುವೆ ಅನೇಕ ಸಂಗತಿಗಳಲ್ಲಿ ಸಾಮಂಜಸ್ಯವಿತ್ತು. ಸಂಘದ ಮೇಲೆ ಕ್ರಾಂತಿಕಾರಿಗಳಿಗಿದ್ದ ಪ್ರಭಾವಕ್ಕೆ ರಾಜಗುರು ಒಂದು ಉದಾಹರಣೆ ಮಾತ್ರ. ರಾಜಗುರು ಅವರಿಗೆ ಡಾ.ಹೆಡಗೇವಾರರು ಸರ್ವವಿಧ ನೆರವು ನೀಡಿದ್ದುದು ಅವರ ಮಟ್ಟಿಗೆ ಅತ್ಯಂತ ಸ್ವಾಭಾವಿಕವಾದುದೇ."[7]

1931ರ ಮಾರ್ಚ್ 23ರಂದು ಭಗತ್‌ಸಿಂಗ್, ರಾಜಗುರು ಮತ್ತು ಸುಖದೇವ್ ಅವರಿಗೆ ಫಾಸಿಯ ಶಿಕ್ಷೆಯನ್ನು ವಿಧಿಸಿದಾಗ ಡಾ. ಹೆಡಗೇವಾರರ ಮನಸ್ಸು ತುಂಬ ಉದ್ವಿಗ್ನಗೊಂಡಿತ್ತು. ಮಾರ್ಚ್ 24ರಂದು ಸಂಘದ ಶಾಖೆಗಳಲ್ಲಿ ವಿಶೇಷ ಕಾರ್ಯಕ್ರಮಗಳನ್ನು ಏರ್ಪಡಿಸಿ ಈ ಮೂವರು ಕ್ರಾಂತಿಕಾರಿಗಳ ಶೌರ್ಯ, ಸಾಹಸದ ಸ್ಮರಣೆ ಮಾಡಿ ಶ್ರದ್ಧಾಂಜಲಿಯನ್ನು ಸಮರ್ಪಿಸಿದ್ದುದು ಪ್ರಾಯಶಃ ಹೆಚ್ಚಿನವರಿಗೆ ಗೊತ್ತಿಲ್ಲ.

ಸಂಘದ ಶಾಖೆಗಳಲ್ಲಿ ಮತ್ತು ಶಿಬಿರಗಳಲ್ಲಿ ಶಿವಾಜಿ, ಸಮರ್ಥ ರಾಮದಾಸ, ಝಾನ್ಸಿರಾಣಿ, ತಿಲಕ್ ಮೊದಲಾದ ದೇಶಭಕ್ತರ ಮತ್ತು ಇನ್ನೂ ಅನೇಕ ವಿಧ ದೇಶಭಕ್ತರ ಕತೆಗಳನ್ನು ಹೇಳುವುದು ಮಾಮೂಲಾದ ರೂಢಿ. ಅಷ್ಟೇ ಅಲ್ಲ "ಲೆನಿನ್, ಮ್ಯಾಜಿನಿ, ಗಾರಿಬಾಲ್ಡಿ, ಜೋನ್ ಆಫ್ ಆರ್ಕ್, ಚಿಯಾಂಗ್ ಕೈ ಷೇಕ್, ಶಿವಾಜಿ, ತಿಲಕ್ ಮೊದಲಾದವರ ಜೀವನಚರಿತ್ರೆಗಳನ್ನು ಓದುವಂತೆ ಸ್ವಯಂಸೇವಕರನ್ನು ಆ ದಿನಗಳಲ್ಲಿ

---

7. ಎಚ್.ಎಂ. ಘೋಡ್ಕೆ, ರಿವೊಲ್ಯುಶನರಿ ನ್ಯಾಷನಲಿಸಂ ಇನ್ ವೆಸ್ಟರ್ನ್ ಇಂಡಿಯಾ - 173-74

ಪ್ರೋತ್ಸಾಹಿಸಲಾಗುತ್ತಿತ್ತು. ತದನಂತರ ಶಾಖೆಗಳಲ್ಲಿ ಅವರ ಕುರಿತು ಚರ್ಚೆಯೂ ನಡೆಯುತ್ತಿತ್ತು. ದೇವೇಂದ್ರ ಸ್ವರೂಪ್ ಅವರು ಹೇಳುವಂತೆ "ಡಾ. ಹೆಡಗೇವಾರರು ಕ್ರಾಂತಿಕಾರಿಗಳ ರೀತಿನೀತಿಗಳನ್ನು ಸಂಘದಲ್ಲಿ ಒಂದು ಸಾಮಾಜಿಕ ಆಂದೋಳನದ ಮುಸುಕಿನಲ್ಲಿ ವಿಕಾಸಗೊಳಿಸಿದರು. ಆದರಿಂದಾಗಿ ಬ್ರಿಟಿಷರ ಕಣ್ಣುಗಳಿಂದ ತಪ್ಪಿಸಿಕೊಂಡು ಸಂಘದ ಕೆಲಸ ಮಾಡಲು ಅವರಿಗೆ ಸಾಧ್ಯವಾಯಿತು." ಇದೇ ಮಾಹಿತಿ ಸರ್ಕಾರದ ಗುಪ್ತಚರ ವಿಭಾಗದ ವರದಿಯಲ್ಲೂ ಕಾಣಸಿಗುತ್ತದೆ. "ರಾಷ್ಟ್ರೀಯ ಸ್ವಯಂಸೇವಕ ಸಂಘವು ಮೇಲ್ನೋಟಕ್ಕೆ ಮುಚ್ಚುಮರೆಯಿಲ್ಲದ ಬಹಿರಂಗ ಸಂಘಟನೆಯಾಗಿ ಕಾಣಿಸುತ್ತದೆ. ಆದರೆ ಅದರಲ್ಲಿ ಭಾರೀ ಗುಟ್ಟಾಗಿರುವ ಸಂಗತಿಗಳಿರುವುದೂ ಗೊತ್ತಾಗುತ್ತದೆ. ಅದರ ಪ್ರಶಿಕ್ಷಣ ನಡೆಯುವಲ್ಲಿ ಕೇವಲ ಅದರ ಸದಸ್ಯರಿಗೆ ಮಾತ್ರ ಪ್ರವೇಶ ಇರುತ್ತದೆ. ಎಲ್ಲಿವರೆಗೆಂದರೆ ಪೊಲೀಸ್ ಅಧಿಕಾರಿಗಳಿಗೆ ಕೂಡಾ ಆ ಪ್ರಶಿಕ್ಷಣ ಸ್ಥಳಗಳಿಗೆ ಬರಲು ಅನುಮತಿಯನ್ನು ನಿರಾಕರಿಸಲಾಗುತ್ತದೆ."[8]

"ಅದರ ಸ್ವಯಂಸೇವಕರನ್ನು ಸೈನಿಕರಂತೆ ಪ್ಲೆಟೂನ್, ಕಂಪನಿ ಮತ್ತು ಬೆಟಾಲಿಯನ್‌ಗಳಲ್ಲಿ ವ್ಯವಸ್ಥೆಮಾಡಲಾಗುತ್ತದೆ. ಅಲ್ಲಿ ಕಠೋರವಾದ ಅನುಶಾಸನವನ್ನು ಪಾಲಿಸಬೇಕಾಗುತ್ತದೆ. ಅವರ ಸಮವಸ್ತ್ರ ಸಹ ಸೈನಿಕರ ಸಮವಸ್ತ್ರದಂತೆಯೇ ಇದೆ... ಅವರಿಗೆ ಬಂದೂಕಿನಿಂದ ಗುರಿಭೇದನದ ಅಭ್ಯಾಸವನ್ನೂ ಮಾಡಿಸಲಾಗುತ್ತದೆ."

ಸ್ವಯಂಸೇವಕರಿಗೆ ಪ್ರಶಿಕ್ಷಣದ ಹೊಣೆಯನ್ನು ಭಾರತೀಯ ಸೇನೆಯ ಪೂರ್ವ ಅಧಿಕಾರಿಯಾಗಿದ್ದ ಮಾರ್ತಾಂಡ ಬಿ.ಜೋಗ್ ಅವರಿಗೆ ವಹಿಸಲಾಗಿದ್ದುದು ಗುಪ್ತಚರ ವಿಭಾಗಕ್ಕೆ ಒಂದು ಚಿಂತೆಯ ವಿಷಯವಾಗಿತ್ತು. "ಶಾಖೆಯಲ್ಲಿ ಪ್ರತಿನಿತ್ಯ 'ವಂದೇ ಮಾತರಂ' ಮತ್ತು ಇನ್ನಿತರ ದೇಶಭಕ್ತಿ ಪ್ರೇರಕ ಹಾಡುಗಳನ್ನು ಹೇಳಲಾಗುತ್ತದೆ. ಅಂತಹ ಹಾಡುಗಳಲ್ಲಿ 'ರಣ್ ಬಿನ್ ಸ್ವತಂತ್ರತಾ ಕಹಾಂ ಮಿಲೇ?' (ಯುದ್ಧವಿಲ್ಲದೆ ಸ್ವಾತಂತ್ರ್ಯ ಲಭಿಸುವುದು ಹೇಗೆ ಸಾಧ್ಯ?) ಎಂಬುದು ಒಂದು. ಪ್ರಶಿಕ್ಷಣ ಶಿಬಿರಗಳಲ್ಲಿ ತೂಗು ಹಾಕಲ್ಪಡುತ್ತಿದ್ದ ಕ್ರಾಂತಿಕಾರಿಗಳ ಚಿತ್ರಗಳಲ್ಲಿ ರಾಜಾ ಮಹೇಂದ್ರ ಪ್ರತಾಪ ಅವರದೂ ಇರುತ್ತಿತ್ತು. ಇಂತಹ ಸಂಗತಿಗಳಿಂದಾಗಿ ತರುಣರ ಮನಸ್ಸು ಪ್ರಭಾವಿತವಾಗದೆ ಇರುವುದಾದರೂ ಹೇಗೆ ಸಾಧ್ಯ? ಕೆಲವೊಮ್ಮೆ ತರುಣರ ಉತ್ಸಾಹ ಮತ್ತು ಮನದ ಉದ್ವೇಗ ಇವು ಮಿತಿ ಮೀರುತ್ತಿದ್ದ ಕಾರಣದಿಂದಾಗಿ ಅವರು ಡಾ. ಹೆಡಗೇವಾರರ ಅನುಮತಿ ಪಡೆಯದೆಯೇ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದುದೂ ಉಂಟು. ಸಂಘದಲ್ಲಿ ಎರಡನೇ ಕ್ರಮಾಂಕದ ಸ್ಥಾನದಲ್ಲಿದ್ದ ಬಾಳಾಜಿ ಹುದ್ದಾರ್ ಅವರು 1931ರಲ್ಲಿ ಬಾಲಾಘಾಟ ರಾಜಕೀಯ ಡಕಾಯಿತಿ ಸಂಚಿನಲ್ಲಿ ಪಾಲ್ಗೊಂಡಿದ್ದ ಕಾರಣಕ್ಕಾಗಿ ಶಿಕ್ಷೆಗೂ ಒಳಗಾಗಿದ್ದರು. ಬಾಳಾಸಾಹೇಬ್ ದೇವರಸ್ ಅವರನ್ನು ಮೊದಲ್ಗೊಂಡು ಅನೇಕ ಸ್ವಯಂಸೇವಕರು ಗುಪ್ತ ಸಂಘಟನೆಗಳಲ್ಲಿ ಭಾಗವಹಿಸುವ ಸಲುವಾಗಿ ಮುಂದಾಗಿದ್ದುದೂ ಇದೆ. ನಾಗಪುರದ ಹಿರ್ವ ಸ್ವಯಂಸೇವಕ ಗೋಪಾಲರಾವ್ ಯೆರಕುಂಟವಾರ್ ಅವರು ಬಾಂಬ್ ತಯಾರಿಕೆಯ ಕೆಲಸವನ್ನು ಆರಂಭಿಸಿದ್ದರು. ಈ ಪ್ರಯತ್ನದಲ್ಲಿ ಅವರು ಕೆಟ್ಟ ರೀತಿಯಲ್ಲಿ ಗಾಯಗೊಂಡಿದ್ದುದೂ ಇದೆ."[9]

8. ಫೈಲ್ ಕ್ರ. 28.8.42ರಲ್ಲಿ ಗೃಹ ಇಲಾಖೆ (I) [illegible]
9. [illegible] ಕೇಶವ [illegible] (ಖಂಡ 1) ಪುಟ 11-12 [illegible]

'ಸಂಘಟನೆ ಕೇವಲ ಸಂಘಟನೆಗಾಗಿಯೇ' ಎಂಬ ಡಾ. ಹೆಡಗೇವಾರರ ಘೋಷಣೆಯ ಹಿಂದೆ ನಿಜಕ್ಕೂ ನಡೆಯುತ್ತಿದ್ದುದು ವಸಾಹತುಶಾಹಿಯ ವಿರುದ್ಧ ಸಂಘರ್ಷದ್ದೇ ಕೆಲಸ. 1942ರ ಅಕ್ಟೋಬರ್‌ನಲ್ಲಿ ಗ್ವಾಲಿಯರ್‌ನ ಓರ್ವ ಕಾಲೇಜು ವಿದ್ಯಾರ್ಥಿ ಸ್ವಯಂಸೇವಕನು ತನ್ನ ಮಿತ್ರನಿಗೆ ಬರೆದಿದ್ದ ಪತ್ರವನ್ನು ಪೊಲೀಸರು ಗುಟ್ಟಾಗಿ ಓದಿದ್ದರು. ಅದರಲ್ಲಿ ಆತ ಬರೆದಿದ್ದುದು:

"ಸಂಘವು ಭಾರತ ಮತ್ತು ವಿಶ್ವದಲ್ಲಿನ ಎಲ್ಲ ಹಿಂದೂಗಳನ್ನು ಸಂಘಟಿಸಲಿದೆ ಎಂದು ನೀನು ಯೋಚಿಸುತ್ತಿರಬಹುದು.... ನಮ್ಮ ಸ್ವರ್ಗೀಯ ನಾಯಕ ಡಾ. ಹೆಡಗೇವಾರರು ತಮ್ಮ ನಿಧನದ ಮೊದಲು ಸ್ವಯಂಸೇವಕರಿಗೆ ಹೇಳಿದ್ದುದು ಸಂಘದ ಸದಸ್ಯತ್ವವು ನಗರ ಪ್ರದೇಶಗಳಲ್ಲಿ ಒಟ್ಟು ಜನಸಂಖ್ಯೆಯ ಶೇ.3 ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಅದು ಶೇ.1ರಷ್ಟು ಇರಬೇಕು ಎಂಬುದಾಗಿ. ಅವರೆಲ್ಲರೂ ಚೆನ್ನಾಗಿ ತರಬೇತಿ ಹೊಂದಿದವರಾಗಿರಬೇಕು. ಅವರು ಇನ್ನೊಂದು ಮಾತನ್ನು ಹೇಳಿದ್ದರು. 1942ರಲ್ಲಿ ಭಾರತದಲ್ಲಿ ಒಂದು ಕ್ರಾಂತಿಯಾಗಲಿದ್ದು ನಾವು ಅದಕ್ಕಾಗಿ ಸಿದ್ಧರಾಗಿರಬೇಕು. ಸದಸ್ಯತ್ವದ ಗುರಿ ತಲಪಿದ ಮೇಲೆ ನಾವು ಸ್ವರಾಜ್ಯಪ್ರಾಪ್ತಿಗಾಗಿ ನಮ್ಮ ಕ್ರಮಗಳನ್ನು ಆರಂಭಿಸುವವರಿದ್ದೇವೆ. ನಾವು 'ಅಹಿಂಸೆಯ' ಮಾರ್ಗದಿಂದ ಅಲ್ಲ. ಆದರೆ ಶಸ್ತ್ರಗಳ ಸಹಿತವೇ ಅದರಲ್ಲಿ ಪಾಲ್ಗೊಳ್ಳುತ್ತೇವೆ."[10]

## ಕ್ರಾಂತಿ: ಕೊನೆಯ ಆಸೆ

ಡಾ. ಹೆಡಗೇವಾರರ ನಿಧನ 1940ರ ಜೂನ್ 21ರಂದು ಸಂಭವಿಸಿತು. 1939ರ ಕೊನೆಯಿಂದಲೇ ಅವರ ಆರೋಗ್ಯ ನಿರಂತರವಾಗಿ ಕೆಡುತ್ತಲೇ ಇತ್ತು. ಅವರು ಸ್ಥಳೀಯ ಚಿಕಿತ್ಸೆ ಮತ್ತು ಪ್ರಾಕೃತಿಕ ಚಿಕಿತ್ಸೆಯನ್ನು ವಿಶೇಷವಾಗಿ ಅವಲಂಬಿಸಿದ್ದರು. ಅವರ ಶರೀರ ಮತ್ತು ಮನಸ್ಸು ಇವೆರಡಕ್ಕೂ ವಿಶ್ರಾಂತಿಯೇ ಇರಲಿಲ್ಲ. ತದ್ವಿರುದ್ಧವಾಗಿ ಅವರ ರೋಗಗ್ರಸ್ತ ಶರೀರದಲ್ಲಿ ರಾಷ್ಟ್ರವನ್ನು ಕುರಿತ ಅವರ ತಳಮಳವು ಇನ್ನಷ್ಟು ಹೆಚ್ಚಲಾರಂಭಿಸಿತ್ತು. ಅವರ ನಿಧನದ ನಂತರ ಹಾಡಲಾಗುತ್ತಿದ್ದ ಒಂದು ಕವಿತೆಯ ಒಂದು ಭಾಗದಲ್ಲಿ ಇದೇ ಭಾವನೆಯು ವ್ಯಕ್ತವಾಗಿದೆ.

ಹೇ ಮೃತ್ಯುದೇವ ! ಜಾವೊ, ತುಮ ಆಜ ದೂರ ಜಾವೊ !
ಮೇರೇ ನ ಪಾಸ ಆವೊ, ಮತ ಫಾಂಸ ಮೇ ಫಂಸಾವೊ !
ಡರ ಮೌತ ಕಾ ತನಿಕ ಭೀ ದಿಲ ಕೋ ನಹೀಂ ಛುಯೆಗಾ,
ಸೂರಜ ಟರೇ ಭಲೇ ಹಿ, ಧೀರಜ ನಹೀಂ ಟರೇಗಾ !
ಪರದಾಸ್ಯ – ಶೃಂಖಲಾ ಮೇ, ಹಾ ! ಬದ್ಧ ಆಜ ಮಾತಾ !
ರೋತಿ, ಪುಕಾರತಿ ಹೈ, ಉಸಕಾ ನ ಕೋಯಿ ತ್ರಾತಾ ॥
ಮೈ ರಕ್ತಬಿಂದು ಅಪನಾ ಪ್ರತಿದಿನ ಬಹಾ ರಹಾ ಹೂಂ,
ಭಾರತಕೋ ಮುಕ್ತ ಕರನೇ ಸಂಗ್ರಾಮ ಕರ ರಹಾ ಹೂಂ !
ಅಂತಿಮ ಭೀ ಸಾಸ ಮೇರೀ ಹೋ ದೇಶ ಕೇ ಲಿಯೇ ಹೀ,
ಜೀತೇ – ಜಿ ದೇಖ ಲೂಂಗಾ ನಿಜ ದಿವ್ಯ ಧ್ಯೇಯ ವಿಜಯಿ ॥

---

10. ಫೈಲ್ ಕ್ರ. 28.8.42 ಗೃಹ ರಾಜನೀತಿಕ (1) ರಾಷ್ಟ್ರೀಯ ಅಭಿಲೇಖಾಗಾರ, ನವದೆಹಲಿ.

ಫಿರ ತುಮ್ ಖುಶಿ ಸೇ ಆವೋ ! ಹೇ ಮೃತ್ಯುದೇವ ಆವೋ ।
ಆಕರ ಮುಝೇ ಉಠಾ ಲೋ, ಮೇರಾ ಶಿಕಾರ ಕರ ಲೋ ॥

(ಭಾವಾರ್ಥ: ಹೇ ಮೃತ್ಯುದೇವ, ನೀನೀಗ ದೂರ ಹೋಗು. ನನ್ನ ಬಳಿ ಬಂದು ನಿನ್ನ ಜಾಲದಲ್ಲಿ ನನ್ನನ್ನು ಸಿಲುಕಿಸಬೇಡ. ಸಾವಿನ ಅಂಜಿಕೆ ನನ್ನ ಮನಸ್ಸನ್ನು ಸ್ವಲ್ಪವೂ ಸ್ಪರ್ಶಿಸದು. ಅಕಸ್ಮಾತ್ ಸೂರ್ಯನ ದಾರಿಯಾದರೂ ತಪ್ಪಬಹುದು. ಆದರೆ ನನ್ನ ಧೈರ್ಯ ಮಾತ್ರ ಎಂದಿಗೂ ತಪ್ಪದು. ಗೊತ್ತಿರಲಿ, ಪರಕೀಯರ ದಾಸ್ಯದ ಸಂಕೋಲೆಯಲ್ಲಿ ನಮ್ಮ ಮಾತೆ ಈಗ ಬಂಧಿತಳಾಗಿದ್ದಾಳೆ. ತನಗಾರೂ ರಕ್ಷಕರೇ ಇಲ್ಲವೇ ಎಂದು ಅಳುತಳುತ್ತ ಆಕೆ ಗೋಗರೆಯುತ್ತಿದ್ದಾಳೆ. ನಾನು ಪ್ರತಿನಿತ್ಯ ನನ್ನ ರಕ್ತದ ಬಿಂದೊಂದು ಬಿಂದುವನ್ನೂ ಹರಿಸಿ ಭಾರತವನ್ನು ಬಿಡುಗಡೆಗೊಳಿಸಲು ಯುದ್ಧ ಹೂಡುತ್ತಿದ್ದೇನೆ. ನನ್ನ ಕೊನೆಯ ಉಸಿರು ಸಹ ಈ ದೇಶಕ್ಕಾಗಿಯೇ ಇರುವುದು. ನನ್ನ ಈ ಶ್ರೇಷ್ಠವಾದ ಧ್ಯೇಯವು ಸಫಲವಾಗುವುದನ್ನು ನಾನು ಬದುಕಿರುವಾಗಲೇ ಕಾಣುವೆ. ಹಾಗಾದಾಗ ಹೇ ಮೃತ್ಯ ದೇವ! ನೀನು ಸಂತೋಷದಿಂದ ಬರುವವನಾಗು. ಬಂದು, ನನ್ನನ್ನು ಬಲಿಯಾಗಿ ಸ್ವೀಕರಿಸಿ ಎತ್ತಿಕೊಂಡು ಹೋಗು.)

ಯಾವ ಸಂಘಟನೆಯನ್ನು ಮುಂದಿನ ದಿನಗಳಲ್ಲಿ ಮುಸ್ಲಿಂ ವಿರೋಧಿ, ಫ್ಯಾಸಿಸ್ಟ್ ಇತ್ಯಾದಿ ಹೆಸರಲ್ಲಿ ಟೀಕಿಸಿ ಅದರ ವಿರೋಧಿಗಳು ಅಪಪ್ರಚಾರ ಮಾಡಿದರೋ, ಅದರ ಜನಪ್ರಿಯತೆ, ರಾಷ್ಟ್ರನಿಷ್ಠಸ್ವರೂಪ ಮತ್ತು ಯಾವುದೇ ವಿಧ ತ್ಯಾಗಕ್ಕೂ ಅದರ ಸಿದ್ಧತೆ ಇವೆಲ್ಲವೂ ಸೂರ್ಯನಂತೆ ಉಜ್ವಲವಾಗಿ ಬೆಳಗಲು ಆರಂಭವಾಗಿದ್ದವು. ಸಂಘದ ಪ್ರಖರತೆ ಮತ್ತು ಡಾ. ಹೆಡಗೇವಾರರ ಕರ್ತೃತ್ವ ಶಕ್ತಿ ಇವು ರಾಷ್ಟ್ರನಿಷ್ಠರಲ್ಲಿ, ಕತ್ತಲೆ ಕಳೆದು ಸೂರ್ಯೋದಯವಾದಂತೆ ಕ್ರಮೇಣ ವಿಸ್ತರಿಸಲು ಶುರುವಾಗಿದ್ದವು. ಈ ಹಿಂದಿನ ಕ್ರಾಂತಿಕಾರಿಗಳಿಗೆ, ಮತ್ತು ಸಾಮ್ರಾಜ್ಯವಾದದ ವಿರುದ್ಧ ವಿವಿಧ ಮಾರ್ಗಗಳಿಂದ ಸಂಘರ್ಷ ನಡೆಸುತ್ತಿದ್ದ ಎಲ್ಲ ಹೋರಾಟಗಾರರಿಗೆ ನಾಗಪುರವು ಒಂದು ರೀತಿಯಲ್ಲಿ ಸ್ಫೂರ್ತಿಯಾತ್ರೆಯ ಕಾಶಿಯಾಗಿ ಪರಿಣಮಿಸಿತ್ತು. ಡಾ. ಹೆಡಗೇವಾರರ ಪೂಜ್ಯ ಹಾಗೂ ಚಿತ್ತತುಲ್ಯ ವ್ಯಕ್ತಿತ್ವವನ್ನು ಎಲ್ಲರೂ ಸ್ವೀಕರಿಸಿದವರೇ ಆಗುತ್ತಿದ್ದರು. ತಮ್ಮ ಮೂವತ್ತೈದು ವರ್ಷಗಳ ಸತತ ಸಾಧನೆಯಿಂದಾಗಿ ಅವರ ವ್ಯಕ್ತಿತ್ವ ಉನ್ನತಗೊಂಡಿದ್ದರೆ, ಹದಿನೈದು ವರ್ಷಗಳ ಕಾಲ ಒಂದು ಸಂಘಟನಾ ಯಜ್ಞದಲ್ಲಿ ಸ್ವೀಕಾರಯೋಗ್ಯವಾಗಿ ವಿಕಾಸಗೊಂಡಿತ್ತು. ದೇಶದ ನಾಲ್ಕು ಮೂಲೆಗಳಿಂದ ರಾಷ್ಟ್ರೀಯವಾದಿ ನಾಯಕರು ಅವರ ಭೇಟಿಗಾಗಿ ನಾಗಪುರಕ್ಕೆ ಬರಲಾರಂಭಿಸಿದ್ದರು. ಡಾ. ಹೆಡಗೇವಾರರ ಆರೋಗ್ಯ ಕೆಟ್ಟಿತ್ತು. ಆದರೆ ಈ ಸುದ್ದಿ ಸಂಘದ ಹೊರಗೆ ಹೆಚ್ಚಿನವರಿಗೆ ತಿಳಿದೇ ಇರಲಿಲ್ಲ. ಹೀಗಾಗಿ ಅವರ ಆರೋಗ್ಯದ ಕುರಿತು ಸ್ವಲ್ಪವೂ ಅರಿವಿಲ್ಲದೆ ಬರುವವರೆಲ್ಲ ಅನೇಕ ರೀತಿಯ ಆಸೆ ಭರವಸೆಗಳನ್ನಿರಿಸಿಕೊಂಡೇ ಬರುತ್ತಿದ್ದರು. ಆದರೆ ಬಂದವರೆಲ್ಲ ವಿಧಿಯನ್ನು ದೂಷಿಸುತ್ತ ನಿರಾಶರಾಗಿ ಹೋಗಬೇಕಾಗುತ್ತಿತ್ತು. ಅಂದು ರಾಜಕೀಯ, ಸಾಮಾಜಿಕ ಜೀವನದಲ್ಲೂ ಪರಿವರ್ತನೆ ತರಬೇಕೆಂಬ ಹಂಬಲವುಳ್ಳವರಿಗೆಲ್ಲ ನಾಗಪುರವೇ ಮೊಟ್ಟಮೊದಲನೆಯ ಮತ್ತು ಕಟ್ಟಕಡೆಯ ಆಶ್ರಯಸ್ಥಾನವಾಗಿ ಕಾಣಿಸಲಾರಂಭಿಸಿತು. ಸರ್ಕಾರದ ಗುಪ್ತಚರ ವಿಭಾಗದ ವರದಿಯು ಹೇಳುವಂತೆ ವಿಶ್ವಯುದ್ಧ ಆರಂಭವಾದ ನಂತರ, 1940ರ ಮೊದಲ ಕೆಲವು ತಿಂಗಳುಗಳಲ್ಲಿ, ದೇಶದೊಳಗೆ ಅಲ್ಲಿನವರೆಗೂ ಎಂದೂ ಕಂಡು ಕೇಳರಿಯದಷ್ಟು ಚಟುವಟಿಕೆಗಳು ಚುರುಕುಗೊಂಡಿರುವುದು ಅನುಭವಕ್ಕೆ ಬಂದಿತ್ತು.

ಎಲ್ಲರಿಗಿಂತ ಮುಂಚಿತವಾಗಿ ಡಾ. ಹೆಡಗೇವಾರರ ಬಳಿಗೆ ಬಂದವರು ಅನುಶೀಲನಾ ಸಮಿತಿಗೆ ಸೇರಿದ್ದ ಕ್ರಾಂತಿಕಾರಿಗಳಾದ. ತ್ರೈಲೋಕ್ಯನಾಥ ಚಕ್ರವರ್ತಿಯವರು ಹೇಳುತ್ತಾರೆ: "1939ರಲ್ಲಿ ದ್ವಿತೀಯ ವಿಶ್ವಯುದ್ಧ ನಡೆಯಲಿರುವುದು ಖಚಿತವೆನಿಸಿದಾಗ ಅನುಶೀಲನಾ ಸಮಿತಿಯ ಸದಸ್ಯರು ಪುನಃ ಕ್ರಾಂತಿಯ ವಿಚಾರವನ್ನು ಆರಂಭಿಸಿದರು. ಸುಭಾಷ್ ಚಂದ್ರ ಬೋಸ್ ಅವರಿಂದ ಸೂಚಿತವಾದ ಸಶಸ್ತ್ರ ಕ್ರಾಂತಿಯ ಸಂಬಂಧದಲ್ಲಿ ಅವರೆಲ್ಲ ಒಂದಾದರು ಹಾಗೂ ಕೊನೆಯಲ್ಲಿ ಸುಭಾಷ್ ಚಂದ್ರ ಬೋಸ್ ಅವರ ಮುಂದಾಳುತನದಲ್ಲಿ ಕ್ರಾಂತಿ ನಡೆಸಲು ನಿರ್ಧರಿಸಿದರು."

ಅನುಶೀಲನಾ ಸಮಿತಿಯ ಕಾರ್ಯಕರ್ತರು ದೇಶದ ವಿಭಿನ್ನ ಭಾಗಗಳಲ್ಲಿದ್ದ ಪೂರ್ವಕ್ರಾಂತಿಕಾರಿಗಳನ್ನು ಕಾಣಲು ಹೊರಟರು. ತ್ರೈಲೋಕ್ಯನಾಥ ಚಕ್ರವರ್ತಿ ಅವರು ಸ್ವತಃ ನಾಗಪುರಕ್ಕೆ ಬಂದು ಡಾ. ಹೆಡಗೇವಾರರನ್ನು ಕಂಡರು. ಎರಡೂವರೆ ದಶಕಗಳ ನಂತರ ಡಾ. ಹೆಡಗೇವಾರರ ಮುಂದೆ 1940ರಲ್ಲಿ ಅನಿರೀಕ್ಷಿತವಾಗಿ ಬಂದು ನಿಂತಾಗ ಮೊದಲು ಡಾ. ಹೆಡಗೇವಾರರಿಗೆ ಒಂದಿಷ್ಟು ನೆನಪನ್ನು ಕೆದಕಿದ ಕೂಡಲೇ ಅವರಿಗೆ ಹಿಂದಿನ ಆ ದಿನಗಳೆಲ್ಲವೂ ಸ್ಮರಣೆಗೆ ಬಂದು, ಅವರು ತಕ್ಷಣ ಚಕ್ರವರ್ತಿ ಅವರನ್ನು ಬಿಗಿದಪ್ಪಿದರು."[11] ಸಂಘದ ಸ್ವಯಂಸೇವಕರ ಪಾತ್ರಕ್ಕೆ ಸಂಬಂಧಿಸಿ ತ್ರೈಲೋಕ್ಯನಾಥ ಚಕ್ರವರ್ತಿಯವರು ಡಾ. ಹೆಡಗೇವಾರರ ಜತೆಯಲ್ಲಿ ಸುದೀರ್ಘವಾಗಿ ಚರ್ಚಿಸಿ ನಂತರ ಬನಾರಸ್ ಕಡೆ ಪ್ರವಾಸ ಮುಂದುವರಿಸಿದರು.

ಇನ್ನೋರ್ವ ಕ್ರಾಂತಿಕಾರಿ ಸಚ್ಚಿದಾನಂದ ಸನ್ಯಾಲ್ ಅವರು ಸಹ ಕ್ರಾಂತಿಯ ಉದ್ದೇಶವಿರಿಸಿಕೊಂಡು 1940ರಲ್ಲಿ ಸಂಘದ ಜತೆ ವಿಚಾರ ವಿಮರ್ಶೆ ನಡೆಸಲು ನಾಗಪುರಕ್ಕೆ ಬಂದಿದ್ದರು.

ಸುಭಾಷ್ ಚಂದ್ರ ಬೋಸ್ ಅವರಿಗೆ ಡಾ. ಹೆಡಗೇವಾರರು 1927ರಿಂದಲೇ ಪರಿಚಿತರಾಗಿದ್ದರು. 1928ರಲ್ಲಿ ಒಮ್ಮೆ ಕಲ್ಕತ್ತಾದಲ್ಲಿ ಅವರಿಬ್ಬರೂ ಪರಸ್ಪರ ಭೇಟಿಯಾದದ್ದೂ ಇದೆ. ಸಂಘದ ಕಾರ್ಯ ಸುಭಾಷ್ ಅವರ ಮೇಲೆ ಹೆಚ್ಚಿನ ಪ್ರಭಾವ ಬೀರಿತ್ತು. 1938ರ ಅಕ್ಟೋಬರ್ 21ರಂದು ಇನ್ನೋರ್ವ ಕಾಂಗ್ರೆಸ್ ನಾಯಕ ಶಂಕರರಾವ್ ದೇವ್ ಅವರಿಗೆ ಬರೆದ ತಮ್ಮ ಪತ್ರದಲ್ಲಿ ಸುಭಾಷ್ ಅವರು ಸಂಘದಲ್ಲಿ ತರುಣರಿಗೆ ಸಿಗುವಂತಹ ತರಬೇತಿಯಿಂದಾಗಿ ಅವರ ಮೇಲೆ ಆಗುವ ಸಕಾರಾತ್ಮಕ ಪ್ರಭಾವದ ಬಗ್ಗೆ ಚರ್ಚಿಸಿದ್ದಾರೆ. ಕಾಂಗ್ರೆಸ್‌ನ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ನೀಡಿದ ನಂತರ ಅವರು ಡಾ. ಹೆಡಗೇವಾರರ ಜತೆ ಹೆಚ್ಚಿನ ಸಂಪರ್ಕವಿರಿಸಿಕೊಳ್ಳಲು ಆರಂಭಿಸಿದ್ದರು. ಬೋಸ್ ಅವರ ಸಂದೇಶವಾಹಕರಾಗಿ ಸಂಘದ ಪೂರ್ವ ಸರಕಾರ್ಯವಾಹರಾಗಿದ್ದ ಬಾಳಾಜಿ ಹುದ್ದಾರ್ ಮತ್ತು ಇನ್ನೋರ್ವ ಶಾಹ್ ಎಂಬ ವ್ಯಕ್ತಿ 1939ರ ಜುಲೈಯಲ್ಲಿ ಡಾ. ಹೆಡಗೇವಾರರ ಭೇಟಿಯಾಗಲು ನಾಗಪುರಕ್ಕೆ ಬಂದಿದ್ದರು. ಆಗ ಡಾ. ಹೆಡಗೇವಾರರು ನ್ಯುಮೋನಿಯಾದಿಂದ ಬಳಲುತ್ತಿದ್ದರು. ಇನ್ನೂ ಚಿಕಿತ್ಸೆಯಲ್ಲಿದ್ದ ಅವರ ಆರೋಗ್ಯದ ಸುಧಾರಣೆಯ ನಂತರ ಸುಭಾಷ್ ಅವರ ಜತೆ ಮುಂದೆ ಪುನಃ ಭೇಟಿಯಾಗುವುದು ಮಾತ್ರ ಈ ಸಂದರ್ಭದಲ್ಲಿ ನಿರ್ಧಾರವಾಯಿತು. ಆದರೆ ದುರ್ದೈವದಿಂದ ಅವರ ಆರೋಗ್ಯ ಮುಂದೆಯೂ ಕೆಡುತ್ತಲೇ ಹೋಯಿತು. ಈ ನಡುವೆ ಡಾ. ಹೆಡಗೇವಾರರು

---

11. ತ್ರೈಲೋಕ್ಯನಾಥ ಚಕ್ರವರ್ತಿ ಜೈಲ್ ಮೇ ತೀಸ್ ಸಾಲ್, ಪು.272–279 ಆಲ್ಫಾ ಬೀಟಾ ಪ್ರಕಾಶನ, ಕಲ್ಕತ್ತಾ.

ಮೃತ್ಯುಶಯ್ಯೆಯಲ್ಲಿದ್ದು ಕೊನೆಯ ಕ್ಷಣಗಳನ್ನು ಎಣಿಸುತ್ತಿದ್ದ ಸ್ಥಿತಿಯಲ್ಲಿ ಅವರನ್ನು ಕಾಣುವ ಸಲುವಾಗಿ 1940ರ ಜೂನ್ 20ರಂದು ಸುಭಾಷ್‌ಚಂದ್ರ ಬೋಸ್ ಅವರು ಬಂದರು. ತುಸುಹೊತ್ತು ಅವರ ಶಯ್ಯೆಯ ಬಳಿ ಕುಳಿತು ಕೊನೆಯಲ್ಲಿ ನಮಸ್ಕರಿಸಿ ಸುಭಾಷ್ ಬೋಸ್ ಅವರು ವಾಪಸ್ ತೆರಳಿದರು.[12] ಓರ್ವ ಪ್ರಖರ ರಾಷ್ಟ್ರವಾದಿ ತನ್ನಂತೆಯೇ ಪ್ರಖರತೆ ಮತ್ತು ತ್ಯಾಗದ ಮೂರ್ತಿವೆತ್ತ ಸ್ವರೂಪದಂತಿದ್ದ ಇನ್ನೊರ್ವ ವ್ಯಕ್ತಿಗೆ ಸಲ್ಲಿಸಿದ ಅಂತಿಮ ಪ್ರಣಾಮ ಅದು. ಅದರ ಮರುದಿನವೇ ಡಾ. ಹೆಡಗೇವಾರರು ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಿ ಇಹಲೋಕದ ಯಾತ್ರೆಗೆ ವಿದಾಯ ಹೇಳಿದರು.

## ಸಾಮ್ರಾಜ್ಯವಾದಿ ಆಡಳಿತದಿಂದ ದಮನ

ಸಂಘದ ಚಟುವಟಿಕೆಗಳ ಮೇಲೆ ವಿವಿಧ ಪ್ರಾಂತಗಳಲ್ಲಿ ಏನೇನೋ ವಿಧದ ತಡೆಗಳನ್ನು ಆಡಳಿತ ಇನ್ನೊಮ್ಮೆ ಆರಂಭಿಸಿತ್ತು. ಉದಾಹರಣೆಗೆ ಜನವರಿ 8ರಂದು ಭೋಪಾಲ ರಾಜ್ಯದ ರಾಜಕೀಯ ಕಾರ್ಯದರ್ಶಿಗೆ, ಅಲ್ಲಿನ ಪೊಲಿಟಿಕಲ್ ಏಜಂಟನು ಸಂಘವು ರಹಸ್ಯವಾಗಿ ರೈಫಲ್ ಕ್ಲಬ್ ನಡೆಸುತ್ತಿದೆ ಎಂಬ ಮಾಹಿತಿ ಕೊಟ್ಟಿದ್ದ. ಏನಾದರೂ ಮಾಡಿ ಭೋಪಾಲ ರಾಜ್ಯದಲ್ಲಿ ಸಂಘದ ಚಟುವಟಿಕೆಗಳನ್ನು ತಡೆದಿರಿಸುವಂತೆ ಆತ ಆಡಳಿತಕ್ಕೆ ಸೂಚನೆ ನೀಡಿದ್ದ. ಮಧ್ಯಪ್ರಾಂತದ ಓರ್ವ ಪ್ರಮುಖ ಕಾರ್ಯಕರ್ತ ಘಾಟೆ ಎಂಬುವನ ಮೇಲೆ 1934ರ ಮೇ ತಿಂಗಳಲ್ಲಿ ಅಪರಾಧಿಕ ಕಾನೂನು ಸಂಹಿತೆಯಲ್ಲಿನ 107ನೇ ವಿಧಿಯಂತೆ ಮೊಕದ್ದಮೆ ನಡೆಸಲಾಗಿತ್ತು.

ಮಹಾರಾಷ್ಟ್ರದ ನಾಸಿಕ್ ಜಿಲ್ಲಾಧಿಕಾರಿಯು ಸರ್ಕಾರಿ ನೌಕರರು ಸಂಘ ಚಟುವಟಿಕೆಗಳಲ್ಲಿ ಭಾಗವಹಿಸಬಾರದೆಂಬ ಆದೇಶವನ್ನು 1938ರಲ್ಲಿ ಜಾರಿಗೊಳಿಸಿದ್ದ. ಸಂಘದ ವಿರುದ್ಧ ಮಾಹಿತಿಗಳನ್ನು ನೀಡುವಂತಹ ರಾಜನಿಷ್ಠರಿಗೆ ಹೆಚ್ಚಿನ ಪ್ರೋತ್ಸಾಹ ನೀಡಲಾಗುತ್ತಿದ್ದು, ಅಂತಹವರಿಗೆ ಸರ್ಕಾರದ ವತಿಯಿಂದ ರಕ್ಷಣೆಯನ್ನೂ ಒದಗಿಸಲಾಗುತ್ತಿತ್ತು. ಇದರಿಂದಾಗಿ ಸರ್ಕಾರದಿಂದ ಸಿಗುವಂತಹ ಸವಲತ್ತುಗಳಿಗೆ ಆಸೆ ಪಡುವ ಅನೇಕರು ಸಂಘದ ಕಾರ್ಯಕ್ರಮಗಳ ಮತ್ತು ಪ್ರಶಿಕ್ಷಣ ವರ್ಗಗಳ ಬಗ್ಗೆ ಪೊಲೀಸರಿಗೆ ಮಾಹಿತಿ ನೀಡುತ್ತಿದ್ದರು. ಅಂತಹ ಒಂದು ಘಟನೆ 1940ರಲ್ಲಿ ಮಾನವಾಲಿ ಎಂಬ ಗ್ರಾಮದಲ್ಲಿ ನಡೆಯಿತು. ಸಂಘದ ಶಿಬಿರ ನಡೆಯುವುದರ ಬಗ್ಗೆ ಗ್ರಾಮಪ್ರಧಾನರು ಪೊಲೀಸರಿಗೆ ಸುದ್ದಿ ತಿಳಿಸಿದರು. ಪೊಲೀಸ್ ಇನ್‌ಸ್ಪೆಕ್ಟರ್ ಪಾತಾರ್ ಎಂಬುವನು ಪೊಲೀಸ್ ಪಡೆಯೊಂದಿಗೆ ಆ ಗ್ರಾಮಕ್ಕೆ ಬಂದು ಸಂಘಕ್ಕೆ ಯಾವುದೇ ವಿಧದಲ್ಲೂ ನೆರವು ನೀಡಬಾರದಾಗಿ ಊರಿನವರಿಗೆ ಎಚ್ಚರಿಕೆ ನೀಡಿ ಹೋಗಿದ್ದ.

ಅಂತಹ ಘಟನೆಗಳು ಅಲ್ಲಲ್ಲಿ ನಡೆಯುತ್ತಲೇ ಇರುತ್ತಿದ್ದವು. ಆದರೆ ವಿಶ್ವಯುದ್ಧವಾರಂಭವಾದ ನಂತರ ಬ್ರಿಟಿಷ್ ಸರ್ಕಾರವು ಸಂಘದ ಸಂಭವನೀಯ ಕ್ರಾಂತಿಯ ಬಗ್ಗೆ ಪೂರಾ ಹೆದರಿತು. ಇದಕ್ಕಾಗಿ ವಿಶ್ವಯುದ್ಧ ಆರಂಭವಾಗುವ ಮೊದಲೇ 1939ರ ಜೂನ್‌ನಲ್ಲಿ ಅಪರಾಧಿಕ ಕಾನೂನು ತಿದ್ದುಪಡಿ ಕಾಯ್ದೆ (XIV)ರ ವಿಧಿ 16ರಂತೆ ಮಧ್ಯಪ್ರಾಂತದಲ್ಲಿ ಸರ್ಕಾರವು ಸಂಘದ ಮೇಲೆ ಪೂರಾ ನಿಷೇಧ ಹೇರುವ ಯೋಚನೆಯನ್ನು ಮಾಡಿತು. ಆದರೆ ಪ್ರಾಂತದಲ್ಲಿ ಸಂಘವು ಬೆಳೆದು ನಿಂತ ಸ್ವರೂಪವನ್ನು ಕಂಡು

12. ಹಿತವಾದ 23 ಜೂನ್ 1940.

ಪ್ರತ್ಯಕ್ಷ ನಿಷೇಧ ಹೊರಿಸುವುದಕ್ಕೆ ಸರ್ಕಾರ ಅಂಜಿತು. ಅಂದಿನ ಪರಿಸ್ಥಿತಿಯ ಬಗ್ಗೆ ಸಾಧಕ ಬಾಧಕ ವಿಮರ್ಶೆಮಾಡಿ, ನಿಷೇಧ ಹೊರಿಸುವಂತಹ ಕ್ರಮವನ್ನೇನಾದರೂ ಕೈಗೊಂಡಿದ್ದೇ ಆದಲ್ಲಿ, ಪ್ರಾಂತದಲ್ಲಿ ಕಾನೂನು ಮತ್ತು ವ್ಯವಸ್ಥೆ ಇನ್ನಷ್ಟು ಕೆಟ್ಟು ಹೋಗಿ ಹೊಸ ರೀತಿಯ ಸಂಕಟ ಎದುರಾಗಬಹುದು ಎಂದು ಸರ್ಕಾರಕ್ಕೆ ಅನಿಸಿತು. ಅದಕ್ಕಾಗಿ ಪ್ರಾಂತ ಸರ್ಕಾರವು ತನ್ನ ತಲೆನೋವನ್ನು ಕೇಂದ್ರ ಸರ್ಕಾರಕ್ಕೆ ವರ್ಗಾಯಿಸಿ, ಕೇಂದ್ರದ ವತಿಯಿಂದಲೇ ಅಖಿಲ ಭಾರತೀಯ ಸ್ತರದಲ್ಲಿ ನಿಷೇಧ ಹೇರುವುದು ಉಚಿತವೆಂದು ಸಲಹೆ ನೀಡಿತು. ಆದರೆ ಕೇಂದ್ರದ ಗೃಹ ವಿಭಾಗವು ಈ ವಿಧದ ನಿಷೇಧದಿಂದಾಗಿ ಮುಸ್ಲಿಂ ಸಂಘಟನೆಗಳ ಮೇಲೂ ಅದರ ಪ್ರಭಾವವುಂಟಾಗುವ ಸಂಭವವಿದೆಯೆಂದು ತಿಳಿಸಿ, ಮಧ್ಯಪ್ರಾಂತದ ಸಲಹೆಗೆ ತನ್ನ ಮನ್ನಣೆ ನೀಡಲಿಲ್ಲ.

ವಿವಿಧ ಪ್ರಾಂತಗಳ ಸರ್ಕಾರಗಳ ಜತೆ ಸಾಕಷ್ಟು ದೀರ್ಘ ವಿಮರ್ಶೆ ನಡೆಸಿದ ನಂತರ ಕೊನೆಯಲ್ಲಿ ಕೇಂದ್ರ ಸರ್ಕಾರವು ಭಾರತೀಯ ಸುರಕ್ಷಾ ಅಧಿನಿಯಮದ ನಿಯಮ 58 ಮತ್ತು 59ರಂತೆ, ಸ್ವಯಂಸೇವಕ ಸಂಘಟನೆಗಳು ಶಾರೀರಿಕ ತರಬೇತಿ, ಸೈನಿಕ ರೀತಿಯ ಕವಾಯತು ಅಥವಾ ಅಂತಹ ಅನ್ಯ ಚಟುವಟಿಕೆಗಳನ್ನು ನಡೆಸಬಾರದು ಎಂದು ಹೇಳಿ 1940ರ ಆಗಸ್ಟ್ 5ರಂದು ಪ್ರತಿಬಂಧ ವಿಧಿಸಿತು. ಮಧ್ಯಪ್ರಾಂತದ ಸರ್ಕಾರವು 1940ರ ಆಗಸ್ಟ್ 7ರಂದು ಕೇಂದ್ರ ಸರ್ಕಾರಕ್ಕೆ ಪತ್ರ ಬರೆದು ಅದರ ಆದೇಶವನ್ನು ಜಾರಿಗೊಳಿಸುವುದರಲ್ಲಿ ತನ್ನ ಅಸಮರ್ಥತೆಯನ್ನು ತಿಳಿಸಿತು. ಈ ಆದೇಶದ ಪ್ರಭಾವವು ಮುಖ್ಯವಾಗಿ ಸಂಘ ಮತ್ತು ಹನುಮಾನ್ ವ್ಯಾಯಾಮ ಪ್ರಸಾರಕ ಮಂಡಲದ ಮೇಲೆ ಆಗಲಿದ್ದು, ಯುದ್ಧದ ಸಿದ್ಧತೆಯಲ್ಲಿ ಬ್ರಿಟಿಷ್ ಸರ್ಕಾರದ ನೆರವಿಗೆ ಬರಬಹುದಾದಂತಹ ಹಿಂದೂಗಳು, ಸಂಘ ಮತ್ತು ಸರ್ಕಾರದ ನಡುವಿನ ಈ ಘರ್ಷಣೆಯಲ್ಲಿ ತಾವು ಸ್ವತಃ ಯುದ್ಧದ ಸಿದ್ಧತೆಯಿಂದ ಹಿಂದೆ ಸರಿಯುವ ಸಂಭವವಿದೆ ಎಂದು ಪ್ರಾಂತ ಸರ್ಕಾರವು ಅಭಿಪ್ರಾಯಪಟ್ಟಿತು. ಆದರೆ ಭಾರತ ಸರ್ಕಾರ ಪ್ರಾಂತ– ಸರ್ಕಾರದ ವಾದ ಮತ್ತು ವ್ಯವಹಾರದ ಬಗ್ಗೆ ತನ್ನ ಅಸಮಾಧಾನವನ್ನು ತಿಳಿಸಿ, ಆದೇಶವನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲು ಆಗ್ರಹಿಸಿತು.

ಡಾ. ಹೆಡಗೇವಾರರ ನಿಧನದಿಂದಾಗಿ ಸ್ವಾತಂತ್ರ್ಯ ಹೋರಾಟದ ವಿಭಿನ್ನ ಮಾರ್ಗಗಳ ಜತೆ ಕ್ರಿಯಾಶೀಲ ಸಂಬಂಧವಿರಿಸಿಕೊಂಡ ಓರ್ವ ರಾಷ್ಟ್ರವಾದಿಯು ಶಾಶ್ವತವಾಗಿ ಅಗಲಿದಂತಾಯಿತು. ಅಷ್ಟಾದರೂ ಸರ್ಕಾರವು ಸಂಘದ ಬೆಳೆದು ನಿಂತಿದ್ದ ಸ್ವರೂಪದಿಂದಾಗಿ ಇನ್ನೂ ಸಂದೇಹಗ್ರಸ್ತವಾಗಿ ಹಾಗೂ ಆತಂಕಿತವಾಗಿಯೇ ಮುಂದುವರಿಯಿತು.

# ಡಾ. ಹೆಡಗೇವಾರ್ ಮತ್ತು ಮಹಾತ್ಮಾಗಾಂಧಿ

ಮಹಾತ್ಮಾ ಗಾಂಧಿಯವರಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಸ್ವಯಂಸೇವಕ ಸಂಘದ ದೃಷ್ಟಿಕೋನವೇನು ಎಂಬ ಬಗ್ಗೆ ಸ್ವಾತಂತ್ರ್ಯಪ್ರಾಪ್ತಿಯ ನಂತರದ ಪ್ರಸ್ತುತ ಕಾಲಾವಧಿಯಲ್ಲಿ ರಾಜಕೀಯ ಮತ್ತು ವಿದ್ವತ್‌ವಲಯದಲ್ಲಿ ನಿರಂತರವಾಗಿ ಚರ್ಚೆ ನಡೆಯುತ್ತಲೇ ಇದೆ. ಮಹಾತ್ಮಾ ಗಾಂಧಿ ಮತ್ತು ಅವರ ದಾರ್ಶನಿಕ ವಿಚಾರಗಳಿಗೆ ಸಾಮಾಜಿಕ ವಲಯಗಳಲ್ಲಿ ಕೇಂದ್ರ ಸ್ಥಾನದ ಮಹತ್ವ ಬಂದುದು 1920ರ ನಂತರವೇ. ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಯುತ್ತಿದ್ದಾಗಲಂತೂ ಅವರು ಮಿಕ್ಕವರೆಲ್ಲರಿಗಿಂತ ಹೆಚ್ಚು ಜನಪ್ರಿಯ ಮತ್ತು ಪ್ರಭಾವಶಾಲಿ ಆಗಿದ್ದವರು. ಹೀಗಾಗಿ ಸ್ವಾತಂತ್ರ್ಯದ ಚಳವಳಿಯಲ್ಲೂ ಅವರ ವಿಚಾರ ಮತ್ತು ಜೀವನ ದೃಷ್ಟಿಯ ಬಲವಾದ ಮುದ್ರೆಯಿತ್ತು. ಭಾರತವು ಬ್ರಿಟಿಷ್ ಆಡಳಿತದಲ್ಲಿದ್ದಾಗ ಇಲ್ಲಿ ವಿವಿಧ ರೀತಿಯ ವೈಚಾರಿಕ ನಿಲುವುಗಳನ್ನು ಆಧರಿಸಿದಂತಹ ಅನೇಕ ಜನಾಂದೋಳನಗಳು – ಕಾಂಗ್ರೆಸ್ ಅಲ್ಲದ ಇನ್ನೂ ಅನೇಕ ಸಂಘಟನೆಗಳು – ಹುಟ್ಟಿಕೊಂಡಿದ್ದವು. ಇವೆಲ್ಲ ಚಳವಳಿಗಳಿಗೆ ತಮ್ಮ ತಮ್ಮದೇ ಆದ ವಿಚಾರಗಳಿದ್ದವು ಮತ್ತು ಒಂದೊಂದರ ಸಂಸ್ಥಾಪಕರೂ ಬದುಕು, ವಿಚಾರ, ಸೈದ್ಧಾಂತಿಕ ನಿಲುವು ಮತ್ತು ಅವರ ಕಾರ್ಯಕ್ರಮಗಳು ಸಹ ಆಗಿನ ಕಾಲದ ಸಾಮಾಜಿಕ, ರಾಜಕೀಯ ವಾತಾವರಣವನ್ನು ಹೆಚ್ಚು ಕಡಿಮೆ ಪ್ರಭಾವಿತಗೊಳಿಸಿದ್ದವು.

ಇವೆಲ್ಲ ಚಳವಳಿಗಳ ಮತ್ತು ಸಂಘಟನೆಗಳ ಹಾಗೂ ಅವುಗಳನ್ನು ಆರಂಭಿಸಿದವರ ಬಗ್ಗೆ ಗಾಂಧೀಜಿಯವರ ಅಭಿಪ್ರಾಯವೇನಿತ್ತು ಮತ್ತು ಗಾಂಧೀಜಿಯವರ ಬಗ್ಗೆ ಅವರು ಹೇಗೆ ಯೋಚಿಸುತ್ತಿದ್ದರು ಎಂಬುದೇ ಒಂದು ಮಹತ್ವದ ಚರ್ಚೆಯ ವಿಷಯ ಆಗಬಹುದು. ಉದಾಹರಣೆಗಾಗಿ ಹೇಳುವುದಾದಲ್ಲಿ ಡಾ. ಭೀಮರಾವ್ ಅಂಬೇಡ್ಕರ್ ಮತ್ತು ಗಾಂಧೀಜಿಯವರ ನಡುವೆ ಸಾಮಾಜಿಕ, ರಾಜಕೀಯ ವಿಷಯಗಳಲ್ಲಿ ಇದ್ದಂತಹ ವೈಚಾರಿಕ ವಿವಾದಗಳು, ಗಾಂಧೀಜಿಯವರ ಆರ್ಥಿಕ ಚಿಂತನೆ ಮತ್ತು ಸಾಮಾಜಿಕ ವ್ಯವಸ್ಥೆಯ ಕುರಿತು ನಂಬಿಕೆಗಳು ಮತ್ತು ಅವುಗಳ ಮೇಲೆ ಕಮ್ಯುನಿಸ್ಟ್ ಪಕ್ಷವು ನಡೆಸುತ್ತಿದ್ದ ಸೈದ್ಧಾಂತಿಕ ಪ್ರಹಾರ, ಕ್ರಾಂತಿಕಾರಿಗಳ ಬಗ್ಗೆ ಗಾಂಧೀಜಿಯವರಿಗಿದ್ದ ಭಿನ್ನಾಭಿಪ್ರಾಯಗಳು – ಇವೆಲ್ಲ ಕುರಿತು ಈಗಾಗಲೇ ಅನೇಕ ಸಂಶೋಧನೆಗಳು ನಡೆದಿವೆ ಹಾಗೂ ವಿಶ್ಲೇಷಣೆಗಳೂ ಹೊರಬಂದಿದೆ. ಆದರೆ ಸಂಘ ಮತ್ತು ಗಾಂಧೀಜಿಯವರ ನಡುವೆ ಇದ್ದ ವೈಚಾರಿಕ ಮತ್ತು ವ್ಯಾವಹಾರಿಕ ಮಟ್ಟದಲ್ಲಿ ಸಹಮತ ಮತ್ತು ಭಿನ್ನಾಭಿಪ್ರಾಯಗಳು ಇನ್ನೂ ಅಷ್ಟಾಗಿ ಬೆಳಕಿಗೆ ಬಂದಿಲ್ಲ. ಇದಕ್ಕೊಂದು ಕಾರಣವೆಂದರೆ, ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಭಾರತದ ರಾಜಕಾರಣದಲ್ಲಿ ನಡೆಯುತ್ತಿರುವ ಸಿದ್ಧಾಂತ ಮತ್ತು ಆಡಳಿತ ಇವುಗಳ ನಡುವಿನ ಸಂಘರ್ಷವೇ ಆಗಿದೆ.

ಕಾಂಗ್ರೆಸ್‌ನ ಒಳಗೆ ಪಂ. ಜವಹರಲಾಲ್ ನೆಹರು ಅವರು ಓರ್ವ ಸಮಾಜವಾದಿ ಮತ್ತು ಪಾಶ್ಚಾತ್ಯ ವಿಚಾರಗಳಿಂದ ಪ್ರಭಾವಿತರಾಗಿದ್ದವರಾದರೆ, ವಲ್ಲಭಭಾಯಿ ಪಟೇಲ್ ಮತ್ತು ಇನ್ನಿತರ ನಾಯಕರು ಅಪ್ಪಟ ಭಾರತೀಯತೆಯ ಪ್ರತಿಪಾದಕರಾಗಿದ್ದವರು. ಈ ಸೈದ್ಧಾಂತಿಕ ಜಗಳದಲ್ಲಿ ಭಾರತದ ಕಮ್ಯುನಿಸ್ಟ್ ಚಿಂತಕರಿಗೆ ನಿಕಟವಾಗಿದ್ದವರು ನೆಹರು ಅವರು. ಆದರೆ ಪಟೇಲರು ಕಡು ರಾಷ್ಟ್ರವಾದಿಗಳಾಗಿದ್ದವರು. ತಮ್ಮ ಚಿಂತನೆಯಲ್ಲಷ್ಟೇ ಅಲ್ಲ, ಸ್ವಾತಂತ್ರ್ಯ ಪೂರ್ವದ ಇನ್ನೂ ಅನೇಕ ಪ್ರಸಂಗಗಳು, ದೇಶದ ವಿಭಜನೆ, ಪಾಕಿಸ್ತಾನದ ನಿರ್ಮಾಣ, ನಂತರ ಸಂಸ್ಥಾನಗಳ ವಿಲೀನ ಇತ್ಯಾದಿ ಹಲವಾರು ವ್ಯಾವಹಾರಿಕ ಸಂಗತಿಗಳಲ್ಲೂ, ಪಟೇಲರು ಸಂಘವೂ ಸೇರಿದಂತೆ ಕಾಂಗ್ರೆಸ್‌ನವರಲ್ಲದ ಇತರ ಗುಂಪುಗಳ ಪ್ರಶಂಸೆಗೂ ಪಾತ್ರರಾಗಿದ್ದವರು. ಹೀಗೆ ಈ ಇಬ್ಬರೂ ರಾಷ್ಟ್ರೀಯ ನಾಯಕರ ಬಗ್ಗೆ, ಕಾಂಗ್ರೆಸ್ ಪಕ್ಷ ಮತ್ತು ಇತರರಲ್ಲೂ ಸಮರ್ಥಕ ಮತ್ತು ವಿರೋಧಕರ ಧ್ರುವೀಕರಣ ನಡೆದೇ ಇತ್ತು. ಗಾಂಧೀಜಿಯವರಿಗೇನೋ ಪಟೇಲ್ ಮತ್ತು ನೆಹರು ಇವರಿಬ್ಬರ ಜತೆಯಲ್ಲೂ ಸಮಾನವಾದ ನಿಕಟತೆ ಇತ್ತು. ಅಷ್ಟಾದರೂ ಪಶ್ಚಿಮದ ವೈಚಾರಿಕ ಮೌಲ್ಯಗಳಿಂದ ಕೂಡಿದ್ದ ನೆಹರು ಅವರು ಪ್ರಧಾನಿಯಾಗಿ ಪ್ರತಿಷ್ಠಿತರಾಗಿದ್ದ ಕಾರಣದಿಂದಾಗಿ ಅವರಿಗೆ ಪಾಶ್ಚಾತ್ಯ ಜಗತ್ತು, ಇಂಗ್ಲಿಷ್ ಪತ್ರಿಕೆಗಳು ಮತ್ತು ಸಮಾಜವಾದಿ ಲೇಖಕರಿಂದ ಹೆಚ್ಚಿನ ಸಮರ್ಥನೆ ದೊರಕುತ್ತಿದ್ದುದು ಸರ್ವವಿದಿತ.

ಈ ನಡುವೆ ದೇಶವಿಭಜನೆಯನ್ನು ಕಾರಣವನ್ನಾಗಿ ಮಾಡಿಕೊಂಡು ಉದ್ಭವವಾದ ಒಂದು ಕರಿನೆರಳು, ಆಗಷ್ಟೇ ವಿಭಜಿತವಾಗಿ ಗಾಯಗೊಂಡಿದ್ದ ಸ್ವತಂತ್ರ ಭಾರತದ ಮೇಲೆ ವಜ್ರಾಘಾತದಂತೆ ಬಂದೆರಗಿತು. ಹಿಂದೂ ಮಹಾಸಭೆಗೆ ಸೇರಿದ್ದ ಕೆಲವು ತರುಣರು, ಮಹಾತ್ಮಾಗಾಂಧಿಯವರು ದೇಶ ವಿಭಜನೆಗೆ ಕಾರಣಕರ್ತರಾಗಿದ್ದವರು ಎಂಬ ನಿಷ್ಕರ್ಷೆ ತಾಳಿ, ಅವರನ್ನು ಪಾಕಿಸ್ತಾನದ ಹಿತಚಿಂತಕರು ಎಂಬಂತೆ ಕಂಡು ಅವರ ಹತ್ಯೆಯ ಸಂಚು ನಡೆಸಿದರು. ಅವರಲ್ಲೊಬ್ಬನಾದ ನಾಥೂರಾಮ ಗೋಡ್ಸೆ 1948ರ ಜನವರಿ 30ರಂದು ಮಹಾತ್ಮಾಗಾಂಧಿಯವರ ಪ್ರಾರ್ಥನಾ ಸಭೆಯಲ್ಲೆ ಅವರ ಮೇಲೆ ಗುಂಡು ಹಾರಿಸಿ ಅವರ ಹತ್ಯೆಗೈದ. ಯಾರನ್ನು ಸ್ವಾತಂತ್ರ್ಯ ಪೂರ್ವದಲ್ಲಿ ದೇಶದ ಎಲ್ಲ ರಾಜಕಾರಣಿಗಳು (ಮಹಮ್ಮದಾಲಿ ಜಿನ್ನಾ ಮತ್ತು ಮುಸ್ಲಿಂ ಲೀಗ್‌ನ ಸಮರ್ಥಕರನ್ನು ಹೊರತುಪಡಿಸಿ) 'ಮಹಾತ್ಮಾ' ಎಂದು ಸಂಬೋಧಿಸಿ ಗೌರವಿಸುತ್ತಿದ್ದರೊ, ಯಾರ ವಿಚಾರಗಳನ್ನು ಜನರು ತಮ್ಮ ವಿಚಾರವೆಂದೇ ಸ್ವೀಕರಿಸಿ ಕಣ್ಣು ಮುಚ್ಚಿಕೊಂಡು ಅನುಸರಿಸುತ್ತಿದ್ದರೊ, ಅಂತಹವರ ಹತ್ಯೆ ರಾಷ್ಟ್ರದ ಮಾನಸಿಕತೆಗೆ ಭಾರೀ ಆಘಾತವೆಸಗಿತು. ಗೋಡ್ಸೆ ಎಸಗಿದ್ದ ಹುಚ್ಚು ಕೃತ್ಯವು ಹಿಂದೂಗಳಿಗೆ ನಾಚಿಕೆಯಿಂದ ತಲೆಯೆತ್ತದಂತೆ ಮಾಡುವಂತಹದಾಯಿತು.

ತಮ್ಮ ಹತ್ಯೆಗಿಂತ ನಾಲ್ಕು ತಿಂಗಳು ಮೊದಲು ದೆಹಲಿಯ ಭಂಗಿ ಕಾಲನಿಯಲ್ಲಿ ವಸತಿ ಹೂಡಿದ್ದ ಮಹಾತ್ಮಾಗಾಂಧಿಯವರು ಅಲ್ಲಿ ಸಂಘದ ಒಂದು ಕಾರ್ಯಕ್ರಮಕ್ಕೆ ಬಂದಿದ್ದರು. ಅಲ್ಲಿ ಅವರ ಭಾಷಣವೂ ಆಯಿತು. ಸ್ವಯಂಸೇವಕರ ಜತೆ ಬಿಚ್ಚುಮನದ ಪ್ರಶ್ನೋತ್ತರಗಳೂ ಆದವು. ಗಾಂಧೀಜಿಯವರು ಸ್ವಯಂಸೇವಕರ ಬಿಚ್ಚು ಮನದ ನಡವಳಿಕೆ ಮತ್ತು ಮಾತುಕತೆಗಳಿಂದ ಪ್ರಭಾವಿತರಾಗಿದ್ದಲ್ಲಿ, ಸ್ವಯಂಸೇವಕರಿಗೆ ಗಾಂಧೀಜಿಯವರನ್ನು ಪ್ರತ್ಯಕ್ಷವಾಗಿ ಸಮೀಪದಿಂದ ಕಾಣುವ, ಅವರನ್ನು ನೇರವಾಗಿ ಪ್ರಶ್ನಿಸಿ ತಿಳಿದುಕೊಳ್ಳುವ ಮೂಲಕ ತಮ್ಮ ಮನದ ಸಂದೇಹಗಳನ್ನು ನಿವಾರಿಸಿಕೊಳ್ಳುವ ಅವಕಾಶ ದೊರೆತುದುದಕ್ಕಾಗಿ ಸಂತೋಷವಾಗಿತ್ತು. ಆದರೆ ಗಾಂಧೀಜಿಯವರ ಹತ್ಯೆಯಾದಾಗ ಕೇಂದ್ರ ಸರ್ಕಾರವು ಅವರ ಅಮಾನುಷ ಹತ್ಯೆಗೆ ರಾಷ್ಟ್ರೀಯ

ಸ್ವಯಂಸೇವಕ ಸಂಘವನ್ನು ದೋಷಿಯಾಗಿ ಮಾಡಿ, ಸಂಘದ ಮೇಲೆ ನಿಷೇಧ ಹೇರಿತು. ಈ ವಿಷಯದಲ್ಲೂ ಅಂದಿನ ಗೃಹಮಂತ್ರಿ ಸರ್ದಾರ್ ಪಟೇಲ್ ಮತ್ತು ಪ್ರಧಾನಿ ಪಂ. ಜವಹಾರಲಾಲ ನೆಹರು ಅವರಿಬ್ಬರ ನಡುವೆ ಪರಸ್ಪರ ಸಹಮತವಿರಲಿಲ್ಲ. ಪಟೇಲರು ಪಂ. ನೆಹರು ಅವರಿಗೆ ಪತ್ರ ಬರೆದು, "ಈ ಕೃತ್ಯದಲ್ಲಿ ರಾ.ಸ್ವ.ಸಂಘದ ಪಾತ್ರವೇನೂ ಇಲ್ಲ. ಸಂಘವನ್ನು ಬೇರೆ ಕೆಲವು ತಪ್ಪು ಕೃತ್ಯಗಳಿಗೆ ಹೊಣೆಗಾರಗೊಳಿಸಲು ನಿಸ್ಸಂದೇಹವಾಗಿಯೂ ಸಾಧ್ಯವಿದೆ. ಆದರೆ ಇದರಲ್ಲಿ ಮಾತ್ರ ಇಲ್ಲ"ಎಂದು ತಿಳಿಸಿದ್ದರು. 1948ರ ಫೆಬ್ರವರಿ 4ರಂದು ಸಂಘದ ಮೇಲೆ ನಿಷೇಧ ವಿಧಿಸಿದಾಗ, ಸಂಘವು ಗಾಂಧಿ ವಿರೋಧಿ ಎಂಬ ಮನೋಭಾವ ಜನಸಾಮಾನ್ಯರಲ್ಲಿ ಮೂಡಿದ್ದುದು ಸ್ವಾಭಾವಿಕವೇ. ಈ ಕೊಲೆಯ ಸಂಚಿನ ಕೂಲಂಕಷ ವಿಚಾರಣೆ ನಡೆಸಿದ್ದ ಎರಡೂ ಆಯೋಗಗಳು ಸಂಘವು ಯಾವುದೇ ಸಂಚಿನಲ್ಲಿ ಭಾಗಿಯಲ್ಲವೆಂದು ತಿಳಿಸಿವೆ. 1948ರ ಜುಲೈ 12ರಂದು ಕೇಂದ್ರ ಸರ್ಕಾರವು ಸಂಘದ ಮೇಲಿನ ನಿಷೇಧವನ್ನು ಹಿಂತೆಗೆದುಕೊಂಡಿತು. ಅಷ್ಟಾದರೂ ಸರ್ಕಾರದ ವತಿಯಿಂದಲೇ "ಸಂಘವು ಓರ್ವ ಜನಪ್ರಿಯ ನಾಯಕನ ಕೊಲೆಗಾರ" ಎಂಬ ಅಪಪ್ರಚಾರ ನಡೆದ ಕಾರಣದಿಂದಾಗಿ ಮತ್ತು ಸಮಾಜವಾದಿ ಚಿಂತಕರು ಹಾಗೂ ಲೇಖಕರು ಅದನ್ನೇ ಬಾರಿಬಾರಿಗೂ ಪುನರುಚ್ಚರಿಸುತ್ತಿರುವುದರ ಪರಿಣಾಮವಾಗಿ ಬೌದ್ಧಿಕ ಜಗತ್ತಿನಲ್ಲಿ ಈ ತಪ್ಪು ಕಲ್ಪನೆ ಜನಮನದ ಮೇಲೆ ದೌರ್ಭಾಗ್ಯವಶಾತ್ ಅಚ್ಚೊತ್ತಿದೆ. ಸಂಘದ ಬಗ್ಗೆ ಅದು ಗಾಂಧಿ ವಿರೋಧಿ ಮತ್ತು ಹಿಂಸಾವೃತ್ತಿಯದು ಎಂಬ ಪ್ರತಿಮೆ ರೂಪುಗೊಂಡಿರುವುದು ಈ ಕಾರಣಕ್ಕಾಗಿ. ಒಟ್ಟಿನಲ್ಲಿ ಡಾ. ಹೆಡಗೇವಾರ ಪ್ರಣೀತ ವಿಚಾರ ಮತ್ತು ಗಾಂಧಿವಾದ ಇವು ಪರಸ್ಪರ ವಿರೋಧಿ ವಿಚಾರಗಳು ಎಂಬ ಭ್ರಮೆ ಈಗ ಸರ್ವಸಾಮಾನ್ಯವಾಗಿ ಸಮಾಜದ ಮನದಾಳದಲ್ಲಿ ಬೇರುಬಿಟ್ಟಿದೆ.

ಸ್ವಾತಂತ್ರ್ಯ ಹೋರಾಟಕ್ಕೆ ಡಾ. ಹೆಡಗೇವಾರರ ಕೊಡುಗೆಯ ಬಗ್ಗೆ ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಉಲ್ಲೇಖಿಸಲಾಗಿದೆ. ಅವರು ಆರಂಭದಲ್ಲಿ ತಿಲಕ್ ಅನುಯಾಯಿಯಾಗಿ ಪ್ರಶಿಕ್ಷಣ ಪಡೆದಿದ್ದರೂ ಮುಂದೆ ಗಾಂಧೀಜಿಯವರ ಕಾರ್ಯದಲ್ಲಿ ಒಲವು ಬೆಳೆಸಿಕೊಂಡಿದ್ದುದು ಸ್ವಂತದ ಚಿಂತನೆಯಿಂದಲೇ. ಗಾಂಧೀಜಿಯವರ ಜೀವನ ದೃಷ್ಟಿ ಮತ್ತು ಆದರ್ಶಗಳನ್ನು ಅವರು ಮೈಗೂಡಿಸಿಕೊಂಡಿದ್ದುದು ಮಾತ್ರವಲ್ಲ, ವಸಾಹತುಶಾಹಿ ವಿರುದ್ಧ ಹೋರಾಟದಲ್ಲಿ ನೇತೃತ್ವ ವಹಿಸುವ ಶಕ್ತಿ ಎಲ್ಲರಿಗಿಂತ ಹೆಚ್ಚಾಗಿ ಗಾಂಧೀಜಿಯವರಲ್ಲಿ ಇರುವುದಾಗಿಯೂ ಅವರು ಗುರುತಿಸಿದ್ದರು. ಹೀಗಾಗಿ ವಸಾಹತುಶಾಹಿ ವಿರೋಧಿ ಸಂಘರ್ಷದಲ್ಲಿ ಭಾರತೀಯ ಮೌಲ್ಯಗಳನ್ನು, ಆಧರಿಸಿ ಭಾಷೆ, ರೀತಿನೀತಿಗಳು ಮತ್ತು ವೈಚಾರಿಕ ಭೂಮಿಕೆ ಇವೆಲ್ಲವುಗಳಲ್ಲಿ ಡಾ. ಹೆಡಗೇವಾರರ ಚಿಂತನೆ ಗಾಂಧೀಜಿಯವರಿಗೆ ಸಮೀಪವೇ ಇತ್ತೆನ್ನಬಹುದು.

ಸಂಘದ ಸ್ಥಾಪನೆಗಿಂತ ಮೊದಲು ಮತ್ತು ನಂತರ ಕೂಡಾ ಗಾಂಧೀಜಿಯವರ ಮುಂದಾಳುತನದಲ್ಲಿ ನಡೆದ ಆಂದೋಳನಗಳಲ್ಲಿ ಡಾ. ಹೆಡಗೇವಾರರು ಮನಸಾರೆ ಭಾಗವಹಿಸಿದ್ದರು. ಅಸಹಕಾರ ಆಂದೋಳನದಲ್ಲಿ ಅವರ ಸಹಭಾಗಿತ್ವವು ಮಧ್ಯಪ್ರಾಂತದಲ್ಲಿನ ಇತರ ತಿಲಕ್ ಅನುಯಾಯಿಗಳ ಚಿಂತನೆಗೆ ವಿರುದ್ಧವಾಗಿತ್ತು. ಆ ಸಂದರ್ಭದಲ್ಲಿ ಅವರು 'ರಾಷ್ಟ್ರೀಯ ಮಂಡಲ'ದಿಂದ ಪ್ರತ್ಯೇಕಗೊಂಡು 'ನಾಗಪುರ ನ್ಯಾಷನಲ್ ಯೂನಿಯನ್' ಎಂಬ ಹೊಸ ಸಂಸ್ಥೆಯೊಂದನ್ನು ಹುಟ್ಟುಹಾಕಿದ್ದರು. ಅದಕ್ಕೆ ಇದ್ದ ಹಲವು ಕಾರಣಗಳ ಪೈಕಿ ಗಾಂಧೀಜಿಯವರ ಬಗ್ಗೆ ರಾಷ್ಟ್ರೀಯ ಮಂಡಲಕ್ಕಿದ್ದ ನಕಾರಾತ್ಮಕ ದೃಷ್ಟಿಕೋನವೂ ಒಂದು.

ಡಾ. ಹೆಡಗೇವಾರರು ಮತ್ತು ಗಾಂಧೀಜಿಯವರ ದೃಷ್ಟಿಕೋನಗಳಲ್ಲಿ ಒಂದು ವಿಷಯದಲ್ಲಿ ಸ್ಪಷ್ಟವಾದ ಭಿನ್ನತೆಯಿತ್ತು. ಸ್ವಾತಂತ್ರ್ಯಹೋರಾಟದಲ್ಲಿ ಗಾಂಧೀಜಿಯವರಿಗಿದ್ದ ದೃಢ ನಂಬಿಕೆಯೆಂದರೆ ಅಹಿಂಸೆಯ ಮಾರ್ಗವೇ ಸರ್ವಶ್ರೇಷ್ಠವಾದುದು ಎಂಬುದಾಗಿ. ಜೊತೆಗೆ ಇತರ ಮಾರ್ಗಗಳನ್ನು ಅನುಸರಿಸುತ್ತಿದ್ದವರನ್ನು ಅವರು ಮೆಚ್ಚುತ್ತಿರಲಿಲ್ಲ. ಕ್ರಾಂತಿಕಾರಿ ಆಂದೋಳನದ ಬಗ್ಗೆ ಅವರಿಗೆ ಕಿಂಚಿತ್ತೂ ಸಹಾನುಭೂತಿಯಿರಲಿಲ್ಲ. ಡಾ. ಹೆಡಗೇವಾರರಿಗೆ ಗಾಂಧೀಜಿಯವರ ಮಾರ್ಗವು ಸ್ವಾತಂತ್ರ್ಯ ಪ್ರಾಪ್ತಿಗೆ ಉತ್ತಮವಾಗಿಯೇನೋ ಕಂಡಿರಬಹುದು; ಅದಕ್ಕಾಗಿ ಅಸಹಕಾರ ಚಳವಳಿ ಮತ್ತು ಕಾನೂನು ಭಂಗ ಚಳವಳಿಯ ಸಂದರ್ಭದಲ್ಲಿ ಅವರು ಮತ್ತು ಒಂದಿಷ್ಟು ಅರೆಸೈನಿಕ ಪಡೆಯ ಶಿಕ್ಷಣ ಪಡೆದಿದ್ದ ಇತರ ಸ್ವಯಂಸೇವಕರು ಗಾಂಧೀಜಿಯವರು ನೀಡಿದ್ದ ಅಹಿಂಸಾತ್ಮಕ ಸತ್ಯಾಗ್ರಹದ ಶಪಥ ಕೈಗೊಂಡಿದ್ದರು; ಅಷ್ಟೇ ಅಲ್ಲ, ಅದರ ಇತಿಮಿತಿಯಲ್ಲಿ ಎರಡೂ ಬಾರಿ ಸತ್ಯಾಗ್ರಹದ ನಿಯಮಗಳನ್ನು ಕೂಡ ಅವರೆಲ್ಲ ಅನುಸರಿಸಿದ್ದೂ ಉಂಟು. ಅಷ್ಟಾದರೂ ಸ್ವಾತಂತ್ರ್ಯಪ್ರಾಪ್ತಿಗಾಗಿ ಅನ್ಯಮಾರ್ಗಗಳನ್ನು ಅನುಸರಿಸುವವರ ದೇಶಭಕ್ತಿಯನ್ನಾಗಲಿ ಅವರು ಬಳಸುತಿದ್ದ ಇನ್ನಿತರ ಸಾಧನಗಳನ್ನಾಗಲಿ ಸರಿಯಲ್ಲ ಎಂದು ಅವರು ಅಭಿಪ್ರಾಯಪಡುತ್ತಿರಲಿಲ್ಲ. "ಸ್ವಾತಂತ್ರ್ಯದ ಸಲುವಾಗಿ ಬ್ರಿಟಿಷರ ಬೂಟ್ ಪಾಲಿಷ್ ಮಾಡುವುದರಿಂದ ಮೊದಲ್ಗೊಂಡು ಅದೇ ಬೂಟುಗಳಿಂದ ಅವರನ್ನು ಚಚ್ಚಿ ಹಾಕಿ ಹೊರದಬ್ಬುವವರೆಗಿನ ಎಲ್ಲ ವಿಧದ ಮಾರ್ಗಗಳು ನನಗೆ ಒಪ್ಪಿಗೆಯೇ. ನನ್ನ ಮನದಲ್ಲಿ ಯಾವುದೇ ಮಾರ್ಗದ ಬಗ್ಗೆ ತಿರಸ್ಕಾರವಿಲ್ಲ. ನನಗೆ ಬೇಕಾದುದು ಆಂಗ್ಲರನ್ನು ಈ ದೇಶದಿಂದ ಹೊರದಬ್ಬಿ ನಾಡನ್ನು ಸ್ವತಂತ್ರಗೊಳಿಸುವುದು ಅಷ್ಟೇ" ಎನ್ನುತ್ತಿದ್ದರು ಅವರು.

ನಮ್ಮ ರಾಷ್ಟ್ರವನ್ನು ಬೌದ್ಧಿಕವಾಗಿ, ಶೈಕ್ಷಣಿಕವಾಗಿ ಮತ್ತು ಉಚ್ಚ ಆದರ್ಶಗಳ ನಿಟ್ಟಿನಲ್ಲಿ ಸರ್ವಶ್ರೇಷ್ಠಗೊಳಿಸುವ ಜತೆಯಲ್ಲೆ ಇದನ್ನು ಶಕ್ತಿಶಾಲಿಯನ್ನಾಗಿಯೂ ಮಾಡಬೇಕಾಗಿದೆ ಎಂಬುದು ಅವರ ನಿಲುವಾಗಿತ್ತು. ಅಹಿಂಸೆಯು ಅರ್ಥಪೂರ್ಣವಾಗುವುದು ಅದರ ಹಿಂದೆ 'ಬಲ'ವಿದ್ದಾಗ ಮಾತ್ರ. 'ಬಲ' ಎನ್ನುವುದರ ಬಗ್ಗೆ ಅವರು ಹೇಳುತ್ತಿದ್ದ ಅರ್ಥವೆಂದರೆ ರಾಷ್ಟ್ರೀಯತೆಯ ಉತ್ಕಟ ಭಾವನೆ ಹಾಗೂ ಜನರ ಸಂಘಟಿತ ಶಕ್ತಿ ಎಂಬುದೇ. "ಬಲವೇ ಇಲ್ಲದೆ ಸಂರಕ್ಷಣೆ ಸಾಧ್ಯವಾಗುವುದಿಲ್ಲ. ಆದರೆ ಬಲವಿರುವುದು ಸಂಘಟನೆಯಲ್ಲಿ ಮಾತ್ರ. ನಮ್ಮ ಸಂಘಟನೆ ಹೇಗಿರಬೇಕೆಂದರೆ ಒಡಕಿನ ಭಾವನೆಯಿಂದ ಪೂರ್ತಿಯಾಗಿ ದೂರವುಳಿದು, ಬಾಹ್ಯ ಆಕ್ರಮಣಗಳನ್ನು ಸೋಲಿಸಬಲ್ಲಷ್ಟು ಅದು ಶಕ್ತಿಶಾಲಿಯಾಗಿರಬೇಕು" ಎನ್ನುತ್ತಿದ್ದರು ಅವರು.

## ಮುಸಲ್ಮಾನರ ಸಮಸ್ಯೆ

ಸ್ವಾತಂತ್ರ್ಯದ ಹೋರಾಟಕ್ಕಾಗಿ ಕಾಂಗ್ರೆಸ್ ತನ್ನ ಕಾರ್ಯದ ತಳಹದಿಯನ್ನು ವಿಸ್ತಾರಗೊಳಿಸಲು ಪ್ರಯತ್ನ ನಡೆಸಿತ್ತು. ಯಾವುದೇ ರಾಷ್ಟ್ರೀಯ ಸಂಸ್ಥೆಯಾದರೂ ಮಾಡುವಂತಹ ಕೆಲಸವೇ ಅದು. ಸ್ವತಃ ರಾಷ್ಟ್ರೀಯ ಹೋರಾಟದಿಂದ ದೂರವಾಗಿದ್ದು ಕಾಂಗ್ರೆಸನ್ನು ಹಿಂದೂವಾದಿ ಪಕ್ಷವೆಂದು ಮುಸಲ್ಮಾನರು ಜರೆಯುತ್ತಿದ್ದುದು ಕಾಂಗ್ರೆಸ್ಸಿನ ನಾಯಕರಿಗೆ ಭಾರೀ ಕಿರಿಕಿರಿಯನ್ನುಂಟು ಮಾಡುತ್ತಿತ್ತು. ಈ ದೇಶದ ರಾಷ್ಟ್ರೀಯತೆ ಮತ್ತು ಸಂಸ್ಕೃತಿಯನ್ನು ಕಾಂಗ್ರೆಸ್ಸು ಅವರಿಗೆ ಸರಿಯಾಗಿ ವಿವರಿಸಿ ಹೇಳಿದ್ದಲ್ಲಿ, ತಟಸ್ಥರಾಗಿದ್ದ 

ಮುಸಲ್ಮಾನರು ಪ್ರತ್ಯೇಕತಾವಾದಿಗಳಾಗುತ್ತಿರಲಿಲ್ಲ. ಒಂದು ಕಡೆ ಮುಸಲ್ಮಾನರನ್ನು ಏನಾದರೂ ಮಾಡಿ ಜತೆಗೂಡಿಸಲು ಕಾಂಗ್ರೆಸ್ ಪ್ರಯತ್ನಿಸುತ್ತಿದ್ದಲ್ಲಿ, ಇನ್ನೊಂದು ಕಡೆ ಮುಸ್ಲಿಂ ಲೀಗ್ ಚೌಕಾಸಿ ವ್ಯಾಪಾರ ಮಾಡುತ್ತಾ ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿತ್ತು. ಮುಸಲ್ಮಾನರನ್ನು ರಾಷ್ಟ್ರೀಯ ಆಂದೋಳನದಲ್ಲಿ ಜತೆಗೂಡಿಸಲೇಬೇಕೆಂಬ ಸಲುವಾಗಿ ಅವರ ಅಪೇಕ್ಷೆಗಳನ್ನು, ಬೇಡಿಕೆಗಳನ್ನು ಮತ್ತು ಶರತ್ತುಗಳನ್ನು ಒಪ್ಪುತ್ತಲೇ ಹೋಗುವುದೇ ಕಾಂಗೆಸ್‌ನ ತುಷ್ಟೀಕರಣದ ನೀತಿಯಾಯಿತು. 1906ರಲ್ಲಿ ಮುಸ್ಲಿಂ ಲೀಗ್ ಆರಂಭದ ಜೊತೆಗೇ ದೇಶದಲ್ಲಿ ಪ್ರತ್ಯೇಕತಾವಾದದ ಬೀಜವೂ ಬಿತ್ತಲ್ಪಟ್ಟಿತು. ತದನಂತರ ನಮ್ಮ ಸ್ವಾತಂತ್ರ್ಯ ಆಂದೋಳನದಲ್ಲಿ ಭಾರತದ ಸ್ವಾತಂತ್ರ್ಯ ಮತ್ತು ಮುಸಲ್ಮಾನರ ಹಿತ ಇವೆರಡೂ ಪ್ರತ್ಯೇಕ ಆಯಾಮಗಳಾದವು. ಇದಕ್ಕೆ ಪ್ರತಿಕ್ರಿಯೆಯಾಗಿ ಹಿಂದೂಗಳ ಸಾಮಾಜಿಕ ಹಾಗೂ ಸಾಂಸ್ಕೃತಿಕ ಏಳ್ಗೆಗಾಗಿ ಒಂದು ಸಂಘಟನೆಯ ರೂಪದಲ್ಲಿ ಹಿಂದೂ ಮಹಾಸಭೆ ಎದ್ದು ನಿಂತಿತು. ಮುಂದಿನ ದಿನಗಳಲ್ಲಿ ಮುಸಲ್ಮಾನರಿಂದ ದಂಗೆಗಳಾದಾಗ ಮತ್ತು ಅವರ ಏನೇನೋ ಮಹತ್ವಾಕಾಂಕ್ಷೆಗಳು ತಮ್ಮ ಮುಂದೆ ಮಂಡಿತವಾದಾಗ ಕಾಂಗ್ರೆಸ್ ಮೂಕವಾಗಿ ಅದಕ್ಕೆಲ್ಲ ಸೈಗುಟ್ಟುತ್ತಿದ್ದುದರಿಂದ ಒಂದು ಜಾಗೃತ ಹಿಂದೂ ಸಂಘಟನೆಯಾಗಿ ಮಹಾಸಭೆ ಪರಿವರ್ತಿತವಾಯಿತು.

ಕಾಂಗ್ರೆಸ್ ಹಾಡುತ್ತಿದ್ದ ಹಿಂದೂ ಮುಸ್ಲಿಂ ಐಕ್ಯದ್ದೇ ಪಲ್ಲವಿ ಮತ್ತು ಅದರ ಹಿಂದಿರುವ ಕಾಂಗ್ರೆಸ್‌ನ ಶರಣಾಗತಿಯ ಮಾನಸಿಕತೆ ಇವುಗಳನ್ನು ಡಾ.ಹೆಡಗೇವಾರರು ತಪ್ಪೆಂದು ಹೇಳುತ್ತಿದ್ದರು. ಅವರಿಗದು ಒಪ್ಪಿಗೆಯಿರಲಿಲ್ಲ. ಅವರು "ಈ ದೇಶದಲ್ಲಿ ಬೇರೆ ಧರ್ಮಾವಲಂಬಿಗಳಿಲ್ಲವೇನು? ಹಿಂದೂ ಮುಸ್ಲಿಂ ಐಕ್ಯವೊಂದೇ ಏಕೆ? ಎಲ್ಲರ ಐಕ್ಯದ ವಿಚಾರ ಮಾಡುವುದಿಲ್ಲವೇಕೆ? ಮತಗಳು ಬೇರೆಬೇರೆಯಿರಬಹುದು. ಆದರೆ ರಾಷ್ಟ್ರೀಯವಾಗಿ ಯಾರಲ್ಲೂ ಪ್ರತ್ಯೇಕತೆಯಿರಬಾರದು. ಯಾವುದೇ ರಾಷ್ಟ್ರದಲ್ಲಿ ರಾಷ್ಟ್ರೀಯತೆಯೆಂಬುದು ಒಂದೇ. ಅದು ಮಿಶ್ರವಾಗಿರಲು ಸಾಧ್ಯವಿಲ್ಲ" ಎನ್ನುತ್ತಿದ್ದರು ಅವರು. 1935ರ ಡಿಸೆಂಬರ್‌ನಲ್ಲಿ ವರ್ಧಾ ಜಿಲ್ಲೆಯ ಅರ್ವಿಯಲ್ಲಿ ನಡೆದಿದ್ದ ಚಳಿಗಾಲದ ಪ್ರಶಿಕ್ಷಣ ಶಿಬಿರದಲ್ಲಿ ಡಾ. ಹೆಡಗೇವಾರರು ಮಾಡಿದ್ದ ಭಾಷಣದಲ್ಲಿ ಈ ವಿಷಯದ ಮೇಲೆ ಬೆಳಕು ಚೆಲ್ಲುತ್ತ "ಗಾಂಧೀಜಿಯವರು ಹಿಂದೂ ಮುಸ್ಲಿಂ ಏಕತೆಯ ಮಾತನ್ನಾಡುತ್ತಿದ್ದಾರೆ. ನಮಗೆ ಬೇಕಾಗಿರುವುದು ಸಹ ಅದೇ. ಆದರೆ ನಮ್ಮ ಚಿಂತನೆಯ ರೀತಿ ಮಾತ್ರ ಅವರಿಂದ ಭಿನ್ನವಾದುದು. ಗಾಂಧೀಜಿಯವರು 'ಓರ್ವ ಸರ್ವಸಾಮಾನ್ಯ ಮುಸಲ್ಮಾನನು ಗೂಂಡಾ ಮತ್ತು ಸರ್ವಸಾಮಾನ್ಯ ಹಿಂದೂವು ಹೇಡಿ (An average Muslim is a bully and an average Hindu is a coward)' ಎಂದು ಹೇಳುತ್ತಾರೆ. ಅವರು ಮುಸಲ್ಮಾನರ ತುಷ್ಟೀಕರಣದ ನೀತಿಯನ್ನು ಅನುಸರಿಸಿ ಐಕ್ಯ ಉಂಟು ಮಾಡಲು ಅಪೇಕ್ಷಿಸುತ್ತಾರೆ. ನಾನಾದರೋ ಮಹಾಭಾರತದ ಒಂದು ಶ್ಲೋಕವನ್ನು ಹೇಳಲು ಇಚ್ಛಿಸುವೆ.

ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಬಲಮ್ ।
ತಯೋರ್ವಿವಾಹೋ ಮೈತ್ರೀ ಚ ನ ತು ಪುಷ್ಟವಿಪುಷ್ಟಯೋಃ ॥

(ಸಮಾನವಾದ ಶಕ್ತಿ ಮತ್ತು ಸಮಾನವಾದ ಹಣವಿರುವವರ ನಡುವೆ ಮಾತ್ರ ಸ್ನೇಹವಾಗಲಿ, ವಿವಾಹವಾಗಲಿ ಸಾರ್ಥಕವಾಗುತ್ತದೆ. ಪುಷ್ಟರು ಮತ್ತು ದುರ್ಬಲರ ನಡುವೆ ಅಲ್ಲ)"

ಇದನ್ನೇ ಮುಂದುವರಿಸುತ್ತ ಅವರು, "ನನಗನಿಸುವಂತೆ, ಮುಸಲ್ಮಾನರು ತಾವು ಹಿಂದೂಗಳಿಗಿಂತ ಹೆಚ್ಚು ಸಂಘಟಿತರಾಗಿದ್ದೇವೆ ಎಂದು ತಿಳಿಯುತ್ತಾರೆ. ಈ ಭಾವನೆ ಇರುವ ತನಕ ಐಕ್ಯದ ವಿಚಾರ ಅವರಲ್ಲಿ ಬರಲು ಸಾಧ್ಯವಿಲ್ಲ. ಹಿಂದೂಗಳು ಸಹ ಸಂಘಟಿತರಾಗಿದ್ದಾರೆ ಹಾಗೂ ಸ್ವಾತಂತ್ರ್ಯ ಗಳಿಸಲು ಅವರು ಸಮರ್ಥರಿದ್ದಾರೆ ಎಂಬುದನ್ನು ಮುಸಲ್ಮಾನರು ಅರ್ಥಮಾಡಿಕೊಂಡ ದಿನದಿಂದಲೇ ಅವರು ಸ್ವತಃ ಇಲ್ಲಿಯ ರಾಷ್ಟ್ರೀಯ ಪ್ರವಾಹದಲ್ಲಿ ಸಮರಸರಾಗುತ್ತಾರೆ" ಎಂದಿದ್ದರು.[1]

1932ರ ಏಪ್ರಿಲ್ 16ರಂದು ಬ್ರಿಟನ್‌ನ ಪ್ರಧಾನಿ 'ಕಮ್ಯುನಲ್ ಅವಾರ್ಡ್'ನ ಘೋಷಣೆ ಮಾಡಿದಾಗ ಡಾ. ಹೆಡಗೇವಾರರು ಅದನ್ನು ವಿರೋಧಿಸಿದರು. ಅವರು ತಮ್ಮ ಭಾಷಣದಲ್ಲಿ "ಕಮ್ಯುನಲ್ ಅವಾರ್ಡ್‌ನ ರೂಪದಲ್ಲಿ ದೇಶದಲ್ಲಿ ಪ್ರತ್ಯೇಕತಾ-ವಾದದ ವಿಷಬೀಜವನ್ನು ಬಿತ್ತಲಾಗುತ್ತಿದೆ. ಇದೇ ಮುಂದೆ ಕಾಲಕ್ರಮೇಣ ದೇಶದ ವಿಭಜನೆಯ ಫಲ ನೀಡುವಂತಾದೀತು"[2] ಎಂದು ಜನರಿಗೆ ಎಚ್ಚರ ನೀಡುತ್ತಿದ್ದರು. ಹಿಂದೂ ಮುಸ್ಲಿಂ ಸಂಬಂಧಗಳಲ್ಲಿ ರಾಜಕೀಯದ ಬೇಳೆ ಬೇಯಿಸುವಂತಹ ಸಾಮ್ರಾಜ್ಯವಾದಿಗಳ ಪ್ರಯತ್ನಗಳನ್ನು ಅವರು ಕಟುವಾಗಿ ವಿರೋಧಿಸುತ್ತಿದ್ದರು.

ಹಿಂದೆ 'ಸ್ವಾತಂತ್ರ್ಯ'ದ ಸಂಪಾದಕರಾಗಿದ್ದಾಗ ಅವರು ಬರೆದಿದ್ದುದು: "ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯವಾದವನ್ನು ಯುಕ್ತವೆಂದು ಸ್ಥಿರಪಡಿಸಲು ಬಳಸಲಾಗುತ್ತಿದ್ದ ಒಂದು ಸಂಗತಿಯೆಂದರೆ ಹಿಂದೂ-ಮುಸಲ್ಮಾನರ ಮತಭೇದದ್ದು. ತಾವೇನಾದರೂ ಈ ದೇಶ ಬಿಟ್ಟು ಹೋದಲ್ಲಿ ಇಲ್ಲಿ ಹಿಂದೂಗಳು ಮತ್ತು ಮುಸಲ್ಮಾನರು ಪರಸ್ಪರ ಕತ್ತಿ ಮಸೆದು ಜಗಳವಾಡುವರು ಎಂಬುದು ಅವರು ತಮ್ಮ ಇರುವಿಕೆಗೆ ನೀಡುವಂತಹ ಸಮರ್ಥನೆ. ಇದು ಬರಿ ಸುಳ್ಳು. ಈ ಎರಡು ಸಮುದಾಯಗಳು ಪರಸ್ಪರ ಜಗಳವಾಡುತ್ತಿದ್ದುದರಿಂದಾಗಿ ಇಲ್ಲಿ ಬ್ರಿಟಿಷ್ ಸಾಮ್ರಾಜ್ಯ ಬಂತೆಂದೇನಲ್ಲ. ತದ್ವಿರುದ್ಧವಾಗಿ ಅವರು ಇಲ್ಲಿ ಬಂದ ಮೇಲಷ್ಟೇ ಇಲ್ಲಿ ಜಗಳ ಹೆಚ್ಚಿತು. ಅಕಸ್ಮಾತ್ ಇಲ್ಲಿ ಹಿಂದೂಗಳು ಮತ್ತು ಮುಸಲ್ಮಾನರ ನಡುವೆ ಜಗಳ ನಡೆದರೂ ಅದರ ನಡುವೆ ಪ್ರವೇಶಿಸಿ ಹಸ್ತಕ್ಷೇಪ ನಡೆಸಲು ಬ್ರಿಟಿಷರಿಗೆ ಅಧಿಕಾರ ಕೊಟ್ಟವರಾರು? ಯುರೋಪೀಯ ದೇಶಗಳಲ್ಲಿ ಎರಡು ವರ್ಗಗಳ ನಡುವೆ ಜಗಳ ನಡೆದಲ್ಲಿ ಹಸ್ತಕ್ಷೇಪ ನಡೆಸಲು ಅವರು ಹೋಗುವರೇನು? ಹಿಂದೂಗಳು ಮತ್ತು ಮುಸಲ್ಮಾನರು ತಮ್ಮೊಳಗಿನ ಸಮಸ್ಯೆಗಳನ್ನು ತಾವೇ ಸರಿಪಡಿಸಿಕೊಳ್ಳಬಲ್ಲರು. ಈ ಮಾತೃಭೂಮಿಯ ಮಕ್ಕಳಲ್ಲಿ ಹಿಂದೂವು ಎಂದೂ ಭೇದಭಾವವನ್ನು ಮಾಡುವುದಿಲ್ಲ. ಮತ್ತು ಅವನ ದೃಷ್ಟಿಯಲ್ಲಿ ಎಲ್ಲ ಉತ್ತಮ ಮುಸಲ್ಮಾನರೂ ಒಳಗೊಳ್ಳುತ್ತಾರೆ."[3]

ಭಾರತೀಯ ಮುಸಲ್ಮಾನರು ಒಂದು ಜನಾಂಗವಾಗಿ ಹಿಂದೂಗಳಂತೆ ಇಲ್ಲಿನ ಸಂಸ್ಕೃತಿ ಮತ್ತು ನಾಗರಿಕತೆಯ ಅಂಗವಾಗಿರುವವರೇ. ಹೀಗಾಗಿ ಡಾ. ಹೆಡಗೇವಾರರು ಎಲ್ಲ ಭಾರತೀಯರನ್ನೂ ಸಮಾನವಾದ ನಾಗರಿಕತೆ, ಸಂಸ್ಕೃತಿ, ಜನಾಂಗ ಮತ್ತು ಇತಿಹಾಸವುಳ್ಳವರಾಗಿ ಒಂದೇ ರಾಷ್ಟ್ರೀಯತೆಯ ಅಂಗವಾಗಿದ್ದಾರೆ ಎಂಬಂತೆ ತಿಳಿಯುತ್ತಿದ್ದವರು. ಅವರು 'ಹಿಂದೂ ರಾಷ್ಟ್ರ'ದ ಬಗ್ಗೆ ಹೇಳುತ್ತಿದ್ದ ವ್ಯಾಖ್ಯೆಯಲ್ಲಿ ಇರುತ್ತಿದ್ದ ರಾಷ್ಟ್ರೀಯತೆ ಇದು.

---

1. ದತ್ತೋಪಂತ ಠೇಂಗಡಿಯವರ ಜತೆ ನಡೆದ ಸಂವಾದದಿಂದ ಆಧರಿತ, 6.2.2002
2. ಹೊ.ವೆ. ಶೇಷಾದ್ರಿ ದಿ ಟ್ರ್ಯಾಜಿಕ್ ಸ್ಟೋರಿ ಆಫ್ ಪಾರ್ಟಿಶನ್ 1982 ಪು. 104
3. ಸ್ವಾತಂತ್ರ್ಯ, 13 ಮಾರ್ಚ್ 1924

ಸ್ವರಾಜ್ಯವು ಎಲ್ಲ ಜಾತಿ, ಪಂಥಗಳಿಗೆ ಒಂದೇ ರೀತಿಯದಾಗಿರುತ್ತದೆ. ಹೀಗಾಗಿ ಯಾವುದೇ ಧರ್ಮ ಅಥವಾ ಜಾತಿಯವರಿಗೆ ಇದರ ಗಳಿಕೆಗಾಗಿ ವಿಶೇಷವಾದ ಸವಲತ್ತುಗಳನ್ನು ನೀಡುವುದರಿಂದ ರಾಷ್ಟ್ರದ ಹಿತದ ಸಾಧನೆಯಾಗುವುದಿಲ್ಲ. ಯಾವುದೋ ಕ್ಷಣಿಕ ಉದ್ದೇಶಕ್ಕಾಗಿ ರೂಪುಗೊಂಡ ಏಕತೆ ಭಾವನಾತ್ಮಕವಾಗಿ ಒಂದುತನವನ್ನು ಬೆಳಸಲಾರದು.

"ಸ್ವರಾಜ್ಯಕ್ಕಾಗಿ ಹೋರಾಟ ಆರಂಭವಾದಾಗಿನಿಂದ, ಹಿಂದೂಗಳು ಮತ್ತು ಮುಸಲ್ಮಾನರ ನಡುವೆ ಅಂತರ ಹೆಚ್ಚುತ್ತಿದೆ. ಪರಸ್ಪರರಲ್ಲಿ ಏಕತೆ ರೂಪಿಸಲು ನಾಯಕರಾಗಿರುವವರು ಅನೇಕ ರೀತಿಯ ಪ್ರಯೋಗಗಳನ್ನು ಮಾಡಿದ್ದಾರೆ. ಆದರೆ ಅವೆಲ್ಲವೂ ವ್ಯರ್ಥವಾಗಿವೆ. ಆದಕ್ಕಾಗಿ ರಾಜಿ ಒಪ್ಪಂದದಿಂದ ಅವರಲ್ಲಿ ಏಕತೆ ಮೂಡಿಸಬಹುದು ಎಂಬ ನಂಬಿಕೆಯಿಂದ ಅವರು ಹೊಸ ಪ್ರಯತ್ನ ಆರಂಭಿಸಿದರು. 'ಬಂಗಾಲ್ ಪ್ಯಾಕ್ಟ್' ಅದರದ್ದೇ ಪರಿಣಾಮವಾಗಿದೆ. ಈ ಒಪ್ಪಂದವು ಸ್ವರಾಜ್ಯ ಪಕ್ಷಕ್ಕೆ ಬಂಗಾಳ ವಿಧಾನ ಮಂಡಲದಲ್ಲಿ ನೌಕರಶಾಹಿಯ ಜತೆ ಹೋರಾಡುವುದರಲ್ಲಿ ಸಾಕಷ್ಟು ಸಹಕಾರಿಯಾಯಿತು. ಆದರೆ ಈ ಒಪ್ಪಂದದ ಅರ್ಥವೇನು? ಆಂಗ್ಲ ಸರ್ಕಾರದ ವಿರುದ್ಧ ಮುಸಲ್ಮಾನರು ಸಹ ಹೋರಾಡುವಂತೆ ಮಾಡಬೇಕೆಂದಾದಲ್ಲಿ, ಹಿಂದೂಗಳು ಅವರಿಗೆ ಒಂದಿಷ್ಟು ಸವಲತ್ತುಗಳನ್ನು ಕೊಡಬೇಕೆಂಬ ಶರತ್ತುಗಳಿಗೆ ಒಪ್ಪಿಕೊಳ್ಳಬೇಕು ಎಂದಲ್ಲವೇ? ಆದರೆ ಈ ವಿಷಯದಲ್ಲಿ ಇನ್ನಷ್ಟು ಆಳವಾಗಿ ಯೋಚಿಸೋಣ. ಸ್ವರಾಜ್ಯವು ಕೇವಲ ಹಿಂದೂಗಳ ಪಕ್ಷ ಮಾತ್ರವೇನು? ಹಾಗೇನಿಲ್ಲ. ಸ್ವರಾಜ್ಯವು ಈ ದೇಶದಲ್ಲಿರುವ ಎಲ್ಲರಿಗೂ – ಅವರು ಯಾವುದೇ ಜಾತಿ ಅಥವಾ ಪಂಥದವರಿರಲಿ – ಸಂಬಂಧಿಸಿದುದು. ಹಾಗಿದ್ದ ಮೇಲೆ ಸ್ವಾತಂತ್ರ್ಯದ ಹೋರಾಟದಲ್ಲಿ ಮುಸಲ್ಮಾನರೂ ಪಾಲ್ಗೊಳ್ಳುವಂತೆ ಮಾಡಲು ಶರತ್ತುಗಳಿರಬೇಕೇಕೆ? ಸ್ವರಾಜ್ಯದ ಕಲ್ಪನೆಯಲ್ಲಿ ಯಾವುದೇ ಸಮುದಾಯವು ತನಗಾಗಿ ವಿಶೇಷ ಸವಲತ್ತುಗಳ ಬೇಡಿಕೆ ಇಟ್ಟಲ್ಲಿ, ಆಗ ಸ್ವರಾಜ್ಯದ ಕಲ್ಪನೆಯೇ ಸ್ವಯಂ ಅರ್ಥಹೀನವಾಗಿಬಿಡುತ್ತದೆ"[4] ಎನ್ನುತ್ತಿದ್ದರು ಅವರು.

ಡಾ. ಹೆಡಗೇವಾರರು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ, ಮುಸಲ್ಮಾನ ಸಮಸ್ಯೆಗೆ ಮಹತ್ವ ನೀಡದೆ ಅದನ್ನು ಪೂರಾ ಅಲಕ್ಷಿಸಬೇಕು ಎಂಬ ವಿಚಾರವುಳ್ಳವರಾಗಿದ್ದರು: ಆಗಾಗ ಸಂಭವಿಸುವಂತಹ ದಂಗೆಗಳು, ಮಹಿಳೆಯರ ಮೇಲಿನ ದೌರ್ಜನ್ಯ ಇತ್ಯಾದಿ ಸವಾಲುಗಳ ಸಲುವಾಗಿ ಹಿಂದೂಗಳ ಸೇನೆ, ಸುರಕ್ಷಾದಳ ಇತ್ಯಾದಿ ಆರಂಭಿಸುವ ಬದಲಾಗಿ ಹಿಂದೂಗಳು ಅಲ್ಲಲ್ಲಿ ಸಂಘಟಿತರಾಗಿ ಅಂತಹ ಘಟನೆಗಳಾಗದಂತೆ ತಡೆಯಬೇಕೆಂಬುದು ಅವರ ಅಭಿಮತವಾಗಿತ್ತು. ಹಿಂದೂಗಳು ಸಂಘಟಿತರಾದಲ್ಲಿ ಮುಸಲ್ಮಾನರ ಆಕ್ರಮಣಕಾರಿ ಪ್ರವೃತ್ತಿ ತಾನಾಗಿಯೇ ಕೊನೆಗೊಳ್ಳುತ್ತದೆ ಎಂಬುದು ಅವರ ಸ್ಪಷ್ಟ ಅಭಿಪ್ರಾಯವಾಗಿತ್ತು. ಈ ಹಿಂದೂ–ಮುಸ್ಲಿಂ ಸಮಸ್ಯೆ ಎಂಬ ವಿಷಯದಲ್ಲಿ ಗಾಂಧೀಜಿಯವರ, ಡಾ. ಹೆಡಗೇವಾರರ ಮತ್ತು ಡಾ. ಮುಂಜೆ ಯವರ ಚಿಂತನೆಗಳನ್ನು ಮುಂದಿನಂತೆ ನೋಡಬಹುದು.

ಗಾಂಧೀಜಿಯವರು ಮುಸಲ್ಮಾನರ ಪ್ರತ್ಯೇಕತಾವಾದ ಹಾಗೂ ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಭಾಗವಹಿಸುವಿಕೆಯ ವಿಷಯದಲ್ಲಿ [illegible]

4. ಸ್ವಾತಂತ್ರ್ಯ, 30 ಜೂನ್ 1924

ಉದಾರತೆಯನ್ನು ತೋರಿ, ರಾಜಿ ಒಪ್ಪಂದದ ನಡವಳಿಕೆಯ ಮೂಲಕ ಅವರ ಹೃದಯ ಗೆಲ್ಲಬೇಕು ಎಂಬ ವಿಚಾರದವರಾಗಿದ್ದವರು. ಡಾ. ಮುಂಜೆ ಮತ್ತು ಹಿಂದೂ ಮಹಾಸಭಾದ ನಾಯಕರು ಯೋಚಿಸುತ್ತಿದ್ದ ರೀತಿಯಾದರೂ ಹಿಂದೂಗಳ ಬಹುಸಂಖ್ಯಾತವಾದ ಮತ್ತು ಹಿಂದೂ ಉಗ್ರತೆಯ ಮೂಲಕವೇ ಮುಸಲ್ಮಾನರನ್ನು ಸರಿಮಾಡಬೇಕು ಎಂದಾಗಿತ್ತು. ಡಾ. ಹೆಡಗೇವಾರರದು ಇವರಿಬ್ಬರಿಗಿಂತಲೂ ಭಿನ್ನವಾದ ಚಿಂತನೆ. ಈ ಮೂಲಭೂತ ಪ್ರಶ್ನೆಯ ಕುರಿತು ಮೌಲಿಕವಾಗಿ ಯೋಚಿಸುತ್ತ, ಹಿಂದೂಗಳು ತಮ್ಮ ಸಂಘಟಿತ ಶಕ್ತಿ, ತಮ್ಮೊಳಗಿನ ಸಾಮಾಜಿಕ ದೋಷಗಳ ಸರಿಪಡಿಸಿಕೊಳ್ಳುವಿಕೆ ಮತ್ತು ರಾಷ್ಟ್ರೀಯತೆಯ ಬಗ್ಗೆ ತಮ್ಮ ಪೂರಾ ನಿಷ್ಠೆಯ ಮನೋಭಾವ ಇವುಗಳನ್ನು ಸುದೃಢಪಡಿಸಿಕೊಂಡಲ್ಲಿ ಮುಸಲ್ಮಾನರ ಮಾನಸಿಕತೆಯಲ್ಲೂ ಶಾಶ್ವತವಾದ ಪರಿವರ್ತನೆ ತರಲು ಸಾಧ್ಯ ಮತ್ತು ಅದೇ ಏಕಮಾತ್ರ ವಿಧಾನ ಎನ್ನುತ್ತಿದ್ದರು ಅವರು.

## ಗಾಂಧಿವಾದದ ಮರ್ಮ

ಡಾ. ಹೆಡಗೇವಾರರು ಗಾಂಧಿವಾದವನ್ನು ಕೇವಲ ಒಂದು ವಿಚಾರಪ್ರವಾಹವನ್ನಾಗಿ ಕಾಣದೆ, ಅದೊಂದು ಜೀವನಶೈಲಿಯಾಗಿ ತಿಳಿಯುತ್ತಿದ್ದವರು. ಸಾರ್ವಜನಿಕ ಜೀವನದಲ್ಲಿರುವವರು ಅದರ ಪಾವಿತ್ರ್ಯವನ್ನು ಅರಿತುಕೊಂಡು ಸ್ವತಃ ಅನುಸರಿಸಬೇಕಾದುದು ಅಗತ್ಯ ಎಂಬುದು ಅವರ ನಿಲುವಾಗಿತ್ತು. ಆದರೆ ಇಂದು ಯಾವುದೋ ವ್ಯಕ್ತಿಯ ಹೆಸರಲ್ಲಿ ಒಂದು 'ವಾದ'ವನ್ನು ಹುಟ್ಟುಹಾಕಿ, ಆತನ ಅನುಯಾಯಿಗಳೆನಿಸಿಕೊಳ್ಳುವವರು ಆ ವ್ಯಕ್ತಿಯ ಬಾಹ್ಯ ಆಚರಣೆಗಳ 'ಕರ್ಮಕಾಂಡ'ವನ್ನೇ ಸರ್ವಸ್ವವಾಗಿ ತಿಳಿಯುವವರಾಗುತ್ತಾರೆ. ಗಾಂಧೀಜಿಯವರ ಮೂಲ ಆದರ್ಶಗಳನ್ನು ಮೈಗೂಡಿಸುವ ಬದಲು ಕೇವಲ ಬಾಹ್ಯ ಆಚರಣೆಗಳನ್ನು ಗಾಂಧಿವಾದವೆನ್ನುವುದು ಸರಿಯಲ್ಲ ಎಂಬುದು ಡಾ. ಹೆಡಗೇವಾರರ ಅಭಿಮತವಾಗಿತ್ತು. ಅಸಹಕಾರ ಚಳವಳಿಯ ನಂತರ ಸಂಪೂರ್ಣ ದೇಶದಲ್ಲಾದಂತೆ ಮಧ್ಯಪ್ರಾಂತದ ಕಾಂಗ್ರೆಸ್‌ನಲ್ಲೂ ಹತಾಶೆಯ ವಾತಾವರಣ ಕವಿದಿತ್ತು. ಮಧ್ಯಪ್ರಾಂತದಲ್ಲಿನ ತಿಲಕ್‌ವಾದಿಗಳು ಅಸಹಕಾರ ಚಳವಳಿ ಪರವಾಗಿ ಇರಲಿಲ್ಲ. ಡಾ. ಹೆಡಗೇವಾರರು ಒಂದು ವರ್ಷದ ಶಿಕ್ಷೆ ಅನುಭವಿಸಿ ಸೆರೆಮನೆಯಿಂದ ಹೊರಗೆ ಬಂದಾಗ ನಾಗಪುರದಲ್ಲಿ ಚಳವಳಿಯೂ ಸಮಾಪ್ತಗೊಂಡಿತ್ತು. 1922 ಅಕ್ಟೋಬರ್ 2ರಂದು ಮಹಾತ್ಮಾ ಗಾಂಧಿಯವರ ಜನ್ಮದಿನದ ಆಚರಣೆಗಾಗಿ ಸಮಾರಂಭ ಏರ್ಪಡಿಸಲಾಗಿತ್ತು. ಅಂದಿನ ಸಮಾರಂಭದಲ್ಲಿ ಡಾ. ಹೆಡಗೇವಾರರೇ ಅಧ್ಯಕ್ಷರು. ಇದರಿಂದಲೇ ಮಧ್ಯಪ್ರಾಂತದ ಗಾಂಧಿವಾದಿಗಳ ನಡುವೆ ಡಾ. ಹೆಡಗೇವಾರರಿಗೆ ಇದ್ದ ಜನಪ್ರಿಯತೆ ಮತ್ತು ಗೌರವದ ಸ್ಥಾನ ಇವುಗಳನ್ನು ಕಲ್ಪಿಸಲು ಸಾಧ್ಯವಿದೆ. ತಮ್ಮ ಭಾಷಣದಲ್ಲಿ ಅವರು ಹೀಗೆ ಹೇಳಿದರು:

"ಇದೊಂದು ಪವಿತ್ರ ದಿನ. ಮಹಾತ್ಮಾ ಗಾಂಧಿ ಅವರ ಗುಣಗಳನ್ನು ಸ್ಮರಿಸುವ ಹಾಗೂ ಅವುಗಳ ಬಗ್ಗೆ ಮನನಮಾಡುವ ದಿನ ಇದು. ತಮ್ಮನ್ನು ತಾವು ಗಾಂಧಿವಾದಿಗಳೆನಿಸಿಕೊಳ್ಳುವವರಿಗೆ ಈ ದಿನವು ವಿಶೇಷ ಮಹತ್ವವುಳ್ಳದ್ದಾಗಿದೆ."

ಮುಂದೆ ಅವರು ಅತ್ಯಂತ ಸರಳವಾಗಿ, ಆದರೆ ಕಠೋರ ಶಬ್ದಗಳಲ್ಲಿ ಸತ್ಯವನ್ನು ಸಾದರಪಡಿಸಿದರು:

"ಮಹಾತ್ಮಗಾಂಧಿ ಅವರ ಬಹುದೊಡ್ಡ ಗುಣವೆಂದರೆ, ತಾವು ಸ್ವೀಕರಿಸಿದ ಗುರಿಯ ಸಾಧನೆಗಾಗಿ ಮಾಡಿರುವ ಮಹಾತ್ಯಾಗ. ಇಬ್ಬಗೆಯ ವ್ಯಕ್ತಿತ್ವವುಳ್ಳವರನ್ನು

ಗಾಂಧೀಜಿಯವರು ಮೆಚ್ಚುತ್ತಿರಲಿಲ್ಲ. ಮಾತಿನಲ್ಲಿ ತಮ್ಮ ಗುರಿಯ ಬಗ್ಗೆ ನಿಷ್ಠೆಯನ್ನು ಪ್ರಕಟಿಸಿದರೂ ಪ್ರತ್ಯಕ್ಷದಲ್ಲಿ ಅದನ್ನು ಆಚರಣೆಗೆ ತರದವರನ್ನು ಅವರು ಒಪ್ಪುತ್ತಿರಲಿಲ್ಲ. 'ಮಹಾತ್ಮಾ ಗಾಂಧಿ ಕೀ ಜೈ' ಎನ್ನುತ್ತ ತಮ್ಮ ಕೈಗಳನ್ನೆತ್ತುವ ಮೂಲಕ ಅವರ ಕಾರ್ಯಕ್ರಮಗಳ ಸಮರ್ಥನೆಮಾಡುತ್ತಾ, ಪ್ರತ್ಯಕ್ಷ ಬದುಕಿನಲ್ಲಿ ಅವರ ಆದರ್ಶಗಳ ಲೇವಡಿ ಮಾಡುತ್ತ ಐಷಾರಾಮದ ಜೀವನ ನಡೆಸುವವರು ಎಲ್ಲಿಯವರೆಗೆ ಇರುತ್ತಾರೊ, ಅಲ್ಲಿಯವರೆಗೆ ಗಾಂಧಿವಾದವು ಸಫಲವಾಗುವ ಸಂಭವವಿಲ್ಲ."[5]

ಅವರ ಭಾಷಣದ ಮುಂದಿನ ಭಾಗವು ಮಹಾತ್ಮಾಗಾಂಧಿಯವರ 'ಅಹಿಂಸೆ' ಮತ್ತು 'ಶಾಂತಿ'ಯ ಸಂದೇಶಗಳ ವಿವರಣೆಯಾಗಿತ್ತು. ಈ ವಿಚಾರದಲ್ಲಿ ಬೆಳಕು ಚೆಲ್ಲುತ್ತಾ ಅವರು ಹೇಳಿದರು: "ಗಾಂಧೀಜಿ ಅವರ ಅಭಿಪ್ರಾಯದಂತೆ 'ಶಾಂತಿ' 'ಅಹಿಂಸೆ' ಇವುಗಳ ಇಂಗಿತ 'ಅಸಹಾಯಕ'ವಾಗುವುದು ಎಂದಲ್ಲ. ದುರ್ಬಲರಾಗಿರುವವರಿಗೆ ಶಾಂತಿಯ ಕಲ್ಪನೆಯಲ್ಲಿ ಅರ್ಥವೂ ಇಲ್ಲ, ಪ್ರಭಾವವೂ ಇಲ್ಲ. ನಮ್ಮ ವಿರೋಧಿಗಳಾಗಿರುವವರು ಎಷ್ಟು ಬಲಶಾಲಿಗಳಾಗಿರುವವರೋ ನಾವೂ ಅಷ್ಟೇ ಬಲಶಾಲಿಗಳಾಗಿದ್ದಲ್ಲಿ ಮಾತ್ರ ಶಾಂತಿ ಎಂಬ ಶಬ್ದವು ಸಾರ್ಥಕವಾಗುತ್ತದೆ. ನೀವು ನಿಜವಾದ ಅರ್ಥದಲ್ಲಿ ಗಾಂಧೀಜಿಯವರ ಅನುಯಾಯಿಗಳೆನಿಸಬೇಕಾದಲ್ಲಿ ಮೊದಲು ನೀವು ನಿಮ್ಮ ಮನೆ ಪರಿವಾರ ಇತ್ಯಾದಿಗಳನ್ನು ರಾಷ್ಟ್ರಕ್ಕಾಗಿ ತ್ಯಜಿಸಿ ಸಿದ್ಧರಾಗಬೇಕಾಗುತ್ತದೆ."

ರಾಜಕೀಯ ಕಾರ್ಯಕರ್ತನೋರ್ವನಿಗೆ ಆಚಾರ ಮತ್ತು ವಿಚಾರಗಳು ಒಂದೇ ರೀತಿಯಾಗಿರಬೇಕಾದುದು ಅತ್ಯಗತ್ಯ. ಡಾ. ಹೆಡಗೇವಾರರು ದ್ವಂದ್ವ ವ್ಯಕ್ತಿತ್ವವುಳ್ಳ ನಾಯಕರನ್ನು ಮೆಚ್ಚುತ್ತಿರಲಿಲ್ಲ. ಅಂತಹವರು ಕೆಲವೊಮ್ಮೆ ಸಾರ್ವಜನಿಕವಾಗಿ ನಾಚಿಕೆಯಿಂದ ತಲೆತಗ್ಗಿಸುವಂತೆಯೂ ಮಾಡುತ್ತಿದ್ದರು. ಅಂತಹದೊಂದು ಪ್ರಸಂಗ. 1927ರ ಜನವರಿ 15ರಂದು ನಡೆದುದು ಅದು. ನಾಗಪುರದ ಪುರಭವನದಲ್ಲಿ ಅಂದು ಮಧ್ಯಪ್ರಾಂತ ಕಾಂಗ್ರೆಸ್ ವಿಧಾನಮಂಡಲ ಪಕ್ಷದ ವತಿಯಿಂದ ಏರ್ಪಾಡಾಗಿದ್ದ ಸಭೆ. ಈ ಸಭೆಗೆ ಅಧ್ಯಕ್ಷರಾಗಿದ್ದವರು ಮೋರೊ ಪಂತ ಅಭ್ಯಂಕರ ಅವರು. ಪ್ರಾಂತೀಯ ಕಾಂಗ್ರೆಸ್‌ನ ಓರ್ವ ಪ್ರಮುಖ ನಾಯಕರು ಮತ್ತು ಪ್ರಾಂತದ ಸರ್ಕಾರದ ಓರ್ವ ಮಂತ್ರಿಯೂ ಆಗಿದ್ದ ನಾರಾಯಣ ರಾವ್ ಕೇಳ್ಕರ್ ಅವರು ವೇದಿಕೆಯಲ್ಲಿದ್ದರು. ಅವರು ಭಾಷಣಕ್ಕಾಗಿ ಎದ್ದು ನಿಂತಂತೆಯೇ ಡಾ. ಹೆಡಗೇವಾರರು ಅವರನ್ನು ಪ್ರಶ್ನಿಸಿದರು: 'ನೀವು ಕಾಂಗ್ರೆಸ್ಸಿನ ಕಾರ್ಯಕರ್ತರೇನು? ಆದರೆ ನಿಮ್ಮ ತಲೆಯ ಮೇಲೆ ಗಾಂಧಿ ಟೋಪಿಯ ಬದಲಿಗೆ ವಿದೇಶಿ ಟೋಪಿ ಇದೆಯಲ್ಲ?"[6]

ಅಂದಿನ ರಾಜಕೀಯ ಸನ್ನಿವೇಶದಲ್ಲಿ ಗಾಂಧಿ ಟೋಪಿ ಭಾರತೀಯ ರಾಷ್ಟ್ರವಾದವನ್ನು ಪ್ರತಿಬಿಂಬಿಸುವಂತಹ ಒಂದು ಸಂಕೇತವಾಗಿತ್ತು. ಸರ್ಕಾರಿ ನೌಕರರು ಇದನ್ನು ಧರಿಸುವಂತಿರಲಿಲ್ಲ. 'ಮಹಾರಾಷ್ಟ್ರ' ಪತ್ರಿಕೆಯು ಈ ವಿಷಯದಲ್ಲಿ, "1906–07ರಲ್ಲಿ 'ವಂದೇ ಮಾತರಂ' ಘೋಷಣೆ ಕೇಳಿದ ಮಾತ್ರದಿಂದಲೇ ಬ್ರಿಟಿಷ್ ಅಧಿಕಾರಿಗಳು ಕೋಪದಿಂದ ಕೆರಳುತ್ತಿದ್ದರು. ಈಗ ಅವರು ಗಾಂಧಿ ಟೋಪಿ

---

5. ಮಹಾರಾಷ್ಟ್ರ, 3, ನವೆಂಬರ್ 1922
6. ಹಿತವಾದ, 16 ಜನವರಿ 1927

ಕಂಡಾಗ ಕಿಡಿಕಿಡಿಯಾಗುತ್ತಾರೆ. ನ್ಯಾಯಾಧೀಶರು ಗಾಂಧಿಟೋಪಿಯನ್ನು ನಿಕೃಷ್ಟವಾಗಿ ಕಾಣುತ್ತಾರೆ" ಎಂದು ಬರೆದಿತ್ತು. ಡಾ. ಹೆಡಗೇವಾರರು ಈ ರೀತಿಯ ರಾಜಕಾರಣಿಗಳ ಬಗ್ಗೆ ಒಳಗೊಂದು ಹೊರಗೊಂದು ಇರುವವರ ಬಗ್ಗೆ ತಮ್ಮ ಅಸಮಾಧಾನವನ್ನು ತೋರ್ಪಡಿಸಿದ್ದರು.

## ಖಾದಿಯ ಬಳಕೆ

ಖಾದಿಯ ಬಳಕೆಯು ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮದ ಒಂದು ಅಭಿನ್ನ ಅಂಗವೇ ಆಗಿತ್ತು. ಡಾ. ಹೆಡಗೇವಾರರು ಅಸಹಕಾರ ಆಂದೋಳನದ ಕಾಲದಿಂದಲೂ ಖಾದಿ ವಸ್ತ್ರವನ್ನೇ ಬಳಸುತ್ತಿದ್ದರು. ಅವರು ಸೆರೆಮನೆಯಿಂದ ಬಿಡುಗಡೆಹೊಂದಿ ಬಂದಾಗ, ಅವರ ಗೌರವಾರ್ಥ ಏರ್ಪಡಿಸಲಾಗಿದ್ದ ಸಮಾರಂಭದಲ್ಲಿ ಅವರಿಗೆ ಖಾದಿಯ ಬಟ್ಟೆ ಮತ್ತು ಚರಕವನ್ನೇ ಉಡುಗೊರೆಯಾಗಿ ಕೊಡಲಾಗಿತ್ತು. ಕಾಟೋಲ, ವಾಲಿ, ಚಂದಾ ಮತ್ತು ಇನ್ನಿತರ ಕಡೆಗಳಲ್ಲಿನ ಸಭೆಗಳಲ್ಲೂ ಅವರು ಖಾದಿಯ ಬಳಕೆಯ ವಿಷಯಕ್ಕೆ ಒತ್ತು ನೀಡಿದ್ದರು.[7] "ಖಾದಿಯು ರಾಷ್ಟ್ರೀಯ ಸ್ವಂತಿಕೆಯ ಸಂಕೇತವಂತೂ ಆಗಿಯೇ ಇದೆ. ಜತೆಯಲ್ಲಿ ಇದು ಸಾವಿರಾರು ಜನರಿಗೆ ಉದ್ಯೋಗ ನೀಡುವಂತಹದೂ ಆಗಿದೆ" ಎಂದು ತಮ್ಮ ಭಾಷಣದಲ್ಲಿ ಅವರು ಹೇಳುತ್ತಿದ್ದರು.

ಅವರ ಒತ್ತಾಯದ ಪರಿಣಾಮವಾಗಿಯೇ ನಾಗಪುರ ಕಾಂಗ್ರೆಸ್ ಸಮಿತಿಯು ಖಾದಿಯ ಪ್ರಚಾರಕ್ಕಾಗಿ ಪ್ರತ್ಯೇಕವಾಗಿ ಧನವನ್ನು ನೀಡಿತ್ತು. ಈ ಪ್ರಸಂಗದ ಬಗ್ಗೆ ತನ್ನ ಟಿಪ್ಪಣಿಯಲ್ಲಿ 'ಯಂಗ್ ಪೇಟ್ರಿಯಾಟ್' ಪತ್ರಿಕೆಯು "ಗಾಂಧೀಜಿಯವರು ಖಾದಿ ಮತ್ತು ಚರಕ ಇವುಗಳ ಪ್ರಚಾರಕ್ಕಾಗಿ ತಮ್ಮೆಲ್ಲ ಲಕ್ಷ್ಯ ಹರಿಸಿದ್ದಾರೆ.... ಕಾಂಗ್ರೆಸ್‌ನಲ್ಲಿರುವ ಹೆಚ್ಚಿನವರು ಖಾದಿ ಮತ್ತು ಚರಕದ ಬಳಕೆಯನ್ನಂತೂ ಮಾಡುವುದಿಲ್ಲ. ನಾಗಪುರ ಕಾಂಗ್ರೆಸ್ ಸಮಿತಿಯು ಸಹ ತನ್ನ ಓರ್ವ ಕಾರ್ಯದರ್ಶಿಯು ರಾಜೀನಾಮೆ ನೀಡುವುದಾಗಿ ಬೆದರಿಕೆಯೊಡ್ಡಿದ ಮೇಲಷ್ಟೇ ಅದರ ಪ್ರಚಾರಕ್ಕಾಗಿ ಒಂದಿಷ್ಟು ಹಣವನ್ನು ಕೊಡುಗೆಯಾಗಿ ನೀಡಿದೆ" ಎಂದು ಹೇಳಿತ್ತು.

1934ರ ಫೆಬ್ರವರಿಯಲ್ಲಿ ಸ್ವದೇಶಿ ವಸ್ತುಗಳ ಬಳಕೆಯ ಬಗ್ಗೆ ಯೋಚಿಸುವ ಸಲುವಾಗಿ ಡಾ. ಹೆಡಗೇವಾರರು ಕೆಲವು ಪ್ರಮುಖ ಸ್ವಯಂಸೇವಕರ ಮೂರು ದಿನಗಳ ಬೈಠಕ್ ಒಂದನ್ನು ಏರ್ಪಡಿಸಿದ್ದರು. ಅದರಲ್ಲಿ ಅವರು ಸ್ವಯಂಸೇವಕರಿಗೆ ಹೇಳಿದುದು: "ನಾವು ಸಾಧ್ಯವಾದಷ್ಟೂ ಖಾದಿ ಬಟ್ಟೆಯನ್ನೇ ಧರಿಸಬೇಕು. ಆದರೆ ನಮ್ಮ ಅಗತ್ಯವೆಲ್ಲವನ್ನೂ ಪೂರೈಸುವಷ್ಟು ಪ್ರಮಾಣದಲ್ಲಿ ನೂಲು ತಯಾರಿಸಲು ಸಾಧ್ಯವಿಲ್ಲವೆಂಬುದು ನಿಜವೇ. ಅದಕ್ಕಾಗಿ ದೇಶಭಕ್ತರಾಗಿರುವವರು ಕನಿಷ್ಠ ಪಕ್ಷ ಸ್ವದೇಶಿ ಗಿರಣಿ ಮತ್ತು ನಮ್ಮ ನೇಕಾರರಿಂದ ತಯಾರಾದ ಬಟ್ಟೆಯನ್ನೇ ಬಳಸಬೇಕು. ಸ್ವದೇಶಿ ವಸ್ತುಗಳ ಬಳಕೆಯ ಪ್ರಸಂಗದಲ್ಲಿ ನಮ್ಮ ಸ್ವದೇಶಿ ಟೋಪಿಯ ಕೆಳಗಡೆ ಇರುವ ಮಸ್ತಿಷ್ಕವೂ ಸ್ವದೇಶಿಯೇ ಆಗಿರುವಂತೆ ಸಹ ನಮ್ಮ ಲಕ್ಷ್ಯವಿರಲಿ."

---

7. ಮಹಾರಾಷ್ಟ್ರ, 19 ಜುಲೈ ಪು. 11

ಮೂರು ದಿನಗಳ ಕಾಲ ಸಾಕಷ್ಟು ವಿಚಾರ ವಿನಿಮಯ ನಡೆದ ನಂತರ ಅಂದಿನ ಬದಲಾದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಸ್ವದೇಶಿ ವಿಷಯದಲ್ಲಿ, ಸಂಘವು ತನ್ನ ನೀತಿಯನ್ನು ನಿರ್ಧರಿಸಿತು. ಡಾ. ಹೆಡಗೇವಾರರು ಖಾದಿಯನ್ನು 'ಸ್ವದೇಶಿ ಮತ್ತು ಸ್ವರಾಜ್ಯ ಸಂಕೇತ'ವೆಂದು ಘೋಷಿಸಿದರು. ಅವರ ಈ ಘೋಷಣೆ ಸ್ವಯಂಸೇವಕರ ಪಾಲಿಗೆ ಮಂತ್ರದೀಕ್ಷೆಯೇ ಆಯಿತು. ಸ್ವದೇಶಿಯ ಪ್ರಚಾರದ ಅಭಿಯಾನವನ್ನು ಪ್ರಾಂತದಾದ್ಯಂತ ವ್ಯಾಪಕವಾಗಿ ನಡೆಸುವ ಸಲುವಾಗಿ ಅವರು ಸಂಘದ ನಿರ್ಣಯವನ್ನು ಎಲ್ಲರಿಗೂ ತಿಳಿಸಿ, ಆದೇಶ ರೂಪದಲ್ಲಿ "ದೇಶಭಕ್ತರಾಗಿರುವರಿಗೆ ಖಾದಿಯ ಬಳಕೆಯನ್ನು ಕಡ್ಡಾಯಗೊಳಿಸುವ ಅಗತ್ಯವೇನಿಲ್ಲ. ತಮ್ಮ ಸ್ವಂತದ ಅಗತ್ಯಗಳಿಗಾಗಿ ಸ್ವದೇಶಿ ವಸ್ತುಗಳನ್ನೇ ಅವರು ಹೆಚ್ಚು ಹೆಚ್ಚಾಗಿ ಬಳಸುವಂತೆ ಮನಸ್ಸನ್ನು ಸಜ್ಜುಗೊಳಿಸಬೇಕು. ಎಲ್ಲರ ಅಗತ್ಯಗಳನ್ನು ಪೂರೈಸುವಷ್ಟು ಪ್ರಮಾಣದಲ್ಲಿ ಈಗ ದೇಶದಲ್ಲಿ ಖಾದಿಯ ಉತ್ಪಾದನೆಯಾಗುತ್ತಿಲ್ಲ. ಆದಕ್ಕಾಗಿ ಭಾರತದ ಗಿರಣಿಗಳಲ್ಲಿ ತಯಾರಾಗುವ ಅಥವಾ ನಮ್ಮ ನೇಕಾರರು ನೇಯ್ದಿರುವ ಬಟ್ಟೆಯನ್ನು ಬಳಸುವುದನ್ನು ಸಹ ಸ್ವದೇಶಿ ಅಭಿಯಾನದ ಒಂದು ಭಾಗವನ್ನಾಗಿ ಮಾಡಿಕೊಳ್ಳಬೇಕು" ಎಂದು ಹೇಳಿದ್ದರು.

ಮಹಾತ್ಮಾ ಗಾಂಧೀಜಿಯವರ ಈ ರಚನಾತ್ಮಕ ಕಾರ್ಯಕ್ರಮವನ್ನು ಯಾವುದೇ ವ್ಯಕ್ತಿಯ ಅಥವಾ ಯಾವುದೇ ಸಂಘಟನೆಯ ಕಾರ್ಯಕ್ರಮವನ್ನಾಗಿ ಭಾವಿಸದೇ ಸಂಪೂರ್ಣ ದೇಶದ್ದೇ ಕಾರ್ಯಕ್ರಮ ಇದು ಎಂಬುದು ಸಂಘದ ನಿಲುವಾಯಿತು. ಸಂಘವು ತಾನಾಗಿಯೇ ಈ ಅಭಿಯಾನದಲ್ಲಿ ತೊಡಗಿದುದರಿಂದಾಗಿ, ಕಾನೂನು ಭಂಗ ಚಳವಳಿಯ ನಂತರ ಪ್ರಾಂತದ ಸಾಮಾಜಿಕ ಹಾಗೂ ರಾಜಕೀಯ ಜೀವನದಲ್ಲಿ ಕವಿದಿದ್ದ ಜಡತೆ ಕೊನೆಗೊಂಡಿತು. ಪ್ರಾಂತದಲ್ಲಿ ಪುನಃ ಚೇತರಿಕೆ ಕಾಣಿಸಲಾರಂಭಿಸಿತು. ಸ್ವದೇಶಿ ಅಭಿಯಾನಕ್ಕೆ ಸಂಬಂಧಿಸಿದ ಗುಪ್ತಚರ ವಿಭಾಗದ ಪಾಕ್ಷಿಕ ವರದಿಯಲ್ಲಿ 'ಆರ್. ಎಸ್.ಎಸ್. ಈಗ ಖಾದಿಯ ಮಾರಾಟ ಹಾಗೂ ವಿದೇಶಿ ವಸ್ತುಗಳ ಬಹಿಷ್ಕಾರದಲ್ಲಿ ಕ್ರಿಯಾಶೀಲವಾಗಿದೆ" ಎಂದು ತಿಳಿಸಲಾಗಿತ್ತು. ಈ ಕಾರಣಕ್ಕಾಗಿ ಸಂಘದ ಅನೇಕ ಕಾರ್ಯಕರ್ತರ ಬಂಧನವೂ ಆಗಿತ್ತು.

## ಹರಿಜನ ಯಾತ್ರೆ ಮತ್ತು ಸಂಘ

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗಾಂಧೀಜಿಯವರು ಇತರ ಸಾಮಾಜಿಕ ಸವಾಲುಗಳನ್ನು ಸಹ ಅಲಕ್ಷಿಸಿರಲಿಲ್ಲ. ಆದಕ್ಕಾಗಿಯೇ ಅವರು ಅಸ್ಪೃಶ್ಯ ಭೇದದ ನಿವಾರಣೆಯನ್ನು ಕಾಂಗ್ರೆಸ್‌ನ ಕಾರ್ಯಕ್ರಮದ ಒಂದು ಭಾಗವಾಗಿ ಮಾಡಿಕೊಂಡಿದ್ದರು. ಕಾನೂನು ಭಂಗ ಚಳವಳಿಯ ನಂತರವಂತೂ ಅವರು ಈ ಉದ್ದೇಶವಿರಿಸಿಕೊಂಡೇ ವಿವಿಧ ಪ್ರಾಂತಗಳಲ್ಲಿ ಪ್ರವಾಸವನ್ನೂ ಕೈಗೊಂಡರು. ಸುಮಾರು ಒಂದು ವರ್ಷ ಪೂರ್ತಿ ಅವರ ಲಕ್ಷ್ಯವೆಲ್ಲ ಕೇವಲ ಅಸ್ಪೃಶ್ಯ ಭಾವನೆಯ ನಿವಾರಣೆಯ ವಿಷಯದಲ್ಲೇ ಕೇಂದ್ರೀಕೃತವಾಗಿತ್ತು. 1933ರ ನವೆಂಬರ್ 17ರಂದು ವರ್ಧಾದ ಶ್ರೀರಾಮ ಮಂದಿರದಲ್ಲಿ ದೇವರ ದರ್ಶನದಿಂದ ಆರಂಭವಾದ ಅವರ ಈ ಅಭಿಯಾನವು 1934ರ ಆಗಸ್ಟ್‌ನಲ್ಲಿ ಕೊನೆಗೊಂಡಿತು. ಈ ಸಲುವಾಗಿ ಅವರು ದೇಶದಲ್ಲಿ 12,500 ಮೈಲುಗಳ ಯಾತ್ರೆ ಕೈಗೊಂಡು, ಇದರ ಉದ್ದೇಶಕ್ಕಾಗಿ ಜನರಿಂದ ಎಂಟು ಲಕ್ಷ ರೂಪಾಯಿಗಳ ದೇಣಿಗೆಯನ್ನೂ ಸಂಗ್ರಹಿಸಿದರು. ಅವರ ಈ ಅಭಿಯಾನವು 'ಹರಿಜನ ಯಾತ್ರೆ' ಎಂಬ ಹೆಸರಲ್ಲಿ ಖ್ಯಾತಿ ಪಡೆಯಿತು.

ಹರಿಜನ ಯಾತ್ರೆಯನ್ನೇನ್ನೋ ಕಾಂಗ್ರೆಸ್ ತನ್ನದನ್ನಾಗಿ ಸ್ವೀಕರಿಸಿತು. ಆದರೆ ಅದರ ಸಂಘಟನೆಯ ಸಂಬಂಧದಲ್ಲಿ ವಿಶೇಷ ಉತ್ಸಾಹವನ್ನೇನೂ ತೋರಲಿಲ್ಲ. ಕಾಂಗ್ರೆಸ್‌ನ ಎಲ್ಲ ಹಿರಿಯ ನಾಯಕರು ಇದರಲ್ಲಿ ಸಾಂಕೇತಿಕವಾಗಿ ಮಾತ್ರ ತಮ್ಮನ್ನು ತೊಡಗಿಸಿ-ಕೊಂಡಿದ್ದರು. ಹರಿಜನ ಯಾತ್ರೆ ಕೈಗೊಳ್ಳುವ ಮೊದಲೇ ಗಾಂಧೀಜಿಯವರಿಗೂ ಈ ವಾಸ್ತವಿಕತೆಯ ಅರಿವಾಗಿತ್ತು. ಕಾಂಗ್ರೆಸ್‌ನ ಕಾರ್ಯಕರ್ತರಿಗೆ ಅವರ ಅಂತಃಕರಣಗಳಲ್ಲಿ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಒಲವೇನೂ ಇಲ್ಲ ಎಂಬುದನ್ನು ಅವರು ಗುರುತಿಸಿದ್ದರು. "ಇದಕ್ಕಾಗಿ ಸಂಪೂರ್ಣವಾಗಿ ಕಾಂಗ್ರೆಸ್ಸನ್ನೇ ಅವಲಂಬಿಸಿದಲ್ಲಿ ಹಿಂದೂ ಧರ್ಮದಲ್ಲಿ ಭಾರೀ ಬದಲಾವಣೆಯೇನೂ ಆಗದು. "ಭಾರತೀಯರೆಲ್ಲರೂ ಕಾಂಗ್ರೆಸ್ಸಿಗರಲ್ಲ ಹಾಗೂ ಎಲ್ಲ ಹಿಂದೂಗಳು ಕಾಂಗ್ರೆಸ್‌ನ ಸದಸ್ಯರೂ ಅಲ್ಲ ಎಂಬುದು ನನಗೆ ಗೊತ್ತು" ಎಂದು ಅವರು ಬರೆದಿದ್ದರು. ಅವರ ಹರಿಜನ ಯಾತ್ರೆಯು ಹಿಂದೂ ಸಮಾಜದಲ್ಲಿ ತಾತ್ವಿಕ ಹಾಗೂ ವ್ಯಾವಹಾರಿಕ ಮಟ್ಟದಲ್ಲಿ ಒಂದು ಮಹತ್ವದ ವಿಷಯವಾಯಿತು. ವಿವಿಧ ಸಂಘಟನೆಗಳು ತಂತಮ್ಮ ಸಾಮಾಜಿಕ ನಿಲುವು ಮತ್ತು ಕಲ್ಪನೆಗನುಗುಣವಾಗಿ ಈ ವಿಷಯವನ್ನು ಸಮರ್ಥಿಸಿದವು ಅಥವಾ ವಿರೋಧಿಸಿದವು. ಡಾ. ಭೀಮರಾವ್ ಅಂಬೇಡ್ಕರ್‌ರವರು ಇದನ್ನು ಕೇವಲ ತೋರಿಕೆಯ ಹಾಗೂ ಮೇಲುಮೇಲಿನ ಬೂಟಾಟಿಕೆಯ ಕಾರ್ಯಕ್ರಮ ಮಾತ್ರವಾಗಿ ತಿಳಿಯುತ್ತಿದ್ದರು. ಅವರ ಅನುಯಾಯಿಗಳು ಇದನ್ನು ತೀವ್ರವಾಗಿ ವಿರೋಧಿಸುತ್ತಿದ್ದರು. ಇನ್ನೊಂದು ದಿಕ್ಕಿನಲ್ಲಿ ಹಿಂದೂ ಸಮಾಜದಲ್ಲಿನ ಸನಾತನಿಗಳು ಇದನ್ನು 'ಧರ್ಮದ' ಮೇಲೆ ಆಕ್ರಮಣವೆಂದೇ ಹೇಳುತ್ತಿದ್ದರು. ಅಂತಹವರು ಗಾಂಧೀಜಿಯವರಿಗೆ ಹಲವಾರು ಕಡೆಗಳಲ್ಲಿ ಕಪ್ಪು – ಬಾವುಟ ತೋರಿಸಿ ಪ್ರತಿಭಟಿಸಿದ್ದೂ ಉಂಟು. ಇನ್ನೂ ದುರ್ದೈವವೆಂದರೆ ಹಿಂದೂ ಮಹಾ ಸಭೆಯ ಕೆಲವು ಪ್ರಮುಖರು ಈ ಯಾತ್ರೆಯ ವಿಷಯದಲ್ಲಿ ತಮ್ಮ ಆಕ್ಷೇಪವನ್ನು ಸಾರ್ವಜನಿಕವಾಗಿ ವ್ಯಕ್ತಪಡಿಸಿದ್ದುದು. ಅಂತಹವರಲ್ಲಿ ಭಾಯಿ ಪರಮಾನಂದರೂ ಒಬ್ಬರು.

ಈ ಹರಿಜನ ಯಾತ್ರೆಯ ಸಾಮಾಜಿಕ ಮಹತ್ವವನ್ನು ಗುರುತಿಸಿದ್ದ ಡಾ.ಹೆಡಗೇವಾರರು "ಸಾಮಾಜಿಕ ಸಮರಸತೆಗಾಗಿ ಮಾಡಲಾಗುವ ಪ್ರತಿಯೊಂದು ಕೆಲಸವೂ ಹಿಂದೂ ಸಮಾಜವನ್ನು ಬಲಶಾಲಿಗೊಳಿಸುವ ನಿಟ್ಟಿನಲ್ಲಿ ಒಂದು ಹೆಜ್ಜೆಯಾಗುವುದು. ಅಂತಹ ಎಲ್ಲ ಕೆಲಸಗಳಲ್ಲಿ ಸಾಧ್ಯವಾದಷ್ಟು ಸಹಕರಿಸಬೇಕಾದುದು ಅತ್ಯಗತ್ಯ" ಎಂದಿದ್ದರು. ಉಳಿದ ಸಮಾಜದೊಂದಿಗೆ ಹರಿಜನರನ್ನು ಒಂದುಗೂಡಿಸುವುದನ್ನು 'ಒಂದು ಪವಿತ್ರ ರಾಷ್ಟ್ರೀಯ ಕಾರ್ಯ'ವೆಂದು ತಿಳಿಯುತ್ತಿದ್ದ ಅವರು, 'ಇದು ಪ್ರತಿಯೊಬ್ಬ ಹಿಂದೂವಿನ ನೈತಿಕ ಹಾಗೂ ಪವಿತ್ರವಾದ ಹೊಣೆ'ಯೂ ಆಗಿದೆ ಎಂದು ಹೇಳುತ್ತಿದ್ದರು. ಸಂಘದ ವತಿಯಿಂದ 'ಕಮ್ಯುನಲ್ ಅವಾರ್ಡ್'ನ ವಿರುದ್ಧವಾಗಿ ಹಾಗೂ 'ಸಂಯುಕ್ತ ಮತದಾರ ಕ್ಷೇತ್ರ'ದ ಪರವಾಗಿ ಸಾರ್ವಜನಿಕ ಸಭೆಗಳು ಏರ್ಪಾಡಾಗಿದ್ದ ಒಂದು ಸಂದರ್ಭ. 'ಕಮ್ಯುನಲ್ ಅವಾರ್ಡ್' ವಿರುದ್ಧ ಜನಜಾಗೃತಿಗಾಗಿ ಡಾ. ಹೆಡಗೇವಾರರು ಹಿಂದೂ ಮಹಾಸಭೆಯ ನಾಯಕರನ್ನೂ ಒಳಪಡಿಸಿಕೊಂಡಿದ್ದರು. ಅವರಲ್ಲೊಬ್ಬರಾದ ಭಾಯಿ ಪರಮಾನಂದರು ಗಾಂಧೀಜಿಯವರ ವಿಚಾರಗಳೊಂದಿಗೆ ಸಂಪೂರ್ಣ ಭಿನ್ನಾಭಿಪ್ರಾಯವುಳ್ಳವರಾಗಿದ್ದ ಕಾರಣದಿಂದಾಗಿ, ಒಂದು ಸಾರ್ವಜನಿಕ ಸಭೆಯಲ್ಲಿ ಅವರು ಹರಿಜನ ಯಾತ್ರೆಯನ್ನು ವಿರೋಧಿಸಿ ಮಾತಾಡಿದರು. ಇದು ಡಾ. ಹೆಡಗೇವಾರರ ಮತ್ತು ಸಂಘದ ಅಭಿಪ್ರಾಯವೂ ಆಗಿದೆ ಎಂದು ಗುಪ್ತಚರ ವಿಭಾಗದ ಪಾಕ್ಷಿಕ ವರದಿಯು ತಿಳಿಸಿತು. ಕಾರಣವೆಂದರೆ ಈ ಸಭೆಯನ್ನು ಏರ್ಪಡಿಸಿದ್ದವರು ಡಾ. ಹೆಡಗೇವಾರರು. ಆದರೆ ಇದು ತಪ್ಪೆಂದು

ಈ ಮುಂದಿನ ಸಂಗತಿಗಳಿಂದ ತಿಳಿಯಬಹುದು. ಹರಿಜನ ಯಾತ್ರೆಗಿಂತ ಮೊದಲ ಪೂರ್ವಸಿದ್ಧತೆಗಾಗಿ 1933ರ ನವೆಂಬರ್ 5 ರಂದು ನಾಗಪುರದಲ್ಲಿ ಒಂದು ಸಭೆ ಸೇರಿತ್ತು. ಈ ಯಾತ್ರೆಗಾಗಿ ಐದು ಜನರ ಸ್ವಾಗತ ಸಮಿತಿಯೊಂದನ್ನು ರಚಿಸಲಾಗಿತ್ತು; ಅದರಲ್ಲಿ ಸಂಘದ ಕೇಂದ್ರೀಯ ಅಧಿಕಾರಿಗಳಲ್ಲೊಬ್ಬರಾದ ಮಾರ್ತಾಂಡ ರಾವ್ ಜೋಗ್ ಸಹ ಒಬ್ಬರಾಗಿದ್ದರು. ಜೋಗ್ ಅವರು ಸ್ವಯಂಸೇವಕರಿಗೆ ಶಸ್ತ್ರಗಳ ಮತ್ತು ಶಾರೀರಿಕ ಪ್ರಶಿಕ್ಷಣ ನೀಡುವಂತಹ 'ಸೇನಾಪತಿ'ಯ ಹೊಣೆ ನಿರ್ವಹಿಸಿದ್ದವರು. ಸ್ವಾಗತ ಸಮಿತಿಯ ಸದಸ್ಯರಾಗಿದ್ದ ಕಾರಣದಿಂದಾಗಿ ಯಾತ್ರೆಯ ಸಂದರ್ಭದಲ್ಲಿ ಸಭೆಯ ಪ್ರಚಾರಕ್ಕಾಗಿ ಮತ್ತು ಸಭೆಯು ಸುಸೂತ್ರವಾಗಿ ನಡೆದುಕೊಂಡು ಹೋಗುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನೂ ಅವರಿಗೆ ವಹಿಸಲಾಗಿತ್ತು. ನಾಗಪುರದ ಸಭೆಯಲ್ಲಿ ಸ್ವಯಂಸೇವಕರು ಬ್ಯಾಂಡ್ ಸಹಿತ ಗಾಂಧೀಜಿ ಅವರಿಗೆ ಪ್ರಣಾಮ ಸಲ್ಲಿಸಿದ್ದರು. ಜೋಗ್ ಅವರಲ್ಲದೆ ಸಂಘದ ಇನ್ನೊರ್ವ ಪ್ರಮುಖ ಕಾರ್ಯಕರ್ತ ಹಾಗೂ 'ಮಹಾರಾಷ್ಟ್ರ' ಪತ್ರಿಕೆಯ ಸಂಪಾದಕ ಓಗ್ಲೆಯವರು ಗಾಂಧೀಜಿಯವರಿಗೆ ಹೂ ಹಾರ ಹಾಕಿ ಸ್ವಾಗತಿಸಿದರು. ನಾಗಪುರದ ಸಭೆಯು, ಅದರಲ್ಲಿ ಪಾಲ್ಗೊಂಡಿದ್ದ ಜನತೆ, ಅಲ್ಲಿ ಕಂಡು ಬಂದಿದ್ದ ಶಿಸ್ತು ಮತ್ತು ಇನ್ನಿತರ ವ್ಯವಸ್ಥೆಗಳ ದೃಷ್ಟಿಯಿಂದ ಅತ್ಯಂತ ಯಶಸ್ವಿಯಾಗಿತ್ತು.

ಮಧ್ಯಪ್ರಾಂತದಲ್ಲಿ ಸಂಘದ ಪ್ರಭಾವವಿರುವಲ್ಲೆಲ್ಲ ಗಾಂಧೀಜಿಯವರ ಯಾತ್ರೆಯಲ್ಲಿ ಸ್ವಯಂಸೇವಕರು ಸಹಕರಿಸಿದರು. ಗೋಂದಿಯಾಗೆ ಯಾತ್ರೆ ಬಂದಾಗ 'ಸಂಘದ ಬ್ಯಾಂಡ್ ಸಹಿತ ಸ್ವಯಂಸೇವಕರು ತಮ್ಮ ಪದ್ಧತಿಯಂತೆ ಗಾಂಧೀಜಿಯವರಿಗೆ ಪ್ರಣಾಮ ಸಲ್ಲಿಸಿದರು.'[8] ಗೋಂದಿಯಾದಲ್ಲಿ ಕಾಂಗ್ರೆಸ್ಸು ಸಂಘದಿಂದ ಸಕ್ರಿಯ ಸಹಕಾರ ಪಡೆಯಿತು. ಅದಕ್ಕೊಂದು ಕಾರಣವೆಂದರೆ ಸ್ಥಾನೀಯ ಕಾಂಗ್ರೆಸ್ ಘಟಕದಲ್ಲಿ ಸ್ವಯಂಸೇವಕರೂ ಇದ್ದರು. ಪ್ರಾಂತದ ಇನ್ನೂ ಕೆಲವು ಕಡೆಗಳಲ್ಲಿ ಸ್ಥಾನೀಯ ಮಟ್ಟದಲ್ಲಿ ಸಂಘ ಮತ್ತು ಕಾಂಗ್ರೆಸ್ ನಡುವೆ ಪರಸ್ಪರ ವೈಮನಸ್ಯ ಇದ್ದ ಕಾರಣದಿಂದಾಗಿ ಕಾರ್ಯಕ್ರಮದ ವ್ಯವಸ್ಥಾಪಕರೂ ಸಂಘದಿಂದ ಸಹಕಾರ ಅಪೇಕ್ಷಿಸಲಿಲ್ಲ ಮತ್ತು ಅದೇ ಕಾರಣಕ್ಕಾಗಿ ಸ್ವಯಂಸೇವಕರೂ ನಿರ್ಲಿಪ್ತರಾಗಿ ಉಳಿದರು.

ಯಾತ್ರೆಯ ನಂತರ ಗಾಂಧೀಜಿಯವರಿಗೆ ಕಾಂಗ್ರೆಸ್ಸು ಈ ಸಾಮಾಜಿಕ ಕ್ರಾಂತಿಯಲ್ಲಿ ಕೇವಲ ಔಪಚಾರಿಕವಾಗಿ ಮಾತ್ರ ತನ್ನ ಒಲವು ತೋರಿಸಿದೆ ಹಾಗೂ ಅದರ ಕಾರ್ಯಕರ್ತರಾರೂ ಅದನ್ನು ಮನಃಪೂರ್ವಕವಾಗಿ ಸ್ವೀಕರಿಸಿಲ್ಲ ಎಂಬುದು ಪೂರ್ಣವಾಗಿ ಅನುಭವವಾಯಿತು.

## ಸಂಘದ ನೇರ ಅವಲೋಕನ

ಸಂಘದ ಶಾಖೆಗಳು ಮತ್ತು ತರಬೇತಿ ಶಿಬಿರಗಳು ರಹಸ್ಯದಿಂದ ಕೂಡಿರುವಂತಹವು ಎಂದು ಆರೋಪಿಸುತ್ತಿದ್ದವರು ಕೇವಲ ಬ್ರಿಟಿಷ್ ಆಡಳಿತಗಾರರು ಮಾತ್ರವಲ್ಲ. ದೇಶದ ಒಳಗೂ ಸಂಘದ ವಿಚಾರದೊಂದಿಗೆ ಭಿನ್ನಾಭಿಪ್ರಾಯವುಳ್ಳ ಅನೇಕ ರಾಜಕಾರಣಿಗಳಲ್ಲದೆ ಅನೇಕ ಸಂಸ್ಥೆಗಳು ಸಹ ಅದೇ ಆರೋಪ ಹೊರಿಸಿ ಸಂಘವನ್ನು ಟೀಕಿಸುತ್ತಿದ್ದವು. ಅವರಾರಿಗೂ ಸಂಘದ ಶಾಖೆಯಲ್ಲಿನ ಪ್ರತ್ಯಕ್ಷವಾದ ಕಾರ್ಯಾಚರಣೆಯಾಗಲಿ, ಸಂಘದ

8. ಹಿತವಾದ, 16 ನವೆಂಬರ್ 1934 ಪು. 3

ಶಿಬಿರಗಳಲ್ಲಿ ನಡೆಯುವ ಕಾರ್ಯಕ್ರಮಗಳ ಮಾಹಿತಿಯಾಗಲಿ ಇರಲೇ ಇಲ್ಲ. ಅವರು ಇವುಗಳನ್ನು ಪ್ರತ್ಯಕ್ಷವಾಗಿ ನೋಡಿ ತಿಳಿದವರೂ ಅಲ್ಲ. ಈ ನಿಟ್ಟಿನಲ್ಲಿ ಮಹಾತ್ಮಾ ಗಾಂಧೀಜಿಯವರು ಏಕ್‌ದಂ ಭಿನ್ನ ರೀತಿಯ ರಾಜಕಾರಣಿಯಾಗಿದ್ದವರು. ಅವರು ಸಂಘದ ಬಗ್ಗೆ ಸ್ವತಃ ಪ್ರತ್ಯಕ್ಷವಾಗಿ ನೋಡಿ ತಿಳಿಯಲು ಮತ್ತು ಸಂಘದ ಸಂಸ್ಥಾಪಕರನ್ನು ಭೇಟಿ ಮಾಡಲು ಸಹ ಉತ್ಸುಕರಾಗಿದ್ದರು. ಅವರ ಕೇಂದ್ರವಾಗಿದ್ದುದು ವರ್ಧಾ. ನಾಗಪುರದ ನಂತರ ಸಂಘದ ಹೆಚ್ಚಿನ ಪ್ರಭಾವವಿದ್ದ ಶಾಖೆಯೂ ವರ್ಧಾವೇ. 1934ರ ಡಿಸೆಂಬರ್‌ನಲ್ಲಿ ಮಹಾತ್ಮಾ ಗಾಂಧೀಜಿಯವರ ವರ್ಧಾ ಆಶ್ರಮದ ಸಮೀಪದಲ್ಲೆ ಸಂಘದ ಚಳಿಗಾಲದ ಶಿಬಿರವೊಂದು ನಡೆಯುವುದಿತ್ತು. ಸುಮಾರು ಹದಿನೈದು ದಿನಗಳ ಮೊದಲಿನಿಂದಲೇ ಸ್ವಯಂಸೇವಕರು ಅದರ ಸಿದ್ಧತೆಯಲ್ಲಿ ತೊಡಗಿದ್ದರು. ಗಾಂಧೀಜಿಯವರು ಸ್ವಯಂಸೇವಕರ ಕಾರ್ಯನಿಷ್ಠೆ, ಪರಸ್ಪರರಲ್ಲಿನ ಆತ್ಮೀಯತೆ ಮತ್ತು ಸಹಕಾರದ ಭಾವನೆ ಹಾಗೂ ಶಿಸ್ತುಬದ್ಧ ರೀತಿನೀತಿಗಳು ಇವೆಲ್ಲವುಗಳನ್ನು ಸೂಕ್ಷ್ಮವಾಗಿ ಗುರುತಿಸಿದ್ದರು. ಅವರಿಗೆ ಶಿಬಿರವನ್ನು ನೋಡಬೇಕೆಂಬ ಇಚ್ಛೆ ತೀವ್ರವಾಯಿತು. ಹಾಗೂ ತಮ್ಮ ಸಹಕಾರಿ ಮಹಾದೇವ ದೇಸಾಯಿಯವರ ಬಳಿ ತಮ್ಮ ಇಚ್ಛೆಯನ್ನು ಅವರು ತಿಳಿಸಿದರು. ದೇಸಾಯಿಯವರು ವರ್ಧಾ ಶಾಖೆಯ ಪ್ರಮುಖರೂ ಮತ್ತು ಮಧ್ಯಪ್ರಾಂತ ಕಾಂಗ್ರೆಸ್‌ನ ಪೂರ್ವ ಪ್ರಧಾನ ಕಾರ್ಯದರ್ಶಿಯವರೂ ಆಗಿದ್ದ ಅಪ್ಪಾಜಿ ಜೋಶಿಯವರಿಗೆ ಪತ್ರ ಬರೆದು "ಗಾಂಧೀಜಿಯವರು ಬಿಡುವಿಲ್ಲದಷ್ಟು ಒತ್ತಡ-ದಲ್ಲಿದ್ದಾರೆ; ಆದರೂ ಒಂದಿಷ್ಟು ಸಮಯ ಹೊಂದಿಸಿಕೊಂಡು ನಿಮ್ಮ ಶಿಬಿರಕ್ಕೆ ಬರಲು ಅಪೇಕ್ಷೆಪಟ್ಟಿದ್ದಾರೆ. ದಯವಿಟ್ಟು ದಿನಾಂಕ ಮತ್ತು ಸಮಯದ ಬಗ್ಗೆ ತಿಳಿಸಬೇಕಾಗಿ ಕೋರುವೆ" ಎಂದು ಕೇಳಿಕೊಂಡರು.

ಪತ್ರ ತಲುಪಿದ ಮೇಲೆ ಅಪ್ಪಾಜಿಯವರು ಸ್ವತಃ ಗಾಂಧೀಜಿಯವರ ಆಶ್ರಮಕ್ಕೆ ತೆರಳಿ ಅವರಿಗೆ ತಮ್ಮ ಅನುಕೂಲಕ್ಕನುಗುಣವಾಗಿ ಎಂದಾದರೂ ಶಿಬಿರಕ್ಕೆ ಸಂದರ್ಶನ ನೀಡಲು ಬರಬಹುದಾಗಿ ಆಹ್ವಾನಿಸಿದರು. ಗಾಂಧೀಜಿಯವರು 1934ರ ಡಿಸೆಂಬರ್ 25ರಂದು ಜಮನಾಲಾಲ್ ಬಜಾಜ್, ಮೀರಾ ಬೆನ್, ಮಹಾದೇವ ದೇಸಾಯಿ ಮತ್ತು ಇನ್ನೂ ಕೆಲವು ಆಶ್ರಮವಾಸಿಗಳನ್ನು ಜತೆಗೂಡಿಸಿಕೊಂಡು ಶಿಬಿರದ ಸಂದರ್ಶನಕ್ಕಾಗಿ ಆಗಮಿಸಿದರು.

"ಸಂಘವು ತನ್ನ ಪ್ರತಿಷ್ಠೆಗಾಗಿ ಗಾಂಧೀಜಿಯವರ ಹೆಸರನ್ನು ದುರುಪಯೋಗಪಡಿಸಿಕೊಳ್ಳುತ್ತಿದೆ ಎಂದು ಕೆಲವೊಮ್ಮೆ ಅಸತ್ಯದ ಪ್ರಚಾರ ಮಾಡಲಾಗುತ್ತದೆ. ಅದರಲ್ಲೂ ಅಚ್ಚರಿಯ ಸಂಗತಿಯೆಂದರೆ, ಮಧ್ಯಪ್ರಾಂತದ ಕಾಂಗ್ರೆಸ್ ನಾಯಕ ಬ್ರಿಜಲಾಲ್ ಬಿಯಾನಿಯವರೇ ನಡೆಸುತ್ತಿರುವ 'ಮಾತೃಭೂಮಿ' ಎಂಬ ಪತ್ರಿಕೆಯಲ್ಲೂ ಸಹ ಒಂದು ಲೇಖನದಲ್ಲಿ ಗಾಂಧೀಜಿಯವರ ಭೇಟಿಯನ್ನು ಸುಳ್ಳೆಂದು ಹೇಳಿರುವುದು[9], ಅವರ ಸಂಘ ವಿರೋಧಿ ಮಾನಸಿಕತೆಯ ಒಂದು ತಾಜಾ ಉದಾಹರಣೆಯಲ್ಲದೆ ಇನ್ನೇನೂ ಅಲ್ಲ. ಸಂಘದ ಕಾರ್ಯಕ್ರಮಕ್ಕೆ ತಾನು ಭೇಟಿ ನೀಡಿರುವುದನ್ನು ಪುಷ್ಟೀಕರಿಸಿ ಸ್ವತಃ ಮಹಾತ್ಮಾಗಾಂಧಿ ಅವರೇ 1939ರಲ್ಲಿ ಸಂಘದ ಇನ್ನೊಂದು ಕಾರ್ಯಕ್ರಮದಲ್ಲಿ ಹೇಳಿರುವ ದಾಖಲೆಯೂ ಇದೆ. 1947ರ ಸೆಪ್ಟೆಂಬರ್

---

9. ಮಾತೃಭೂಮಿ, 23 ಜೂನ್ 1939 ವಿ.ವಿ. ಆಯಾಚಿತ ಅವರ ಲೇಖನ, ರಾ.ಸ್ವ ಸಂಘಾ ವಾಸೂನ ರಾಷ್ಟ್ರಸೇವಾ ಹೋಣೇ ಅಶಕ್ಯ ಪು. 5

16ರಂದು ಅವರು ದೆಹಲಿಯಲ್ಲಿನ ಸಂಘದ ಶಿಬಿರದಲ್ಲೂ ಸ್ವಯಂಸೇವಕರನ್ನು ಉದ್ದೇಶಿಸಿ ಮಾತಾಡಿದ್ದರು. ಆ ಭಾಷಣದ ವರದಿ 'ಹಿಂದೂಸ್ಥಾನ ಟೈಮ್ಸ್'ನಲ್ಲಿ ಪ್ರಕಟವಾಗಿದ್ದುದು ಹೀಗೆ: "ಹಲವು ವರ್ಷಗಳ ಮುನ್ನ ತಾನು ವರ್ಧಾದಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘದ ಶಿಬಿರಕ್ಕೆ ಹೋಗಿದ್ದೆ ಎಂದು ಗಾಂಧೀಜಿಯವರು ಹೇಳಿದರು. ಆಗ ಸಂಘದ ಸಂಸ್ಥಾಪಕ ಡಾ. ಹೆಡಗೇವಾರರು ಇನ್ನೂ ಬದುಕಿದ್ದರು. ಸ್ವರ್ಗೀಯ ಜಮುನಾಲಾಲ್ ಬಜಾಜ್ ಅವರು ಗಾಂಧೀಜಿಯವರನ್ನು ಶಿಬಿರಕ್ಕೆ ಕರೆದೊಯ್ದಿದ್ದರು. ಗಾಂಧೀಜಿಯವರು ಸಂಘದ ಸ್ವಯಂಸೇವಕರ ಅನುಶಾಸನ ಮತ್ತು ಪರಸ್ಪರರಲ್ಲಿ ಸ್ಪೃಶ್ಯ – ಅಸ್ಪೃಶ್ಯ ಭಾವನೆ ಸ್ವಲ್ಪವೂ ಇಲ್ಲದಿರುವುದನ್ನು ಕಂಡು ಹಾಗೂ ಅವರೆಲ್ಲರ ಸರಳತೆಯಿಂದಲೂ ಪ್ರಭಾವಿತರಾಗಿದ್ದರು"[10] ಎಂದು ಅದು ಬರೆದಿದೆ.

1934ರ ಡಿಸೆಂಬರ್ 25ರಂದು ಪ್ರಾತಃಕಾಲ ಆರು ಘಂಟೆಗೆ ಗಾಂಧೀಜಿಯವರು ಶಿಬಿರಕ್ಕೆ ಬಂದರು. ಆಗ ಅವರು ಸ್ವಯಂಸೇವಕರ ರೀತಿಯಲ್ಲಿಯೇ 'ಭಗವಾ ಧ್ವಜ'ಕ್ಕೆ ಸಂಘದ ಪದ್ಧತಿಯಂತೆ ಪ್ರಣಾಮ ಸಲ್ಲಿಸಿದರು. ಸ್ವಯಂಸೇವಕರ ಕವಾಯಿತು ಇತ್ಯಾದಿ ಚಟುವಟಿಕೆಗಳನ್ನು ಕಂಡ ನಂತರ ಅವರು ಸ್ವಯಂಸೇವಕರನ್ನು ಭೇಟಿಯಾಗಲು ಅಪೇಕ್ಷಿಸಿದರು. ಅವರು ಸಂಘದ ಉದ್ದೇಶ, ಅನುಶಾಸನ, ಸಾಮಾಜಿಕ ನಿಲುವು ಇತ್ಯಾದಿ ಕುರಿತು ಹಲವಾರು ಪ್ರಶ್ನೆಗಳನ್ನು ಸ್ವಯಂಸೇವಕರಿಗೆ ಕೇಳಿದರು.

ಓರ್ವ ಸ್ವಯಂಸೇವಕನ ಬಳಿ ಅವರು, "ಸಂಘದ ಶಿಬಿರದಲ್ಲಿ ರಾಮ ಮತ್ತು ಕೃಷ್ಣ ಅವರ ಚಿತ್ರಗಳನ್ನು ತೂಗುಹಾಕಲಾಗಿದೆ. ನೀವು ಶಂಕರ ಮತ್ತು ಗಣಪತಿಯನ್ನು ದೇವರನ್ನಾಗಿ ಕಾಣುವುದಿಲ್ಲವೇ?" ಎಂದು ಪ್ರಶ್ನಿಸಿದರು. ಆ ಸ್ವಯಂಸೇವಕ ನೀಡಿದ ಅತ್ಯಂತ ಪರಿಪಕ್ವವಾದ ಉತ್ತರ ಕೇಳಿ ಅವರು ಆಶ್ಚರ್ಯಚಕಿತರಾದರು. ಅತ "ನಾವು ರಾಷ್ಟ್ರದ ನಾಯಕರ ಚಿತ್ರಗಳನ್ನು ತೂಗು ಹಾಕುತ್ತೇವೆಯೇ ವಿನಾ ದೇವರುಗಳ ಚಿತ್ರಗಳನ್ನಲ್ಲ" ಎಂದ. ಸ್ವಯಂಸೇವಕರು ತಮ್ಮ ಖರ್ಚು ವಹಿಸಿಕೊಂಡು ಶಿಬಿರಕ್ಕೆ ಬಂದಿರುವುದಾಗಿಯೂ ತಿಳಿದು ಅವರು ವಿಸ್ಮಯಗೊಂಡರು.

ನಂತರ ಗಾಂಧೀಜಿಯವರು ಸ್ವಯಂಸೇವಕರ ಜಾತಿಗಳನ್ನು ತಿಳಿಯಲು ಪ್ರಯತ್ನಿಸಿದರು. ಶಿಬಿರದಲ್ಲಿ ಬ್ರಾಹ್ಮಣರು, ಬ್ರಾಹ್ಮಣೇತರರು ಮತ್ತು ತಥಾಕಥಿತ ಅಸ್ಪೃಶ್ಯರು (ಮಹಾರ್) ಮೊದಲಾದ ಎಲ್ಲ ಜಾತಿಗಳ ಸ್ವಯಂಸೇವಕರು ಪರಸ್ಪರ ಒಂದುಗೂಡಿಯೇ ಇರುತ್ತಾರೆ. ಊಟ ಮಾಡುತ್ತಾರೆ ಮತ್ತು ಆಟಗಳನ್ನು ಆಡುತ್ತಾರೆ ಎಂಬುದನ್ನು ಕೇಳಿದ ಮೇಲಂತೂ ಅವರ ಆಶ್ಚರ್ಯಕ್ಕೆ ಕೊನೆಮೊದಲು ಉಳಿಯಲಿಲ್ಲ. ಒಬ್ಬ ಸ್ವಯಂಸೇವಕ ಅವರಿಗೆ "ನಮಗೆ ಇಲ್ಲಿರುವವರ ಯಾರ ಜಾತಿಯೂ ಗೊತ್ತಿಲ್ಲ ಮತ್ತು ಅದನ್ನು ತಿಳಿಯಬೇಕೆಂಬ ಇಚ್ಛೆಯೂ ನಮಗಿಲ್ಲ. ನಮ್ಮೆಲ್ಲರದೂ ಒಂದೇ ಜಾತಿ. ಅದು ಹಿಂದೂ" ಎಂದು ಸಹ ಹೇಳಿದ.

ತಮ್ಮ ಹರಿಜನ ಯಾತ್ರೆಯನ್ನು ಅವರು ನಾಲ್ಕು ತಿಂಗಳ ಮೊದಲಷ್ಟೇ ಪೂರೈಸಿದ್ದರು. ಹೀಗಾಗಿ ಸಂಘದಲ್ಲಿ ಇಂತಹ ಸಕಾರಾತ್ಮಕ ಕಾರ್ಯ ಆಗಿರುವುದನ್ನು ಕಂಡು ಅವರ

10. ದಿ ಹಿಂದೂಸ್ಥಾನ ಟೈಮ್ಸ್, 17 ಸೆಪ್ಟೆಂಬರ್ 1947, ಪು. 2

ಕುರಿತ ಅವರ ಕುತೂಹಲ ಸಂದೇಹ ಇತ್ಯಾದಿ ಪೂರಾ ದೂರವಾದವು. ಅನಂತರ ಸಂಘದ ಸಂಸ್ಥಾಪಕರ ಬಗ್ಗೆ ತಿಳಿಯಲು ಮತ್ತು ಅವರನ್ನು ಭೇಟಿಯಾಗಲು ಅವರು ಉತ್ಸುಕರಾದರು.

ಡಾ. ಹೆಡಗೇವಾರರು ಡಿಸೆಂಬರ್ 26 ರಂದು ಶಿಬಿರದ ಸಮಾರೋಪ ಸಮಾರಂಭಕ್ಕಾಗಿ ವರ್ಧಾಗೆ ಬಂದರು. ಆಗ ಅವರಿಗೆ ಗಾಂಧೀಜಿಯವರೂ ಶಿಬಿರಕ್ಕೆ ಬಂದಿದ್ದ ಸುದ್ದಿಯನ್ನು ತಿಳಿಸಲಾಯಿತು. ಅವರು ಅದೇ ದಿನ ತಮ್ಮ ಇಬ್ಬರು ಸಹಕಾರಿಗಳ ಜತೆ ಗಾಂಧೀಜಿಯವರನ್ನು ಭೇಟಿಯಾಗಲು ಆಶ್ರಮಕ್ಕೆ ಹೋದರು. ರಾತ್ರಿ ಎಂಟು ಗಂಟೆಯವರೆಗೆ ಗಾಂಧೀಜಿಯವರ ಜತೆ ಈ ಭೇಟಿಯನ್ನು ಅಪ್ಪಾಜಿಯವರು ಮೊದಲೇ ಏರ್ಪಡಿಸಿದ್ದರು. ಇಬ್ಬರು ರಾಷ್ಟ್ರನಾಯಕರ ನಡುವಿನ ಈ ಸಂವಾದ ಯಕ್ಷ–ಯುಧಿಷ್ಠಿರರ ಸಂವಾದದ ರೀತಿಯಲ್ಲಿತ್ತು. ಅವರ ಸಂಭಾಷಣೆಯ ಕೆಲವು ಅಂಶಗಳು ಇಲ್ಲಿವೆ:

**ಮಹಾತ್ಮಾಗಾಂಧಿ** : ನಾನು ಶಿಬಿರಕ್ಕೆ ಬಂದಿದ್ದೆ ಎಂಬುದು ನಿಮಗೆ ಈಗಾಗಲೇ ಗೊತ್ತಾಗಿರಬಹುದು.

**ಹೆಡಗೇವಾರ್** : ತಾವು ಶಿಬಿರಕ್ಕೆ ಬಂದಿದ್ದುದು ನಿಜಕ್ಕೂ ನಮ್ಮ ಸೌಭಾಗ್ಯ. ತಾವು ಬರುವುದು ನನಗೆ ಗೊತ್ತಿರಲಿಲ್ಲ. ಗೊತ್ತಾದಲ್ಲಿ ನಾನು ಕೂಡ ಇರಬಹುದಾಗಿತ್ತು.

**ಮಹಾತ್ಮಾಗಾಂಧಿ** : ತಾವು ಇಲ್ಲದೆ ಇದ್ದುದು ಒಂದು ರೀತಿಯಲ್ಲಿ ಒಳ್ಳೆಯದೇ ಆಯಿತು. ನಾನು ನೇರವಾಗಿ ಸ್ವಯಂಸೇವಕರನ್ನೇ ಕಂಡು ಮಾತಾಡಿಸಿದೆ. ಅವರಿಂದಲೇ ಎಲ್ಲ ಸಂಗತಿಗಳನ್ನು ತಿಳಿಯಲು ಪ್ರಯತ್ನಿಸಿದೆ.

ತದನಂತರ ಗಾಂಧೀಜಿಯವರು ಸಂಘದ ಹಣಕಾಸು ವ್ಯವಸ್ಥೆಯ ವಿಷಯವಾಗಿ ಮಾಹಿತಿ ತಿಳಿಯಲು ಪ್ರಯತ್ನಿಸಿದರು. ಅವರಿಗೆ ಭಾವನೆಯಿದ್ದುದು ಸಂಘಕ್ಕೆ ಶ್ರೀಮಂತರಿಂದ ಹಣ ಸಹಾಯ ಸಿಗುತ್ತದೆ ಎಂದು. ಆ ದಿನಗಳಲ್ಲಿ ಚಂದಾ ನೀಡುವುದರಲ್ಲಿ ಜಮನಾಲಾಲ್ ಬಜಾಜ್ ಅವರದೇ ಖ್ಯಾತಿಯಿತ್ತು. ಆದರೆ ಜಮನಾಲಾಲ್‌ಬಜಾಜ್‌ರಿಂದಾಗಲಿ ಅಥವಾ ಇನ್ನಾವ ಶ್ರೀಮಂತರಿಂದಲೇ ಆಗಲಿ ದೇಣಿಗೆ ಪಡೆಯದೆ ಸಂಘವು 'ಗುರುದಕ್ಷಿಣಾ' ಮೂಲಕ ಹಣ ಸಂಗ್ರಹಿಸುತ್ತಿದೆ ಎಂಬುದನ್ನು ಕೇಳಿದ ಮೇಲಂತೂ ಅವರು ಪೂರಾ ಬೆರಗಾದರು. ಡಾ. ಹೆಡಗೇವಾರರ ಕಾಂಗ್ರೆಸ್ ಹಿನ್ನೆಲೆಯ ಬಗ್ಗೆ ಕೇಳಿ ತಿಳಿದಿದ್ದ ಅವರು: "ಕಾಂಗ್ರೆಸ್‌ನಲ್ಲಿ ನೀವು ಯಶಸ್ವಿಯಾಗಲಿಲ್ಲವೇಕೆ? ಸಾಕಷ್ಟು ಪ್ರಮಾಣದಲ್ಲಿ ಆರ್ಥಿಕ ಸಹಾಯ ಸಿಗಲಿಲ್ಲವೆಂದೇ?" ಎಂದು ಪ್ರಶ್ನಿಸಿದರು.

**ಹೆಡಗೇವಾರ್** : ಹಣದ ವಿಚಾರವೇನೂ ಆದರಲ್ಲಿರಲಿಲ್ಲ. ಕಾಂಗ್ರೆಸ್‌ನ ಮಾನಸಿಕತೆ ಒಂದು ರಾಜಕೀಯ ಸಂಸ್ಥೆಯದು. ರಾಜಕಾರಣದಲ್ಲಿ ಸ್ವಯಂಸೇವಕರನ್ನು ಮೇಜು, ಕುರ್ಚಿ ಎತ್ತಿ ಇಡುವವರು, ಜಮಖಾನ ಹಾಸುವವರು, ಇತ್ಯಾದಿ ರೀತಿಯಲ್ಲಿ ಬರಿಯ ಕೂಲಿಗಳು ಎಂಬಂತೆ ನೋಡಲಾಗುತ್ತದೆ. ಈ ವಿಧದ ಭಾವನೆಯಿರುವಲ್ಲಿ ಸ್ವಯಂಸ್ಫೂರ್ತರಾಗಿ ರಾಷ್ಟ್ರದ ಏಳ್ಗೆಗಾಗಿ ದುಡಿಯುವಂತಹ ಕಾರ್ಯಕರ್ತರು ಹೇಗೆ ತಯಾರಾಗಬಲ್ಲರು?

**ಮಹಾತ್ಮಾಗಾಂಧಿ** : ಸ್ವಯಂಸೇವಕರ ಬಗ್ಗೆ ನಿಮ್ಮ ಕಲ್ಪನೆಯೇನು?

**ಹೆಡಗೇವಾರ್** : ಸಂಘಟನೆಯಲ್ಲಿ ನಾಯಕರು ಮತ್ತು ಕಾರ್ಯಕರ್ತರು ಎಂಬ ಎರಡು ವರ್ಗಗಳಿರಬಾರದು. ಸಂಘದಲ್ಲಿರುವವರೆಲ್ಲರೂ ಸ್ವಯಂಸೇವಕರೇ. ಸ್ವಪ್ರೇರಣೆಯಿಂದ ಓರ್ವ ವ್ಯಕ್ತಿ ಸಮಾಜ ಮತ್ತು ರಾಷ್ಟ್ರದ ಕಾರ್ಯಕ್ಕೆ ಮಹತ್ವ ನೀಡುವವನಾದಲ್ಲಿ, ಅವನ ಮನೋಭಾವ ತಾನು ಕೇವಲ ಕುರ್ಚಿ ಮೇಜು ಎತ್ತಿಡುವವನು ಅಥವಾ ಜಮಖಾನ ಹಾಸುವವನು ಎಂಬಷ್ಟೇ ಆಗಿ ಉಳಿಯುವುದಿಲ್ಲ. ಬದಲಾಗಿ ಆತ ರಾಷ್ಟ್ರ ನಿರ್ಮಾಣದ ಬುನಾದಿಯ ಕಲ್ಲಿನಂತಾಗುತ್ತಾನೆ. ಸರ್ವ ಸಾಮಾನ್ಯರಂತೆ ಇದ್ದೂ ಸಹ ಅವನು ಅಸಾಮಾನ್ಯ ಕಾರ್ಯವೆಸಗುವವನಾಗುತ್ತಾನೆ. ಮತ್ತು ಈ ಕಾರಣದಿಂದಾಗಿಯೇ ಮನಸ್ಸಿನ ಏಕತೆ ಮತ್ತು ಆತ್ಮವಿಶ್ವಾಸಗಳು ಜೊತೆಗಿದ್ದು ಸ್ವಲ್ಪ ಮಾತ್ರ ಹಣವಿದ್ದರೂ, ಹಲವು ವಿಧ ಕಷ್ಟಗಳನ್ನೆದುರಿಸಿಯೂ ಸಂಘವು ಹೊಸ ಹೊಸ ಸ್ವಯಂಸೇವಕರನ್ನು ರೂಪಿಸುವುದರಲ್ಲಿ ಶಕ್ತವಾಗಿದೆ.

**ಮಹಾತ್ಮಾಗಾಂಧಿ** : ನಿನ್ನೆ ವಿಭಿನ್ನ ಜಾತಿಗಳ ಸ್ವಯಂಸೇವಕರು ಪರಸ್ಪರ ಜೊತೆಗೂಡಿ ಕೆಲಸ ಮಾಡುವುದನ್ನು ನಾನು ಕಂಡೆ. ಇದನ್ನು ಮಾಡಿ ತೋರಿಸಲು ತಮಗೆ ಸಾಧ್ಯವಾದುದು ಹೇಗೆ?

**ಡಾ. ಹೆಡಗೇವಾರ್** : ಅವರ ಅಂತಃಕರಣದಲ್ಲಿ ರಾಷ್ಟ್ರೀಯತೆಯ ಭಾವನೆ ಹಾಗೂ ಹಿಂದೂವಾಗಿರುವ ಬಗ್ಗೆ ಸ್ವಾಭಿಮಾನ ಜಾಗೃತಗೊಳಿಸಿದ ಕಾರಣದಿಂದಾಗಿ ಚಿಕ್ಕೆಲ್ಲ ಸಂಕುಚಿತ ವಿಚಾರಗಳಿಂದ ಅವರು ಮೇಲೆದ್ದಿದ್ದಾರೆ.

ತಮ್ಮ ಸ್ವಂತದ ವೃತ್ತಿ ಜೀವನ ನಡೆಸದೆ ಮತ್ತು ವಿವಾಹವೂ ಆಗದೆ, ಯಾವುದೇ ಬಂಧನಕ್ಕೆ ತನ್ನನ್ನು ಒಳಪಡಿಸಿಕೊಳ್ಳದೆ ಸಂಪೂರ್ಣ ಬದುಕನ್ನು ದೇಶದ ಸ್ವಾತಂತ್ರ್ಯದ ಪ್ರಾಪ್ತಿಗಾಗಿ ಹಾಗೂ ಹಿಂದೂ ಸಂಘಟನೆಗಾಗಿ ಅವರು ಮೀಸಲಾಗಿರಿಸಿರುವುದನ್ನು ತಿಳಿದ ಮಹಾತ್ಮಾ ಗಾಂಧಿಯವರು ತುಂಬ ಸಂತಸಪಟ್ಟರು. ತಮ್ಮ ಸುದೀರ್ಘ ಸಾರ್ವಜನಿಕ ಜೀವನದಲ್ಲಿ ಓರ್ವ ಕರ್ಮಯೋಗಿ, ಕುಶಲ, ಸಮಾಜನಿಷ್ಠ, ಪ್ರಾಮಾಣಿಕ ಹಾಗೂ ತನಗಾಗಿ ಯಾವುದೇ ಮಹತ್ವಾಕಾಂಕ್ಷೆಯನ್ನು ಇರಿಸಿಕೊಳ್ಳದ ವ್ಯಕ್ತಿಯೊಡನೆ ಇದೇ ಮೊದಲ ಬಾರಿ ಭೇಟಿಯಾಗುವ ಅವಕಾಶ ಅವರದಾಗಿತ್ತು. ಅವರು ಡಾ. ಹೆಡಗೇವಾರರು ಕೈಗೊಂಡಿರುವ ಈ ಸಂಘಟನೆಯ ಕಾರ್ಯದ ಯಶಸ್ಸಿಗಾಗಿ ತಮ್ಮ ಶುಭಾಶಯಗಳನ್ನು ತಿಳಿಸಿದರು. ಸಂಘದ ಕುರಿತು ಅವರ ಮನದಲ್ಲಿ ರೂಪುಗೊಂಡಿದ್ದ ಈ ಒಲವಿನ ಕಾರಣದಿಂದಾಗಿಯೇ ದೇಶವಿಭಜನೆಯ ನಂತರವೂ, "ಹಿಂದೂ ಮುಸ್ಲಿಂ ಸಂಘಟನೆಗಳ ನಡುವೆ ಸಂಘವು ಜಾತೀಯತೆಯ ಕಂದಕ ನಿರ್ಮಿಸುತ್ತಿದೆ" ಎಂಬ ಅನ್ಯಾಯದ ಆರೋಪ, ಅಪಪ್ರಚಾರಗಳನ್ನು ಸಂಘದ ಮೇಲೆ ಸರ್ಕಾರವೇ ನಡೆಸುತ್ತಿದ್ದಾಗಲೂ, ಅವರು ಯಾವುದೇ ವಿಧದಲ್ಲಿ ಮೀನಮೇಷ ಎಣಿಸದೆ ಸಂಘದ ಶಿಬಿರಕ್ಕೂ ಭೇಟಿ ನೀಡಿದರು ಹಾಗೂ ಅಲ್ಲಿ ಧ್ವಜಕ್ಕೆ ಪ್ರಣಾಮ ಸಲ್ಲಿಸಿ ಸ್ವಯಂಸೇವಕರ ಜತೆಗೂಡಿ ಪ್ರಾರ್ಥನೆಯನ್ನೂ ಮಾಡಿದ್ದರು.

ಇದಕ್ಕಾಗಿಯೇ ಗಾಂಧೀಜಿಯವರ ಹತ್ಯೆಯ ನಂತರ ಸಂಘವನ್ನು ನಿಷೇಧಿಸಿದ್ದಾಗ, ಅವರಿಂದ ಸ್ಥಾಪಿತವಾಗಿದ್ದ 'ಹರಿಜನ' ಪತ್ರಿಕೆಯು ನಿಷೇಧವನ್ನು ವಾಪಸ್ ಪಡೆಯುವಂತೆ ಬೇಡಿಕೆ ಪ್ರಕಟಿಸಿತ್ತು. ಸರ್ಕಾರವು ಕೈಗೊಂಡಿದ್ದ ಕ್ರಮವು ಗಾಂಧೀಜಿಯವರ ಮೂಲ ಭಾವನೆಗಳು ಮತ್ತು ಆದರ್ಶಗಳಿಗೆ ಅಸಂಗತವೆಂದು ಈ ಪತ್ರಿಕೆಯು ಹೇಳಿತ್ತು. ಈ ಸಂಪಾದಕೀಯವು ಒಂದು ಐತಿಹಾಸಿಕ ದಾಖಲೆ ಆಗಿದೆ.

ಮಹಾತ್ಮಾಗಾಂಧಿ ಅವರನ್ನು ಓರ್ವ ಶ್ರೇಷ್ಠ ವ್ಯಕ್ತಿ ಹಾಗೂ ರಾಷ್ಟ್ರ ನಿರ್ಮಾಪಕ ಎಂಬ ನಿಟ್ಟಿನಲ್ಲಿ ಅತ್ಯಂತ ಗೌರವದಿಂದ ಡಾ. ಹೆಡಗೇವಾರರು ನೋಡುತ್ತಿದ್ದರು. ಅವರ ಪ್ರೇರಣೆಯಿಂದಲೇ ಸಂಘವು ಗಾಂಧೀಜಿಯವರನ್ನು 'ಪ್ರಾತಃಸ್ಮರಣೀಯ'ರ ಪಟ್ಟಿಯಲ್ಲಿ ಸೇರಿಸಿಕೊಂಡಿದೆ. ಒಮ್ಮೆ ಓರ್ವ ಸಾವರಕರವಾದಿ ಮತ್ತು ಓರ್ವ ಗಾಂಧಿವಾದಿ ಇವರಿಬ್ಬರ ನಡುವೆ ಈ ಇಬ್ಬರು ಮಹಾಪುರುಷರ ಪೈಕಿ ನಿಜಕ್ಕೂ ಶ್ರೇಷ್ಠರು ಯಾರು ಎಂಬ ಬಗ್ಗೆ ವಿವಾದವೆದ್ದಿತ್ತು. ಆಗ ಡಾ. ಹೆಡಗೇವಾರರು 'ಇದು ಗುಲಾಬಿ ಮತ್ತು ಮಲ್ಲಿಗೆ ಇವುಗಳ ನಡುವೆ ಯಾವುದು ಶ್ರೇಷ್ಠ ಎಂದು ಕೇಳಿದಂತೆ' ಎಂದು ತಮ್ಮ ಅಭಿಪ್ರಾಯ ನೀಡಿದ್ದರು. "ಗುಲಾಬಿಯು ಮಲ್ಲಿಗೆಗೆ ಸಮಾನವಲ್ಲ ಮತ್ತು ಮಲ್ಲಿಗೆಯೂ ಗುಲಾಬಿಯಂತಲ್ಲ. ಇದು ಸತ್ಯವೇ ಆಗಿದ್ದರೂ, ಸೌಂದರ್ಯ, ಸೌರಭ ಮತ್ತು ಕೋಮಲತೆ ಇವುಗಳ ಗಣನೆಯಲ್ಲಿ ಯಾವುದು ಶ್ರೇಷ್ಠ ಎಂಬ ಬಗ್ಗೆ ವಾದ ವಿವಾದವನ್ನೇನೋ ನಡೆಸಬಹುದು. ಆದರೆ ಇಂತಹ ವಾದಕ್ಕಾಗಿ ಒಬ್ಬರಿನ್ನೊಬ್ಬರ ಹೂವನ್ನು ತುಳಿದು ಹಾಕುವ ಬದಲು ತಂತಮ್ಮ ಮನಸ್ಸಿನ ಒಲವಿಗನುಗುಣವಾಗಿ ಬೇರೆ ಬೇರೆಯಾಗಿ ಆ ಹೂವುಗಳಿಂದ ಮನಸ್ಸಿನಲ್ಲಿ ಆನಂದ ತುಂಬಿಕೊಳ್ಳುವುದು ಉಚಿತ" ಎಂದಿದ್ದಾರೆ.

ಮುಸಲ್ಮಾನರ ತುಷ್ಟೀಕರಣ ಮತ್ತು ಭಾರತದ ರಾಷ್ಟ್ರೀಯತೆ ಇವುಗಳನ್ನು ವಿವರಿಸುವುದರಲ್ಲಿ ಡಾ. ಹೆಡಗೇವಾರ ಮತ್ತು ಮಹಾತ್ಮಾಗಾಂಧಿ ಇವರಿಬ್ಬರ ನಡುವೆ ಭಿನ್ನಾಭಿಪ್ರಾಯವಿದ್ದದ್ದು ಸ್ಪಷ್ಟ. ಆದರೆ ಇಂತಹ ಭಿನ್ನಾಭಿಪ್ರಾಯವಿದ್ದಾಗಲೂ ಡಾ. ಹೆಡಗೇವಾರರಿಗೆ ಸ್ವಾತಂತ್ರ್ಯ ಚಳವಳಿಯಲ್ಲಿ ಸಹಭಾಗಿಯಾಗುವುದರಲ್ಲಿ ಯಾವುದೇ ಅಡ್ಡಿಯೆನಿಸಲಿಲ್ಲ.

ನಾಗಪುರ ಮತ್ತು ಮರಾಠಿ ಭಾಷಾಬಾಹುಳ್ಯವುಳ್ಳ ಮಧ್ಯಪ್ರಾಂತದಲ್ಲಿ ಗಾಂಧಿವಾದಕ್ಕೆ ಮೊದಲಿನಿಂದಲೂ ಸಮರ್ಥನೆಯು ಅಲ್ಪವಾಗಿಯೇ ಇತ್ತು. ಕಾಂಗ್ರೆಸ್‌ನ ಕೇಂದ್ರೀಯ ನಾಯಕರ ಬೆಂಬಲವಿದ್ದ ಕಾರಣದಿಂದಾಗಿ, ಪಕ್ಷದ ಸಂಘಟನೆಯ ಮೇಲೆ ತಿಲಕ್‌ವಾದಿಗಳ ವರ್ಚಸ್ಸು ಮೊದಲೇ ಕೊನೆಗೊಂಡಿದ್ದರೂ ತಿಲಕ್‌ವಾದಿಗಳು ಗಾಂಧಿವಾದಿಗಳಿಗೆ ಪಕ್ಷದೊಳಗೆ ಸುಸ್ಥಿರವಾಗಿ ಇರಲು ಸಹ ಬಿಟ್ಟಿರಲಿಲ್ಲ. ಪ್ರಾಂತದಲ್ಲಿ ರಾಜಕೀಯ ಚಟುವಟಿಕೆಗಳ ಪ್ರವರ್ತಕರಾಗಿದ್ದವರೆಲ್ಲರೂ ತಿಲಕ್‌ವಾದಿಗಳೇ ಆಗಿದ್ದರು.

ಈ ವಿಧದ ಪರಸ್ಪರ ವೈಮನಸ್ಯವು ರಾಷ್ಟ್ರದ ಹೋರಾಟದ ವಿಷಯದಲ್ಲಿ ದೌರ್ಭಾಗ್ಯವೆಂದೇ ಡಾ. ಹೆಡಗೇವಾರರು ತಿಳಿಯುತ್ತಿದ್ದರು. ಅವರಂತೂ ಗಾಂಧಿವಾದಿ ಚಳವಳಿಗಳಿಗೆ ಸದಾ ಕಾಲವೂ ಬೆಂಬಲ ನೀಡುತ್ತಿದ್ದರು. ಅವರಿಬ್ಬರ ನಡುವೆ ವೈಚಾರಿಕ ನೆಲೆಯಲ್ಲಿ ಭಿನ್ನಾಭಿಪ್ರಾಯಗಳಿದ್ದಾಗಲೂ ಸಮಾಜದ ಸುಧಾರಣೆಗೆ ಸಂಬಂಧಿಸಿದ ಸವಾಲುಗಳಲ್ಲಿ ಅವರಿಬ್ಬರಿಗೂ ಪರಸ್ಪರ ಗೌರವವಿದ್ದುದು ಸಹ ಸ್ಪಷ್ಟವಾಗಿ ಗೋಚರಿಸುತ್ತದೆ.

# ಕರ್ಮಯೋಗಿ

ಪ್ರತಿಯೊಂದು ಸಮಾಜದ ಸಾಮಾಜಿಕ, ರಾಷ್ಟ್ರೀಯ, ಲೌಕಿಕ ಹಾಗೂ ಪಾರಮಾರ್ಥಿಕ ವಿಷಯಗಳನ್ನು ಕುರಿತು ಉಪದೇಶಿಸುವ, ಸಮಾಜವನ್ನು ಮತ್ತು ರಾಷ್ಟ್ರವನ್ನು ಸಂಘಟಿಸಿ ಶಕ್ತಿಶಾಲಿಯನ್ನಾಗಿ ಮಾಡಲು ಪ್ರಯತ್ನಿಸುವ ಚಿಂತಕರು, ಸಮಾಜ ಸುಧಾರಕರು ಮತ್ತು ನೇತಾರರು ಧಾರಾಳವಾಗಿ ಇರುತ್ತಾರೆ. ಆದರೆ ನಿಜಾರ್ಥದಲ್ಲಿ ತನ್ನತನವನ್ನು ಸಂಪೂರ್ಣವಾಗಿ ತ್ಯಜಿಸಿ ಸ್ವಜೀವನ ಮತ್ತು ಸಾರ್ವಜನಿಕ ಬದುಕಿನಲ್ಲಿ ಮಾತು ಮತ್ತು ನಡೆವಳಿಕೆಯಲ್ಲಿ ಏಕತೆಯನ್ನು ತಂದುಕೊಂಡಿರುವಂತಹ ರಾಷ್ಟ್ರೀಯ ಸಾಧಕರು ಅತ್ಯಂತ ವಿರಳರೇ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಜನನಾಯಕರಾಗಿ ಮೂಡಿಬಂದಿದ್ದಂತಹ ಲೋಕಮಾನ್ಯ ತಿಲಕರು, ಮಹಾತ್ಮಾಗಾಂಧಿ ಅವರು, ಕ್ರಾಂತಿಕಾರಿ ಭಗತ್‌ಸಿಂಗ್ ಮೊದಲಾದವರು ಈ ಶ್ರೇಣಿಯಲ್ಲಿ ಹೆಸರಿಸಬಹುದಾದ ಕೆಲವರು. ಆದರೆ ಇಂತಹ ರಾಷ್ಟ್ರಸಾಧಕರ ಒಂದು ಪರಂಪರೆಯನ್ನೇ ರೂಪಿಸುವ ಒಂದು ಹೊಸ ವ್ಯವಸ್ಥೆಗೆ ಪ್ರೇರಣಾಪುರುಷರಾಗಿದ್ದವರು ಡಾ. ಹೆಡಗೇವಾರರು. ಅವರು ನೀಡಿರುವ ಈ ಪ್ರೇರಣೆ ಐವತ್ತೊಂದು ವರ್ಷಗಳ ಅವರ ಜೀವಿತ ಕಾಲದಲ್ಲಿ ಪ್ರಭಾವಿಯಾಗಿದ್ದುದಷ್ಟೇ ಅಲ್ಲ, ಅವರ ನಿಧನದ ನಂತರ ಹಲವಾರು ದಶಕಗಳು ಉರುಳಿದ ಮೇಲೂ ಅಷ್ಟೇ ಜೀವಂತ ಹಾಗೂ ಪ್ರಭಾವಶಾಲಿಯಾಗಿ ಮುಂದುವರಿಯುತ್ತಿದೆ ಎಂಬುದೇ ಅವರ ವಿಶೇಷತೆಯ ದ್ಯೋತಕವಾಗಿದೆ. ಅವರ ಬದುಕಿನ ಜೀವಂತ ಪ್ರಸಂಗಗಳು, ಅವರ ರಾಷ್ಟ್ರಸಾಧನೆಯ ಜೀವನ ವ್ರತ ಮತ್ತು ತ್ಯಾಗಮಯ ಆದರ್ಶದಲ್ಲಿ ಅಡಕವಾಗಿರುವ ಪ್ರಚಂಡ ಸಾಮರ್ಥ್ಯ ಇವುಗಳು, ಜನರು ತಮ್ಮ ವ್ಯಕ್ತಿಗತ ಮತ್ತು ಪಾರಿವಾರಿಕ ಜೀವನಕ್ಕೆ ಬೆನ್ನು ತೋರಿ ರಾಷ್ಟ್ರದ ಕಾರ್ಯಕ್ಕಾಗಿ ತಮ್ಮನ್ನು ಸಮರ್ಪಿಸಿಕೊಳ್ಳಲು ಅಸಂಖ್ಯ ಮಂದಿಗೆ ಇಂದಿಗೂ ಪ್ರೇರಣೆ ನೀಡುತ್ತಿವೆ.

ಅವರ ಸ್ವಂತದ ಮತ್ತು ಸಾರ್ವಜನಿಕ ಜೀವನದಲ್ಲಿ ಯಾವುದೇ ವ್ಯತ್ಯಾಸವಿರಲಿಲ್ಲ. ಸಂಘದ ಆರಂಭಕ್ಕಿಂತ ಮೊದಲೇ ಅವರು ಸ್ವಂತದ ಮತ್ತು ಕೌಟುಂಬಿಕ ಜೀವನದ ರೂಢಿ ರಿವಾಜುಗಳಿಂದ, ಅದರಲ್ಲಿನ ಬಯಕೆಗಳು ಮತ್ತು ಬಂಧನಗಳಿಂದಲೂ ತಮ್ಮನ್ನು ಪೂರ್ತಿಯಾಗಿ ದೂರಗೊಳಿಸಿಕೊಂಡಿದ್ದರು. ಅವರು ನಾಗಪುರದ ಸಾಮಾಜಿಕ ಜೀವನದಲ್ಲಿ 1925ರ ಪೂರ್ವದಲ್ಲೇ ಸಂಪೂರ್ಣ ಸಮರ್ಪಿತರಾಗಿದ್ದರು. ಮುಂದಿನ ಹದಿನೈದು ವರ್ಷಗಳಲ್ಲಂತೂ ಅವರ 'ಪರಿವಾರ'ವು ನಾಗಪುರದ ಗಡಿಗಳನ್ನು ದಾಟಿ ದೇಶವ್ಯಾಪಿಯಾಯಿತು. 1940ರಲ್ಲಿ ನಿಧನರಾಗುವ ಹೊತ್ತಿಗೆ ಅವರಿಂದ ಸ್ಥಾಪಿತವಾಗಿದ್ದ ರಾಷ್ಟ್ರೀಯ ಸ್ವಯಂಸೇವಕ ಸಂಘವು ದೇಶಾದ್ಯಂತ ವಿಸ್ತರಿಸಿತ್ತು. ದೇಶದ ಎಲ್ಲ ಪ್ರಾಂತಗಳಲ್ಲಿ ಮತ್ತು ಬಹುಪಾಲು ಜಿಲ್ಲೆಯ ಪ್ರಮುಖ ನಗರಗಳಲ್ಲಿ ಸಂಘದ ಶಾಖೆಗಳು

ಆರಂಭವಾಗಿದ್ದವು. ಮಧ್ಯಪ್ರಾಂತದಲ್ಲಿ ಮತ್ತು ಅದರ ಹೊರಗಿನ ಪ್ರದೇಶಗಳಲ್ಲಿನ ಜನನಾಯಕರಿಗೂ ಸಂಘದ ಶಿಸ್ತುಬದ್ಧ ಸ್ವಯಂಸೇವಕರ ಪಡೆಯು ವಿಶೇಷ ಆಕರ್ಷಣೆಯ ಸಂಗತಿಯಾಗಿತ್ತು. ಮಹಾತ್ಮಾಗಾಂಧಿ, ವಿಠ್ಠಲಭಾಯಿ ಪಟೇಲ್, ಜಯಕರ್, ಸಾವರಕರ್, ಸುಭಾಷ ಚಂದ್ರ ಬೋಸ್‌ರಂತಹ ಮೇರು ನಾಯಕರ ಮನದ ಮೇಲೆ ಸಂಘದ ಛಾಪು ಬಿದ್ದಿತ್ತು. ಆದರೆ ಅದರ ಸಂಸ್ಥಾಪಕರು ಮತ್ತು ಸರ್ವಶ್ರೇಷ್ಠ ನಾಯಕರೂ ಆಗಿದ್ದವರ ಸ್ವಂತದ ಬದುಕು ಮತ್ತು ವ್ಯವಹಾರಗಳನ್ನು ಕಂಡವರಿಗೆ ಹಲವಾರು ಯುಗಗಳಲ್ಲೊಮ್ಮೆ ಆಗಬಹುದಾದ ಪ್ರಾಯಶಃ ಭಗವಂತನ ವಿಶೇಷ ಯೋಜನೆ, ನಿಸರ್ಗದ ಅಪೇಕ್ಷೆಯೂ ಒಂದುಗೂಡಿ ಡಾ. ಹೆಡಗೇವಾರರ ರೂಪದಲ್ಲಿ ಅವತಾರ ತಾಳಿದೆಯೇನೋ ಎಂದು ಅನಿಸದೆ ಇರದು. ಅವರ ಬದುಕಿನ ಅನೇಕ ಪ್ರಸಂಗಗಳಿಂದ ಅವರ ರಾಷ್ಟ್ರಸಾಧನೆಯ ವಿಶೇಷತೆಗಳನ್ನು ತಿಳಿಯಲು ಸಾಧ್ಯವಾದೀತು.

## ವ್ಯಕ್ತಿ ಪೂಜೆ

ಸಾರ್ವಜನಿಕ ಜೀವನದಲ್ಲಿ ವ್ಯಕ್ತಿತ್ವ ಸಂಘರ್ಷ ಮತ್ತು ವೈಚಾರಿಕ ಭಿನ್ನಾಭಿಪ್ರಾಯದ ಕಾರಣದಿಂದಾಗಿ ಪರಸ್ಪರ ವೈಷಮ್ಯವುಂಟಾಗುವ ಹಾಗೂ ಅದರ ಪರಿಣಾಮವಾಗಿ ಕೆಲವರಲ್ಲಿ ಸರ್ವಾಧಿಕಾರದ ಮನೋವೃತ್ತಿ ಬೆಳೆಯುವ ಈ ಉದಾಹರಣೆಗಳು ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ನಂತರದಲ್ಲೂ ಧಾರಾಳವಾಗಿ ಕಾಣಸಿಗುತ್ತವೆ. ಮಹಾತ್ಮಾಗಾಂಧಿ ಮತ್ತು ಸುಭಾಷಚಂದ್ರ ಬೋಸ್ ಅವರ ನಡುವೆ ಭಿನ್ನಾಭಿಪ್ರಾಯವುಂಟಾಗಿ ಕಾಂಗ್ರೆಸ್‌ನಲ್ಲಿ ಕಾಣಿಸಿದ ಒಡಕು ಈ ನಿಟ್ಟಿನಲ್ಲಿ ಎಲ್ಲರೂ ತಿಳಿದಿರುವ ಸಂಗತಿಯೇ. ಸಾಮಾನ್ಯವಾಗಿ ಸಂಘದ ಟೀಕಾಕಾರರು ಡಾ. ಹೆಡಗೇವಾರರನ್ನು 'ಸಂಘದ ಕಮಾಂಡರ್' 'ಡಿಕ್ಟೇಟರ್' 'ಫ್ಯೂರರ್' ಇತ್ಯಾದಿ ರೀತಿಯಲ್ಲಿ ಉಲ್ಲೇಖಿಸುತ್ತಿದ್ದರು. ಹೀಗಾಗಿ ಆ ಮಾತುಗಳು ಇಂದು ಬೌದ್ಧಿಕ ಜಗತ್ತು ವೈಚಾರಿಕವಾಗಿ ಅದೆಷ್ಟು ಕಲುಷಿತಗೊಂಡಿದೆ ಎಂಬುದಕ್ಕೆ ಒಂದು ತಾಜಾ ಉದಾಹರಣೆಯಾಗಿವೆ. ಕಾರಣವೆಂದರೆ ಡಾ. ಹೆಡಗೇವಾರರಿಗೆ ಸಂಬಂಧಿಸಿ ಹೇಳುವುದಾದಲ್ಲಿ ಈ ಮಾತಿನಲ್ಲಿ ತಿಲಾಂಶವೂ ಸತ್ಯವಿದೆ ಎನ್ನಲು ಸಾಧ್ಯವಿಲ್ಲ. ಸಂಘ ಆರಂಭವಾದ ಮೂರು ವರ್ಷಗಳ ನಂತರ, 1928ರ ಗುರುಪೂರ್ಣಿಮಾ ದಿನದಂದು ಗುರುಪೂಜೆಯ ಪರಂಪರೆ ಸಂಘದಲ್ಲಿ ಆರಂಭವಾಯಿತು. ಡಾ. ಹೆಡಗೇವಾರರಿಗೆ ಅತ್ಯಂತ ನಿಕಟರಾಗಿದ್ದ ಸ್ವಯಂಸೇವಕರು ಕೂಡಾ ಅಂದು ತಾವು 'ಗುರು'ವಾಗಿ ಪೂಜೆ ಸಲ್ಲಿಸಲಿರುವುದು ಅವರಿಗೇ ಎಂದು ಭಾವಿಸುತ್ತಿದ್ದರು. ಕೆಲವರು ಛತ್ರಪತಿ ಶಿವಾಜಿ ಅಥವಾ ಅವರ ಗುರುವಾಗಿದ್ದ ಸಮರ್ಥ ರಾಮದಾಸರನ್ನು ಆದರ್ಶವಾಗಿ ಸ್ವೀಕರಿಸಿ ಅವರಿಗೆ ಪೂಜೆ ಸಲ್ಲಿಸಲಾಗುವುದು ಎಂದು ಊಹಿಸಿದ್ದರು. ಆದರೆ ಡಾ. ಹೆಡಗೇವಾರರು ಯಾವುದೇ ವ್ಯಕ್ತಿಯ ಪೂಜೆ ಮಾಡಲಿಲ್ಲ. ಮೊದಲ ವರ್ಷದ ಗುರುದಕ್ಷಿಣಾ ಉತ್ಸವದ ಸಂದರ್ಭದಲ್ಲಿ ಅವರು ಹೀಗೆ ಹೇಳಿದರು.

"ಸಂಘವು ತನ್ನ ಗುರುವಿನ ಸ್ಥಾನದಲ್ಲಿ ವ್ಯಕ್ತಿಯನ್ನು ಇರಿಸದೆ, ನಮ್ಮ ಪರಮ ಪವಿತ್ರ ಭಗವಾ ಧ್ವಜವನ್ನೇ ಗುರುವಾಗಿ ಸ್ವೀಕರಿಸಿದೆ. ಕಾರಣವೆಂದರೆ, ವ್ಯಕ್ತಿಯೊಬ್ಬ ಎಷ್ಟೇ ಶ್ರೇಷ್ಠನಿರಲಿ, ಆತನನ್ನು ಎಂದಿಗೂ ಪರಿಪೂರ್ಣ ಹಾಗೂ ಶಾಶ್ವತ ಎನ್ನಲಾಗುವುದಿಲ್ಲ. ಅದಕ್ಕಾಗಿ ವ್ಯಕ್ತಿಯೊಬ್ಬನನ್ನು ಗುರುವಿನ ವಿಶೇಷ ಸ್ಥಾನದಲ್ಲಿರಿಸಿ, ನಮ್ಮ ಸ್ಥಿತಿಯನ್ನು ಹಾಸ್ಯಾಸ್ಪದಗೊಳಿಸುವ ಬದಲಿಗೆ, ನಮ್ಮ ಇತಿಹಾಸ, ಪರಂಪರೆ ಮತ್ತು ರಾಷ್ಟ್ರೀಯತೆಗಳನ್ನು ತನ್ನಲ್ಲಿ ಸಮಾವೇಶಗೊಳಿಸಿಕೊಂಡು ಅವನ್ನು ಬಿಂಬಿಸುವ ಭಗವಾ

ಧ್ವಜವೇ ನಮಗೆ ಗುರುವಾಗಿ ಗೌರವಕ್ಕೆ ಪಾತ್ರವಾಗಿದೆ. ಇದರಿಂದ ನಮಗೆ ಲಭಿಸುವ ಸ್ಫೂರ್ತಿ ಮತ್ತು ಪ್ರೇರಣೆ ಯಾವನೇ ಓರ್ವ ವ್ಯಕ್ತಿಯಿಂದ ಸಿಗುವ ಸ್ಫೂರ್ತಿಗಿಂತಲೂ ಹೆಚ್ಚು ಶ್ರೇಷ್ಠವಾದುದು."

ಹನ್ನೊಂದು ವರ್ಷಗಳ ನಂತರ ಪೂಣಾದಲ್ಲಿ ನಡೆದ ಹಿಂದೂ ಯುವ ಪರಿಷತ್ತಿನ ಅಧಿವೇಶನದಲ್ಲಿ ಅವರು ಹೊಸ ಪೀಳಿಗೆಗೆ ಸ್ಪಷ್ಟ ಶಬ್ದಗಳಲ್ಲಿ ನೀಡಿದ್ದ ಸಂದೇಶ: "ಯಾವುದೇ ಒಬ್ಬ ನಾಯಕನನ್ನು ಆತನೇ ಸರ್ವ ಶ್ರೇಷ್ಠನೆಂದು ಬಗೆದು ಕಣ್ಣು ಮುಚ್ಚಿಕೊಂಡು ಸ್ವೀಕರಿಸಬೇಡಿ. ವ್ಯಕ್ತಿಯ ಬಗ್ಗೆ ಪೂರಾ ಸ್ವತಂತ್ರವಾಗಿ ಯೋಚಿಸಿ, ಸಾಕಷ್ಟು ತಿಳಿದ ನಂತರವಷ್ಟೇ ನಿಮ್ಮದೇ ನಿಷ್ಕರ್ಷೆಗೆ ತಲುಪಿ."[1] ಅಂದಿನ ಸಮಕಾಲೀನ ಸಾಮಾಜಿಕ ರಾಜಕೀಯ ಜೀವನದಲ್ಲಿ ರೂಢಿಯಲ್ಲಿದ್ದ ವ್ಯಕ್ತಿಪೂಜೆಯನ್ನು ಅವರು ಸಂಘದಿಂದ ಪೂರಾ ದೂರವಿರಿಸಿದರು. ಸರ್ವಸಾಮಾನ್ಯವಾಗಿ ಓರ್ವ ಕುಶಲ, ಯಶಸ್ವಿ ಸಂಘಟಕನಿಗೆ ಸಹಜವಾಗಿ ಲಭಿಸುವ ಪ್ರಸಿದ್ಧಿ, ಪ್ರಚಾರಗಳ ಕಾರಣದಿಂದಾಗಿ ಮನದಲ್ಲಿ ತನ್ನನ್ನು ತಾನೇ ದೊಡ್ಡವನೆನಿಸಿಕೊಳ್ಳುವಂತಹ ಆತ್ಮವಂಚನೆಯಿಂದ ಬಚಾಯಿಸಿಕೊಳ್ಳುವುದು ಕಠಿಣವೇ. ಡಾ. ಹೆಡಗೇವಾರರು ಸಂಘವನ್ನು ಎಂದೂ ಸಹ ತಮ್ಮ ಸ್ವಂತದ ಪ್ರಚಾರ ಮತ್ತು ಕೀರ್ತಿಗಾಗಿ ಬಳಸಿಕೊಳ್ಳಲಿಲ್ಲ. ಅವರು ಹಿಂದೂ ಸಮಾಜದಲ್ಲಿ ಪ್ರಚಲಿತವಾಗಿದ್ದ 'ವ್ಯಕ್ತಿಪೂಜೆ'ಯ ರೂಢಿಯನ್ನು ಎಲ್ಲಕ್ಕಿಂತ ದೊಡ್ಡದಾದ ದೋಷವನ್ನಾಗಿ ತಿಳಿಯುತ್ತಿದ್ದರು. ನಮ್ಮ ಸಮಾಜದ ಪತನಕ್ಕೆ ಇದೇ ಕಾರಣವಾಯಿತು ಎಂಬುದು ಅವರ ನಂಬಿಕೆಯಾಗಿತ್ತು. "ವ್ಯಕ್ತಿವಾದದಿಂದಾಗಿ ನಮ್ಮ ಮನಸ್ಸಿನಿಂದ ರಾಷ್ಟ್ರವಾದವು ದೂರವಾಯಿತು. ಈಗ ಸಂಘದ ಪ್ರಯತ್ನವೆಂದರೆ ಈ ವ್ಯಕ್ತಿವಾದವನ್ನು ತೊಲಗಿಸಿ ಪುನಃ ರಾಷ್ಟ್ರವಾದವನ್ನು ಸ್ಥಾಪಿಸುವುದೇ ಆಗಿದೆ"[2] ಎಂದಿದ್ದರು ಅವರು.

ವ್ಯಕ್ತಿಪೂಜೆ ಮಾಡದೆ ಇರುವುದು ಸಂಘದ ಸಂಸ್ಕೃತಿಯದೇ ಒಂದು ವಿಶೇಷತೆಯಾಗಿದೆ. ಇದು ಸ್ಪಷ್ಟವಾಗಿ ಬೆಳಕಿಗೆ ಬಂದುದು ಡಾ. ಹೆಡಗೇವಾರರ ಮೃತ್ಯುವಿನ ಸಂದರ್ಭದಲ್ಲಿ. ಸಂಘದ ಬಗ್ಗೆ ಅತಿ ಹೆಚ್ಚಿನ ಒಲವು ಇದ್ದಂತಹ ಓರ್ವ ಹಿಂದೂತ್ವವಾದಿ ನಾಯಕ ಸಾರ್ಜೆಂಟ್ ಸಂಜೀವ ಕಾಮತ್ ಅವರು ಆಗ ಪ್ರತಿಕ್ರಿಯಿಸಿದುದು: 'ಡಾ. ಹೆಡಗೇವಾರರ ಗತಿಶೀಲ ನಾಯಕತ್ವದ ಅಭಾವದಲ್ಲಿ ಸಂಘದ ಭವಿಷ್ಯವು ಅಂಧಕಾರಮಯವಾಗಲಿದೆ.' ಆ ದಿನಗಳಲ್ಲಿ ಈ ವಿಧದ ಸಂದೇಹ ಸಂಘದ ಹಿತೈಷಿಗಳು ಮತ್ತು ವಿರೋಧಿಗಳಲ್ಲೂ ಇತ್ತು. ಆದರೆ ಡಾ. ಹೆಡಗೇವಾರರು ಸಂಘಕ್ಕೆ ತಳಹದಿಯ ರೂಪದಲ್ಲಿ ಹಾಕಿಕೊಟ್ಟ ಆರೋಗ್ಯಕರ ಪರಂಪರೆಯ ಕಾರಣದಿಂದಾಗಿ, ಸಂಘವು ಅವರ ನಂತರವೂ ಮೊದಲಿನಂತೆ ಬೆಳೆಯುತ್ತಲೇ ಇದೆ. ಅವರ ಮೃತ್ಯುವಿನ ಎರಡು ತಿಂಗಳ ನಂತರ ಮಹಾರಾಷ್ಟ್ರದ ಜನಪ್ರಿಯ ಆಂಗ್ಲ ದೈನಿಕ 'ಮರಾಠಾ'ದ ಮುಖ್ಯ ಪುಟದಲ್ಲಿ ಒಂದು ಪ್ರಮುಖ ಸುದ್ದಿಗೆ ನೀಡಲಾಗಿದ್ದ ಶೀರ್ಷಿಕೆ "ಡಾ. ಹೆಡಗೇವಾರರ ಸಂಘ ಇನ್ನಷ್ಟು ಬಲವಾಗಿ ಬೆಳೆಯುತ್ತಿದೆ" (Dr. Hedgewar's Sangh Still Growing Strong)[3].

---

1. ದಿ ಮರಾಠಾ, 6 ಮೇ 1939
2. ಕಾಳ, 23 ಜೂನ್ 1940
3. ದಿ ಮರಾಠಾ, 23 ಆಗಸ್ಟ್ 1940 ಪು. 1

ಅವರ ಎರಡನೇ ಮಾಸಿಕ ಶ್ರಾದ್ಧದ ಸಂದರ್ಭದಲ್ಲಿ ನೂತನ ಸರಸಂಘಚಾಲಕ ಮಾಧವ ಸದಾಶಿವ ಗೋಲ್ವಾಳ್ಕರ್ ಅವರು ಮಾಡಿದ್ದ ಭಾಷಣ ಈ ನಿಟ್ಟಿನಲ್ಲಿ ಇನ್ನೂ ಮಹತ್ವಪೂರ್ಣವಾದುದು. 1940ರ ಆಗಸ್ಟ್ 22ರಂದು ನಾಗಪುರದಲ್ಲಿ ನಡೆದ ಸಭೆಯಲ್ಲಿ ಅವರು ಹೀಗೆ ಹೇಳಿದರು:

"ಸಂಘದ ಸಂಸ್ಥಾಪಕ ಡಾ. ಹೆಡಗೇವಾರರು ಈಗ ನಮ್ಮ ನಡುವೆ ಇಲ್ಲದಿರುವುದು ನಮ್ಮೆಲ್ಲರ ಮನಸ್ಸಿಗೆ ಸದಾ ವೇದನೆಯನ್ನುಂಟು ಮಾಡುತ್ತಿದೆ. ಆದರೆ ಅವರ ಅನುಪಸ್ಥಿತಿಯಿಂದಾಗಿ ನಾವು ಯಾವುದೇ ಕಾರಣಕ್ಕಾಗಿಯೂ ಗಾಬರಿಗೊಳ್ಳುವ ಅಗತ್ಯವಿಲ್ಲ. ಕಾರಣವೆಂದರೆ ಸಂಘವು ಈವರೆಗೆ ಎಂದೂ ವ್ಯಕ್ತಿಪೂಜೆಯನ್ನು ಪುರಸ್ಕರಿಸಿಲ್ಲ ಮತ್ತು ಮುಂದೆಯೂ ಮಾಡುವುದಿಲ್ಲ."[4]

ಸಂಘಕ್ಕೆ ಅದರ ಸಂಸ್ಥಾಪಕರು ಇಂತಹ ಪ್ರೇರಣೆ ನೀಡಿದುದು ಕೇವಲ ವೈಚಾರಿಕ ಮಟ್ಟದಲ್ಲಿ ಮಾತ್ರವಲ್ಲ; ತಮ್ಮ ಸ್ವಂತ ಬದುಕಿನಲ್ಲಿ ಕೊನೆಯ ಉಸಿರಿನವರೆಗೂ ಪ್ರತಿನಿತ್ಯ ಪ್ರತಿಯೊಂದು ಕ್ಷಣದಲ್ಲೂ ತಮ್ಮ ನಡವಳಿಕೆಯಿಂದ ಮತ್ತು ವ್ಯಾವಹಾರಿಕ ಮಟ್ಟದಲ್ಲಿ ಅವರು ಹಾಕಿಕೊಟ್ಟ ಆದರ್ಶ ಅದು. ಅವರು ಬದುಕಿದ್ದಾಗ ಅವರ ಜೀವನಚರಿತ್ರೆಯನ್ನು –ಸಂಗ್ರಹವಾಗಿಯಾಗಲಿ ಅಥವಾ ದೊಡ್ಡದಿರಲಿ–ಪ್ರಕಟಿಸಲು ಆಗಲೇ ಇಲ್ಲ. ಅಂತಹ ಯಾವುದೇ ಪ್ರಯತ್ನ ನಡೆದರೂ ಅವರು ಅತ್ಯಂತ ಕಠೋರತೆಯಿಂದ ಅದನ್ನು ತಡೆಯುತ್ತಿದ್ದರು. ಮಧ್ಯಪ್ರಾಂತದ ಓರ್ವ ಹಿರಿಯ ಲೇಖಕ ದಾಮೋದರ ಪಂತ ಭಟ್ ಎಂಬುವರು ಡಾ. ಹೆಡಗೇವಾರರಿಗೆ ಆಗಾಗ ಪತ್ರ ಬರೆದು ಅವರ ಜೀವನದ ಕುರಿತು ಮಾಹಿತಿಗಳನ್ನು ಮತ್ತು ಚಿತ್ರಗಳನ್ನು ಕಳುಹಿಸುವಂತೆ ಆಗ್ರಹಿಸುತ್ತಿದ್ದರು. ಕೊನೆಯಲ್ಲಿ ಡಾ. ಹೆಡಗೇವಾರರು ಅವರಿಗೊಂದು ಪತ್ರ ಬರೆದು –

"ಸಂಘದ ಮತ್ತು ನನ್ನ ಬಗ್ಗೆ ನಿಮ್ಮ ಮನದಲ್ಲಿರುವ ಪ್ರೀತಿ ಮತ್ತು ಆದರಗಳಿಗಾಗಿ ನಾವು ನಿಮಗೆ ಹೃದಯ ತುಂಬಿ ಆಭಾರಿಗಳಾಗಿದ್ದೇವೆ. ನನ್ನ ಜೀವನಚರಿತ್ರೆಯನ್ನು ಪ್ರಕಟಿಸಬೇಕೆಂದು ನಿಮ್ಮ ಮನದಿಚ್ಛೆಯನ್ನು ನೀವು ತಿಳಿಸಿದ್ದೀರಿ. ಆದರೆ ನನಗನಿಸುವಂತೆ ನಾನು ಅಂತಹ ದೊಡ್ಡ ವ್ಯಕ್ತಿಯೂ ಅಲ್ಲ ಮತ್ತು ಪ್ರಕಟಿಸಲು ಯೋಗ್ಯ ಎನ್ನಬಹುದಾದಂತಹ ಮಹತ್ವಪೂರ್ಣ ಘಟನೆಗಳಾವುವೂ ನನ್ನ ಜೀವನದಲ್ಲಿ ನಡೆದಿಲ್ಲ. ಅದೇ ರೀತಿಯಲ್ಲಿ ನನ್ನ ಅಥವಾ ಸಂಘದ ಯಾವುದೇ ಕಾರ್ಯಕ್ರಮದ ಭಾವಚಿತ್ರಗಳೂ ನಮ್ಮಲ್ಲಿ ಲಭ್ಯವಿಲ್ಲ. ಸಣ್ಣದರಲ್ಲಿ ಹೇಳುವುದಾದಲ್ಲಿ ಜೀವನಚರಿತ್ರೆ ಬರೆಯಬಹುದಾದಂತಹವರ ಶ್ರೇಣಿಯಲ್ಲಿ ನನ್ನ ಚರಿತ್ರೆಯು ಸ್ವಲ್ಪ ಮಾತ್ರವೂ ಸರಿ ಹೊಂದಲಾರದು ಎಂದಷ್ಟೇ ಹೇಳಲು ನಾನು ಬಯಸುವೆ. ನೀವು ಅದನ್ನು ಮಾಡದೆ ಇದ್ದಲ್ಲಿ ನಿಮಗೆ ನಾನು ಕೃತಜ್ಞ."

ಈ ಪತ್ರವನ್ನು ಅವರು ಬರೆದಿದ್ದುದು 1935ರಲ್ಲಿ. ಅಲ್ಲಿಯವರೆಗೆ ಸಂಘದ ಗಣವೇಷ ಧರಿಸಿರುವಂತಹ ಡಾ. ಹೆಡಗೇವಾರರ ಭಾವಚಿತ್ರ ನಿಜಕ್ಕೂ ಇರಲೇ ಇಲ್ಲ. ಮುಂದೆ ಸಾಂಗಲಿಯ ಸಂಘಚಾಲಕರಾದ ಕಾಶಿನಾಥ ಲಿಮಯೆ ಅವರ ಆಗ್ರಹದ ಕಾರಣದಿಂದಾಗಿ 1935ರ ಮೇ 2ರಂದು ಸಂಘದ ಗಣವೇಷ ಧರಿಸಿದ ಡಾ.ಹೆಡಗೇವಾರರ ಭಾವಚಿತ್ರವೊಂದನ್ನು ತೆಗೆದುಕೊಳ್ಳಲಾಯಿತು. ಅದು ಸಹ ಒಂದು

---

4. ದಿ ಮರಾಠಾ, 23 ಆಗಸ್ಟ್ 1940 ಪು. 1

ಶರತ್ತಿನ ರಾಜಿ ಸೂತ್ರಕ್ಕೆ ಲಿಮಯೆ ಅವರು ಒಪ್ಪಿಕೊಂಡ ಮೇಲೆಯೇ. 'ಛಾಯಾಚಿತ್ರದ ನೆಗೆಟಿವ್‌ಗಳನ್ನು ನಾಶಪಡಿಸಬೇಕು ಮತ್ತು ಛಾಯಾಚಿತ್ರದ ಪ್ರಚಾರ ಮಾಡಬಾರದು' ಎಂಬುದೇ ಆ ಶರತ್ತಾಗಿತ್ತು.

ಅದೇ ರೀತಿಯಲ್ಲಿ ನಾಸಿಕದ ಓರ್ವ ಶಿಕ್ಷಕ ಹಾಗೂ ಸಂಘದ ಪ್ರಮುಖರೂ ಆಗಿದ್ದ ರಾಮ ಗೋಸಾವಿ ಅವರು ಸಂಘದ ಕುರಿತು ತಾವು ಮಾಡಿದ್ದ ಭಾಷಣಗಳ ಸಂಕಲನವೊಂದಕ್ಕೆ ಡಾ. ಹೆಡಗೇವಾರರು ಮುನ್ನುಡಿ ಬರೆಯಬೇಕೆಂದು ಕೋರಿದಾಗ, ಅವರು ಈ ರೀತಿ ಉತ್ತರಿಸಿದ್ದರು: "ಸಂಘಟನೆಯ ಶಾಸ್ತ್ರದಲ್ಲಿ ತನ್ನ ದೊಡ್ಡಸ್ತಿಕೆ, ಆತ್ಮಸ್ತುತಿ ಮತ್ತು ವ್ಯಕ್ತಿಗತವಾದ ಮಹತ್ವಾಕಾಂಕ್ಷೆಗಳಿಗೆ ಖಂಡಿತವಾಗಿಯೂ ಸ್ಥಾನ ನೀಡಲಾಗುವುದಿಲ್ಲ. ವ್ಯಕ್ತಿತ್ವದ ಕುದುರೆಯನ್ನು ಬಲಾತ್ಕಾರಪೂರ್ವಕ ಮುಂದೆ ಕಟ್ಟುವುದರಿಂದ ಸಂಘಟನೆಯ ರಥವನ್ನು ಚಲಾಯಿಸಲು ಸಾಧ್ಯವಿಲ್ಲ."

ಡಾ. ಹೆಡಗೇವಾರರ ಪ್ರಸಿದ್ಧಿ ಪರಾಙ್ಮುಖತೆಯ ಇನ್ನೊಂದು ಪ್ರಮುಖವಾದ ಪ್ರಸಂಗವಿದೆ. 1936ರ ಮೇನಲ್ಲಿ ವೈಶಾಖ ಶುಕ್ಲ ಪಂಚಮಿಯಂದು ನಾಸಿಕದಲ್ಲಿ ಜಗದ್ಗುರು ಆದ್ಯ ಶಂಕರಾಚಾರ್ಯರ ಜಯಂತಿಯನ್ನು ಆಚರಿಸಲಾಗಿತ್ತು. ಅದೇನೂ ಸಂಘದ ಕಾರ್ಯಕ್ರಮವಾಗಿರಲಿಲ್ಲ ಮತ್ತು ಅದರಲ್ಲಿ ಸಂಘದ ಪಾತ್ರವೂ ಇರಲಿಲ್ಲ. ಅಷ್ಟಾದರೂ ಅಲ್ಲಿ ಡಾ. ಹೆಡಗೇವಾರರ ವ್ಯಕ್ತಿತ್ವ, ಕರ್ತೃತ್ವ ಇತ್ಯಾದಿ ಕುರಿತು ಉಲ್ಲೇಖವಾಗಿ ಸಾಕಷ್ಟು ಪ್ರಶಂಸೆಯೂ ಆಯಿತು. ನಾಸಿಕದ ಶಂಕರಾಚಾರ್ಯರಾದ ವಿದ್ಯಾಶಂಕರಭಾರತೀ ಸ್ವಾಮಿ ಅವರು ತಮ್ಮ ಪೂರ್ವಾಶ್ರಮದಲ್ಲಿ ಡಾ. ಕುರ್ತಕೋಟಿ ಎಂಬ ಹೆಸರಿನಿಂದ ಹೆಚ್ಚು ಪರಿಚಿತರಾಗಿದ್ದವರು. ತಮ್ಮ ಪ್ರಗತಿಶೀಲ ವಿಚಾರಗಳಿಂದ ಖ್ಯಾತಿ ಪಡೆದವರು ಅವರು. ಆ ಸಂದರ್ಭದಲ್ಲಿ ಅವರು ಡಾ. ಹೆಡಗೇವಾರರಿಗೆ 'ರಾಷ್ಟ್ರಸೇನಾಪತಿ' ಎಂಬ ಬಿರುದನ್ನು ದಯಪಾಲಿಸಿದರು. ಈ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾದಂತೆಯೇ ಡಾ. ಹೆಡಗೇವಾರರಿಗೆ ನೂರಾರು ಅಭಿನಂದನಾಪತ್ರಗಳು ಬರಲಾರಂಭಿಸಿದವು. ಡಾ. ಹೆಡಗೇವಾರರು ಆ ಕೂಡಲೇ ಅದನ್ನು ಅಲ್ಲೇ ಇತಿಶ್ರೀಗೊಳಿಸಲು ನಿರ್ಧರಿಸಿದರು. ಅವರಿಗೆ ಇಂತಹ ಬಿರುದು-ಬಾವಲಿಗಳನ್ನು ತನ್ನ ಹೆಸರಿಗೆ ಅಂಟಿಸಿಕೊಂಡು ಮೆರೆಯುವುದರಲ್ಲಿ ವಿಶ್ವಾಸವಿರಲಿಲ್ಲ. ಇಂತಹ ಬಿರುದುಗಳ ಪ್ರದರ್ಶನ ಅವರಿಗೆ ಬರಿಯ ವಿಡಂಬನೆಯಾಗಿ ಅನಿಸುತ್ತಿತ್ತು. ಅವರು ಕೂಡಲೇ ಒಂದು ಪತ್ರ ಬರೆದು ತನ್ನ ಹೆಸರಿಗೆ ಅಂತಹ ಬಿರುದನ್ನು ಹಚ್ಚಲೂ ಬಾರದು ಮತ್ತು ಅದರ ಪ್ರಚಾರವನ್ನೂ ಮಾಡಬಾರದು ಎಂದು ಎಲ್ಲ ಕಡೆ ಸೂಚನೆ ಕಳುಹಿಸಿದರು. ತಮ್ಮ ಪತ್ರದಲ್ಲಿ ಅವರು:

"ಡಾ. ಕುರ್ತಕೋಟಿ ಅವರು ನೀಡಿರುವ ಬಿರುದು ನಮಗೆ ಅಸಂಗತವಾಗಿದೆ. ಇದನ್ನು ಲಕ್ಷ್ಯದಲ್ಲಿರಿಸಿ ನಾವಾರೂ ಸಹ ಈ ಬಿರುದನ್ನು ಎಂದೂ ಮತ್ತು ಎಲ್ಲೇ ಆದರೂ ಸಹ ಬಳಸಲೇಬಾರದು. ಸಮಾಚಾರ ಪತ್ರಿಕೆಗಳಲ್ಲೂ ಇದರ ಪ್ರಚಾರವಾಗದಂತೆ ನೋಡಿಕೊಳ್ಳಬೇಕು" ಎಂದೂ ತಿಳಿಸಿದರು.

ಸಂಘದ ಕಾರ್ಯಕ್ರಮಗಳ ಸುದ್ದಿ ಮತ್ತು ವರದಿಗಳೇನೋ ಸ್ಥಾನೀಯ ಪತ್ರಿಕೆಗಳಲ್ಲಿ ಆಗಾಗ ಪ್ರಕಟವಾಗುತ್ತಿದ್ದವು. ಆದರೆ ಪತ್ರಿಕೆಗಳಲ್ಲಿ ಒಟ್ಟು ಸಂಘಟನೆಯ ಹಾಗೂ ಸಂಘದ ಪ್ರಮುಖರ ಪ್ರಚಾರ ಆಗದಂತೆ ಡಾ. ಹೆಡಗೇವಾರರು ತಡೆದರು. ಅನಗತ್ಯವಾಗಿ ಪ್ರಚಾರದ ಬೆನ್ನು ಹತ್ತುವುದು ಮತ್ತು ಈ ಪ್ರವೃತ್ತಿಯಲ್ಲಿ ಆಸಕ್ತಿ ತಾಳುವುದು ಇವುಗಳನ್ನು,

ಸಾರ್ವಜನಿಕ ರಂಗದಲ್ಲಿರುವ ಸ್ವಯಂಸೇವಕರ ಮಟ್ಟಿಗೆ ಚಾರಿತ್ರ್ಯದೋಷವನ್ನಾಗಿ ಅವರು ತಿಳಿಯುತ್ತಿದ್ದರು. ಪ್ರಸಿದ್ಧಿ ಮತ್ತು ಪ್ರಚಾರಗಳ ಬೆನ್ನು ಹತ್ತಿದಲ್ಲಿ ಸಂಘಟನೆಯು ತಾನು ನಿಂತ ನೆಲದಿಂದ ಸಂಬಂಧವನ್ನು ಕಡಿದುಕೊಂಡು ಕೇವಲ ಅಕ್ಷರದಲ್ಲಿ ಮತ್ತು ದೊಡ್ಡ ಕಟ್ಟಡಗಳಲ್ಲಿ ಮಾತ್ರ ಉಳಿದು ವಾಸ್ತವಿಕವಾಗಿ ತನ್ನ ಸಂಘಟನಾತ್ಮಕ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ. ಸಂಘದ ಆರಂಭದ ದಿನಗಳಲ್ಲಿ ಶಾಖೆಗಳಲ್ಲಿ ಈ ಮುಂದಿನ ಒಂದು ಹಾಡನ್ನು ಹಾಡಲಾಗುತ್ತಿತ್ತು.

ವೃತ್ತ – ಪತ್ರ ಮೇ ನಾಮ ಛಪೇಗಾ,
ಪಹನೂಂಗಾ ಸ್ವಾಗತ ಸಮುಹಾರ ।
ಛೋಡ ಚಲೊ ಯಹ ಕ್ಷುದ್ರ ಭಾವನಾ,
ಹಿಂದೂ ರಾಷ್ಟ್ರ ಕೆ ತಾರಣಹಾರ ॥
ಕಂಕಡ – ಪತ್ಥರ ಬನ–ಬನ ಹಮಕೊ
ರಾಷ್ಟ್ರ – ನೀಂವ ಕೊ ಭರನಾ ಹೈ
ಬ್ರಹ್ಮ ತೇಜ ಕೆ, ಕ್ಷಾತ್ರ ತೇಜ ಕೆ,
ಅಮರ ಪೂಜಾರಿ ಬನನಾ ಹೈ ॥

(ಭಾವಾರ್ಥ: ಸಮಾಚಾರ ಪತ್ರಿಕೆಗಳಲ್ಲಿ ಹೆಸರು ಮುದ್ರಿತವಾಗಬಹುದು, ಸ್ವಾಗತದಲ್ಲಿ ಹೂ ಹಾರವನ್ನು ನನಗೆ ಹಾಕಲೂ ಬಹುದು, ಇತ್ಯಾದಿ ಕ್ಷುಲ್ಲಕ ಭಾವನೆಗಳನ್ನು ತ್ಯಜಿಸಿ ಎಲೈ ಹಿಂದೂರಾಷ್ಟ್ರದ ಉದ್ಧಾರಕನೇ ಹೊರಡು. ನಾವು ಕಲ್ಲು ಶಿಲೆಯಾಗಿ ರಾಷ್ಟ್ರದ ಬುನಾದಿಯನ್ನು ದೃಢಪಡಿಸಬೇಕಾಗಿದೆ. ಬ್ರಹ್ಮತೇಜ, ಕ್ಷಾತ್ರತೇಜಗಳಿರುವ ಅಮರ ಪೂಜಾರಿ ನಾವಾಗಬೇಕಾಗಿದೆ.)

ಸ್ವಯಂಸೇವಕರ ಮನದಲ್ಲಿ ಎಂದಾದರೂ ಒಮ್ಮೊಮ್ಮೆ ಗೊತ್ತಿಲ್ಲದೆಯೇ ಈ ಪ್ರವೃತ್ತಿ ಜಾಗೃತಗೊಳ್ಳುತ್ತಿದ್ದಲ್ಲಿ, ಅವರು ಆ ಕೂಡಲೇ ಅದನ್ನು ತಡೆಯಲು ಕ್ರಮ ಕೈಗೊಳ್ಳುತ್ತಿದ್ದರು. ಈ ನಿಟ್ಟಿನಲ್ಲಿ ನೈತಿಕ ಒತ್ತಡ ಹಾಗೂ ಪ್ರೇರಣೆಯಿಂದ ತುಂಬಿರುವ ಪತ್ರವನ್ನು ಬರೆದು ಅಂತಹ ಕಾರ್ಯಕರ್ತನಿಗೆ ಅದನ್ನು ತಲುಪಿಸಲಾಗುತ್ತಿತ್ತು. ಅಂತಹ ಒಂದು ಪ್ರಸಂಗವು ಇಲ್ಲಿ ಉಲ್ಲೇಖನೀಯ. 1936ರ ಡಿಸೆಂಬರ್ 11ರಂದು ಅವರು ಉಮಾಕಾಂತ ಆಪ್ಟೆ ಮತ್ತು ವಸಂತರಾವ್ ಓಕ್ ಅವರಿಗೆ ಬರೆದಿದ್ದ ಪತ್ರದಲ್ಲಿ ದೆಹಲಿಯಲ್ಲಿ ಸಂಘದ ಕಾರ್ಯದ ಆರಂಭ, ಕಾರ್ಯದ ವ್ಯವಸ್ಥೆ ಮತ್ತು ಇನ್ನೂ ಅನೇಕ ಮುಖಗಳ ಕುರಿತು ಮಾರ್ಗದರ್ಶನ ಮಾಡುತ್ತ ಕೊನೆಯಲ್ಲಿ,

"ನೀವು ದೆಹಲಿಗೆ ತಲುಪಿರುವಿರಿ ಮತ್ತು ಅಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘದ ಕಾರ್ಯವನ್ನು ಆರಂಭಿಸಲಿರುವಿರಿ ಎಂದು, – ಯಾರದೋ ತಪ್ಪಿನಿಂದಲೇ ಇರಬಹುದು, ಆದರೂ – ಈಗಾಗಲೇ ಸಮಾಚಾರ ಪತ್ರಿಕೆಯಲ್ಲಿ ಪ್ರಕಟವಾಗಿರುವುದು ಸಂಘದ ದೃಷ್ಟಿಯಿಂದ ಉಚಿತವಾಗಲಿಲ್ಲ. ಈ ವಿಧದ ಪ್ರಸಿದ್ಧಿ ದೊರೆತಲ್ಲಿ ಕಾರ್ಯದ ಆರಂಭದಲ್ಲೇ ಹಲವು ವಿಧದಲ್ಲಿ ತೊಂದರೆಗಳಿಗೆ ಕಾರಣವಾಗುವ ಸಾಧ್ಯತೆಯಿದೆ. ಅದಕ್ಕಾಗಿ ನಮ್ಮ ಕೆಲಸದ ಆರಂಭದ ಬಗ್ಗೆ ಪ್ರಚಾರ ಮಾಡದೆ, ಜನರ ಮುಂದೆ ಪ್ರತ್ಯಕ್ಷವಾದ ಕಾರ್ಯದ ಮೂಲಕವೇ ಅದನ್ನು ಪರಿಚಯಿಸಿದಲ್ಲಿ, ಮುಂದೆ ತಾನಾಗಿಯೇ ಅದಕ್ಕೆ ಪ್ರಚಾರವೂ

ಲಭಿಸುವುದು. ಆಗ ಅದು ಸಂಘಟನೆಯ ಕಾರ್ಯಕ್ಕೆ ಲಾಭದಾಯಕವೂ ಆಗುವುದು. ಈ ವಿಚಾರವನ್ನು ಅಲ್ಲಿನವರಿಗೆ ವಿವರಿಸಿ ತಿಳಿಸಿ, ಮುಂದೆ ಇಂತಹ ತಪ್ಪಾಗದಂತೆ ಎಚ್ಚರ ವಹಿಸಿ"[5] ಎಂದು ಹೇಳಿದ್ದರು.

## ಸಾಮಾಜಿಕತೆ

ಸಾಮಾಜಿಕ ಜೀವನದಲ್ಲಿ ಭಿನ್ನಾಭಿಪ್ರಾಯ, ಸ್ಪರ್ಧೆ ಮತ್ತು ಸಂಘರ್ಷ ಇವೆಲ್ಲವೂ ಸಹಜವೇ. ವೈಚಾರಿಕ ವಾದ ವಿವಾದಗಳು ಉದ್ದೇಶರಹಿತವಾಗಿರಬಾರದು. ಕಾರಣವಿಲ್ಲದೆ ವ್ಯರ್ಥವಾಗಿ ವಿವಾದ ನಡೆಸುವುದರಿಂದ ಸಂಘಟನೆಗೆ ಲಾಭವೇನೂ ಇಲ್ಲ ಎಂಬುದೇ ಡಾ. ಹೆಡಗೇವಾರರ ಅಭಿಪ್ರಾಯವಾಗಿತ್ತು. ಈ ವಿಷಯದಲ್ಲಿ ಅವರು ಸಮರ್ಥ ರಾಮದಾಸರ 'ತುಟೆ ವಾದ ಸಂವಾದ ತೊ ಹಿತಕಾರಿ' ಎಂಬ ವಾಕ್ಯವನ್ನು ಉಲ್ಲೇಖಿಸುತ್ತಿದ್ದರು. ಆ ವಾಕ್ಯದ ಅರ್ಥ: ಪೂರ್ವಾಗ್ರಹದಿಂದ ಮುಕ್ತವಾದ ರಚನಾತ್ಮಕ ಸಂವಾದವು ಯಾವಾಗಲೂ ಲಾಭದಾಯಕ.

ಸಾಮಾಜಿಕ ಮತ್ತು ರಾಷ್ಟ್ರೀಯ ಸಂಘಟನೆಗಳ ಕಾರ್ಯದ ಬಗ್ಗೆ ಆರೋಪ ಪ್ರತ್ಯಾರೋಪಗಳು ಮತ್ತು ಟೀಕೆಗಳಾದಾಗ ಡಾ. ಹೆಡಗೇವಾರರು ಸ್ವತಃ ಎಂದೂ ವಿಚಲಿತರಾಗುತ್ತಿರಲಿಲ್ಲ. 1937ರಲ್ಲಿ ಅವರು ವಾರಾಣಸಿಗೆ ಹೋಗಿದ್ದರು. ಆಗ ಅಲ್ಲಿನ ಸಮಾಜವಾದಿಗಳ ಗುಂಪು ಅವರನ್ನು 'ಮೃದು ಫ್ಯಾಸಿಸ್ಟ್ ನಾಯಕ'ರೆಂದು ಜರಿಯುತ್ತಾ ಕರಪತ್ರಗಳನ್ನು ಹಂಚಿತ್ತು. ಆದರೆ ಡಾ. ಹೆಡಗೇವಾರರು ಇದರ ಬಗ್ಗೆ ಸ್ವಲ್ಪವೂ ತಲೆ ಕೆಡಿಸಿಕೊಳ್ಳಲಿಲ್ಲ ಮತ್ತು ಕಸಿವಿಸಿಗೊಳ್ಳಲೂ ಇಲ್ಲ. "ಸಂಘವು ಪ್ರಜಾಪ್ರಭುತ್ವವಾದಿಯೋ ಅಥವಾ ಫ್ಯಾಸಿಸಂವಾದಿಯೋ ಎಂಬುದನ್ನು ಬರಲಿರುವ ದಿನಗಳಲ್ಲಿ ಸಂಘದ ಭವಿಷ್ಯದ ಸ್ವರೂಪವೇ ಸಮಾಜಕ್ಕೆ ತಿಳಿಯಪಡಿಸಲಿದೆ" ಎಂದು ಅವರು ಆ ಕರಪತ್ರಕ್ಕೆ ತಮ್ಮ ಪ್ರತಿಕ್ರಿಯೆಯನ್ನು ತಿಳಿಸಿದರು. ಈ ವಿಧದಲ್ಲಿ ಪೂರ್ವಾಗ್ರಹಗಳನ್ನು ಮನದಲ್ಲಿ ಬೆಳೆಸಿಕೊಂಡವರಿಗೆ ಪ್ರತ್ಯುತ್ತರ ನೀಡಿದ ಮಾತ್ರದಿಂದ ಅವರೇನೂ ತೃಪ್ತರಾಗುತ್ತಾರೆಂದಲ್ಲ. ಅಂತಹ ಅರ್ಥಹೀನ ಹಳಸಲು ವಿಚಾರದ ಟೀಕಾಕಾರರನ್ನು ಉಪೇಕ್ಷಿಸುವುದೇ ಉಚಿತವೆಂದು ಅವರು ಬಗೆದರು. 1937ರ ಅಕ್ಟೋಬರ್ 30ರಂದು ಅವರು ಕಾಶೀನಾಥ ರಾವ್ ಲಿಮಯೆ ಅವರಿಗೆ ಬರೆದಿದ್ದ ಪತ್ರದಲ್ಲಿ, "ನಾನು ಅಲ್ಲಿಗೆ (ಬನಾರಸ್) ತಲುಪುವ ಒಂದು ದಿನ ಮೊದಲು ಅಲ್ಲಿನ ಹಿಂದೂ ವಿಶ್ವವಿದ್ಯಾಲಯದ ಕೆಲವು ವಿದ್ಯಾರ್ಥಿಗಳು ಒಂದು ಕರಪತ್ರವನ್ನು ಮುದ್ರಿಸಿ ಹಂಚಿದ್ದರು. ಆ ಕರಪತ್ರದ ಕಾರಣದಿಂದಾಗಿ ನಾವು ಕೋಪಿಸಿಕೊಳ್ಳಬಹುದು ಮತ್ತು ನಮ್ಮ ಕಾರ್ಯಕ್ರಮವೂ ಕೆಡಬಹುದು ಎಂದು ಅವರು ಬಗೆದಿದ್ದಿರಬಹುದು. ಅಲ್ಲಿ ತಲುಪಿದಂತೆಯೇ ಸಂಘದ ಕಾರ್ಯಕರ್ತರು ನನಗೆ ಸಮಾಜವಾದಿಗಳ ಆ ಕರಪತ್ರವನ್ನು ತೋರಿಸಿದರು. ನಮ್ಮ ನಿತ್ಯದ ಪದ್ಧತಿಯಂತೆ ನಾನು ಆ ಕರಪತ್ರವನ್ನು ನೋಡಿಯೇ ಇಲ್ಲವೆಂಬಂತೆ ತೋರಿಸಿಕೊಂಡೆ ಹಾಗೂ ನಮ್ಮ ಇತರರಿಗೂ ಅದನ್ನೇ ಹೇಳಿದೆ. ನಾನು ಈ ರೀತಿಯಲ್ಲಿ ನೀಡಿದ್ದ ಸಲಹೆ ಎಲ್ಲರಿಗೂ ಮೆಚ್ಚುಗೆಯಾಯಿತು."

---

5. ಡಾ. ಹೆಡಗೇವಾರ : ಪತ್ರರೂಪ ವ್ಯಕ್ತಿದರ್ಶನ, ಸಂಪಾದಕ ನಾ.ಹ. ಪಾಲ್ಕರ್, ಅರ್ಚನಾ ಪ್ರಕಾಶನ, ಇಂದೋರ್ 1989, ಪುಟ-74

ಸಂಘದ ಸ್ವಯಂಸೇವಕರಿಗೆ ಅವರು ಇದೇ ವಿಧದ ಸಲಹೆ ನೀಡುತ್ತಿದ್ದರು. ಸಂಘದ ಕಾರ್ಯ ಬೆಳೆದು ವಿಸ್ತಾರಗೊಳ್ಳುತಿದ್ದಂತೆಯೇ ಪತ್ರಿಕೆಗಳಲ್ಲಿ ಮತ್ತು ರಾಜಕೀಯ ಸಭೆಗಳಲ್ಲೂ ಸಂಘದ ಕುರಿತು ಏನೇನೋ ಊಹಾಪೋಹಗಳನ್ನು ಮಾಡಿಕೊಂಡು ಹೇಳಲಾಗುತಿತ್ತು. ಮಹಾರಾಷ್ಟ್ರದ ಕೆಲವು ಪತ್ರಿಕೆಗಳಾದ – 'ನವಯುಗ', 'ಮಾತೃಭೂಮಿ', 'ವಂದೇಮಾತರಂ' ಮೊದಲಾದವುಗಳಲ್ಲಿ ಸಂಘದ ಬಗ್ಗೆ ಮನ ಬಂದಂತೆ ಏನೇನೋ ಕತೆಗಳು ಬರಲಾರಂಭಿಸಿದ್ದವು. ಉದಾಹರಣೆಗಾಗಿ ಪಶ್ಚಿಮ ಮಹಾರಾಷ್ಟ್ರದ ಒಂದು ಪತ್ರಿಕೆಯಲ್ಲಿ 1938ರ ಆಗಸ್ಟ್ 11ರಂದು "ರಾಷ್ಟ್ರೀಯ ಸ್ವಯಂಸೇವಕ ಸಂಘವು ಚಾಂದಾದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯನ್ನು ನಿಷೇಧಿಸುವ ಸಲುವಾಗಿ ಒಂದು ಸಾರ್ವಜನಿಕ ಸಭೆಯನ್ನು ಏರ್ಪಡಿಸಿದೆ" ಎಂಬ ತಲೆಬುಡ ಒಂದೂ ಇಲ್ಲದ ಸುದ್ದಿಯೊಂದು ಪ್ರಕಟಗೊಂಡಿತ್ತು. ಇಂತಹ ಸುದ್ದಿಗಳನ್ನು ಪೂರಾ ನಿರ್ಲಕ್ಷಿಸಬೇಕು ಎಂಬುದೇ ಡಾ. ಹೆಡಗೇವಾರರು ಸಂಘದ ಕಾರ್ಯಕರ್ತರಿಗೆ ನೀಡುತಿದ್ದ ಸಲಹೆ. 1937ರ ನವೆಂಬರ್ 12ರಂದು ಅವರು ಕಾಶೀನಾಥ ರಾವ್ ಲಿಮಯೆ ಅವರಿಗೆ ಬರೆದ ಪತ್ರದಲ್ಲಿ : "ಪತ್ರಿಕೆಗಳಲ್ಲಿ ಮತ್ತು ಸಾರ್ವಜನಿಕ ಸಭೆಗಳಲ್ಲಿ ಸಂಘದ ಬಗ್ಗೆ ದುರುದ್ದೇಶದಿಂದ ಮಾಡಲಾಗುವ ಟೀಕೆ ಅಥವಾ ಇನ್ನಾವುದೇ ವಿಧದ ನಿಂದಾತ್ಮಕ ಹೇಳಿಕೆ ಬಗ್ಗೆ ನಮ್ಮವರು ಯಾರೂ ಪ್ರತ್ಯುತ್ತರ ನೀಡುವ ಗೋಜಿಗೆ ಹೋಗಲೇಬಾರದು" ಎಂದು ಮತ್ತು ಮುಂದೆ ಅದೇ ಪತ್ರದಲ್ಲಿ "ನಿಮ್ಮ ಕ್ಷೇತ್ರದಲ್ಲಿ ಸಂಘದ ವಿರುದ್ಧ ಎಬ್ಬಿಸಲಾಗಿರುವ ವೈಚಾರಿಕ ಬಿರುಗಾಳಿ ಇಲ್ಲಿ ನಮಗೆಲ್ಲ ಒಂದು ಮನರಂಜನೆಯ ವಿಷಯವಾಗಿದೆ. ಇಂತಹ ವೈಚಾರಿಕ ಬಿರುಗಾಳಿಯ ಪ್ರಭಾವ ನಮ್ಮ ಬುದ್ಧಿ ಮನಗಳ ಮೇಲೆ ಕಿಂಚಿತ್ತೂ ಆಗುವುದಿಲ್ಲ, ಆಗಲೂಬಾರದು" ಎಂದು ಸ್ಪಷ್ಟಪಡಿಸಿದ್ದರು.

ಇಂತಹ ವೈಚಾರಿಕ ಸಂಘರ್ಷಗಳ ಕಾರಣದಿಂದಾಗಿ ತಮ್ಮ ಸಾಮಾಜಿಕ ಚಟುವಟಿಕೆಗಳಲ್ಲಾಗಲಿ, ವ್ಯಾವಹಾರಿಕ ಜೀವನದಲ್ಲಾಗಲಿ ಕಹಿ ಬೆಳೆಯದಂತೆ ಎಚ್ಚರವನ್ನೂ ಅವರು ವಹಿಸಿದ್ದರು. ಮಧ್ಯಪ್ರಾಂತದ ಫಾರ್ವರ್ಡ್ ಬ್ಲಾಕ್‌ನ ನಾಯಕ ರಾಮಭಾವು ರುಯಿೀಕರ್ ಅವರ ಜತೆಯಲ್ಲಿ ಡಾ. ಹೆಡಗೇವಾರರ ಸಂಬಂಧವು ಆತ್ಮೀಯ ಮಿತ್ರನಂತಿರುತ್ತಿತ್ತು. ಇಂತಹ ಇನ್ನೂ ಅಸಂಖ್ಯ ಉದಾಹರಣೆಗಳಿವೆ. ವೈಚಾರಿಕ ಭಿನ್ನಾಭಿಪ್ರಾಯಗಳಿಂದ ಪರಸ್ಪರರಲ್ಲಿನ ಮಾನವೀಯ ಸಂಬಂಧಗಳು ಪ್ರಭಾವಿತವಾಗಬಾರದು ಎಂಬ ಸಂಗತಿಯು ಡಾ. ಹೆಡಗೇವಾರರದ್ದೇ ಒಂದು ವಿಶೇಷತೆಯಾಗಿತ್ತು. ಅಸಹಕಾರ ಚಳವಳಿಯ ಸಂದರ್ಭದಲ್ಲಿ ಅವರು ಸೆರೆಮನೆಯಲ್ಲಿದ್ದಾಗ, ಅವರ ಜತೆಯಲ್ಲಿ ಬಂಧಿತರಾಗಿ ಶಿಕ್ಷೆ ಅನುಭವಿಸುತಿದ್ದ ಮಧ್ಯಪ್ರಾಂತದ ರಾಷ್ಟ್ರವಾದಿ ನಾಯಕ ಕರ್ಮವೀರ ಪಾಠಕ್ ಅವರು, "ನನಗೆ ಅವರೊಡನೆ ಭಿನ್ನಾಭಿಪ್ರಾಯದ ಕಾರಣದಿಂದಾಗಿ ನಾನು ಡಾಕ್ಟರ್‌ಜಿ ಅವರ ಜತೆಯಲ್ಲಿ ನಿರಾಸಕ್ತ ರೀತಿಯಲ್ಲಿ ವ್ಯವಹರಿಸುತ್ತಿದ್ದೆ. ಆದರೆ ಅವರು ಮಾತ್ರ ಅತ್ಯಂತ ಸ್ನೇಹದಿಂದಲೇ ವ್ಯವಹರಿಸುತ್ತಿದ್ದರು. ಪರಸ್ಪರ ಭಿನ್ನಾಭಿಪ್ರಾಯಗಳು ಮೈತ್ರಿ ಮುರಿಯುವಷ್ಟು ಪ್ರಮಾಣದಲ್ಲಿ ತೀವ್ರಗೊಳ್ಳಲು ಅವರು ಬಿಡುತ್ತಿರಲಿಲ್ಲ" ಎಂದಿದ್ದರು.

ಕಾಂಗ್ರೆಸ್ ಅಥವಾ ಸಮಾಜವಾದಿಗಳು ಸಂಘಕ್ಕೆ ತೋರುವಂತಹ ವಿರೋಧವನ್ನು ವಿನಮ್ರವಾಗಿ ಉತ್ತರಿಸಬೇಕೆಂದು ಅವರು ಸ್ವಯಂಸೇವಕರಿಗೆ ಆಗ್ರಹಪೂರ್ವಕ ತಿಳಿಸುತ್ತಿದ್ದರು. ಸಂಘವನ್ನು ವಿರೋಧಿಸುವಂತಹವರನ್ನು ಅಥವಾ ಸಂಘದ ಜತೆ ಭಿನ್ನಾಭಿಪ್ರಾಯವುಳ್ಳವರನ್ನೂ ಸಂಘದ ಕಾರ್ಯಕ್ರಮದಲ್ಲಿ ವಕ್ತಾರರಾಗಿ ಬರುವಂತೆಯೂ

ಅವರು ಆಹ್ವಾನಿಸುತ್ತಿದ್ದುದುಂಟು. ಸಂಘದ ವಿಚಾರದಿಂದ ಪೂರ್ತಿ ದೂರವಾಗಿ ಮುಂದೆ ಕಮ್ಯುನಿಸ್ಟ್ ವಿಚಾರದ ಪ್ರತಿಪಾದಕರಾಗಿ ಬದಲಾಗಿದ್ದ, ಸಂಘದ ಮೊದಲ ಸರಕಾರ್ಯವಾಹ ಬಾಳಾಜಿ ಹುದ್ದಾರ್ ಅವರನ್ನು ಶಾಖಾದಲ್ಲಿ ಮತ್ತು ಓ.ಟಿ.ಸಿ.ಯಲ್ಲೂ ಬರುವಂತೆ ಅವರು ಆಹ್ವಾನಿಸಿದ್ದರು. ಅದೇ ರೀತಿ ಸೇವಾದಳದ ಸಂಸ್ಥಾಪಕರಾಗಿದ್ದ ಎನ್.ಎಸ್. ಹರ್ಡೀಕರ್ ಅವರನ್ನು ಸಹ ತರಬೇತಿ ಶಿಬಿರಕ್ಕೆ ಬರಲು ಆಹ್ವಾನಿಸುತ್ತಿದ್ದರು.

ವ್ಯಕ್ತಿಗತವಾದ ಪೂರ್ವಗ್ರಹದ ಕಾರಣಕ್ಕಾಗಿ ರಾಷ್ಟ್ರೀಯ ಮತ್ತು ಸಾಮಾಜಿಕ ಕೆಲಸಗಳಲ್ಲಿ ತಮ್ಮ ಪಾಲಿನ ಸೇವೆ ಸಲ್ಲಿಸುವುದಕ್ಕೆ ಅಡ್ಡಿಯಾಗಬಾರದು ಎಂಬಂತೆ ವಿಚಾರ ಮಾಡುವವರು ಇರುವುದೇ ವಿರಳ. 1928ರ ಅಕ್ಟೋಬರ್ ನಲ್ಲಿ ನಾಗಪುರದಲ್ಲಿ ಲೋಕಮಾನ್ಯ ತಿಲಕ್‌ರ ಮೂರ್ತಿಯ ಅನಾವರಣವಾಯಿತು. ಈ ಕಾರ್ಯಕ್ರಮವನ್ನು ಏರ್ಪಡಿಸಿದವರು ಮಧ್ಯಪ್ರಾಂತದ ಕಾಂಗ್ರೆಸ್‌ನ ನಾಯಕರಾಗಿದ್ದ ಮೋರೂಭಾವೂ ಅಭ್ಯಂಕರ್ ಅವರು. ಡಾ. ಹೆಡಗೇವಾರರ್ ಅವರು ತಮ್ಮ ಎದುರಾಳಿ ಡಾ. ಬಿ. ಎಸ್. ಮುಂಜೆ ಅವರ ಅನುಯಾಯಿ ಎಂಬ ಹಿನ್ನೆಲೆಯಲ್ಲಿ ಡಾ. ಹೆಡಗೇವಾರರನ್ನು ಅವರು ಕಾರ್ಯಕ್ರಮಕ್ಕೆ ಆಮಂತ್ರಿಸಿರಲಿಲ್ಲ. ಆದರೆ ಹುಟ್ಟಿನಿಂದಲೂ ತನ್ನ 'ಅಹಂ' ಅನ್ನು ಪೂರಾ ಅಳಿಸಿ ಹಾಕಿದ್ದವರಿಗೆ ಇಂತಹ ಸಂಗತಿಗಳಲ್ಲಿ ಸ್ವಪ್ರತಿಷ್ಠೆ ಅಡ್ಡ ಬರುವುದು ಹೇಗೆ ಸಾಧ್ಯ? ಡಾ. ಹೆಡಗೇವಾರರ ದೃಷ್ಟಿಯಲ್ಲಿ ತಿಲಕರ ಮೂರ್ತಿ ಅನಾವರಣವಾಗಲಿರುವುದೇ ಮುಖ್ಯವಾಗಿತ್ತು. ಅವರು ಸ್ವಯಂಸೇವಕರನ್ನು ಜೊತೆಗೂಡಿಸಿ ಆ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಅಲ್ಲಿ ಅವರು ಕಾಂಗ್ರೆಸ್ ನಾಯಕ ಡಾ. ಅನ್ಸಾರಿ ಅವರಿಗೆ 'ಗಾರ್ಡ್ ಆಫ್ ಆನರ್' ಸಹ ನೀಡಿದರು.

ಅದಕ್ಕಿಂತಲೂ ಹೆಚ್ಚಿನ ಉದ್ಬೋಧಕ ಉದಾಹರಣೆಯೊಂದಿದೆ. 1937ರಲ್ಲಿ ಸ್ವಾತಂತ್ರ್ಯವೀರ ಸಾವರಕರರು ವಿದರ್ಭದಲ್ಲಿ ಪ್ರವಾಸ ಕೈಗೊಂಡಿದ್ದರು. ಈ ಪ್ರವಾಸದ ಪೂರ್ಣ ಅವಧಿಯಲ್ಲಿ ಡಾ. ಹೆಡಗೇವಾರರು ಅವರ ಜತೆಯಲ್ಲಿದ್ದರು ಮತ್ತು ಅದನ್ನು ಯಶಸ್ವಿಗೊಳಿಸಲು ಸರ್ವವಿಧ ವ್ಯವಸ್ಥೆಯನ್ನೂ ಅವರು ಮಾಡಿದ್ದರು. ತಮ್ಮ ಪ್ರವಾಸದ ಕೊನೆಯ ದಿನದಂದು ಸಾವರಕರರು ಸಾರ್ವಜನಿಕ ಸಭೆಯಲ್ಲಿ ಸಂಘದ ಬಗ್ಗೆ ತುಂಬ ಪ್ರಶಂಸೆಯನ್ನು ಮಾಡಿದರು.ನಿವಾಸಕ್ಕೆ ವಾಪಸ್ ಬಂದ ಮೇಲೆ ಡಾ. ಹೆಡಗೇವಾರರ ಬಳಿ "ನಾನು ಸಂಘದ ಸ್ವಯಂಸೇವಕನಾಗಲೇ?" ಎಂದು ಪ್ರಶ್ನಿಸಿದರು. ಆಗ ಡಾ.ಹೆಡಗೇವಾರರು "ನೀವು ಸಭೆಯಲ್ಲಿ ಸಂಘದ ಬಗ್ಗೆ ತುಂಬ ಪ್ರಶಂಸೆಯ ಮಾತುಗಳನ್ನಾಡಿದ್ದೀರಿ. ಅದೇ ಸಾಕು ನಮಗೆ. ಈ ಸ್ನೇಹ ಸದಾಕಾಲವೂ ಉಳಿಯಲಿ" ಎಂದರು.

ಮರು ವರ್ಷ 1938ರಲ್ಲಿ ನಾಗಪುರದಲ್ಲಿ ಸಾವರಕರರ ಸಂಚಾರ ಪ್ರವಾಸ ನಡೆಯಿತು. ಆ ಸಮಯದಲ್ಲಿ ಸಂಘದ ಶಿಬಿರ ನಡೆಯುತ್ತಿತ್ತು. ಈ ಪ್ರವಾಸದಲ್ಲೂ ಸಾವರಕರರ ಸಭೆ ಯಶಸ್ವಿಯಾಗುವಂತೆ ಸ್ವಯಂಸೇವಕರು ಸರ್ವ ವಿಧದಲ್ಲೂ ಸಹಕರಿಸಿದರು. ನಾಗಪುರ ವಿಶ್ವವಿದ್ಯಾಲಯದಲ್ಲೂ ಅವರ ಕಾರ್ಯಕ್ರಮವು ಸೊಗಸಾಗಿ ಆಯಿತು. ಅವರ ನಾಗಪುರದ ಪ್ರವಾಸದ ಬಗ್ಗೆ ಪತ್ರಿಕೆಗಳು 'He came, he saw and he conquered' ಎಂದು ಬಣ್ಣಿಸಿದವು. ಆದರೆ ಸಂಘದ ಶಿಬಿರದಲ್ಲಿ ಸ್ವಯಂಸೇವಕರನ್ನು ಉದ್ದೇಶಿಸಿ ಮಾಡಿದ ಭಾಷಣದಲ್ಲಿ ಸಾವರಕರರು ಸಂಘವನ್ನು ಟೀಕಿಸಿದರು. ಅವರು "ದಂಡ-ಗಿಂಡ ತಿರುಗಿಸಿ ಮತ್ತು ಪೆರೇಡ್ ಮಾಡುವುದರಲ್ಲೇನಿದೆ? ಸಮಾಜದ ನಡುವೆ

ಹೋಗಿ ಜಾಗೃತಿ ಮಾಡಬೇಕಾಗಿದೆ" ಎಂದು ವ್ಯಂಗ್ಯವಾಗಿ ಮಾತಾಡಿದರು. ಇದನ್ನು ಕೇಳಿದ ಸ್ವಯಂಸೇವಕರಿಗೆ ಬಹಳ ಕೆಟ್ಟದೆನಿಸಿತು. ಆದರೆ ಡಾ. ಹೆಡಗೇವಾರರು ತಮ್ಮ ಯಾವುದೇ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಲಿಲ್ಲ. ಪತ್ರಿಕೆಗಳಿಗೂ ಸಾವರಕರರ ಭಾಷಣದ ಸಕಾರಾತ್ಮಕ ಸಂಗತಿಗಳನ್ನು ಮಾತ್ರ ತಲಪಿಸಿದರು.

ಶಿಬಿರದಲ್ಲಿ ಸಾವರಕರರ ಭಾಷಣದಿಂದ ಸ್ವಯಂಸೇವಕರಲ್ಲಿ ಉಂಟಾದ ಪರಿಣಾಮ ದೂರಗೊಳಿಸುವ ಹಾಗೂ ಅವರ ಲಕ್ಷ್ಯವನ್ನು ಮುಖ್ಯ ಕಾರ್ಯದ ಕಡೆಗೆ ಸೆಳೆಯುವ ಸಲುವಾಗಿ ಡಾ. ಹೆಡಗೇವಾರರು 'ಹದಿಮೂರನೆಯ ವಾರ್ಷಿಕ ಸಿಂಹಾವಲೋಕನ' ಎಂಬ ಸುವಿಖ್ಯಾತ ಭಾಷಣವನ್ನು ಮಾಡಿದರು. ಅದರಲ್ಲಿ ಸಂಘದ ಸ್ಥಾಪನೆಯಿಂದ ಮೊದಲ್ಗೊಂಡು ಅಲ್ಲಿನವರೆಗೆ ಆಗಿರುವ ಸಂಘಕಾರ್ಯದ ಬೆಳವಣಿಗೆಯ ವಿವರಗಳನ್ನು ಅಂಕಿ ಅಂಶ ಸಹಿತ ತಿಳಿಸುತ್ತಾ ಸ್ವಾತಂತ್ರ್ಯವೀರ ಸಾವರಕರರು ಸಂಘದ ವಿರುದ್ಧ ಹೇಳಿರುವ ಸಂಗತಿಗಳ ಮೇಲೆ ಮುಸುಕು ಎಳೆದರು. ಈ ಸಂಗತಿ ಸಾವರಕರರ ಲಕ್ಷ್ಯಕ್ಕೂ ಬಂತು.

ಮುಂದಿನ ವರ್ಷ ಪುಣೆಯ ಸಂಘ ಶಿಕ್ಷಾ ವರ್ಗದಲ್ಲಿ ಡಾ. ಹೆಡಗೇವಾರರು ಇದ್ದ ದಿನಗಳಲ್ಲೆ ಸಾವರಕರರು ಮುಂಬಯಿಯಿಂದ ಪುಣೆಗೆ ಬಂದಿದ್ದರು. ಸ್ಟೇಶನ್‌ನಲ್ಲಿ ಹಿಂದೂ ಮಹಾಸಭೆಯ ಕಾರ್ಯಕರ್ತರು ಅವರೆಲ್ಲಿಗೆ ಹೋಗಲಿರುವರೆಂದು ವಿಚಾರಿಸಿದಾಗ ಸಾವರಕರರು ತಾನು ಸಂಘದ ವರ್ಗಕ್ಕೆ ಹೋಗುವುದಾಗಿ ಹೇಳಿದರು. ಕಾರ್ಯಕರ್ತರು "ಆದರೆ ನಿಮ್ಮನ್ನು ಕರೆದೊಯ್ಯಲು ಸಂಘದಿಂದ ಯಾರೂ ಬಂದೇ ಇಲ್ಲವಲ್ಲ" ಎಂದು ಆಶ್ಚರ್ಯ ವ್ಯಕ್ತಪಡಿಸಿದಾಗ, ಸಾವರಕರರು "ನಮ್ಮ ಮನೆಗೆ ಹೋಗಲು ಯಾರಾದರೂ ಕರೆಯಲು ಬರಬೇಕೇನು"? ಎಂದು ಕಾರ್ಯಕರ್ತರನ್ನೇ ಕೇಳಿದರು. ಸಾವರಕರರು ನೇರವಾಗಿ ವರ್ಗಕ್ಕೆ ಬಂದು ತಲಪಿದರು. ಡಾ. ಹೆಡಗೇವಾರರಿಗೆ ಇದು ಗೊತ್ತಾದಾಗ ಅವರಿಗೆ ಭಾರೀ ಖುಷಿಯಾಯಿತು. ಅವರು ಸ್ವಯಂಸೇವಕರನ್ನು ಉದ್ದೇಶಿಸಿ ಹೀಗೆ ಹೇಳಿದರು: "ಇಂದು ನಮ್ಮೆಲ್ಲರ ಸೌಭಾಗ್ಯದಿಂದ ತಾತ್ಯಾರಾವ್ ಸಾವರಕರರು ನಮ್ಮ ನಡುವೆ ಬಂದಿದ್ದಾರೆ. ಅವರು ನಮಗೆಲ್ಲ ಮಾರ್ಗದರ್ಶನ ಮಾಡಬೇಕೆಂದು ನಾನು ಅವರನ್ನು ವಿನಂತಿಸುತ್ತೇನೆ."

ಸಾವರಕರರು ಅಂದು ಮಾಡಿದ್ದ ಭಾಷಣ, ಡಾ. ಹೆಡಗೇವಾರರು ತಮ್ಮ ಸೌಮ್ಯ ಸ್ವಭಾವದಿಂದ ಜನರ ಮನಸ್ಸನ್ನು ಹೇಗೆ ಗೆಲ್ಲುತ್ತಿದ್ದರು ಎಂಬುದಕ್ಕೆ ಒಂದು ತಾಜಾ ಪುರಾವೆಯಾಗಿದೆ. ಸಾವರಕರರು "ನಮ್ಮ ಕಾರ್ಯವಾದರೂ ಮುಸಲಧಾರೆ ಮಳೆಯಂತೆ. ಅದು ತುಸು ಕಾಲ ಅಬ್ಬರದಿಂದ ಸುರಿದು, ಎಲ್ಲವನ್ನು ಜಲಮಯಗೊಳಿಸಿ ಕೊನೆಯಲ್ಲಿ ಹರಿದು ಹೋಗುತ್ತದೆ, ಅಷ್ಟೇ. ಆದರೆ ಡಾ.ಹೆಡಗೇವಾರರ ಕೆಲಸ ಓರ್ವ ಯಶಸ್ವಿ ರೈತನಂತೆ. ಅವನು ಮಳೆ ನೀರನ್ನು ತಡೆ ಹಿಡಿದು ಸಂಗ್ರಹಿಸಿಡುತ್ತಾನೆ. ನಂತರ ಅದನ್ನು ತನಗೆ ಬೇಕಾದಂತೆ ಬಳಸಿಕೊಳ್ಳುತ್ತಾನೆ. ನೀವೆಲ್ಲರೂ ಡಾ. ಹೆಡಗೇವಾರರು ತೋರಿರುವ ಮಾರ್ಗವನ್ನೇ ಅನುಸರಣೆ ಮಾಡಬೇಕು" ಎಂದು ತಮ್ಮ ಭಾಷಣದಲ್ಲಿ ಹೇಳಿದ್ದರು.[6]

---

6. ಕು.ಸೀ. ಸುದರ್ಶನ ಅವರ ಜತೆ ಲೇಖಕರ ಭೇಟಿಯಲ್ಲಿ 28.12.2002

ಡಾ. ಹೆಡಗೇವಾರರು ತಮ್ಮ ಸಾರ್ವಜನಿಕ ಬದುಕಿನಲ್ಲಿ ತಮ್ಮ ಮಾತು, ರೀತಿ ಇವೆಲ್ಲದರಲ್ಲೂ ಸಂಯಮ ಕಾಪಾಡಿಕೊಳ್ಳುತ್ತಿದ್ದರು. ಸಮರ್ಥ ರಾಮದಾಸರ 'ದಾಸಬೋಧ'ದಲ್ಲಿನ ಈ ಮುಂದಿನ ಉಕ್ತಿಗಳನ್ನು ಅವರು ತಮ್ಮ ದಿನಚರಿಯಲ್ಲಿ 1930ರಲ್ಲಿ ಬರೆದಿರಿಸಿದ್ದರು.

'ಬೋಲಣ್ಯಾಸಾರಖೇಂ ಚಾಲಣೇಂ । ಸ್ವಯಂ ಕರೂನಿ ಬೋಲಣೆ ।'

(ಹೇಳಿದಂತೆ ಮಾಡಬೇಕು, ಮೊದಲು ಮಾಡಿ ನಂತರ ಮಾತಾಡಿ)

'ಕ್ರಿಯೇ ವಿಣ ಶಬ್ದಜ್ಞಾನ । ತೇಂಚಿ ಶ್ವಾನಾಚೇಂ ವಮನ ।'

(ಕೃತಿ ಇಲ್ಲದ ಶಬ್ದಜ್ಞಾನ ನಾಯಿ ವಾಂತಿ ಮಾಡಿದಂತೆ)

'ಠಾಯೀಂ ಠಾಯೀಂ ಶೋಧ ಘ್ಯಾವಾ ಮಗ ಗ್ರಾಮೀ ಪ್ರವೇಶ ಕರಾ ।'

(ಶೋಧಿಸಿ ತಿಳಿದ ಮೇಲಷ್ಟೇ ಗ್ರಾಮವನ್ನು ಪ್ರವೇಶಿಸಬೇಕು)

'ಕಷ್ಟೇ ವಿಣ ಫಲ ನಾಹೀಂ । ಕಷ್ಟೇ ವಿಣ ರಾಜ್ಯ ನಾಹೀಂ

ಕೇಲ್ಯಾ ವಿಣ ಹೋತ ನಾಹೀಂ ಸಾಧ್ಯ ಜನೀಂ ।'

(ಕಷ್ಟವಿಲ್ಲದೆ ಫಲ ಸಿಕ್ಕದು ಕಷ್ಟವಿಲ್ಲದೆ ರಾಜ್ಯ ಲಭಿಸದು

ಕೃತಿಯಿಲ್ಲದೆ ಜಗತ್ತಿನಲ್ಲಿ ಯಾವುದೂ ಸಾಧ್ಯವಿಲ್ಲ)

## ಆಚಾರ

ಹಿಂದೂ ಜೀವನಪದ್ಧತಿಯಲ್ಲಿ ಉದಾರತೆ ಮತ್ತು ಸುಧಾರಣೆಯ ಮನೋಭಾವವನ್ನು ನಿರಂತರವಾಗಿ ಅಳವಡಿಸಿಕೊಳ್ಳಬೇಕೆಂದು ಡಾ. ಹೆಡಗೇವಾರರು ಅಪೇಕ್ಷಿಸುತ್ತಿದ್ದರು. ವ್ಯಕ್ತಿಯೊಬ್ಬ ತನ್ನ ಬದುಕಿನ ಆಚಾರ ಮತ್ತು ವ್ಯವಹಾರದಲ್ಲಿ ಸ್ವತಂತ್ರವಾಗಿರಬೇಕು. ಆದರೆ ಅತಿ ಆಚಾರದ ಆಗ್ರಹಿಯಾದಲ್ಲಿ ಸಮಾಜದ ಪ್ರಗತಿಗೆ ಬಾಧಕವೂ ಆಗಬಹುದು. ಡಾ. ಹೆಡಗೇವಾರರಿಗೆ ರೂಢಿರಿವಾಜುಗಳ ತಾಪತ್ರಯ ಎದುರಿಸಬೇಕಾಗಿ ಬರುತ್ತಿದ್ದುದು ಸ್ವತಃ ತಮ್ಮ ಮನೆಯಲ್ಲಿಯೇ. ಅವರ ಅಣ್ಣ ಸೀತಾರಾಮ ಪಂತರಿಗೆ ಹಿಂದೂ ಧರ್ಮದಲ್ಲಿರುವ ಜಾತಿ ಪದ್ಧತಿ ಮತ್ತು ಆಚಾರದ ಮೇಲೆ ಪರಮ ವಿಶ್ವಾಸ. ಅಣ್ಣ ತಮ್ಮಂದಿರಲ್ಲಿ ಈ ಬಗ್ಗೆ ಚರ್ಚೆಗಳೂ ಆಗುತ್ತಿದ್ದವು. ಚಿಂತನೆಯ ರೀತಿಯಲ್ಲಿ ಪೂರಾ ಪರಸ್ಪರ ವಿರುದ್ಧವಿರುತ್ತಿದ್ದವರು ಅವರು. ಆದರೆ ಪರಸ್ಪರರಲ್ಲಿ ಸಹೃದಯತೆಗೆ ಎಂದೂ ಭಂಗ ಬರಲಿಲ್ಲ; ಕಡಿಮೆಯಾಗಲೂ ಇಲ್ಲ. ಅವರಿಬ್ಬರೂ ಹಲವು ಬಾರಿ ಒಂದೇ ಕನ್ನಡಕವನ್ನು ಬಳಸಿ ಕಾಲ ತಳ್ಳುತ್ತಿದ್ದುದೂ ಉಂಟು.

ಪ್ರತಿಯೊಬ್ಬರಿಗೂ ತಮ್ಮ ತಮ್ಮ ವಿಚಾರವನ್ನು ಪ್ರಕಟಿಸುವ ಅಧಿಕಾರ ಇದ್ದೇ ಇದೆ ಆದರೆ ಅದನ್ನು ಇನ್ನೊಬ್ಬರ ಮೇಲೆ ಹೇರುವುದು ಸಮಾಜದಲ್ಲಿ ಸಹಜವಾಗಿಯೇ ಇರುವಂತಹ ಸಕಾರಾತ್ಮಕ ಬಹುಳತೆಯನ್ನು ಕೊನೆಗೊಳಿಸಿದಂತೆಯೇ ಎನ್ನುತ್ತಿದ್ದರು ಅವರು. ತನ್ನ ಚಿಂತನೆ, ತಿಳುವಳಿಕೆ ಮತ್ತು ವಿಚಾರ ಇವು ಸಂಪೂರ್ಣ ಸಮರ್ಪಕವೆ

ಚಿಂತನೆ ಅಥವಾ ತಿಳಿವಳಿಕೆಯಾಗಿದೆ ಎಂಬಂತೆ ಯೋಚಿಸುವುದು ಸಲ್ಲದು. ಈ ಸಂಬಂಧದಲ್ಲಿ ಅವರೊಂದು ರಸವತ್ತಾದ ಕತೆಯನ್ನು ಹೇಳುತ್ತಿದ್ದರು.

'ಒಬ್ಬ ರಾಜ ತನ್ನ ಕ್ಷೌರಿಕನ ಬಳಿ ರಾಜ್ಯದಲ್ಲಿ ಪರಿಸ್ಥಿತಿ ಹೇಗಿದೆ?' ಎಂದು ವಿಚಾರಿಸಿದ. ಅದಕ್ಕೆ ಉತ್ತರವಾಗಿ ಕ್ಷೌರಿಕ ಜನರ ಬಳಿ ಧಾರಾಳ ಸಂಪತ್ತಿದೆ. ಪ್ರತಿಯೊಬ್ಬರ ಮನೆಯಲ್ಲಿ 8–10 ತೊಲದಷ್ಟು ಚಿನ್ನವಿದೆ ಎಂದು ಹೇಳಿದ. ಆದರೆ ರಾಜ್ಯದಲ್ಲಿ ನಿರಂತರವಾಗಿ ಬರಗಾಲವಿದ್ದುದು ರಾಜನಿಗೆ ತಿಳಿದಿತ್ತು. ಅದಕ್ಕಾಗಿ ರಾಜನಿಗೆ ಕ್ಷೌರಿಕನ ಮಾತಿನಿಂದ ಒಂದಿಷ್ಟು ಸಂದೇಹವೇ ಉಂಟಾಯಿತು. ರಾಜ ತನ್ನ ಮಂತ್ರಿಗೆ ಸತ್ಯಸ್ಥಿತಿ ಏನೆಂದು ತಪಾಸಣೆ ನಡೆಸಿ ತನಗೆ ತಿಳಿಸುವಂತೆ ಆದೇಶಿಸಿದ. ಮಂತ್ರಿ ತನ್ನ ಗುಪ್ತಚರರ ಮೂಲಕ ಮಾಹಿತಿ ತಿಳಿಯಲು ಪ್ರಯತ್ನಿಸಿದಾಗ ಆ ಕ್ಷೌರಿಕನ ಬಳಿ 8–10 ತೊಲಗಳಷ್ಟು ಚಿನ್ನವಿರುವುದು ತಿಳಿಯಿತು. ಮುಂದೆ ರಾಜನ ಆದೇಶದಂತೆ ಗುಪ್ತಚರರು ಆ ಕ್ಷೌರಿಕನ ಮನೆಯಿಂದ ಆ ಚಿನ್ನವನ್ನು ಎಗರಿಸಿದರು. ಮುಂದಿನ ಬಾರಿ ಕ್ಷೌರಿಕ "ರಾಜ್ಯದಲ್ಲೆಲ್ಲ ಕಳ್ಳರು ಹೆಚ್ಚಾಗಿ ಪರಿಸ್ಥಿತಿ ತೀರಾ ಕೆಟ್ಟಿದೆ, ಕಳ್ಳರಿಂದಾಗಿ ಪ್ರಜೆಗಳೆಲ್ಲ ಕಂಗಾಲಾಗಿದ್ದಾರೆ" ಎಂದುತ್ತರಿಸಿದ.

ಸಂಘದ ಶಾಖೆಗಳಲ್ಲಿ ಆರಂಭದ ದಿನಗಳಲ್ಲಿ ಹನುಮಂತನ ಮೂರ್ತಿ ಇರುತ್ತಿತ್ತು. ಆದರೆ ಆರ್ಯಸಮಾಜಿಗಳು ವಿಗ್ರಹಾರಾಧನೆ ಮಾಡದಿದ್ದುದರಿಂದ ಮುಂದೆ ಶಾಖೆಯಲ್ಲಿ ಆ ವಿಗ್ರಹವಿರಿಸುವುದನ್ನು ಕೈಬಿಡಲಾಯಿತು. ಅದೇ ರೀತಿಯಲ್ಲಿ ಪ್ರಾರ್ಥನೆಯ ಕೊನೆಯಲ್ಲಿ 'ಸಮರ್ಥ ರಾಮದಾಸ್ ಕೀ ಜಯ್' ಎನ್ನಲಾಗುತ್ತಿತ್ತು. ಇದನ್ನು ಕೂಡಾ, ಮಹಾರಾಷ್ಟ್ರದ ಹೊರಗೆ ಸಮರ್ಥ ರಾಮದಾಸರನ್ನು ಸ್ವೀಕರಿಸುವವರು ಪ್ರಾಯಶಃ ಇಲ್ಲ ಎಂಬ ಕಾರಣಕ್ಕಾಗಿ ಬಿಟ್ಟುಬಿಡಲಾಯಿತು. ಎಂದರೆ, ಹಿಂದೂ ಸಂಘಟನೆಯ ಕಾರ್ಯದಲ್ಲಿ ಸಂಘವು ತನ್ನದೇ ರೀತಿನೀತಿಯನ್ನು ಸಮಾಜದ ಮೇಲೆ ಹೇರುತ್ತಿರಲಿಲ್ಲವೆಂಬುದನ್ನು ಅರಿಯಬಹುದು.

ಡಾ. ಹೆಡಗೇವಾರರು ಸ್ವತಃ ಆಸ್ತಿಕರಾಗಿದ್ದವರೇ. ಆದರೆ ಅವರು ನಿತ್ಯ ನಿಯಮಿತವಾಗಿ ದೇವಸ್ಥಾನಕ್ಕೆ ಹೋಗುವಂತಹವರಾಗಿರಲಿಲ್ಲ. ಅವರ ಒಬ್ಬ ಸ್ನೇಹಿತ ಪ್ರಹ್ಲಾದ ಪಂತ್ ಫಡಣವೀಸ್ ಎಂಬುವರು "ಇಷ್ಟು ದೊಡ್ಡವನಾಗಿದ್ದೀಯೆ, ಆದರೆ ಸಂಧ್ಯಾವಂದನೆ, ಪೂಜೆ, ನಾಮಸ್ಮರಣೆ ಇತ್ಯಾದಿ ಒಂದೂ ಮಾಡುವುದಿಲ್ಲವಲ್ಲ ನೀನು" ಎಂದು ಅವರನ್ನು ಒಮ್ಮೆ ಕೇಳಿದ್ದರು.

ಈ ಪ್ರಶ್ನೆಗೆ ಸ್ವತಃ ಕರ್ಮಮಾರ್ಗದಲ್ಲಿ ಅಚಲ ಹಿಮಾಲಯದಂತೆ ಇರುತ್ತಿದ್ದ ಡಾ. ಹೆಡಗೇವಾರರು ನೀಡಿದ್ದ ಉತ್ತರ: "ನೀನು ಹೇಳುವುದೇನೋ ಸರಿಯೇ. ಆದರೆ ಈ ಸಲುವಾಗಿಯೇ ನಾಳೆ ಏನಾದರೂ ಯಮಧರ್ಮರಾಜನೇ ನನ್ನ ಮುಂದೆ ಬಂದು ನಿಂತರೂ, ಆತನಾದರೂ ಏನು ಮಾಡಿಯಾನು? ನಾನಂತೂ ನನ್ನ ಬದುಕಿನಲ್ಲಿ ಸ್ವಂತಕ್ಕಾಗಿ ಏನೂ ಮಾಡಿಯೇ ಇಲ್ಲವಲ್ಲ."

ಸಾಮಾಜಿಕ ಜೀವನದಲ್ಲಿ ಶುದ್ಧ ಮನಸ್ಸಿನಿಂದ ಮತ್ತು ನಿರ್ಮಲ ಅಂತಃಕರಣದಿಂದ ಸಮಾಜದ ಸೇವೆ ಮಾಡುವುದೇ ನಿಜವಾದ ಪೂಜೆ ಎನಿಸಿಕೊಳ್ಳುತ್ತದೆ. ಡಾ. ಹೆಡಗೇವಾರರು ಪೂಜೆ ಮಾಡುತ್ತಿದ್ದುದು ಸಮಾಜ ದೇವತೆಯದು, ರಾಷ್ಟ್ರ- ದೇವತೆಯದು. 1929ರ

ಮಾರ್ಚ್ 4ರ ತಮ್ಮ ದಿನಚರಿಯಲ್ಲಿ ಸಮರ್ಥ ರಾಮದಾಸರಿಗೆ ಸಂಬಂಧಿಸಿದಂತೆ ಅವರು ಹೀಗೆ ಬರೆದಿದ್ದಾರೆ: "ಸಮರ್ಥರಿಗೆ ಸ್ವಂತಕ್ಕೆ ಏನೂ ಬೇಕಾಗಿರಲಿಲ್ಲ. ತನ್ನ ಕಾರ್ಯಗಳ ಅಹಂಕಾರವೂ ಸ್ವಂತಕ್ಕೆ ಅಂಟಿಕೊಳ್ಳದಂತೆ ಎಚ್ಚರ ವಹಿಸಿ ಅವರು ತಮ್ಮ ಸಂಪೂರ್ಣ ಜೀವನವನ್ನು ಸ್ವಧರ್ಮ ಬಾಂಧವರ ಹಿತದ ಚಿಂತನೆಗಾಗಿ ಮತ್ತು ಆತ್ಮೋನ್ನತಿಯ ಮಾರ್ಗದ ಶೋಧನೆಗಾಗಿ ತೊಡಗಿಸಿದರು."

ಡಾ. ಹೆಡಗೇವಾರರ ಆರ್ಥಿಕ ಸ್ಥಿತಿ ಇದ್ದುದು ಬಾಲ್ಯದಲ್ಲಿ ಅವರ ತಂದೆ ತಾಯಿ ನಿಧನರಾದಾಗ ಇದ್ದಂತೆಯೇ, ದಟ್ಟ ಬಡತನದ್ದು. ಅಷ್ಟಾದರೂ ತಮ್ಮ ಬದುಕನ್ನು ಅವರು ರಾಷ್ಟ್ರದ ಉನ್ನತಿಯ ಸಾಧನೆಯಲ್ಲಿ ಮತ್ತು ರಾಷ್ಟ್ರವನ್ನು ಶಕ್ತಿಶಾಲಿಗೊಳಿಸುವ ಯಜ್ಞದಲ್ಲಿ ಆಹುತಿಯಾಗಿಸಿದರು. ಅವರ ಈ ತ್ಯಾಗ ಹಾಗೂ ಕೃತಿ ಪ್ರಧಾನವಾದ ಬದುಕಿನ ಕಾರಣದಿಂದಾಗಿ ಅವರನ್ನು ಅನೇಕರು ಸಮರ್ಥ ರಾಮದಾಸರ ಅವತಾರವಾಗಿ ತಿಳಿಯುತ್ತಿದ್ದರು.

ಆದರೆ ಈ ಕಲ್ಪನೆಯೂ ಬಹಳಷ್ಟು ದಿನ ಉಳಿಯಲಿಲ್ಲ. ಕಾರಣವೆಂದರೆ ಡಾ. ಹೆಡಗೇವಾರರು ಅವತಾರವಾದದ ದುರುಪಯೋಗವನ್ನು ಒಪ್ಪುತ್ತಿರಲಿಲ್ಲ. ಛತ್ರಪತಿ ಶಿವಾಜಿ ಮಹಾರಾಜರನ್ನು ಭಗವಾನ್ ಶಂಕರನ ಅವತಾರ ಹಾಗೂ, ಲೋಕಮಾನ್ಯ ತಿಲಕರಿಗೂ ಚತುರ್ಭುಜಗಳನ್ನು ಕಲ್ಪಿಸಿ ಮತ್ತೊಂದು ಅವತಾರವೆಂಬಂತೆ ಚಿತ್ರಿಸಿದ್ದುದನ್ನು ಅವರು ತೀವ್ರವಾಗಿ ಆಕ್ಷೇಪಿಸಿದ್ದರು. ಈ ಸಂಬಂಧದಲ್ಲಿ ಅವರು "ಈ ರೀತಿಯಲ್ಲಿ ವಿಭೂತಿಪುರುಷರಿಗೆ ದೇವತೆಗಳ ಪಟ್ಟ ನೀಡುವುದು ನಿಸ್ಸಂದೇಹವಾಗಿಯೂ ನಮ್ಮ ಬುದ್ಧಿಯ ದಿವಾಳಿತನವೇ. ಮಹಾಪುರುಷರು ಕಣ್ಣಿಗೆ ಬೀಳುವುದೇ ತಡ, ನಾವು ಅವರನ್ನು ದೇವಾಲಯಕ್ಕೇ ತಲುಪಿಸಿಬಿಡುತ್ತೇವೆ. ಅಲ್ಲಿ ಅವರನ್ನೇನೋ ತುಂಬ ಭಕ್ತಿಯಿಂದಲೇ ಪೂಜಿಸಲಾಗುತ್ತದೆ. ಆದರೆ ನಾವು ಅವರ ಗುಣಗಳ ಅನುಕರಣೆಗೆ ಬೆನ್ನು ತೋರಿ ಪರಾರಿ ದೂರ ಓಡಿಹೋಗುತ್ತೇವೆ. ಅದರರ್ಥ, ಕರ್ತವ್ಯದಿಂದ ವಿಮುಖವಾಗಿ ನಮ್ಮ ಹೊಣೆಯಿಂದ ಜಾರಿಕೊಳ್ಳುವ ಕಲೆಯನ್ನು ನಾವು ಹಿಂದೂಗಳು ಚೆನ್ನಾಗಿ ಮೈಗೂಡಿಸಿಕೊಂಡಿದ್ದೇವೆ" ಎಂದಿದ್ದರು.

ಪೂಜಾ ವಿಧಿ ಅಗತ್ಯವಿಲ್ಲ, ಅಥವಾ ತಪ್ಪು ಎನ್ನುತ್ತಿದ್ದವರಲ್ಲ ಅವರು. ಆದರೆ ಭಾವನೆಯೇ ಇಲ್ಲದೆ ಮತ್ತು ಕರ್ತವ್ಯದ ಅರಿವು ಇಲ್ಲದೆ ಮಾಡುವ ಪೂಜೆ ಕೇವಲ ಶುಷ್ಕ ಆಚಾರವಾಗುತ್ತದೆ ಎನ್ನುವುದು ಅವರ ನಿಲುವಾಗಿರುತ್ತಿತ್ತು. ಕೇವಲ ಧರ್ಮಗ್ರಂಥಗಳ ನಿತ್ಯಪಠಣ ಮಾಡುತ್ತಾ ಸಮಾಜದ ಮತ್ತು ರಾಷ್ಟ್ರದ ಹಿತದ ಪೂರಾ ಅಲಕ್ಷ್ಯ ಮಾಡುವಂತಹವರಿಂದಲೇ ನಮ್ಮ ಸಮಾಜದ ಪತನವಾಯಿತು ಎಂದು ಹೇಳಬಹುದು. ಅಂತಹ ಆಚಾರಗಳ ಟೀಕೆ ಮಾಡುತ್ತಾ ಅವರು ಹೀಗೆ ಹೇಳಿದ್ದರು: "ದೇಶದ ನಾಯಕರೆನಿಸಿಕೊಳ್ಳುವವರ ಭಾಷಣಗಳಿಂದ ನಮ್ಮ ದೇಶ ಹಿಂದೂಸ್ಥಾನವಂತೂ ಅಮರವೆಂದೇ ಅನಿಸುತ್ತದೆ. ಆದರೆ ನಿಜಕ್ಕೂ ಹಾಗಿದೆಯೇನು? ಬರಿಯ ಅಂಧಶ್ರದ್ಧೆಯಿಂದ ಯಾವುದೇ ಕೆಲಸ ಮಾಡುವುದು ಬೇಡ. ಸ್ವತಃ ಏನೂ ಕೆಲಸ ಮಾಡದೆ ಹಿಂದೂಸ್ಥಾನವನ್ನು ಅಮರಗೊಳಿಸುವುದು ಖಂಡಿತಕ್ಕೂ ಅಸಾಧ್ಯ. ಏನೂ ಪ್ರಯತ್ನವೇ ಇಲ್ಲದೆ ಒಬ್ಬ ವ್ಯಕ್ತಿಗೆ ತನ್ನ ಸ್ವಂತ ಮನೆ, ಸಂಸಾರವನ್ನು ನಡೆಸುವುದು ಸಹ ಕಷ್ಟವೆನಿಸುತ್ತಿರಬೇಕಾದಲ್ಲಿ ರಾಷ್ಟ್ರದ ಕೆಲಸ ಅಷ್ಟು ಸುಲಭವೇನು?"

ಕರ್ಮಯೋಗದ ಮಹತ್ವಕ್ಕೆ ಒತ್ತು ನೀಡುತ್ತ ಅವರು ಹೇಳುತ್ತಿದ್ದುದು "ಯಾವುದೇ ಫಲ ಲಭಿಸಬೇಕಾದರೂ ಅದಕ್ಕೆ ಮೂಲ ಕಾರಣವಾಗಿ ಯಾವುದೋ ಪ್ರಯತ್ನ ನಡೆದಿರಲೇ ಬೇಕು. ಪ್ರಯತ್ನವೇ ಇಲ್ಲದೆ ಸಿದ್ಧಿ ಎಲ್ಲಿಂದ ಬರಬೇಕು? ನಾವು ಭಗವಂತನ ಭಜನೆ, ಪೂಜೆ ಮಾಡುತ್ತೇವೆ. ಆತನೇ ನಮಗೆ ಫಲ ನೀಡುತ್ತಾನೆ ಎಂದು ಹೇಳುವಂತಹ ಸಜ್ಜನರಿಗೆ ನಾನೊಂದು ಪ್ರಶ್ನೆಯನ್ನು ಕೇಳಲಿಚ್ಛಿಸುವೆ. ಕೇವಲ ಭಜನೆ, ಪೂಜೆ ಮಾಡಿದ ಮಾತ್ರದಿಂದಾಗಿ ನೂರು ರೂಪಾಯಿಗಳು ತನ್ನ ಕಾಲ ಬಳಿ ಬಂದು ಬಿದ್ದವು ಎಂದು ಹೇಳಬಲ್ಲ ಒಬ್ಬನಾದರೂ ವ್ಯಕ್ತಿಯನ್ನು ಉದಾಹರಣಾರ್ಥ ನನಗೆ ಅಂತಹವರು ತೋರಿಸಲಿ."

ಅವರಂತೂ ಸದಾ ಕಾಲವೂ ಕರ್ಮಮಾರ್ಗದಲ್ಲೆ ನಡೆದವರು. ಒಮ್ಮೆ ಸೆರೆಮನೆಯಲ್ಲಿದ್ದಾಗ ಯಾರೋ ಒಬ್ಬರು ಅವರ ಹಸ್ತರೇಖೆಗಳನ್ನು ನೋಡಲು ಇಚ್ಛೆಪಟ್ಟರು. ಅವರು ಅದನ್ನು ಒಂದಿಷ್ಟು ವಿನೋದದಿಂದ ತಳ್ಳಿ ಹಾಕಿದರು. ಅವರ ಅತಿ ಮೆಚ್ಚುಗೆಯ ವಾಕ್ಯವೆಂದರೆ "ಸ್ವಯಮೇವ ಮೃಗೇಂದ್ರತಾ" ಆಗಿತ್ತು. ಭಾಗ್ಯವಾದದ ಮೇಲೆ ಭರವಸೆಯಿರಿಸುವುದು ನಿಷ್ಕ್ರಿಯತೆಗೆ ಪರ್ಯಾಯ ಎಂಬಂತೆ ಅವರು ತಿಳಿಯುತ್ತಿದ್ದರು. ಅವರು ಆಂಗ್ಲ ಭಾಷೆಯ God helps those who help themselves (ಸ್ವಶಕ್ತಿಯಿಂದ ಕಾರ್ಯ ನಿಭಾಯಿಸುವವರಿಗೆ ಮಾತ್ರ ಭಗವಂತನೂ ನೆರವಾಗುತ್ತಾನೆ) ಎಂಬ ಮಾತು ಕರ್ಮಮಾರ್ಗದಲ್ಲಿ ಮುನ್ನಡೆಯುವವರಿಗೆ ಅನ್ವಯವಾಗುವಂತಹದು ಎಂದು ಹೇಳುತ್ತಿದ್ದರು. ಜಾತಿ, ಸಂಪ್ರದಾಯ, ಮೇಲು ಕೀಳು, ವ್ಯಕ್ತಿವಾದ ಇತ್ಯಾದಿ ಒಡಕಿನ ಪ್ರವೃತ್ತಿಗಳಿಂದ ಪೀಡಿತವಾಗಿರುವ ಹಿಂದೂ ಸಮಾಜಕ್ಕೆ ಈ ಮಾತನ್ನು ಅನ್ವಯಗೊಳಿಸುತ್ತ ಅವರು ತಮ್ಮ ಮನದ ವೇದನೆಯನ್ನು ತೋರ್ಪಡಿಸುತ್ತಿದ್ದುದು ಹೀಗೆ:

"ಭಗವಂತ ನಮಗೆ ಸಹಾಯ ಮಾಡಬೇಕಾದರೂ ಏಕೆ? ನಮ್ಮ ಮೇಲೆ ಅವನಿಗೆ ದಯೆ ಬರಬೇಕೇಕೆ? ನಾವೇ ನಮಗಾಗಿ ಯಾವ ಸಹಾಯ ಮಾಡುತ್ತಿದ್ದೇವೆಂಬುದಕ್ಕಾಗಿ ಭಗವಂತ ನಮ್ಮ ಸಹಾಯಕ್ಕೆ ಧಾವಿಸಿ ಬರಬೇಕು? ನಾವು ಏನನ್ನೂ ಮಾಡುತ್ತಿಲ್ಲ. ಭಗವದ್ಗೀತೆಯಲ್ಲಿ ತಾನು 'ಪರಿತ್ರಾಣಾಯ ಸಾಧೂನಾಂ' ಎಂಬುದಕ್ಕಾಗಿ ಅವತಾರವೆತ್ತಿದುದಾಗಿ ಭಗವಂತನೇನೋ ಹೇಳಿದ್ದಾನೆ. ಆದರೆ ಅಂತಹ ಸಾಧುಗಳು ಯಾರು? ಸಾಧು ಎನ್ನಬೇಕಾದುದು ಯಾರನ್ನು? ಯಾರಿಗೆ ಸಮಾಜದ್ದಾಗಲಿ, ರಾಷ್ಟ್ರದ್ದಾಗಲಿ, ಪರಿವೆಯೇ ಇಲ್ಲವೋ, ಯಾರಿಗೆ ಧರ್ಮದ್ದಾಗಲಿ ಸಂಸ್ಕೃತಿಯದ್ದಾಗಲಿ ಚಿಂತೆಯೇ ಇಲ್ಲವೋ, ಯಾರಿಗೆ ಬರಿಯ ವ್ಯಕ್ತಿಗತ ಸ್ವಾರ್ಥ ಬಿಟ್ಟಲ್ಲಿ ಬೇರೇನೂ ಗೊತ್ತೇ ಇಲ್ಲವೋ, ಅಂತಹ ದುಷ್ಟರ ನಾಶಕ್ಕಾಗಿಯೇ ಭಗವಂತ ಅವತಾರವೆತ್ತುತ್ತಾನೆ. ಹಿಂದೂ ಸಮಾಜದಲ್ಲಂತೂ ಇಂತಹ ವ್ಯಕ್ತಿಗತ ದುರ್ಗುಣಗಳು ತುಂಬಿರುವವರನ್ನೇ ನಾವು ಕಾಣಬಹುದು. ನಿಜಕ್ಕೂ ದುಷ್ಟರೆನ್ನಬೇಕಾಗಿರುವುದು ಇವರನ್ನೇ. ಸಾಧುಗಳನೆನ್ನಬೇಕಾದುದು ಧರ್ಮ, ರಾಷ್ಟ್ರ ಮತ್ತು ಜನರ ಹಿತದ ವಿಚಾರವನ್ನು ಮನದಲ್ಲಿ ತುಂಬಿಕೊಂಡು ಸದಾ ತ್ಯಾಗದ ಭಾವನೆಯಿಂದ ತಮ್ಮ ಕರ್ತವ್ಯದಲ್ಲಿ ನಿರತರಾಗಿರುವವರನ್ನು."

ವೈಯಕ್ತಿಕವಾದ ಆಚರಣೆ, ಧಾರ್ಮಿಕ ರೂಢಿಗಳು, ಸಾಮಾಜಿಕತೆಯ ಅರಿವು ಮೊದಲಾದ ವಿಷಯಗಳಲ್ಲಿ ಡಾ. ಹೆಡಗೇವಾರರು ಪೂರಾ ಪ್ರಗತಿಶೀಲ

ಮನೋಭಾವದವರಾಗಿದ್ದವರು. ಅವರು ತಮ್ಮ ಸ್ವಂತದ ಚಿಂತೆಯಲ್ಲಾಗಲಿ, ಸಮಾಜದ ಸಂಘಟನೆಯ ವಿಚಾರದಲ್ಲಾಗಲಿ, ಪಶ್ಚಿಮದ ದೇಶಗಳಿಂದ ಏನನ್ನೂ ಆದರ್ಶವಾಗಿ ಸ್ವೀಕರಿಸಲಿಲ್ಲ. ಸಾಮಾಜಿಕ ಸುಧಾರಣೆಯ ಪ್ರಕ್ರಿಯೆಯಲ್ಲಿ ಅವರು ಜನರ ಚಾರಿತ್ರ್ಯದ ಸಂಸ್ಕಾರ ಅಗತ್ಯವೆಂಬುದನ್ನು ನಂಬಿದ್ದರು. ಎಲ್ಲವೂ ಭಾಗ್ಯದ ವಶವೆಂಬುದನ್ನು ಅವರು ಒಪ್ಪಿದವರಲ್ಲ. ಹಾಗೂ ಅವರೋರ್ವ ಆಶಾವಾದಿಯೂ ಆಗಿದ್ದವರು. ಅವರು ಬಾಬಾರಾವ್ ಸಾವರಕರರಿಗೆ ಒಮ್ಮೆ "ತಾಳ್ಮೆಯಿರಲಿ, ಲಕ್ಷಿಸುತ್ತಿರಿ, ಪ್ರಾರ್ಥಿಸಿ ಮತ್ತು ಭರವಸೆಯನ್ನೂ ಇಡಿ" (Wait, watch, pray and hope)ಎಂಬ ಸಲಹೆಯನ್ನು ನೀಡಿದ್ದರು. ಇಂತಹ ಸಕಾರಾತ್ಮಕ ಜೀವನದೃಷ್ಟಿಯನ್ನು ಅವರಲ್ಲಿ ಸದಾ ಕಾಲವೂ ಕಾಣಬಹುದಾಗಿತ್ತು. ಒಮ್ಮೆ ಒಂದು ಚಿತ್ರದಲ್ಲಿ 'ನನಗೆ ಹುತಾತ್ಮನಾಗುವುದನ್ನು ಕಲಿಸಿ' (Teach me how to die) ಎಂದು ಬರೆದಿದ್ದನ್ನು ಕಂಡ ಅವರು, ಅದನ್ನು 'ನನಗೆ ಸಾರ್ಥಕವಾಗಿ ಬದುಕುವುದನ್ನು ಕಲಿಸಿ' (Teach me how to live) ಎಂದು ತಿದ್ದಿಸಿ ಬರೆಸಿದ್ದರು.

# ಸಾಮಾಜಿಕ ದರ್ಶನ

ಹಿಂದೂ ಸಂಘಟನೆಯ ಕೆಲಸವನ್ನು ಡಾ. ಹೆಡಗೇವಾರರು ಬಣ್ಣಿಸುತ್ತಿದ್ದುದು ಎರಡು ವಿಶೇಷಣಗಳಿಂದ. ಮೊದಲನೆಯದಾಗಿ ಸಂಘದ ಕಾರ್ಯವು ಒಂದು ಈಶ್ವರೀಯ ಕಾರ್ಯ ಎಂಬುದಾಗಿ ಮತ್ತು ಎರಡನೆಯದಾಗಿ ಇದೊಂದು ರಾಷ್ಟ್ರೀಯ ಕಾರ್ಯ ಎಂಬುದಾಗಿ. ಬೇರೆ ಶಬ್ದಗಳಲ್ಲಿ ಹೇಳುವುದಾದಲ್ಲಿ ಹಿಂದೂ ಸಂಘಟನೆಯ ಕುರಿತು ಅವರ ಕಲ್ಪನೆ ಎರಡು ಸಂಗತಿಗಳನ್ನು ಒಳಗೊಂಡಿತ್ತು. ಮೊದಲನೆಯದಾಗಿ, ರಾಷ್ಟ್ರೀಯ ಸ್ವಯಂಸೇವಕ ಸಂಘದ ಸಂಘಟನಾತ್ಮಕ ಚಟುವಟಿಕೆಗಳಿಗೆಲ್ಲ ಇದ್ದ ಲಕ್ಷ್ಯವೆಂದರೆ ರಾಷ್ಟ್ರವನ್ನು ಶಕ್ತಿಶಾಲಿಗೊಳಿಸುವಂತಹದು. ಅವರ ದೃಷ್ಟಿಯಲ್ಲಿ ಅದರ ಸಾಧನೆಗಾಗಿ ಇರಬೇಕಾಗಿರುವ ಕಾರ್ಯನಿಷ್ಠೆಯು ಪ್ರತ್ಯಕ್ಷದಲ್ಲಿ ಆಧ್ಯಾತ್ಮಿಕ ಚೈತನ್ಯ ಮತ್ತು ಆಧ್ಯಾತ್ಮಿಕ ಕೃತಿಯಲ್ಲದೆ ಬೇರೇನೂ ಆಗಿರಲಿಲ್ಲ. ಎರಡನೆಯದಾಗಿ, ಹಿಂದೂ ಸಂಘಟನೆಗೆ ಅವರು ನೀಡಿರುವ ಈ ಸಾಂಕೇತಿಕ ವಿವರಣೆಯು, ಹಿಂದೂ ಸಮಾಜದ ಈ ಹಿಂದಿನ ಇತರ ಸಂಘಟಕರ ದೃಷ್ಟಿಕೋನದಿಂದ ಮೂಲಭೂತವಾಗಿ ಭಿನ್ನವಾದುದು. ಹಿಂದೂ ಸಂಘಟನೆಯ ಕಾರ್ಯವನ್ನು ಒಂದು ರಾಷ್ಟ್ರೀಯ ಜಾಗರಣದ ಕಾರ್ಯವಾಗಿ ತಿಳಿಯಬೇಕೆಂಬುದೇ ಸಂಘದ ಶ್ರದ್ಧೆ. ಹೀಗಾಗಿ ಸಂಘದಲ್ಲಿ ಹಿಂದೂ ಸಂಘಟನೆಯ ಕಾರ್ಯಕ್ಕೆ ನಿರಂತರವಾದ ಸಹಜ ಹಾಗೂ ಸಕಾರಾತ್ಮಕವಾದ ರೂಪವು ದೊರಕಿತು. ಡಾ. ಹೆಡಗೇವಾರರು ವ್ಯಕ್ತಿಗಳನ್ನು ಸಂಸ್ಕಾರಿತಗೊಳಿಸುವುದು, ಅವರಲ್ಲಿ ಸಾಮಾಜಿಕ ಭಾವನೆಯನ್ನು ಎಚ್ಚರಿಸುವುದು ಮತ್ತು ಅವರಲ್ಲಿ ರಾಷ್ಟ್ರೀಯ ಚಾರಿತ್ರ್ಯವನ್ನು ರೂಪಿಸುವುದು ಇವುಗಳನ್ನು ಒಂದು ಆಧ್ಯಾತ್ಮಿಕ ಕಾರ್ಯವೆಂದೇ ತಿಳಿಯುತ್ತಿದ್ದವರು.

ಸಂಘಕ್ಕಿಂತ ಮೊದಲಿನ ಮತ್ತು ಅದರ ಸಮಕಾಲೀನ ಹಿಂದೂ ಸಂಸ್ಥೆಗಳ ಲಕ್ಷ್ಯವು ಒಮ್ಮುಖವಾದುದಾಗಿತ್ತು. ಯಾವುದೋ ಒಂದು ವರ್ಗದ – ಉದಾಹರಣೆಗಾಗಿ ಜಾತಿಪಾತಿ ತೋಡಕ ಮಂಡಲ, ಆರ್ಯ ಸಮಾಜ ಮೊದಲಾದವು–ಸಮಾಜ ಜೀವನದಲ್ಲಿ ಪರಿವರ್ತನೆ ಹಾಗೂ ಧಾರ್ಮಿಕ ಭಾವದ ವಿಕಾಸ– ಇವುಗಳ ಪರವಾಗಿದ್ದಂತಹವು. ಇನ್ನೊಂದು ಕಡೆ ಹಿಂದೂ ಮಹಾ ಸಭಾದಂತಹವು ಹಿಂದೂಗಳಲ್ಲಿ ರಾಜಕೀಯ ಚೈತನ್ಯವನ್ನು ವಿಕಾಸಗೊಳಿಸುವ ಪರವಾಗಿದ್ದವು. ಇವುಗಳಲ್ಲಿ ಮೊದಲ ಶ್ರೇಣಿಯಲ್ಲಿರುವಂತಹವು ಸಾಮಾಜಿಕ ಹಾಗೂ ಧಾರ್ಮಿಕ ಚೈತನ್ಯದ ಮೂಲಕ ರಾಜಕೀಯ ಚೈತನ್ಯದ ಜಾಗೃತಿಯ ಗುರಿಯನ್ನಿರಿಸಿಕೊಂಡಿದ್ದಲ್ಲಿ, ಎರಡನೇ ಶ್ರೇಣಿಯಲ್ಲಿರುವಂತಹವು ರಾಜಕೀಯ ಏಕತೆಗಾಗಿ ಸಾಮಾಜಿಕ ಸಮಾನತೆಯು ಆವಶ್ಯಕವೆಂದು ತಿಳಿಯುತ್ತಿದ್ದಂತಹವು. ಆದರೆ ಸಂಘದ ದೃಷ್ಟಿಕೋನವು ಸಮಗ್ರತೆಯಿಂದ ಕೂಡಿದಂತಹದ್ದಾಗಿದೆ. ಡಾ. ಹೆಡಗೇವಾರರು ಹಿಂದೂ ಸಂಘಟನೆಯ ಕುರಿತು ಹೇಳುತ್ತಿದ್ದುದೇನೊ ನಿಜವೇ. ಆದರೆ ಹಿಂದೂ ಚೈತನ್ಯಕ್ಕೆ

ಆಧಾರಭೂತವಾಗಿ ಅವರು ನೋಡುತ್ತಿದ್ದುದು ಇಡೀ ಸಮುದಾಯವನ್ನಾಗಿರದೆ, ಸರ್ವಸಾಮಾನ್ಯ ವ್ಯಕ್ತಿಯನ್ನು; ಅಂದರೆ, ಅವರು ತನ್ನ ಲಕ್ಷ್ಯವನ್ನಾಗಿ ಮಾಡಿಕೊಂಡಿದ್ದುದು ಪ್ರತಿಯೊಬ್ಬ ಹಿಂದೂವಿನಲ್ಲಿ ಉತ್ತಮ ಸಂಸ್ಕಾರವನ್ನು ತುಂಬಿಸುವ ಕಾರ್ಯವನ್ನು. ಈ ರೀತಿಯಲ್ಲಿ ಸಂಸ್ಕಾರ ಪಡೆದ ಹಿಂದೂವೇ ತಾನು ರಾಷ್ಟ್ರದ ಒಂದು ಅಂಗವೆಂಬ ನಿಟ್ಟಿನಲ್ಲಿ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಇನ್ನಿತರ ಆಯಾಮಗಳನ್ನು ಸಮಗ್ರವಾಗಿ ನೋಡುವಂತಹವನಾಗಬೇಕೆಂಬ ವಿಚಾರವು ಸಂಘದ ವಿಶೇಷತೆ. ಈ ಕಾರಣಕ್ಕಾಗಿ ಸಂಘವು ಹೊರನೋಟಕ್ಕೆ ಇನ್ನಿತರ ಹಿಂದೂ ಸಂಸ್ಥೆಗಳಂತೆಯೇ ಕಂಡರೂ, ಸಮಾಜ ಜೀವನದಲ್ಲಿ ಇದರ ಛಾಪು ಮತ್ತು ಇದರ ವೃದ್ಧಿಂಗತ ಸಾಮಾಜಿಕ ಆಧಾರವು, ಡಾ. ಹೆಡಗೇವಾರರ ರಚನಾತ್ಮಕ ರಾಷ್ಟ್ರೀಯ ಹಿಂದೂ ಜೀವನದ ಕಲ್ಪನೆಯದೇ ಮೂರ್ತರೂಪವಾಗಿದೆ.

ಡಾ. ಹೆಡಗೇವಾರರು 1940ರ ಮೇನಲ್ಲಿ ಪುಣೆಯ ಸಂಘ ಶಿಕ್ಷಾ ವರ್ಗದಲ್ಲಿ ಹಿಂದೂ ಸಂಘಟನೆಯ ಲಕ್ಷ್ಯದ ಕಡೆ ಬೆರಳು ತೋರುತ್ತ, "ಹಿಂದೂಸ್ಥಾನವು ಒಂದು ರಾಷ್ಟ್ರವಾಗಿದೆ ಮತ್ತು ಹಿಂದೂಗಳದು ಒಂದೇ ಸಮಾಜ ಎಂಬುದನ್ನು ನಾವಿಂದು ಅರಿತುಕೊಳ್ಳಬೇಕಾಗಿದೆ. ನಾವೆಲ್ಲರೂ ಇದರ ಅವಯವಗಳಾಗಿದ್ದೇವೆ ಹಾಗೂ ಸಮಾಜದ ಪ್ರತಿಯೊಂದು ಅಂಗವೂ ಒಟ್ಟು ರಾಷ್ಟ್ರದ ಹಿತಕ್ಕಾಗಿಯೇ ಇರುವಂತಹದು. ಈ ವಿಶಾಲ ರಾಷ್ಟ್ರರೂಪ ಶರೀರದ ಅಂಗಗಳಾಗಿ ಅದು ಪೂರ್ಣವಾಗಿ ಸಕ್ಷಮವಾಗಿರುವಂತೆ ಕೆಲಸ ಮಾಡಬೇಕಾದುದು ಈಗ ನಮ್ಮ ಕರ್ತವ್ಯವಾಗಿದೆ" ಎಂದಿದ್ದರು.[1]

ಡಾ. ಹೆಡಗೇವಾರರು ಹಿಂದೂಸ್ಥಾನದ ರಾಷ್ಟ್ರೀಯತೆಯನ್ನು ಕೇವಲ ಜಾತೀಯತೆಯ ನಿಟ್ಟಿನಲ್ಲಿ ಅಥವಾ ಸಾಮ್ರಾಜ್ಯವಾದಿ ಆಡಳಿತದ ವಿರೋಧ ಮಾಡುವಂತಹ ಒಂದು ಕ್ಷಣಿಕ ಉತ್ಸಾಹದ ಫಲವಾಗಿ ಮಾತ್ರ ನೋಡುತ್ತಿದ್ದವರಲ್ಲ. ಬದಲಾಗಿ ಈ ರಾಷ್ಟ್ರದಲ್ಲಿ ಅತಿ ದೀರ್ಘ ಕಾಲದಿಂದ ಬದುಕಿ ಬಂದಿದ್ದ ಒಂದು ಸಮಾಜದ ಅಂತರಂಗದಲ್ಲಿ ಅತಿ ಉಜ್ವಲವಾಗಿ ಬೆಳಗುವಂತಹ ಒಂದು ಸಕಾರಾತ್ಮಕ ಹಾಗೂ ಶಾಶ್ವತವಾದ ಭಾವನೆಯೂ ಆಗಿ ಇರುವುದನ್ನು ಗುರುತಿಸಿದ್ದವರು. ಒಂದು ಶಕ್ತಿಶಾಲಿ ರಾಷ್ಟ್ರವು ಸ್ವರಕ್ಷಣೆಗಾಗಿ ಸಿದ್ಧತೆ ಮಾಡಬೇಕಾದುದು ಕೇವಲ ಅಸ್ತ್ರ ಶಸ್ತ್ರಗಳದ್ದು ಮಾತ್ರವಾಗಿರದೆ ಅಲ್ಲಿನ ಜನರ ಮಾನಸಿಕತೆಯದ್ದೂ ಆಗಿದೆ. ಅವರಲ್ಲಿ ರಾಷ್ಟ್ರಭಕ್ತಿಯ ಭಾವನೆ ಮತ್ತು ರಾಷ್ಟ್ರದ ಸಮ್ಮಾನದ ರಕ್ಷಣೆಗಾಗಿ ತಮ್ಮ ಸರ್ವಸ್ವವನ್ನೂ ಸಮರ್ಪಣೆ ಮಾಡಲು ಸಿದ್ಧವಿರುವಂತಹ ಮಾನಸಿಕತೆ, ಇವುಗಳ ಮೇಲೆ ಆ ರಾಷ್ಟ್ರದ ಸುರಕ್ಷೆಯೂ ನಿರ್ಧಾರಿತವಾಗಿದೆ. 1938ರ ಏಪ್ರಿಲ್ 30ರಂದು ಮಹಾರಾಷ್ಟ್ರದ ಹಿಂದೂ ಯುವಕ ಪರಿಷತ್‌ನ ಅಧಿವೇಶನದಲ್ಲಿ ಅಧ್ಯಕ್ಷೀಯ ಭಾಷಣ ಮಾಡುತ್ತಾ ಡಾ. ಹೆಡಗೇವಾರರು ಹೇಳಿದುದು: "ನಮ್ಮ ಬಳಿ ಶಸ್ತ್ರಗಳಿಲ್ಲ, ಶಿಕ್ಷಣವಿಲ್ಲ, ಹೀಗಿದ್ದ ಮೇಲೆ ನಾವೇನು ಮಾಡಬಲ್ಲೆವು?" ಎಂದು ಕೇಳಲಾಗುತ್ತದೆ. ನಾವು ದುರ್ಬಲರಾದುದಕ್ಕೆ ಸ್ವಾತಂತ್ರ್ಯವನ್ನು ಕಳೆದುಕೊಂಡೆವು ಎನ್ನುತ್ತಾರೆ. ಆದರೆ ಇಂತಹ ರೋದನ ತುಂಬಿದ ಕಾರ್ಯ-ಕಾರಣಗಳ ಮೀಮಾಂಸೆ ಅದೆಷ್ಟು ಸರಿಯಾದುದು? ಇದನ್ನು ನಾವು ಯೋಚಿಸಬೇಕಾಗಿದೆ...... ಇಂದು ನಾವೇನೋ ದುರ್ಬಲರಾಗಿದ್ದೇವೆ ಮತ್ತು ನಮ್ಮಲ್ಲಿ ಆತ್ಮವಿಶ್ವಾಸವೂ ಕಡಿಮೆಯಾಗಿದೆ.

---

1 ಕಾಳ್, 23 ಜೂನ್ 1940

ಇದಕ್ಕಿರುವ ಏಕಮಾತ್ರ ಕಾರಣವೆಂದರೆ ನಮ್ಮಲ್ಲಿ ಸಾಮೂಹಿಕವಾದ ಚಿಂತನೆಯೂ ಇಲ್ಲ. ಒಂದು ಸಂಘಟನೆಯೂ ಇಲ್ಲ. ರಾಷ್ಟ್ರದ ಪ್ರತಿಯೊಂದು ಚಟುವಟಿಕೆಯ ಜತೆಯಲ್ಲಿ ನಮ್ಮ ಶರೀರವೂ ಸಮಾನವಾಗಿ ಸ್ಪಂದಿಸಬೇಕು. ಅಂತಹವರೇ ನಿಜವಾದ ರಾಷ್ಟ್ರ ಸೇವಕರೆನಿಸಿಕೊಳ್ಳುತ್ತಾರೆ."[2] ಡಾ. ಹೆಡಗೇವಾರರು ಅಂದಿನ ಜಾತೀಯ ಸವಾಲನ್ನು ನೋಡುತ್ತಿದ್ದುದು 'ರಾಷ್ಟ್ರಸೇವಕ'ರ ಕುರಿತ ಈ ಅಳತೆಗೋಲಿನಿಂದ.

## ವಿಘಟನಕಾರಿ ಮನೋವೃತ್ತಿ

ಅವರ ದೃಷ್ಟಿಯಲ್ಲಿ ಜಾತೀಯತೆಯ ರಾಜಕಾರಣವು ರಾಷ್ಟ್ರವನ್ನು ದುರ್ಬಲಗೊಳಿಸುವ ಹಾಗೂ ಒಡೆಯುವ ಮಾಧ್ಯಮವಾಗುತ್ತದೆ. ಜಾತೀಯತೆಯ ಸಂಗಡ ರಾಷ್ಟ್ರೀಯ ರಾಜಕಾರಣದಲ್ಲಿ ಚೌಕಾಸಿಯ ಒಪ್ಪಂದವನ್ನು ಟೀಕಿಸುತ್ತಾ ಅವರು 'ಸ್ವಾತಂತ್ರ್ಯ' ಪತ್ರಿಕೆಯಲ್ಲಿ ಹೀಗೆ ಬರೆದರು:

"ಸ್ವಾತಂತ್ರ್ಯಕ್ಕಾಗಿ ಸಂಘರ್ಷವು ಬಿರುಸಿನಿಂದ ಆರಂಭವಾದಾಗಿನಿಂದಲೂ ಹಿಂದೂ ಮತ್ತು ಮುಸಲ್ಮಾನರ ನಡುವೆ ಕಂದಕ ಬೆಳೆಯುತ್ತ ಹೋಗಿದೆ. ರಾಜಕೀಯ ನಾಯಕರಾಗಿದ್ದವರು ಮೊದಲಿನಿಂದಲೂ ಈ ಅನೇಕ ವಿಧ ಭಿನ್ನಾಭಿಪ್ರಾಯಗಳನ್ನು ಕಡಿಮೆಗೊಳಿಸಲು ಪ್ರಯತ್ನಗಳನ್ನು ಮಾಡಿದ್ದರೂ, ಅವೆಲ್ಲವೂ ಸಫಲವಾಗಲಿಲ್ಲ. ಆಗ ಅವರು ಕೊಡು-ಕೊಳ್ಳುವ ನೀತಿಯಂತೆ ಬಂಗಾಳದ ಒಪ್ಪಂದವನ್ನು ಮಾಡಿಕೊಂಡರು. ಈ ಒಪ್ಪಂದ ಯಾಕಾಯ್ತು? ಅದರ ಅರ್ಥವೇ ಮುಸಲ್ಮಾನರಿಗೆ ಹೆಚ್ಚಿನ ಸವಲತ್ತುಗಳನ್ನು ನೀಡಿ ಅವರಿಂದ ಸಹಕಾರ ಪಡೆಯಬೇಕು ಎಂಬುದಾಗಿ. ಈ ಕುರಿತು ಆಳವಾಗಿ ಚಿಂತಿಸಿದಲ್ಲಿ ಪರಿಸ್ಥಿತಿ ನಿಜಕ್ಕೂ ಅತ್ಯಂತ ದುಃಖದಾಯಕವಾಗಿ ಕಾಣಿಸುತ್ತದೆ. ಸ್ವಾತಂತ್ರ್ಯವು ಲಭಿಸುವುದು ಕೇವಲ ಹಿಂದೂಗಳಿಗೆ ಮಾತ್ರವೇನು? ವಾಸ್ತವಿಕವಾಗಿ ಅದು ದೇಶದ ಎಲ್ಲರಿಗೂ ಸಂಬಂಧಿಸಿದುದು. ಅದಕ್ಕಾಗಿ ಸ್ವಾತಂತ್ರ್ಯದ ಹೋರಾಟದಲ್ಲಿ ಸಹಭಾಗಿಯಾಗುವ ಸಲುವಾಗಿ ಹೆಚ್ಚಿನ ಸವಲತ್ತುಗಳನ್ನು ಕೇಳುವಂತಹ ಪೂರ್ವ ಶರತ್ತುಗಳನ್ನು ಮುಸಲ್ಮಾನರು ಒಡ್ಡುವುದೇಕೆ?"[3]

ರಾಷ್ಟ್ರೀಯತೆಯನ್ನು ಆಧರಿಸಿ ಹಿಂದೂಗಳನ್ನು ಸಂಘಟಿಸಿದಲ್ಲಿ ಜಾತೀಯ ಹಾಗೂ ರಾಷ್ಟ್ರ ವಿರೋಧಿ ಪ್ರವೃತ್ತಿಗಳೆಲ್ಲವೂ ತಾವಾಗಿಯೇ ಕೊನೆಗೊಳ್ಳುವುವು ಎಂಬುದು ಡಾ. ಹೆಡಗೇವಾರರ ನಿಷ್ಕರ್ಷೆಯಾಗಿತ್ತು. ಅವರು 1919ರಲ್ಲಿ ನಾಗಪುರದಲ್ಲಿ ರಾಷ್ಟ್ರೀಯ ಉತ್ಸವ ಮಂಡಲವೊಂದನ್ನು ಸ್ಥಾಪಿಸಿದ್ದರು. ಈ ಮಂಡಲವು ಹಿಂದೂಗಳ ಉತ್ಸವಗಳಿಗೆಲ್ಲಾ ಕ್ರಿಯಾಶೀಲ ರೂಪವನ್ನು ನೀಡಿ ತನ್ಮೂಲಕ ರಾಷ್ಟ್ರೀಯತೆಯ ಭಾವನೆಯನ್ನು ಜನಮನದಲ್ಲಿ ಎಬ್ಬಿಸಿತ್ತು. ಈ ಮಂಡಲದ ಉದ್ದೇಶವಿದ್ದುದು ಸಹ "ಜನರಲ್ಲಿ ದೇಶಭಕ್ತಿಯ ಭಾವನೆಯನ್ನು ಎಚ್ಚರಿಸಿ, ಅವರನ್ನು ಜಾತೀಯ ಹಾಗೂ ಇನ್ನಿತರ ಸಂಕುಚಿತ ವಿಚಾರಗಳಿಂದ ಮೇಲಕ್ಕೇಳುವಂತೆ ಮಾಡುವುದು" ಎಂಬ ಸಲುವಾಗಿತ್ತು. ಈ ಮಂಡಲದ ಕಾರಣದಿಂದಾಗಿ ಹಿಂದೂಗಳ ಉತ್ಸವಗಳಲ್ಲಿ ಮುಸಲ್ಮಾನ

---

2. ಕೇಸರಿ, 2 ಜುಲೈ 1930 ಪು.5
3. ಸ್ವಾತಂತ್ರ್ಯ, 30 ಜೂನ್ 1924

ವಿರೋಧಿ ಘೋಷಣೆಗಳನ್ನು ಹಾಕಲಾಗುತ್ತಿರಲಿಲ್ಲ. ಅದರ ಕಾರ್ಯ ಸಮಿತಿಯಲ್ಲಿ ಡಾ. ಹೆಡಗೇವಾರರ ಜತೆಯಲ್ಲಿ ಇನ್ನೂ ಏಳು ಜನರಿದ್ದರು.[4]

ಮಧ್ಯಪ್ರಾಂತದ ಗಣೇಶನ ವಿಗ್ರಹ ವಿಸರ್ಜನೆಯ ಹಾಗೂ ಇನ್ನಿತರ ಹಿಂದೂ ಉತ್ಸವಗಳ ಸಂದರ್ಭಗಳಲ್ಲಿ ವಾದ್ಯ ಬಾರಿಸುವ ವಿಷಯದಲ್ಲಿ ಮುಸಲ್ಮಾನರು ಆಕ್ಷೇಪಿಸುತ್ತಿದ್ದರು. ಮತ್ತು ಈ ಕಾರಣಕ್ಕಾಗಿ ದಂಗೆಗಳು ಉಂಟಾಗುತ್ತಿದ್ದವು. 1923ರ ಸೆಪ್ಟೆಂಬರ್ ಅಕ್ಟೋಬರ್‌ನಲ್ಲಿ ಇದೇ ವಿಷಯದಲ್ಲಿ ದಂಗೆಗಳಾದಾಗ ಪ್ರಾಂತೀಯ ಕಾಂಗ್ರೆಸ್ ಸಮಿತಿಯು ಶಾಂತಿಯುತವಾದ ಪರಿಹಾರಕ್ಕಾಗಿ ಒಂದು ಉಪಸಮಿತಿಯನ್ನು ರಚಿಸಿತ್ತು. ಅದರಲ್ಲಿ ಡಾ. ಹೆಡಗೇವಾರ್, ಡಾ. ಮುಂಜೆ, ಡಾ.ಪರಾಂಜಪೆ ಮತ್ತು ಜೆ.ಪಿ. ಓಗ್ಲೆ ಅವರುಗಳಿದ್ದರು. ಅದೇ ಪ್ರಸಂಗದಲ್ಲಿ ಒಂದು ಖಿಲಾಫತ್ ಉಪಸಮಿತಿಯನ್ನೂ ರಚಿಸಲಾಗಿತ್ತು. ಅದರಲ್ಲಿ ಮೈಫಸಲ್ ಕಬೀರ್, ಅಬೀದ್ ಅಲಿ, ಡಾ. ಹೆಡಗೇವಾರ್, ಡಾ. ಎಂ. ಆರ್. ಚೋಳ್ಕರ್, ವಿಶ್ವನಾಥರಾವ್ ಕೇಳ್ಕರ್ ಮೊದಲಾದವರು ಇದ್ದರು.[5]

ನಾಗಪುರದಲ್ಲಿ ಜಾತೀಯ ಸಮಸ್ಯೆಗಳಿಗೆ ಕಾರಣವಾಗಿದ್ದುದು ಅಲ್ಲಿನ ಮುಸಲ್ಮಾನರ ಮತೀಯ ಒರಟುತನ ಮತ್ತು ಹಠಮಾರಿ ಸ್ವಭಾವವೇ. ಜತೆಯಲ್ಲಿ ವಸಾಹತುಶಾಹಿ ಆಡಳಿತವು ಸಹ ಮುಸಲ್ಮಾನರ ತುಷ್ಟೀಕರಣದಲ್ಲಿ ತೊಡಗಿದ್ದು ತನ್ನ ಅಪಾರ ಪ್ರೋತ್ಸಾಹವನ್ನು ಅವರಿಗೆ ನೀಡುತ್ತಿತ್ತು. 1923ರ ಅಕ್ಟೋಬರ್ 30ರಂದು ನಾಗಪುರದ ಜಿಲ್ಲಾಧಿಕಾರಿಯವರು ದಿಂಡಿ ಮೆರವಣಿಗೆಯ ಮೇಲೆ ನಿರ್ಬಂಧ ಹೇರಿದರು. ಅಕ್ಟೋಬರ್–ನವೆಂಬರ್ ತಿಂಗಳಲ್ಲಿ ಹಿಂದೂಗಳು ಭಜನಾಸಹಿತ ಮಾಡುವ ಮೆರವಣಿಗೆಯನ್ನು ದಿಂಡಿ ಮೆರವಣಿಗೆ ಎನ್ನಲಾಗುತ್ತದೆ. ಸರ್ಕಾರದ ಆದೇಶದ ವಿರುದ್ಧ ಹಿಂದೂಗಳಲ್ಲಿ ತೀವ್ರವಾದ ಆಕ್ರೋಶ ಭುಗಿಲೆದ್ದಿತು. ಇದರ ವಿರುದ್ಧವಾಗಿ ಪ್ರತಿಭಟಿಸಲು ನಾಗಪುರದಲ್ಲಿ 'ದಿಂಡಿ ಸತ್ಯಾಗ್ರಹ'ದ ಹೆಸರಲ್ಲಿ ಜನರ ಹೋರಾಟ ಆರಂಭವಾಯಿತು. ನವೆಂಬರ್ 1 ರಿಂದ 10ರ ತನಕ ನಡೆದ ಈ ಸತ್ಯಾಗ್ರಹದಲ್ಲಿ ರಾಜಾ ಲಕ್ಷ್ಮಣರಾವ್ ಭೋಂಸ್ಲೆ, ಡಾ. ಚೋಳ್ಕರ್, ಡಾ. ಮುಂಜೆ, ಡಾ.ಹೆಡಗೇವಾರ್, ನಾ.ಭಾ. ಖರೆ. ಮೊದಲಾದ ಪ್ರಮುಖರು ಭಾಗವಹಿಸಿದ್ದರು. ಇದರಲ್ಲಿ ಇನ್ನೂರೈವತ್ತು ಮಂದಿ ಬಂಧನಕ್ಕೂ ಒಳಗಾಗಿದ್ದರು. ಡಾ. ಹೆಡಗೇವಾರರು ನವೆಂಬರ್ 8ರಂದು ಸತ್ಯಾಗ್ರಹದಲ್ಲಿ ಪಾಲ್ಗೊಂಡರು.[6] ಕಟ್ಟಕಡೆಯಲ್ಲಿ ಸ್ಥಾನೀಯ ಆಡಳಿತವು ಬಗ್ಗಲೇ ಬೇಕಾಯಿತು. 1923ರ ನವೆಂಬರ್ 12ರಂದು ಆಡಳಿತವು ಒಂದು ಶಾಂತಿ ಸಮಿತಿಯನ್ನು ರಚಿಸಿತು. ಅದರಲ್ಲಿ ಡಾ. ಹೆಡಗೇವಾರರನ್ನೂ ಸೇರಿಸಲಾಗಿತ್ತು.

ಅಷ್ಟಾದರೂ ದಂಗೆಗಳು ಕಡಿಮೆಯಾಗಲಿಲ್ಲ. ನವೆಂಬರ್ ಒಂದೇ ತಿಂಗಳಲ್ಲಿ ಎರಡು ಬಾರಿ ದಂಗೆಗಳಾದವು. ಡಾ. ಹೆಡಗೇವಾರರು ಕೈಗೊಂಡಿದ್ದ ಸಾಹಸಪೂರ್ಣ ಕ್ರಮಗಳಿಂದಾಗಿ ನವೆಂಬರ್ 19ರ ದಂಗೆ ಹೆಚ್ಚಿನ ಪ್ರದೇಶಗಳಿಗೆ ವಿಸ್ತರಿಸದೆ ಶಾಂತವಾಯಿತು.[7]

---

4. ಮಹಾರಾಷ್ಟ್ರ, 10 ಮೇ 1925, ಪು. 5
5. ಮುಂಜೆ ಪ್ರೈವೇಟ್ ಪೇಪರ್ಸ್, ಫೈಲ್ ಕ್ರ 13 1923–28
6. ಮಹಾರಾಷ್ಟ್ರ, 17 ನವೆಂಬರ್ 1923 ಪು. 2
7. ಮಹಾರಾಷ್ಟ್ರ, 21 ನವೆಂಬರ್ 1923 ಪು.4

ಇದೇ ವಿಧದ ವಿವಾದ 1937ರಲ್ಲಿ ಪೂಣಾದಲ್ಲಿ ತಲೆಯೆತ್ತಿತು. ಮುಸಲ್ಮಾನರ ಆಕ್ಷೇಪಗಳನ್ನು ಗೌರವಿಸಿ ಸರ್ಕಾರವು ಅಲ್ಲಿನ ಸೋನ್ಯಾಮಾರುತಿ ಮಂದಿರದ ಘಂಟೆಯನ್ನು ಬಾರಿಸುವುದರ ಮೇಲೆ ಏಪ್ರಿಲ್ 24ರಿಂದ ಮೇ 14ರ ವರೆಗೆ ನಿಷೇಧ ವಿಧಿಸಿತು. ಅದರ ಜತೆಯಲ್ಲಿ ಯಾವುದೇ ವಾದ್ಯವನ್ನೂ ಬಾರಿಸಬಾರದು ಎಂಬ ನಿರ್ಬಂಧವನ್ನೂ ಹೇರಿತು. ಡಾ. ಹೆಡಗೇವಾರರು ಒಂದು ಕಡೆ ಸರ್ಕಾರದ ತುಷ್ಟೀಕರಣ ನೀತಿ, ಇನ್ನೊಂದು ಕಡೆ ಮುಸಲ್ಮಾನ ಸಮಾಜದ ಅಸಹಿಷ್ಣು ಪ್ರವೃತ್ತಿ, ಇವೆರಡರಿಂದಲೂ ಖೇದಗೊಂಡಿದ್ದರು. ಪುಣೆಯಲ್ಲಿ ಸಂಘ ಶಿಕ್ಷಾವರ್ಗ ನಡೆಯುತ್ತಿತ್ತು. ಅಲ್ಲಿನ ಸ್ಥಾನೀಯ ಹಿಂದೂ ನಾಯಕರು ಈ ಸತ್ಯಾಗ್ರಹದಲ್ಲಿ ಸ್ವಯಂಸೇವಕರು ಪೂರ್ಣ ಶಕ್ತಿ ತೊಡಗಿಸಿ ಭಾಗವಹಿಸಬೇಕು ಎಂದು ಅಪೇಕ್ಷಿಸುತಿದ್ದರು. ಆದರೆ ಡಾ. ಹೆಡಗೇವಾರರಿಗೆ ಅನಿಸುತ್ತಿದ್ದುದು ಯಾವುದೋ ಒಂದಿಷ್ಟು ಸಂಕಟ ಒದಗಿದಾಗ ಮಾತ್ರ ಹಿಂದೂ ಸಮಾಜವು ಎಚ್ಚೆತ್ತುಕೊಳ್ಳುತ್ತದೆ. ಇಂತಹ ವಿಪತ್ತುಗಳು ಆಗಾಗ ಬರುತ್ತಲೇ ಇರುವುದು ಸಹ ಈ ಕಾರಣಕ್ಕಾಗಿಯೇ. ವಾಸ್ತವಿಕವಾಗಿ ಸಮಾಜವು ಸದಾ ಕಾಲವೂ ಜಾಗೃತವಾಗಿರಬೇಕಾದುದು ಅತ್ಯಗತ್ಯ. ಸ್ಥಾನೀಯ ಹಿಂದೂ ನಾಯಕರು ಇದನ್ನು ಅರ್ಥಮಾಡಿಕೊಳ್ಳಲು ಅಸಮರ್ಥರಾಗಿದ್ದಾರೆ ಎಂಬುದು ಡಾ. ಹೆಡಗೇವಾರರಿಗೆ ಗೊತ್ತಿತ್ತು. ಸಂಘ ಶಿಕ್ಷಾ ವರ್ಗವು ಮೇ 13ರಂದು ಪೂರ್ಣಗೊಂಡ ನಂತರ ಡಾ. ಹೆಡಗೇವಾರರು ಸ್ವತಃ ಈ ಸತ್ಯಾಗ್ರಹದಲ್ಲಿ ಪಾಲ್ಗೊಂಡು ಬಂಧನಕ್ಕೊಳಗಾದರು. ತುಸು ಹೊತ್ತಿನ ನಂತರ ಅಂದೇ ಅವರ ಬಿಡುಗಡೆಯೂ ಆಯಿತು. ನ್ಯಾಯಾಲಯದಲ್ಲಿ ಅವರ ಜಾಗದಲ್ಲಿ ಎನ್.ಜಿ. ಅಭ್ಯಂಕರ್ ಅವರು ಹಾಜರಾದರು. ಅದಕ್ಕೆ ನ್ಯಾಯಾಲಯವೂ ಅವರಿಗೆ ಅನುಮತಿ ನೀಡಿತ್ತು. ಮೇ 17ರಂದು ನ್ಯಾಯಾಲಯವು ಈ ಮೊಕದ್ದಮೆಯ ತೀರ್ಪು ನೀಡಿತು. ಅದರಂತೆ ಅವರಿಗೆ 25 ರೂಪಾಯಿಗಳ ದಂಡ ವಿಧಿಸಲಾಗಿತ್ತು. ಅವರು ಇಂತಹ ಪ್ರಸಂಗಗಳು ನಮ್ಮ ರಾಷ್ಟ್ರೀಯ ಪರಂಪರೆಗೆ ವಿರುದ್ಧವಾದುದೆಂದು ತಿಳಿಯುತ್ತಿದ್ದರು. ಹಿಂದೂಗಳ ಸಂಘಟನೆಯೊಂದು ತಯಾರಾದರೆ ಮಾತ್ರ ಇಂತಹ ಮನೋಭಾವ ಮತ್ತು ಸರ್ಕಾರ ನಡೆಸುವಂತಹ ಪಿತೂರಿ ಇವೆರಡೂ ನಡೆಯದಂತಹ ಸ್ಥಿತಿ ಒದಗುವುದು ಎಂಬ ವಿಶ್ವಾಸ ಅವರದಾಗಿತ್ತು.

ಅವರ ಈ ನಂಬಿಕೆಗೆ ಆಧಾರವಾಗಿದ್ದುದು ಅಂದಿನ ಸಾಮಾಜಿಕ ಪರಿಸ್ಥಿತಿಯನ್ನು ಕುರಿತು ಅವರು ಮಾಡಿದ್ದ ವಿಶ್ಲೇಷಣೆ ಮತ್ತು ಜೊತೆಗೆ ಅವರ ಸ್ವಂತ ಅನುಭವ. "ಸಂಘವು ಯಾರನ್ನೂ ದ್ವೇಷಿಸುವುದಿಲ್ಲ. ಸಂಘದ ಕಾರ್ಯವಾದರೊ ಕೇವಲ ಹಿಂದೂಗಳ ಸಂಘಟನೆಯದು ಮಾತ್ರ. ನಮ್ಮ ಧರ್ಮದ, ಸಂಸ್ಕೃತಿಯ ಮತ್ತು ರಾಷ್ಟ್ರದ ರಕ್ಷಣೆಯಾಗಬೇಕೆಂಬುದಷ್ಟೇ ನಮ್ಮ ಉದ್ದೇಶವಾಗಿದೆ. ಅಷ್ಟಾದರೂ ಇದನ್ನು ಯಾರಾದರೂ ಜಾತೀಯವೆನ್ನುವುದು ನನಗೆ ಅತ್ಯಾಶ್ಚರ್ಯದ ಸಂಗತಿಯಾಗಿದೆ"[8] ಎಂದಿದ್ದರು ಅವರು. ಹಿಂದೂಗಳಲ್ಲಿ ವ್ಯಾಪಕವಾಗಿರುವ ವೈವಿಧ್ಯ ಹಾಗೂ ಸಂಕೀರ್ಣವಾದ ರೀತಿನೀತಿಗಳಿಂದಾಗಿ, ಇಲ್ಲಿ ರೂಪುಗೊಂಡಿರುವ ಜೀವನಶೈಲಿ ಮತ್ತು ಧಾರ್ಮಿಕ ಸಹಿಷ್ಣುತೆ ಇವುಗಳನ್ನು ಇಲ್ಲಿಯ ಜಾತೀಯವಾದಿಗಳು ತಿರಸ್ಕಾರದಿಂದ ನೋಡುತ್ತಿದ್ದಾರೆ. ಅದಕ್ಕಾಗಿಯೇ ಹಿಂದೂಗಳ ಮೆರವಣಿಗೆಗಳು, ಶೋಭಾಯಾತ್ರೆ ಮತ್ತು ಮತಾಂತರದ ಸಮಸ್ಯೆಗಳು ಇತ್ಯಾದಿ ಇಲ್ಲಿ ತಲೆಯೆತ್ತುತ್ತವೆ ಎಂಬುದು ಅವರ ನಂಬುಗೆಯಾಗಿತ್ತು.

---

8. ಕೇಸರಿ, 7 ಏಪ್ರಿಲ್ 1933

ಅವರಂತೂ ತಮ್ಮದೇ ಆದ ಜಾಗತಿಕ ದೃಷ್ಟಿಕೋನಕ್ಕನುಗುಣವಾಗಿ ಸಂಘಕಾರ್ಯದ ವಿಸ್ತಾರದಲ್ಲಿ ತೊಡಗಿದ್ದರು. ಸ್ಥಾನೀಯರಾದ ಹಿಂದೂ ನಾಯಕರ ಚಿಂತನೆ ಮತ್ತು ಅಪೇಕ್ಷೆಗಳೇನಿದ್ದರೂ, ಅವರು ತಮ್ಮ ಚಿಂತನೆಯಲ್ಲಿ ಸ್ವಲ್ಪವೂ ರಾಜಿಯಾಗಲಿಲ್ಲ. 1926-27ರಲ್ಲಿ ಮಧ್ಯಪ್ರಾಂತದಲ್ಲಿ ಸಂಘವು ತನ್ನದಾಗಿಸಿಕೊಂಡಿದ್ದ ನಿಲುವು ಇದಕ್ಕೊಂದು ಉದಾಹರಣೆಯಾದೀತು. ಜಾತೀಯತೆಯ ವಿಷಮ ವಾತಾವರಣದಲ್ಲೂ ಅವರು ತಮ್ಮ ಸಕಾರಾತ್ಮಕ ನಿಲುವನ್ನು ಬಿಟ್ಟುಕೊಡಲಿಲ್ಲ. ಪರಿಣಾಮವಾಗಿ ಅವರಲ್ಲಿನ ವಿಶ್ವಾಸವೇ ಇನ್ನಷ್ಟು ದೃಢಗೊಂಡಿತು. ಅವರ ಮಧ್ಯಪ್ರವೇಶದ ಕಾರಣವೇ 1926ರ ಸೆಪ್ಟೆಂಬರ್‌ನಲ್ಲಿ ಗಣೇಶ ವಿಸರ್ಜನೆಯ ವಿಷಯದಲ್ಲಿ ಎರಡು ಬಾರಿ ದಂಗೆಗಳಾಗಬಹುದಾದುದು ತಡೆಯಲ್ಪಟ್ಟಿತು.[9] ಒಂದು ವರ್ಷದ ನಂತರ 1927ರಲ್ಲಿ ನಾಗಪುರದಲ್ಲಿ ಭೀಕರವಾದ ದಂಗೆಯಾಯಿತು. ಅದರಲ್ಲಿ 20 ಮಂದಿ ಹತರಾಗಿ 131ರ ಮಂದಿ ಗಾಯಗೊಂಡರು. ಈ ದಂಗೆಯಿಂದಾಗಿ ಪ್ರತಿನಿತ್ಯ 50 ಸಾವಿರ ರೂಪಾಯಿಗಳಷ್ಟು ಹಾನಿಯಾಯಿತು. ದಂಗೆಯ ಕಾರಣದ ಬಗ್ಗೆ ಸರ್ಕಾರದ ಪಾಕ್ಷಿಕ ವರದಿಯಲ್ಲಿ, ದಂಗೆಯ ಯಥಾರ್ಥ ಕಾರಣ ಮುಸಲ್ಮಾನರ ಮೆರವಣಿಗೆಯದು. ಅದರ ಉದ್ದೇಶವಿದ್ದುದು ಮೆರವಣಿಗೆ ನಡೆಸುವುದು ಕೇವಲ ಹಿಂದೂಗಳದೇ ಅಧಿಕಾರವಲ್ಲ ಎಂಬುದನ್ನು ತೋರಿಸುವುದೇ ಆಗಿತ್ತು. ನಾಗಪುರದಲ್ಲಿ ಮುಸಲ್ಮಾನರು ಅಲ್ಪಸಂಖ್ಯಾತರಾಗಿದ್ದರೂ ತಾವು ಹೆಚ್ಚು ಶಕ್ತಿಶಾಲಿಗಳು ಮತ್ತು ಉಗ್ರರೀತಿಯಲ್ಲಿ ಇರಬಲ್ಲವರು ಎಂಬುದನ್ನು ಅವರು ನಂಬಿಕೊಂಡಿರುವುದೇ ಆಗಿದೆ" ಎನ್ನಲಾಗಿತ್ತು.[10]

ಈ ಪ್ರಸಂಗದಲ್ಲಿ ಸ್ಥಾನೀಯ ಹಿಂದೂ ನಾಯಕರ ಅಪೇಕ್ಷೆಯಿದ್ದುದು ಸಂಘದ ಸ್ವಯಂಸೇವಕರು ಮುಸಲ್ಮಾನರ ವಿರುದ್ಧ ಪ್ರತೀಕಾರದ ಕ್ರಮಗಳನ್ನು ಆಕ್ರಮಣಕಾರಿ ರೀತಿಯಲ್ಲಿ ಕೈಗೊಳ್ಳಬೇಕು ಎಂಬುದಾಗಿ. ಆದರೆ ಹಾಗೆ ಆಗಲಿಲ್ಲ. ಡಾ.ಹೆಡಗೇವಾರರು ಕೇವಲ ಸಂವೇದನಶೀಲ ಸ್ಥಾನಗಳಲ್ಲಿ ದಂಗೆಗಳನ್ನು ತಡೆಯುವ ಸಲುವಾಗಿ ಮಾತ್ರ ಸ್ವಯಂಸೇವಕರಿಗೆ ಕೆಲಸ ವಹಿಸಿದರು. ಇದರ ಕಾರಣದಿಂದಾಗಿ ದಂಗೆಯನ್ನು ಅತಿ ಶೀಘ್ರವಾಗಿ ನಿಯಂತ್ರಿಸಲು ಸಾಧ್ಯವಾಯಿತು.

ಹಿಂದೂಗಳಲ್ಲಿ ವ್ಯಾಪಕವಾಗಿ ರೂಢಿಯಾಗಿರುವ ಅನುಶಾಸನಹೀನತೆ ಮತ್ತು ಧಾರ್ಮಿಕ ಉತ್ಸವಗಳಲ್ಲಿ ಕಾಣುವಂತಹ ಗೊಂದಲ, ಅವ್ಯವಸ್ಥೆಗಳನ್ನು ಸರಿಪಡಿಸುವ ಸಲುವಾಗಿ ಡಾ. ಹೆಡಗೇವಾರರು 1926ರಲ್ಲಿ ಒಂದು ಕಾರ್ಯಕ್ರಮವನ್ನು ಕೈಗೊಂಡರು. ರಾಮಟೇಕದಲ್ಲಿ ನಡೆಯುವಂತಹ ರಾಮನವಮಿಯ ಮೇಳಾವನ್ನು ಸುಯೋಗ್ಯ ರೀತಿಯಲ್ಲಿ ನಿಭಾಯಿಸುವ ಸಲುವಾಗಿ ನಾಗಪುರದಿಂದ ಇನ್ನೂರು ಸ್ವಯಂಸೇವಕರನ್ನು ಕಳುಹಿಸಲಾಯಿತು. ಅಲ್ಲಿ ಅವರು ಮಾಡಿದ್ದ ವ್ಯವಸ್ಥೆಗಳಿಂದಾಗಿ ಹಿಂದೂಗಳು ಮತ್ತು ಮುಸಲ್ಮಾನರು ಇವೆರಡೂ ಸಮುದಾಯಗಳಲ್ಲಿನ ಗೊಂದಲ ಸೃಷ್ಟಿಸುವವರೆಲ್ಲ ಕೋಪಗೊಂಡರು. ನಾಗಪುರ ಮತ್ತು ಸುತ್ತಮುತ್ತಲಿನ ಜಾತೀಯವಾದಿಗಳಿಗೆ ಡಾ. ಹೆಡಗೇವಾರರಿಂದ ಆರಂಭವಾಗಿದ್ದ ಸಂಘದ ಅನುಶಾಸನಪೂರ್ಣ ವ್ಯವಸ್ಥೆಯಿಂದ ಕೋಪವುಂಟಾಗಿದ್ದುದು ಸ್ವಾಭಾವಿಕವೇ. ಸಂಘದಿಂದಾಗಿ ಇನ್ನು ಮುಂದೆ ಹಬ್ಬ ಅಥವಾ ಉತ್ಸವಗಳಲ್ಲಿ ತಾವು ಇಷ್ಟ ಬಂದಂತೆ ಅನಾಚಾರ, ಗೊಂದಲ ಮತ್ತು ಲೂಟಿ ಇತ್ಯಾದಿ

---

9. ಮುಂಜೆ ಪೇಪರ್ಸ್, ಡೈರಿ 7 ಮತ್ತು 22 ಸೆಪ್ಟೆಂಬರ್ 1926
10. [illegible]

ಮಾಡಲು ಸಾಧ್ಯವಾಗದೆಂದು ಅವರಿಗೆ ಅನಿಸಿತ್ತು. ಈ ನಡುವೆ ಸ್ವಾಮಿ ಶ್ರದ್ಧಾನಂದರ ಕೊಲೆಯಿಂದಾಗಿ ಮಧ್ಯಪ್ರಾಂತದ ಇಂತಹ ಶಕ್ತಿಗಳಿಗೆ ಹೆಚ್ಚಿನ ಭುಜಬಲ ಬಂದಂತೆ ಆಗಿತ್ತು.

ಈ ಪ್ರಸಂಗದಲ್ಲೇ ಡಾ. ಹೆಡಗೇವಾರರಿಗೆ ಒಂದು ಬೆದರಿಕೆ ಸಹಿತವಾದ ಪತ್ರವೂ ಬಂದಿತ್ತು. ಅದರಲ್ಲಿ 'ನೀವು ರಾಮಟೇಕದಲ್ಲಿ ಮುಸಲ್ಮಾನರೊಂದಿಗೆ ತುಂಟಾಟ ನಡೆಸಿದ್ದೀರಿ. ಗೊತ್ತಿರಲಿ, ಮುಂದಿನ ವರ್ಷದೊಳಗೆ ನಿಮ್ಮನ್ನು ಕೋಳಿ ಕೊಯ್ದಂತೆ ಕತ್ತರಿಸಿ ಹಾಕಲಾಗುವುದು.....'[11] ಎಂಬ ಒಕ್ಕಣೆ ಇತ್ತು.

ಜೂನ್ 4 ರಂದು ಅವರಿಗೆ ಅದೇ ವಿಧದ ಇನ್ನೊಂದು ಪತ್ರ ಬಂತು. ಅದರ ನಂತರ ನಾಗಪುರದಲ್ಲೆಲ್ಲ ಅವರ ಮೇಲೆ ಹಲ್ಲೆಯಾಗಿರುವ ವದಂತಿಗಳು ಹರಡಲಾರಂಭವಾದವು. ಅದರೆ ಅವರು ಸ್ವಲ್ಪವೂ ಗಲಿಬಿಲಿಗೊಳ್ಳಲಿಲ್ಲ ಮಾತ್ರವಲ್ಲ, ಸ್ವಯಂಸೇವಕರಲ್ಲೂ ಜಾತೀಯತೆಯ ಅಥವಾ ಪ್ರತಿಕ್ರಿಯಾತ್ಮಕ ಮಾನಸಿಕತೆ ಬೆಳೆಯಲು ಅವಕಾಶವನ್ನೂ ಅವರು ನೀಡಲಿಲ್ಲ. ಅವರು ಇಂತಹ ಸಂಗತಿಗಳನ್ನು ಏನೂ ಮಹತ್ವವಿಲ್ಲವೆಂಬಂತೆ ತಿಳಿದುಕೊಂಡು ಪಕ್ಕಕ್ಕೆ ಸರಿಸುತ್ತಿದ್ದರು. ತಮಗೆ ಬಂದಿರುವ ಬೆದರಿಕೆಯ ಪತ್ರಗಳ ಬಗ್ಗೆ ಅವರು ಪೊಲೀಸರಿಗೆ ತಿಳಿಸುವ ಗೋಜಿಗೆ ಸಹ ಹೋಗಲಿಲ್ಲ. ಕೊನೆಯಲ್ಲಿ ಈ ವಿಷಯದಲ್ಲಿ ಡಾ. ಮುಂಜೆ ಅವರೇ ಪೊಲೀಸರಿಗೆ ದೂರು ಸಲ್ಲಿಸಬೇಕಾಯಿತು.[12]

ರಾಷ್ಟ್ರೀಯ ಉತ್ಸವ ಮಂಡಲದ ಆಶ್ರಯದಲ್ಲಿ ಸಂಘದ ಸ್ವಯಂಸೇವಕರು ಗಣಪತಿ ಉತ್ಸವದ ವ್ಯವಸ್ಥೆಗಳ ಉಸ್ತುವಾರಿ ನೋಡಿಕೊಳ್ಳುವ ಮೂಲಕ ಸಮಾಜ ವಿರೋಧಿ ಶಕ್ತಿಗಳನ್ನು ದೂರಗೊಳಿಸಿದರು.[13] ಹಿಂದೆ 1926ರಲ್ಲಿ ಕಲ್ಕತ್ತಾದಲ್ಲಿ ನಡೆದಿದ್ದ 'ಕಮ್ಯುನಲ್ ಅವಾರ್ಡ್ ವಿರೋಧಿ ಸಮ್ಮೇಳನ'ದಲ್ಲಿ ಡಾ. ಹೆಡಗೇವಾರರು ಭಾಗವಹಿಸಿದ್ದರು. ಈಗ ಸಂಘದ ವತಿಯಿಂದ 'ಕಮ್ಯುನಲ್ ಅವಾರ್ಡ್' ಅನ್ನು ವಿರೋಧಿಸಿ ಹಾಗೂ ಸಂಯುಕ್ತ ಮತದಾನ ಕ್ಷೇತ್ರದ ವಿಷಯವನ್ನು ಸಮರ್ಥಿಸಿ ಮಧ್ಯಪ್ರಾಂತದಲ್ಲೆಲ್ಲ ಸಭೆ, ರ್‍ಯಾಲಿ ಇತ್ಯಾದಿ ಕಾರ್ಯಕ್ರಮಗಳು ನಡೆದವು. ಆದರೆ ಈ ಎಲ್ಲ ರ್‍ಯಾಲಿಗಳಲ್ಲಿ ಸಾಮ್ರಾಜ್ಯವಾದಿಗಳ 'ಒಡೆದು ಆಳುವ' ನೀತಿಯ ವಿರುದ್ಧ ಭಾಷಣಗಳಾದವೇ ವಿನಾ ಅವು ಮುಸಲ್ಮಾನ ವಿರೋಧಿ ಕಾರ್ಯಕ್ರಮಗಳಾಗದಂತೆ ನೋಡಿಕೊಳ್ಳಲಾಗಿತ್ತು.[14]

ಡಾ. ಹೆಡಗೇವಾರರ ಚಿಂತನೆ ಅದೆಷ್ಟು ಸಕಾರಾತ್ಮಕವಾಗಿತ್ತೆಂಬುದನ್ನು 1934ರಲ್ಲಿ ನಡೆದ ಒಂದು ಪ್ರಸಂಗದಿಂದ ತಿಳಿಯಬಹುದು. 1932ರ ಕೊನೆಯಲ್ಲಿ ಸರ್ಕಾರಿ ನೌಕರರು ಸಂಘದಲ್ಲಿ ಭಾಗವಹಿಸುವುದನ್ನು ನಿಷೇಧಿಸಿ ಮಧ್ಯಪ್ರಾಂತ ಸರ್ಕಾರವು ಸುತ್ತೋಲೆಯನ್ನು ಹೊರಡಿಸಿತ್ತಷ್ಟೇ. ಒಂದು ವರ್ಷದ ನಂತರ ಈ ನಿರ್ಬಂಧದ ವ್ಯಾಪ್ತಿಯನ್ನು ಇನ್ನಷ್ಟು ವಿಸ್ತರಿಸಿ ಸ್ಥಾನೀಯ ಸ್ವಯಮಾಡಳಿತದ ಸಂಸ್ಥೆಗಳಲ್ಲಿನ ನೌಕರರು ಮತ್ತು ಶಿಕ್ಷಕರನ್ನೂ ಈ ನಿಷೇಧಕ್ಕೆ ಒಳಪಡಿಸಲಾಯಿತು. ಈ ಎರಡನೇ ನಿಷೇಧದಿಂದಾಗಿ ನಿಶ್ಚಿತವಾಗಿಯೂ ಸಂಘಕ್ಕೆ ಹಾನಿಯಾಗುವ ಸಂಭವವಿದ್ದುದರಿಂದ, ಅದರ ವಿರುದ್ಧ

---

11. ಮಹಾರಾಷ್ಟ್ರ 25 ಮೇ 1927
12. ಮುಂಜೆ ಪೇಪರ್ಸ್, ಡೈರಿ, 10 ಮೇ 1927, ರಾಷ್ಟ್ರೀಯ ಅಭಿಲೇಖಾಗಾರ, ನವದೆಹಲಿ
13. ಮಧ್ಯಪ್ರಾಂತದ ಸೆಪ್ಟೆಂಬರ್ 1932ರ ಎರಡನೇ ಭಾಗದ ಪಾಕ್ಷಿಕ ವರದಿ F.L/P&J/12/40
14. ಮಧ್ಯಪ್ರಾಂತದ ಪಾಕ್ಷಿಕ ವರದಿ ಆಗಸ್ಟ್, 1934 ಉತ್ತರಾರ್ಧ F.L/P&J/12/62

ಹೋರಾಡುವುದು ಸಂಘದ ಪಾಲಿಗೆ ಜೀವನ ಮರಣದ ಹೋರಾಟವೇ ಆಯಿತು. ಆ ಸಂದರ್ಭದಲ್ಲಿ ಸ್ಥಾನೀಯ ಸ್ವಾಯತ್ತ ಮಾಡಳಿತ ವಿಭಾಗಕ್ಕೆ ಮಂತ್ರಿಯಾಗಿದ್ದವರು ಎಂ.ವೈ. ಶರೀಫ್ ಅವರು. ಅವರು ಅಪ್ಪಟ ಜಾತೀಯವಾದಿಯಾಗಿದ್ದವರು. 1934ರ ಜನವರಿ 15ರಂದು ಡಾ. ಮುಂಜೆ ಅವರು, "ಮುಸಲ್ಮಾನ ಮಂತ್ರಿಯವರು ಸಂಘದ ಮೂಲದ ಮೇಲೆಯೇ ಆಕ್ರಮಣವೆಸಗಿದ್ದಾರೆ" ಎಂದು ಬರೆದಿದ್ದರು. ಇದು ಸತ್ಯವೇ ಆಗಿದ್ದರೂ ಡಾ.ಹೆಡಗೇವಾರರು ಇದನ್ನು ಕಂಡೂ ಕಾಣದಂತೆಯೇ ಇದ್ದರು. ಅವರು ತಮ್ಮ ಪತ್ರಗಳಲ್ಲಾಗಲಿ, ಇತರ ಸಾಮಾಜಿಕ ನಾಯಕರ ಜತೆ ನಡೆದ ಮಾತುಕತೆಗಳಲ್ಲಾಗಲಿ ಈ ವಿಷಯವನ್ನು ಪ್ರಸ್ತಾಪಿಸಲೇ ಇಲ್ಲ.

ಡಾ. ಹೆಡಗೇವಾರರ ಇಂತಹ ರಾಷ್ಟ್ರೀಯ ಹಾಗೂ ಕೇವಲ ಸಕಾರಾತ್ಮಕ ಮತ್ತು ಸಂಘಟನಾತ್ಮಕ ದೃಷ್ಟಿಕೋನದಿಂದಾಗಿ ಸಂಘ ಕಾರ್ಯದ ವಿಸ್ತಾರದ ಪ್ರಯತ್ನದಲ್ಲಿ ಮಧ್ಯಪ್ರಾಂತದಲ್ಲಾಗಲಿ ದೇಶದ ಇನ್ನಿತರ ಭಾಗಗಳಲ್ಲಾಗಲಿ ಜಾತೀಯತೆಯ ಹೆಸರಲ್ಲಿ ಯಾವುದೇ ಅಡ್ಡಿ ಎದುರಾಗಲೇ ಇಲ್ಲ.

ಮುಂದಿನ ವರ್ಷಗಳಲ್ಲಿ ಮುಸ್ಲಿಂ ಲೀಗ್‌ನ ದ್ವಿರಾಷ್ಟ್ರವಾದದ ಸಿದ್ಧಾಂತವನ್ನು ರಾಷ್ಟ್ರ ವಿರೋಧಿ ಎಂದು ಘೋಷಿಸಿ ಸಂಘವು 'ಪಾಕಿಸ್ತಾನ ವಿರೋಧಿ ದಿನ'ದ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿರುವುದಿದೆ. ಡಾ. ಹೆಡಗೇವಾರರು ಹಿಂದೂಸ್ಥಾನವನ್ನು ಒಂದು ಪ್ರಾಚೀನ ರಾಷ್ಟ್ರವನ್ನಾಗಿ ತಿಳಿಯುತ್ತಿದ್ದವರು. "ಒಂದೇ ರಾಷ್ಟ್ರದ ಒಳಗೆ ವಿವಿಧ ಪಂಥದವರು ವಾಸಮಾಡುತ್ತಿರಬಹುದು. ಆದರೆ ರಾಷ್ಟ್ರ ಎನ್ನುವುದು ಯಾರು ಯಾವಾಗ ಬೇಕಾದರೂ ಬರಬಹುದು, ಇರಬಹುದು, ಬೇಡವೆನಿಸಿದಾಗ ಬಿಟ್ಟು ಹೋಗಬಹುದು ಎನ್ನುವಂತಹ ರೀತಿಯ ಒಂದು ಧರ್ಮಛತ್ರವಲ್ಲ" ಎಂಬುದು ಅವರ ನಂಬಿಕೆಯಾಗಿತ್ತು.[15] ಈ ತರ್ಕವನ್ನೇ ಮುಂದುವರಿಸುತ್ತ ಅವರು ಹೇಳುತ್ತಿದ್ದುದು: "ಒಂದು ರಾಷ್ಟ್ರದಲ್ಲಿ ವಾಸಿಸುವವರೆಲ್ಲರೂ ಒಂದೇ ವಿಚಾರ, ಒಂದೇ ಆಚಾರ, ಒಂದೇ ನಾಗರಿಕತೆ ಮತ್ತು ಒಂದೇ ಪರಂಪರೆಯಲ್ಲಿ ಅಭಿಮಾನಿಗಳಾಗಿರುತ್ತಾರೆ." ಲೀಗ್ ಪ್ರತಿಪಾದಿಸುವಂತಹ ದ್ವಿರಾಷ್ಟ್ರವಾದವು ಧರ್ಮ, ಪಂಥ ಇವುಗಳನ್ನು ಆಧರಿಸಿ ಪ್ರತ್ಯೇಕವಾದ ರಾಷ್ಟ್ರೀಯತೆಗಳಿವೆ ಎದು ನಿರೂಪಿಸುವಂಥದ್ದಾಗಿತ್ತು. ಪಂಥೀಯ ವಿವಿಧತೆಗಳ ವಿಚಾರದಲ್ಲಿ ಡಾ. ಹೆಡಗೇವಾರರು ಸ್ಪಷ್ಟ ಶಬ್ದಗಳಲ್ಲಿ ಹೀಗೆ ಹೇಳುತ್ತಿದರು: "ಬೇರೆ ಪಂಥಗಳು ಇರುವುದರ ಬಗ್ಗೆ ಹಿಂದೂಸ್ಥಾನದಲ್ಲಿ ಎಂದೂ ವಿವಾದವನ್ನು ಎಬ್ಬಿಸಲಾಗಿಲ್ಲ. ಬೇರೆಯವರು ತಮ್ಮ ಪ್ರೀತಿ, ಸಹಾನುಭೂತಿ ಮತ್ತು ನಿಷ್ಠೆಯಿಂದ ಈ ಭೂಮಿಯಲ್ಲಿ ನೆಲೆಸಲು ಅಪೇಕ್ಷೆಪಟ್ಟಲ್ಲಿ ಅವರು ಅವಶ್ಯವಾಗಿಯೂ ಇರಬಹುದು. ನಾವು ಅವರನ್ನು ಎಂದೂ ಅಡ್ಡಿ ಪಡಿಸಿಲ್ಲ ಮತ್ತು ಮುಂದೆ ಸಹ ಅಡ್ಡಿ ಪಡಿಸುವುದೂ ಇಲ್ಲ. ಉದಾಹರಣೆಗೆ ಇಲ್ಲಿನ ಪಾರಸಿ ಜನಾಂಗವು ಹಿಂದೂಗಳ ಈ ಉದಾರತೆಯನ್ನು ಪರಿಚಯಿಸುವಂತಹದೇ ಆಗಿದೆ."

## ಅಸ್ಪೃಶ್ಯತೆ

ಹಿಂದೂ ಸಮಾಜದ ಒಳಗೆ ವ್ಯಾಪಕವಾಗಿ ಇರುವಂತಹ ಸಾಮಾಜಿಕ ದೋಷ ಗಳನ್ನು, ಬಡಕಿನ ಹಾಗೂ ಸಾಮಂತವಾದಿ ಮಾನಸಿಕತೆಯನ್ನು ಡಾ. ಹೆಡಗೇವಾರರು

---

15. ಕೇಸರಿ, 2 ಜುಲೈ 1939, ಪು. 5

ಸಮಾಜದ ಹಾಗೂ ಒಟ್ಟು ರಾಷ್ಟ್ರದ ಅವನತಿಗೆ ಮೂಲ ಕಾರಣ ಎಂಬಂತೆ ಕಾಣುತ್ತಿದ್ದರು. ಸ್ವಾತಂತ್ರ್ಯ ಸಂಘರ್ಷದ ಪ್ರಸಂಗದಲ್ಲಿ ಇಂತಹ ಸಾಮಾಜಿಕ ಸವಾಲುಗಳ ಕಡೆ ಮಹಾತ್ಮಾಗಾಂಧಿ ಮತ್ತು ಡಾ. ಭೀಮರಾವ್ ಅಂಬೇಡ್ಕರ್ ಅವರು ತಮ್ಮ ಲಕ್ಷ್ಯವನ್ನು ಹರಿಸಿದ್ದರು. "ಹಿಂದೂಗಳಲ್ಲಿ ಸಾಮಾಜಿಕ ಭಾವನೆಯ ಅಭಾವವಿದೆ" ಎನ್ನುತ್ತಿದ್ದರು ಡಾ. ಹೆಡಗೇವಾರರು. ಅವರು ಸಂಘದಲ್ಲಿ ಪ್ರವೇಶ ಪಡೆಯಲು ಅರ್ಹತೆಗಾಗಿ ಯಾವುದೇ ಶರತ್ತನ್ನು ವಿಧಿಸಿರಲಿಲ್ಲ. ಆದರೆ ಒಟ್ಟು ಸಂಘಟನೆಯ ರಚನೆ, ಕಾರ್ಯದ ಪದ್ಧತಿ ಮತ್ತು ಇಲ್ಲಿರುವ ವಿಶಾಲವಾದ ರಾಷ್ಟ್ರೀಯ ಭಾವನೆ ಇವುಗಳಿಂದಾಗಿ, ಇದರಲ್ಲಿ ಬರುವವರು ತಮ್ಮ ಜಾತಿ ಹಾಗೂ ಸ್ಪೃಶ್ಯ, ಅಸ್ಪೃಶ್ಯ ಭಾವನೆ ಇವುಗಳನ್ನು ಸ್ವಾಭಾವಿಕವಾಗಿಯೇ ದೂರಗೊಳಿಸುತ್ತಾರೆ. ಇಲ್ಲಿ ಆಗುವ ಈ ಪರಿವರ್ತನೆ ಯಾವುದೇ ಪ್ರಚಾರದ ಮೂಲಕ ಅಲ್ಲ. ಆದರೆ ಅತಿ ಸಹಜವಾಗಿ ಹಾಗೂ ಶಾಂತವಾಗಿ ಆಗುವಂತಹ ಸಾಮಾಜಿಕ ಕ್ರಾಂತಿ ಇದು. ಇಲ್ಲಿ ಬ್ರಾಹ್ಮಣರು ಮತ್ತು ಅಸ್ಪೃಶ್ಯರೆನಿಸಿಕೊಳ್ಳುವ ಸ್ವಯಂಸೇವಕರು ಜತೆಜತೆಯಾಗಿ ಇರುವ, ಆಹಾರ ಸ್ವೀಕರಿಸುವ ಮತ್ತು ಎಲ್ಲ ಚಟುವಟಿಕೆಗಳಲ್ಲಿ ಒಂದಾಗಿರುವ ಕಾರಣಕ್ಕಾಗಿ ಸನಾತನಿಗಳಾಗಿರುವ ಪರಿವಾರಗಳಿಂದ ಬಂದಿರುವವರು ಆರಂಭದಲ್ಲಿ ಆಕ್ಷೇಪಿಸಿರುವುದು ಇದೆಯಾದರೂ, ಒಟ್ಟು ಸಂಘಟನೆಯಲ್ಲಿನ ಅನೌಪಚಾರಿಕವಾದ ಸಾಂಸ್ಕೃತಿಕ ಪ್ರವಾಹದಲ್ಲಿ ಅವೆಲ್ಲ ಕೊಚ್ಚಿ ಹೋಗಿರುವ ಹಲವಾರು ಉದಾಹರಣೆಗಳಿವೆ. ಡಾ. ಹೆಡಗೇವಾರರು ಸಾಮಾಜಿಕ ಸಮಾನತೆಯನ್ನು ಸಂಘದ ಅನುಶಾಸನದ ಭಾಗವಾಗಿರುವಂತೆ ಆಗ್ರಹಿಸಿ ಎಂದೂ ಹೇರುತ್ತಿರಲಿಲ್ಲ ಎಂದು ಬಾಳಾಸಾಹೇಬ ದೇವರಸ್ ಅವರು ಬರೆದಿರಿಸಿರುವುದು ಇದೆ. ಸಾಮಾಜಿಕ ಸಮಾನತೆಯ ಪ್ರಕ್ರಿಯೆ ತೀರ ಸಹಜವಾಗಿ ಆಗಬೇಕಾಗಿದ್ದು, ಆಗಲೇ ಅದು ಶಾಶ್ವತವೂ ಆಗುವುದು ಎಂಬುದು ಡಾ. ಹೆಡಗೇವಾರರ ನಂಬಿಕೆಯಾಗಿತ್ತು. ಸಂಘದ ಮೊದಲ ಪ್ರಶಿಕ್ಷಣ ವರ್ಗದಲ್ಲಿ ಕೆಲವು ಸ್ವಯಂಸೇವಕರು ಮಹಾರ್ ಜಾತಿಯ ಸ್ವಯಂಸೇವಕರ ಜತೆ ಭೋಜನದ ಪಂಕ್ತಿಯಲ್ಲಿ ಕುಳಿತುಕೊಳ್ಳಲು ಕಸಿವಿಸಿಪಟ್ಟಾಗ ಡಾ. ಹೆಡಗೇವಾರರು ಅವರಿಗೆ ಪ್ರತ್ಯೇಕ ಪಂಕ್ತಿಯಲ್ಲಿ ಕುಳಿತುಕೊಳ್ಳಲು ಅನುಮತಿ ನೀಡಿದ್ದರು. ಡಾ. ಹೆಡಗೇವಾರರು ಅವರಿಗೆ ಹೇಳಿದುದು ಇಷ್ಟೇ: "ನಮ್ಮ ರೀತಿಯಾದರೋ ಒಟ್ಟಿಗೆ ಕೂತು ಊಟ ಮಾಡುವಂತಹುದೇ." ಆ ಎಲ್ಲ ಸನಾತನ ಪರಿವಾರದ ಸ್ವಯಂಸೇವಕರು ಮರುದಿನದಿಂದ ಸಹಜವಾಗಿಯೇ ಎಲ್ಲರ ಜೊತೆ ಕುಳಿತು ಊಟ ಮಾಡಲಾರಂಭಿಸಿದರು.

ಎಸ್. ಎಚ್. ದೇಶಪಾಂಡೆ ಅವರು ತಮ್ಮ ಸಂಘದ ಜೀವನದ ಬಗ್ಗೆ ಅನುಭವವನ್ನು ಬರೆಯುತ್ತ, ಅದರಲ್ಲಿನ ಸಾಮಾಜಿಕ ದರ್ಶನದ ಕುರಿತು ಬೆಳಕು ಚೆಲ್ಲಿದ್ದಾರೆ: "ನಮ್ಮ ಶಾಖೆಯ ಮುಖ್ಯ ಶಿಕ್ಷಕ ಬ್ರಾಹ್ಮಣೇತರನಾಗಿದ್ದವನು. ಆದರೆ ಆತ ಮಾತಾಡುತಿದ್ದ ಮರಾಠಿಯನ್ನು ಲಕ್ಷಿಸಿದಾಗ ನಮಗೆ ಅದರ ಕುರಿತು ಸಂದೇಹ ಸಹ ಉಂಟಾಗುತ್ತಿರಲಿಲ್ಲ. ನಾನು ಅವರ ಮನೆಗೆ ಹೋದಾಗಲೇ ನನಗೆ ಗೊತ್ತಾದುದು ಅವರು ಸದಾಶಿವ-ಸಮುದಾಯದವರು ಎಂಬುದು. ಅವರ ಸಹೋದರ ಸೀತಾರಾಮ ಸಹ ಸಂಘದ ಕ್ರಿಯಾಶೀಲ ಕಾರ್ಯಕರ್ತರಾಗಿದ್ದವರೇ."[16]

---

16. ಎಸ್. ಎಚ್. ದೇಶಪಾಂಡೆ, ಮೈ ಡೇಸ್ ಇನ್ ದಿ ಆರ್.ಎಸ್.ಎಸ್. ಕ್ವೆಸ್ಟ್, ಮುಂಬಯಿ, ಆಗಸ್ಟ್ 1975, ಪು. 19

ಅಸ್ಪೃಶ್ಯತೆ, ಜಾತಿಭೇದ ಇತ್ಯಾದಿಗಳಿಗೆ ಸಂಬಂಧಿಸಿದಂತೆ ತಮ್ಮ ನಂಬಿಕೆಗಳಲ್ಲಿ ಡಾ. ಹೆಡಗೇವಾರರು ಎಂದೂ ರಾಜಿ ಮಾಡಿಕೊಂಡವರಲ್ಲ. ಅವರು ಸಮಗ್ರತಾವಾದಿಯಾಗಿದ್ದವರು. ಹಿಂದುಳಿದವರು ಮತ್ತು ಅಸ್ಪೃಶ್ಯರೆನಿಸಿಕೊಂಡವರಿಗೂ ಮಿಕ್ಕವರ ಜತೆ ಸಮಾನತೆಯಿಂದ ಇರಲು ಹಕ್ಕು ಇದೆ ಎನ್ನುವುದು ಅವರ ದೃಢವಾದ ನಂಬಿಕೆಯಾಗಿತ್ತು. ಇದನ್ನು ಆಧರಿಸಿಯೇ ಅವರು ಹಾಗೂ ಸಂಘದ ಇನ್ನಿತರ ಪ್ರಮುಖ ಕಾರ್ಯಕರ್ತರು ಮಧ್ಯಪ್ರಾಂತದ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮ ನೇರ ಹೋರಾಟವನ್ನು ನಡೆಸಿದರು. 1940ರಲ್ಲಿ ವರ್ಧಾದಲ್ಲಿದ್ದ 84 ಶಾಖೆಗಳಲ್ಲಿ 70 ಶಾಖೆಗಳು ಬ್ರಾಹ್ಮಣೇತರ ಬಾಹುಳ್ಯವಿರುವ ಕ್ಷೇತ್ರಗಳಲ್ಲಿ ಇದ್ದವು.[17] ಒಂದು ವೇಳೆ ಸನಾತನಿಗಳು ಅಥವಾ ರೂಢಿವಾದಿಗಳು ಸಂಘದ ಎದುರು ತಲೆ ಎತ್ತಿದಾಗ ಡಾ. ಹೆಡಗೇವಾರರು ಸ್ವಲ್ಪವೂ ಕಸಿವಿಸಿ ಪಡದೆ ಅವರ ಸವಾಲನ್ನು ನಿವಾರಿಸಿ ಬಿಡುತ್ತಿದ್ದರು. 1937ರಲ್ಲಿ ಮಹಾರಾಷ್ಟ್ರದ ರತ್ನಗಿರಿಯಲ್ಲಿ ಒಂದು ಮಂದಿರದಲ್ಲಿ ಸಂಘದ ಕಾರ್ಯಕ್ರಮ ಏರ್ಪಟ್ಟಿತ್ತು. ಮಂದಿರದ ಪುರೋಹಿತರು, ಪರಿಜನ ಸ್ವಯಂಸೇವಕರು ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವುದಕ್ಕಾಗಿ ಮಂದಿರದ ಒಳಗೆ ಬರುವುದನ್ನು ಆಕ್ಷೇಪಿಸಿದರು. ಇದು ಗೊತ್ತಾದಂತೆಯೇ ಡಾ. ಹೆಡಗೇವಾರರು ಕಾರ್ಯಕ್ರಮದ ಸ್ಥಾನವನ್ನು ಬದಲಿಸಿದರು. ಮಹದೇವ ಶಾಸ್ತ್ರಿ ದಿವೇಕರ ಅವರು 'ಕೇಸರಿ'ಯಲ್ಲಿ, "ಸಂಘದಲ್ಲಿ ಬ್ರಾಹ್ಮಣರು, ಬ್ರಾಹ್ಮಣೇತರರು ಮತ್ತು ಅಸ್ಪೃಶ್ಯರು ಇತ್ಯಾದಿ ಭೇದಗಳನ್ನು ಮಾಡುವುದೇ ಇಲ್ಲ. ಅದರಲ್ಲಿರುವವರು ಒಟ್ಟಿಗೆ ಕೂಡಿ ಆಡುತ್ತಾರೆ, ಊಟ ಮಾಡುತ್ತಾರೆ ಮತ್ತು ಧ್ವಜಕ್ಕೆ ಪ್ರಣಾಮ ಮಾಡುತ್ತಾರೆ."[18] ಎಂದು ಬರೆದಿದ್ದಾರೆ.

1938ರಲ್ಲಿ ಡಾ. ಭೀಮರಾವ್ ಅಂಬೇಡ್ಕರರು ಪುಣೆಯಲ್ಲಿ ನಡೆಯುತ್ತಿದ್ದ ಸಂಘದ ಶಿಬಿರಕ್ಕೆ ಬಂದಿದ್ದರು. ಅಲ್ಲಿ ಅವರು ಮಹಾರ್ ಜಾತಿಯ ಸ್ವಯಂಸೇವಕರೊಂದಿಗೆ ಸಂಪೂರ್ಣವಾಗಿ ಸಮ್ಮಾನದ ಹಾಗೂ ಸಮಾನತೆಯ ವ್ಯವಹಾರ ನಡೆಯುತ್ತಿರುವುದನ್ನು ಕಂಡು ಆಶ್ಚರ್ಯಪಟ್ಟರು. ತಮ್ಮ ಅಭಿಪ್ರಾಯ ತಿಳಿಸುತ್ತಾ "ಈ ರೀತಿಯಲ್ಲಿ ಅಸ್ಪೃಶ್ಯತೆಯನ್ನು ಕೊನೆಗೊಳಿಸುವಂತಹ ಕಾರ್ಯವನ್ನು ಈ ಮೊದಲು ನಾನು ಎಲ್ಲೂ ನೋಡಿಯೇ ಇಲ್ಲ" ಎಂದರು.

ಇದೇ ವಿಧದ ಟಿಪ್ಪಣಿಯನ್ನು 1934ರಲ್ಲಿ ವರ್ಧಾ ಶಿಬಿರದ ವೀಕ್ಷಣೆಗೆ ಬಂದಿದ್ದ ಮಹಾತ್ಮಾ ಗಾಂಧಿ ಅವರು ಸಹ ತಿಳಿಸಿದ್ದರು.

ಡಾ. ಅಂಬೇಡ್ಕರ್ ಬಗ್ಗೆ ಡಾ. ಹೆಡಗೇವಾರರ ಮನದಲ್ಲಿ ಗೌರವದ ಭಾವವಿತ್ತು. ಈ ಕಾರಣಕ್ಕಾಗಿಯೇ ಡಾ. ಅಂಬೇಡ್ಕರ್‌ರವರ ಹೆಸರನ್ನು ಪ್ರಾತಃಸ್ಮರಣೀಯರ ಪಟ್ಟಿಯಲ್ಲಿ ಸಂಘವು ಸೇರಿಸಿದೆ. ಡಾ. ಹೆಡಗೇವಾರ್ ಮತ್ತು ಡಾ. ಅಂಬೇಡ್ಕರ್‌ರ ನಡುವೆ ಹೋಲಿಕೆ ಮಾಡುತ್ತ ಕು.ಸೀ. ಸುದರ್ಶನ ಅವರು "ಹಿಂದೂ ಸಮಾಜದ ಮಾನಸಿಕತೆಯಲ್ಲಿ ಯಾವ ಕ್ರಾಂತಿಯನ್ನು ಡಾ. ಅಂಬೇಡ್ಕರ್‌ರು ಅಪೇಕ್ಷಿಸುತ್ತಿದ್ದರೋ, ಅದೇ ಡಾ. ಹೆಡಗೇವಾರರ ಇಚ್ಛೆಯೂ ಆಗಿತ್ತು. ಡಾ. ಹೆಡಗೇವಾರರು ಮೇಲುಕೀಳು, ಸ್ಪೃಶ್ಯ – ಅಸ್ಪೃಶ್ಯ ಇತ್ಯಾದಿ ಭಾವನೆಗಳು ಇಲ್ಲದೆ, ಯಾವ

---

17. ಕೇಸರಿ, 24 ಜುಲೈ 1940
18. ಕೇಸರಿ, 5 ಜುಲೈ 1940 ಪು. 13

ಸಮರಸ ಹಾಗೂ ಸಂಘಟಿತ ಜೀವನವನ್ನು ಅಪೇಕ್ಷಿಸುತ್ತಿದ್ದರೊ, ಅದೇ ಡಾ. ಅಂಬೇಡ್ಕರ್‌ರ ಮನದಿಚ್ಛೆಯೂ ಆಗಿತ್ತು" ಎಂದು ಬರೆದಿದ್ದಾರೆ.[19]

ಇನ್ನೂ ಮುಂದುವರಿಸುತ್ತ, ಸುದರ್ಶನಜೀ ಅವರು, "ಸಮಾಜದ ದೋಷಗಳನ್ನು ದೂರಗೊಳಿಸಲು ಡಾ. ಅಂಬೇಡ್ಕರ್‌ರು ಪ್ರಚಲಿತ ರೂಢಿಗಳ ವಿರುದ್ಧ ಕಠೋರವಾದ ಆಘಾತಗಳ ಮಾರ್ಗವನ್ನು ಅನುಸರಿಸಿದ್ದಲ್ಲಿ, ತಮ್ಮವರಿಗೆ ಸಮಾಜದಲ್ಲಿ ಗೌರವಪೂರ್ಣ ಸ್ಥಾನವನ್ನು ಕೊಡಿಸುವ ಸಲುವಾಗಿ, ವೈಯಕ್ತಿಕವಾಗಿ ಆಸಕ್ತಿ ಇಲ್ಲದಿದ್ದರೂ ರಾಜಕಾರಣದ ಮಾಧ್ಯಮವನ್ನು ಆಯ್ಕೆಮಾಡಿಕೊಂಡಿದ್ದರು. ಆದರೆ ಡಾ.ಹೆಡಗೇವಾರರು ಹಿಂದಿನ ಇತಿಹಾಸದ ಕಾಲದಲ್ಲಿ ಯಾವುದೇ ಶ್ರೇಷ್ಠ, ಉದಾತ್ತ ಹಾಗೂ ಕಲ್ಯಾಣಕಾರಿ ಎನಿಸಿತ್ತೋ ಅದನ್ನು ಆಧರಿಸಿ, ಹಿಂದುತ್ವದ ಉಜ್ವಲ ಸ್ವರೂಪವನ್ನು ಕಣ್ಣಮುಂದಿರಿಸಿ, ಸಮಾಜದ ಮನಸ್ಸನ್ನು ವಿಶಾಲ, ಸರ್ವಸಮಾವೇಶಕ ಹಾಗೂ ರೂಢಿವಿರಹಿತಗೊಳಿಸಲು ಹೆಚ್ಚು ಒತ್ತು ಕೊಟ್ಟರು. ಅಂದರೆ ಅವರು ತಮ್ಮದೇ ರೀತಿಯಲ್ಲಿ ತಮ್ಮನ್ನು ರಾಜಕಾರಣದಿಂದ ದೂರಗೊಳಿಸಿಕೊಂಡರು."

ಡಾ. ಹೆಡಗೇವಾರರು ಸಾಮಾಜಿಕ ನೆಲೆಯಲ್ಲಿ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಅವರು ಪುಣೆಯಲ್ಲಿನ ನ್ಯೂ ಇಂಗ್ಲಿಷ್ ಹೈಸ್ಕೂಲ್‌ನಲ್ಲಿ ನಡೆದ ಅಸ್ಪೃಶ್ಯರೆನಿಸಿಕೊಂಡವರ ಜತೆ ಸಹಪಂಕ್ತಿಯ ಭೋಜನದ ಸಂಯೋಜಕರಲ್ಲಿ ಒಬ್ಬರಾಗಿದ್ದರು. 1932ರ ಅಕ್ಟೋಬರ 23ರಂದು ಈ ಶಾಲೆಯ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತಾಡುತ್ತ ಅವರು ಅಸ್ಪೃಶ್ಯತೆಯ ಸವಾಲನ್ನು ಸಾಹಸಪೂರ್ಣವಾಗಿ ಎದುರಿಸೋಣ ಎಂದು ಕರೆ ನೀಡಿದ್ದರು.[20]

## ಸಂವೇದನಾಶೀಲತೆ

ಡಾ. ಹೆಡಗೇವಾರರ ಸಂವೇದನಾಶೀಲ ವ್ಯಕ್ತಿತ್ವವು ಅವರ ಸಾಮಾಜಿಕ ದರ್ಶನದಲ್ಲಿ ಪ್ರತಿಬಿಂಬಿತವಾಗಿದೆ. ಅವರು ಸ್ವಂತದ ಮತ್ತು ಸಾಮಾಜಿಕ ಕಷ್ಟಗಳ ನಿವಾರಣೆಯ ಸಂದರ್ಭದಲ್ಲಿ, ತನ್ನ ಸುಖ ಸೌಕರ್ಯಗಳು ಮತ್ತು ಕಾರ್ಯದ ಒತ್ತಡ ಇವುಗಳ ಬಗ್ಗೆ ಕಿಂಚಿತ್ತೂ ಲಕ್ಷಿಸುತ್ತಿರಲಿಲ್ಲ. ಅವರು ಕಲ್ಕತ್ತಾದಲ್ಲಿದ್ದಾಗ ದಾಮೋದರ್ ನದಿಯ ಪ್ರವಾಹ ಪೀಡಿತರಿಗಾಗಿ ನೆರವು ನೀಡಲು ರಾಮಕೃಷ್ಣ ಮಿಶನ್‌ನ ತಂಡದ ಜತೆ ಏಳು ದಿನಗಳ ಕಾಲ ಪರಿಶ್ರಮಿಸಿದ್ದರು. ಕಲ್ಕತ್ತಾದಲ್ಲಿ ಅವರು ಶ್ಯಾಮಸುಂದರ ಚಕ್ರವರ್ತಿ ಅವರಿಗೆ ಎಲ್ಲ ವಿಧದಲ್ಲಿ ನೆರವಾಗುತ್ತಿದ್ದರು. ತನ್ನ ಕ್ರಾಂತಿಕಾರಿ ಜೀವನದ ಹಳೆಯ ಸಹಕಾರಿ ಭಾವೂಜಿ ಕಾವರೆ ಅನಾರೋಗ್ಯದಲ್ಲಿದ್ದಾಗ ಓರ್ವ ಡಾಕ್ಟರನ್ನು ಜೊತೆಮಾಡಿಕೊಂಡು ಅವರಿದ್ದ ಊರಿಗೆ ಹೋಗಿ ಅಲ್ಲಿ ಮೂರು ದಿನಗಳ ಕಾಲ ಅವರ ಸೇವೆ ಮಾಡಿದ್ದರು.

ಅನಾಥ ಮಕ್ಕಳ ಸಮಸ್ಯೆಯ ಬಗ್ಗೆ ಅವರು ಸದಾ ಚಿಂತಿಸುತ್ತಿದ್ದರು. ಅವರೊಮ್ಮೆ ಕೇಳಿದ್ದ ಪ್ರಶ್ನೆ: "ನಮಗೆ ಅನಾಥಾಶ್ರಮವನ್ನು ಆರಂಭಿಸುವ ಅಗತ್ಯ ಬೀಳಬೇಕೇಕೆ?

19. ಕು.ಸೀ. ಸುದರ್ಶನ, ಸಮಾಜ ರೋಗ ಕೇ ನಿದಾನಕರ್ತಾ ದೋ ಡಾಕ್ಟರ್, ಪಾಂಚಜನ್ಯ 23 ಅಕ್ಟೋಬರ್ 1988, ಪು. 9–10
20. ಹಿತವಾದ, 27 ಅಕ್ಟೋಬರ್ 1932

ಯಾವುದೇ ಬಾಲಕನಿಗೆ ತಾನು ಅನಾಥನೆನಿಸಲೇಬಾರದೆಂಬಂತಹ ಸ್ಥಿತಿಯನ್ನು ತರಲು ನಮಗೆ ಸಾಧ್ಯವಿಲ್ಲವೇ?" ತಮ್ಮ ಬಾಲ್ಯದಲ್ಲಿ ತಂದೆ ತಾಯಿ ಇಬ್ಬರನ್ನೂ ಕಳೆದುಕೊಂಡ ನಂತರ ಡಾ. ಹೆಡಗೇವಾರರಿಗೆ ತಂದೆ ತಾಯಿಗಳ ಆಶ್ರಯವಿಲ್ಲದಿದ್ದಲ್ಲಿ ಮಕ್ಕಳ ಮಾನಸಿಕತೆ ಏನಾಗಬಹುದು ಎಂಬುದರ ಅರಿವು ತಮ್ಮ ಸ್ವಂತದ ಅನುಭವದಿಂದಲೇ ಆಗಿತ್ತು. ಆದಕ್ಕಾಗಿ ಸಂಪೂರ್ಣ ಸಮಾಜವೇ ಒಂದು ಕುಟುಂಬವಾಗಿ ಪರಿವರ್ತಿತವಾದಲ್ಲಿ ಈ ಸಮಸ್ಯೆಗೆ ಪರಿಹಾರ ಲಭಿಸುವುದು ಅನಿಸಿತ್ತು ಅವರಿಗೆ.

ಅನಾಥಾಲಯವನ್ನು ಅವರು ಒಂದು ತಾತ್ಕಾಲಿಕ ಪರ್ಯಾಯ ಮಾತ್ರವಾಗಿ ತಿಳಿಯುತ್ತಿದ್ದರು. ಅವರು ನಾಗಪುರ, ನಾಸಿಕ, ಮುಂಬಯಿಯಲ್ಲಿ ಅನಾಥಾಲಯಗಳನ್ನು ನಡೆಸಲು ಸಹಕಾರ ನೀಡಿದ್ದುದು ಅದರ ತೀರಾ ಅಗತ್ಯವನ್ನು ಮನಗಂಡ ಮೇಲಷ್ಟೇ. ನಾಗಪುರದಲ್ಲಿ ಅವರು 1922ರಲ್ಲಿ ಒಂದು ಅನಾಥ ವಿದ್ಯಾಗೃಹವನ್ನು ಆರಂಭಿಸಿದ್ದರು. ಜಿ.ಪಿ. ದೇಶಮುಖ್ ಅವರು ಬರೆದಿದ್ದಾರೆ: "ಇದು ಎಲ್ಲ ಸಾಮಾಜಿಕ ದೋಷಗಳಿಂದ – ಉದಾಹರಣೆಗಾಗಿ ಅಸ್ಪೃಶ್ಯತೆ, ಜಾತೀಯತೆ ಇತ್ಯಾದಿಗಳಿಂದ ಪೂರ್ತಿ ಮುಕ್ತವಾಗಿತ್ತು. ಮಹಾತ್ಮಾಗಾಂಧಿ, ಸರ್ ಶಂಕರನ್ ನಾಯರ್, ಪಂಡಿತ ಮದನ ಮೋಹನ ಮಾಳವೀಯ, ಪಂಡಿತ ಜವಾಹರಲಾಲ್ ನೆಹರು, ಲಾಲಾ ಲಜಪತ್ ರಾಯ್ ಮೊದಲಾದ ನಾಯಕರು ಈ ವಿದ್ಯಾಗೃಹವನ್ನು ವೀಕ್ಷಿಸಲು ಬಂದಿದ್ದರು. ಇದರಿಂದಾಗಿ ಡಾ. ಹೆಡಗೇವಾರರು ಇವರೆಲ್ಲರ ಪ್ರಶಂಸೆಗೆ ಪಾತ್ರರಾದರು. ಡಾ. ಹೆಡಗೇವಾರರು ನಾಗಪುರದಲ್ಲಿ ಸಮಾಜ ಸೇವಾ ಕಾರ್ಯಗಳಿಗೆ ಯುರೋಪಿನವರಿಗೆ ಅವಕಾಶವನ್ನೇ ನೀಡಲಿಲ್ಲ.[21] ನಾಸಿಕದ ಅನಾಥ ವಿದ್ಯಾಗೃಹದ ಜತೆಯಲ್ಲೂ ಅವರ ಸಕ್ರಿಯ ಸಂಬಂಧವಿತ್ತು."[22]

## ಮಹಿಳಾ ಅಧಿಕಾರ

ಡಾ. ಹೆಡಗೇವಾರರು ಮಹಿಳೆಯರಿಗೆ ಸಂಬಂಧಿಸಿದಂತೆ ಸಾಮಂತವಾದಿ ಧೋರಣೆ ಮತ್ತು ಕಂದಾಚಾರದ ವ್ಯವಹಾರಗಳ ವಿರುದ್ಧ ಜೀವನಪೂರ್ತಿ ಹೋರಾಡಿದರು. ಅವರು ಮಹಿಳೆಯರನ್ನು ದಯೆಗೆ ಪಾತ್ರರು ಎಂಬಂತೆ ನೋಡದೆ, ಅವರು ಪುರುಷ ಸಮಾನ ಸ್ಥಾನಮಾನವಷ್ಟೇ ಅಲ್ಲ, ಅದಕ್ಕೂ ಮಿಗಿಲಾದ ಗೌರವಕ್ಕೆ ಪಾತ್ರರು ಎಂಬಂತೆ ನೋಡುತ್ತಿದ್ದರು. ತಮ್ಮ ವ್ಯಾವಹಾರಿಕ ಬದುಕಿನಲ್ಲಿ ಅವರು ಕೈಗೊಂಡಿದ್ದ ಕ್ರಮಗಳು ಓರ್ವ ಕ್ರಾಂತಿಕಾರಿ ಸಮಾಜ ಸುಧಾರಕನಾಗಿರುವವನು ಮಾತ್ರ ಒಪ್ಪತಕ್ಕಂತಹವು ಎಂದಲ್ಲಿ ತಪ್ಪೇನೂ ಆಗಲಾರದು. ಅವರಂತೂ ಬಾಲ ವಿವಾಹಕ್ಕೆ ವಿರೋಧಿ ಮತ್ತು ವಿಧವಾ ವಿವಾಹದ ಸಮರ್ಥಕರಾಗಿದ್ದಂತಹವರೇ. ಅವರು 'ಹೊಂದಾಣಿಕೆಯಿಲ್ಲದ ಮದುವೆ'ಯ ವಿರೋಧವನ್ನೂ ಮಾಡಿದ್ದರು. ಆ ದಿನಗಳಲ್ಲಿ ಹಿರಿ ವಯಸ್ಸಿನ ವರ ಕಿರಿ ವಯಸ್ಸಿನ ವಧುವಿನೊಡನೆ ವಿವಾಹವಾಗುವ ಕೆಟ್ಟ ರೂಢಿ ಇದ್ದಿತು. ಒಮ್ಮೆ ಅಂತಹ ವಯಸ್ಸಿನ ಹೊಂದಾಣಿಕೆಯಿಲ್ಲದ ವಧು ವರರ ವಿವಾಹವೊಂದು ನಡೆಯಲಿರುವುದು ಅವರಿಗೆ ಗೊತ್ತಾದಾಗ ತಮ್ಮ ಸಹಕಾರಿಗಳನ್ನು ಸೇರಿಸಿ ಅಲ್ಲಿಗೆ ಧಾವಿಸಿ, ಒತ್ತಾಯಪೂರ್ವಕ ಆಗಲಿರುವ ವಿವಾಹವನ್ನು ತಡೆದು, ಹುಡುಗಿಯ ವಯಸ್ಸಿಗೆ ಹೊಂದಿಕೆಯಾಗುವ

---

21. ಕಾಳ ಸಮುದ್ರಾಂತಿಲ ರತ್ನೇಂ ವೀಣಾ ಪ್ರಕಾಶನ, ನಾಗಪುರ ಪು. 152–153
22. ಕೇಸರಿ, 13 ಜನವರಿ 1939

ವಯಸ್ಸಿನ ಬೇರೆ ವರನನ್ನು ಅಲ್ಲೆ ಹುಡುಕಿ ಮದುವೆಯನ್ನು ಸಹ ಮಾಡಿಸಿದರು. ಅದೇ ರೀತಿಯಲ್ಲಿ ಸುವಿಖ್ಯಾತ ಮರಾಠಿ ಕಾದಂಬರಿಕಾರ ಗಜಾನನ ರಾವ್ ಮಾಡ್‌ಖೋಲ್ಕರ್ ಅವರು ತಮ್ಮ ಆತ್ಮ ಚರಿತ್ರೆಯಲ್ಲಿ ಸ್ವಜೀವನದ ರಹಸ್ಯವೊಂದನ್ನು ಬಹಿರಂಗಪಡಿಸಿದ್ದಾರೆ. ಅದು ತಮ್ಮ ಪ್ರೇಮ ವಿವಾಹದಲ್ಲಿ ಬಂದಂತಹ ಅಡ್ಡಿ ಅಡಚಣೆಗಳನ್ನು ಡಾ. ಹೆಡಗೇವಾರರೇ ದೂರಗೊಳಿಸಿದ್ದರು ಎಂದು ಅವರು ಹೇಳಿದ್ದಾರೆ. ಮಹಿಳೆಯರನ್ನು 'ರಮಣಿ' ಎಂದು ಸಂಬೋಧಿಸುವುದನ್ನು ಆಕ್ಷೇಪಿಸಿದ್ದ ಅವರು, ಅದರ ಬದಲಿಗೆ 'ದೇವಿ' ಎಂಬ ಪದವನ್ನು ಪ್ರಯೋಗಿಸುವಂತೆ ಆಗ್ರಹಿಸುತ್ತಿದ್ದರು.

ಮಹಿಳೆಯರು ಸಾಮಾಜಿಕ ಜೀವನದಲ್ಲಿ ನಿರ್ವಹಿಸುವ ಪಾತ್ರದ ಬಗ್ಗೆ ಅವರಿಗೆ ಮೆಚ್ಚುಗೆಯಿತ್ತು. ಆ ದಿನಗಳಲ್ಲಿ ಸಂಘದ ಶಾಖೆಗಳಲ್ಲಿ, ಶಿಬಿರಗಳಲ್ಲಿ ಮಹಿಳಾ ಮುಂದಾಳುಗಳನ್ನೂ ಭಾಷಣಕ್ಕಾಗಿ ಆಹ್ವಾನಿಸುತ್ತಿದ್ದುದು ಉಂಟು. ಸಂಘದ ಸಾಮಾಜಿಕ ಸುಧಾರಣೆಯ ನಿಲುವಿನ ಬಗ್ಗೆ ಅಖಿಲ ಭಾರತೀಯ ಮಹಿಳಾ ಪರಿಷತ್ತು ತನ್ನ ಸಮರ್ಥನೆಯನ್ನು ಪ್ರಕಟಿಸಿತ್ತು. ಅದರ ಅಧ್ಯಕ್ಷೆ ರಾಜಕುಮಾರಿ ಅಮೃತ ಕೌರ್, ಮತ್ತು ರಾಜ್ಯ ವಿಧಾನ ಸಭೆಯ ಉಪಸಭಾಪತಿಯಾಗಿದ್ದ ಅನಸೂಯಾ ಬಾಯಿ ಕಾಳೆ ಅವರನ್ನೊಳಗೊಂಡು ಇತರ ಸದಸ್ಯರು ಸಹ 1937 ಡಿಸೆಂಬರ್ 28ರ ನಾಗಪುರ ಶಿಬಿರಕ್ಕೆ ಬಂದಿದ್ದರು.[23] ಈ ವಿಧದ ಪ್ರಸಂಗ ಅದೇ ಮೊದಲನೆಯದೆಂದೇನಲ್ಲ. ಅದರ ಪೂರ್ವದಲ್ಲೂ ಸಾರ್ವಜನಿಕ ಜೀವನದಲ್ಲಿ ಕ್ರಿಯಾಶೀಲರಾಗಿದ್ದ ಮಹಿಳಾ ಮುಂದಾಳುಗಳು ಮತ್ತು ಸಮಾಜ ಸೇವಕಿಯರನ್ನು ಹಲವು ಬಾರಿ ಆಮಂತ್ರಿಸಿರುವುದಿದೆ. ಕಾಂಗ್ರೆಸ್ಸಿನ ನಾಯಕಿ ಕಮಲಾಬಾಯಿ ಅವರು 1938ರ ನವೆಂಬರ್ 21 ರಂದು ಕೊಂಕಣದಲ್ಲಿನ ಸಂಘದಶಾಖೆಯೊಂದರಲ್ಲಿ ಭಾಷಣ ಮಾಡಿದ್ದರು. ಅದೇ ರೀತಿಯಲ್ಲಿ 1934ರ ಡಿಸೆಂಬರ್ 9 ರಂದು ನಾಗಪುರ ಶಾಖೆಯ ವಾರ್ಷಿಕೋತ್ಸವದಲ್ಲಿ ಪಾರ್ವತಿಬಾಯಿ ಚಿಟಣವೀಸ್ ಅವರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು. ಮಧ್ಯಪ್ರಾಂತ ವಿಧಾನಸಭೆಯ ನಿಯುಕ್ತ ಸದಸ್ಯೆ ರಮಾಬಾಯಿ ತಾಂಬೆ ಅವರಂತೂ ಸಂಘದ ಪ್ರಶಂಸಕರಲ್ಲೊಬ್ಬರಾಗಿದ್ದವರು. ಮಹಿಳೆಯರ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಪಾತ್ರದ ಬಗ್ಗೆ ಡಾ. ಹೆಡಗೇವಾರರಿಗೆ ಅದೆಷ್ಟು ಕಾಳಜಿಯಿತ್ತೆಂಬುದಕ್ಕೆ ಇಂದು ದೇಶದ ಅತಿ ಹಳೆಯ ಮಹಿಳಾ ಸಂಘಟನೆಗಳಲ್ಲೊಂದಾಗಿರುವ ರಾಷ್ಟ್ರ ಸೇವಿಕಾ ಸಮಿತಿಗೆ ಅವರೇ ಪ್ರೇರಣೆಯ ಮೂಲವಾಗಿದ್ದರೆಂಬುದೇ ಸಾಕ್ಷಿ. ಸಂಘದ ಕೆಲಸದಿಂದ ಪ್ರೇರಣೆ ಪಡೆದ ಮಹಿಳಾ ಕಾರ್ಯಕರ್ತೆಯರಲ್ಲಿ ಅವರು ತಮ್ಮದೇ ಸ್ವತಂತ್ರ ಸಂಘಟನೆಯನ್ನು ಕಟ್ಟಿ ಬೆಳೆಸಲು ಅಗತ್ಯದ ಆತ್ಮವಿಶ್ವಾಸ ಮತ್ತು ಧೈರ್ಯವನ್ನು ತುಂಬಿದರು. ಮಧ್ಯಪ್ರಾಂತದಲ್ಲಿ ಎರಡು ಮಹಿಳಾ ಸಂಘಟನೆಗಳು – ವರ್ಧಾದಲ್ಲಿ ರಾಷ್ಟ್ರ ಸೇವಿಕಾ ಸಮಿತಿ ಮತ್ತು ಭಂಡಾರಾದಲ್ಲಿ ರಾಷ್ಟ್ರೀಯ ಸ್ವಯಂಸೇವಿಕಾ ಸಂಘ – ಇವು 1935–36ರ ಕಾಲಾವಧಿಯಲ್ಲಿ ಆರಂಭವಾಗಿದ್ದವು. ಡಾ. ಹೆಡಗೇವಾರರ ಪ್ರಯತ್ನದಿಂದಾಗಿ 1936ರ ಅಕ್ಟೋಬರ್‌ನಲ್ಲಿ ಅವೆರಡು ವಿಲೀನಗೊಂಡವು. ಸಮಿತಿಯು ಮಹಿಳೆಯರಿಗೆ ವೈಚಾರಿಕ ಮತ್ತು ಶಾರೀರಿಕ ಪ್ರಶಿಕ್ಷಣ ನೀಡುತ್ತಿದೆ.

---

23. ಮಹಾರಾಷ್ಟ್ರ, 2 ಜನವರಿ 1938 ಪು. 10

## ಆರ್ಥಿಕ ದೃಷ್ಟಿಕೋನ

ಡಾ. ಹೆಡಗೇವಾರರ ಜೀವನದಲ್ಲಿ ಎದ್ದು ಕಾಣುವಂತಹ ಇನ್ನೊಂದು ಸಂಗತಿಯೆಂದರೆ ಅವರ ಆರ್ಥಿಕ ದೃಷ್ಟಿಕೋನವು. ಆರ್ಥಿಕ ವಿಚಾರಗಳ ಬಗ್ಗೆ ಅವರು ಬಹಳಷ್ಟು ಹೇಳಿದ್ದಾರೆಂದೇನೂ ಅಲ್ಲ; ಆದರೆ ಅವರ ವ್ಯಕ್ತಿತ್ವ ಮತ್ತು ಸಂಘದ ಕಾರ್ಯಶೈಲಿ ಇವೆರಡರಿಂದಲೂ ನಿಷ್ಕರ್ಷೆಯ ರೂಪದಲ್ಲಿ ತಿಳಿಯಬಹುದಾದ ಸಂಗತಿಗಳಿವೆ.

1920ರ ನಾಗಪುರ ಕಾಂಗ್ರೆಸ್ ಅಧಿವೇಶನದ ಸಂದರ್ಭದಲ್ಲಿ ಅವರು ಬಂಡವಾಳವಾದವನ್ನು ಅಮಾನವೀಯ ಹಾಗೂ ಸಾಮ್ರಾಜ್ಯವಾದಿ ಹಿನ್ನೆಲೆಯುಳ್ಳದ್ದು ಎಂದು ಪ್ರತಿಪಾದಿಸಿದ್ದರು. ಆರ್ಥಿಕ ಸಮಾನತೆಯ ಬಗ್ಗೆ ಅವರಿಗಿದ್ದ ಆಗ್ರಹ ಅವರ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ 'ಸ್ವಾತಂತ್ರ್ಯ' ಪತ್ರಿಕೆಯಲ್ಲಿ ಒಮ್ಮೆ ಬೆಳಕಿಗೆ ಬಂದಿದೆ. 1924ರಲ್ಲಿ ನಾಗಪುರ ಎಂಪ್ರೆಸ್ ಮಿಲ್‌ನಲ್ಲಿ ಕಾರ್ಮಿಕರ ಬೋನಸ್, ಕೆಲಸದ ವೇಳೆಯ ಮಿತಿ, ವೇತನ ಹೆಚ್ಚಳ ಇತ್ಯಾದಿ ಕಾರಣಗಳಿಗಾಗಿ ಹರತಾಳ ಆಚರಿಸಲ್ಪಟ್ಟಿತ್ತು. ಆಗ 'ಸ್ವಾತಂತ್ರ್ಯ'ವು ಸ್ಪಷ್ಟ ಶಬ್ದಗಳಲ್ಲಿ ಅದನ್ನು ಸಮರ್ಥಿಸಿತ್ತು. ಅದರ ಕಾರಣದಿಂದಾಗಿ ಆ ಪತ್ರಿಕೆಗೆ ಜಾಹೀರಾತು ಸಿಗುವುದೇ ನಿಂತುಹೋಯಿತು. ಆದರೆ ಡಾ. ಹೆಡಗೇವಾರರು ಬಂಡವಾಳಶಾಹಿಗಳಿಂದ ಆಗುತ್ತಿದ್ದ ಶೋಷಣೆಯ ವಿರುದ್ಧ ಕಾರ್ಮಿಕರ ಹಿತವನ್ನು ಎತ್ತಿ ಹಿಡಿಯುತ್ತಿದ್ದರು.

ಆದರೆ ಮಾರ್ಕ್ಸ್‌ವಾದಿಗಳ ವಿಚಾರವಾದ "ವರ್ಗ ಸಂಘರ್ಷದ" ಸಿದ್ಧಾಂತವನ್ನು ಅವರು ಒಪ್ಪುತ್ತಿರಲಿಲ್ಲ. ವಾಸ್ತವಿಕವಾಗಿ 'ವಾದ'ದ ಹೆಸರಲ್ಲಿ ಕಾರ್ಯಕರ್ತರು ಹರಿದು ಹಂಚಿ ಹೋಗುವುದು ಅವ್ಯಾವಹಾರಿಕ ಎನ್ನುತ್ತಿದ್ದವರು ಅವರು. ಎಡ ಮತ್ತು ಬಲ ಪಂಥ ಎಂಬ ಹೆಸರಲ್ಲಿ ಸಮಾಜದ ವಿಭಜನೆಯಾಗುವುದನ್ನು ಹಾಸ್ಯ ಮಾಡುತ್ತ ಒಮ್ಮೆ ಅವರು ಕಾರ್ಮಿಕ ನಾಯಕ ರಾಮಭಾವೂ ರುಯೀಕರ್ ಅವರ ಬಳಿ "ನಾನೋರ್ವ ಬಡ ಬಂಡವಾಳವಾದಿ ಹಾಗೂ ನೀವೋರ್ವ ಶ್ರೀಮಂತ ಶ್ರಮಜೀವಿ" (I am a poor capitalist and you are a rich proletariat) ಎಂದಿದ್ದರು.

ಆ ಪ್ರಸಂಗವಿದ್ದುದು ಹೀಗೆ: ಓರ್ವ ಕಾರ್ಮಿಕ ನಾಯಕರ ಉಪನ್ಯಾಸಕ್ಕಾಗಿ ರುಯೀಕರ್ ಅವರು ಡಾ. ಹೆಡಗೇವಾರರನ್ನೂ ಆಮಂತ್ರಿಸಿದ್ದರು. ಆದರೆ ಆ ಉಪನ್ಯಾಸವನ್ನು ಏರ್ಪಡಿಸಲಾದ್ದುದು ಟಿಕೆಟ್ ಇರಿಸಿ. ಡಾ. ಹೆಡಗೇವಾರರು ಟಿಕೆಟ್ ಖರೀದಿಸಿ ಹೋಗುವ ಸ್ಥಿತಿಯಲ್ಲಿರಲಿಲ್ಲ. ಅದಕ್ಕಾಗಿ ಅವರು ಹೋಗಿರಲೂ ಇಲ್ಲ. ನಂತರ ರಾಮಭಾವು ರುಯೀಕರ್ ಒಮ್ಮೆ ಭೇಟಿಯಾಗಿ ಅವರ ಅನುಪಸ್ಥಿತಿಯ ಕಾರಣವನ್ನು ವಿಚಾರಿಸಿದಾಗ ಅವರು ಮೇಲಿನ ಉತ್ತರವನ್ನು ನೀಡಿದ್ದರು.

ಅವರು ತಮ್ಮ ಇಡೀ ಜೀವನದಲ್ಲಿ ಹೆಚ್ಚಿನ ಅಗತ್ಯಗಳನ್ನು ಇಲ್ಲವಾಗಿಸಿಕೊಂಡಿದ್ದರು. ಯಶಸ್ವಿ ಹಾಗೂ ಸುಖಿ ಜೀವನಕ್ಕೆ ಆರ್ಥಿಕ ಸಂಪನ್ನತೆ ಅತ್ಯಗತ್ಯವೆಂದು ನಂಬಿದವರಲ್ಲ ಅವರು. ಬದುಕಿನುದ್ದಕ್ಕೂ ಅವರು ರೈಲಿನಲ್ಲಿ ಪ್ರಯಾಣಿಸುತ್ತಿದ್ದುದು ಮೂರನೇ ಶ್ರೇಣಿಯಲ್ಲಿ. ಅವರ ವಿಸ್ತಾರಗೊಳ್ಳುತ್ತಿದ್ದ ಯಶಸ್ಸು ಮತ್ತು ಖ್ಯಾತಿಯ ಕಾರಣದಿಂದಾಗಿ ಅವರ ಕುಟುಂಬದ ಮೇಲೆ ಆರ್ಥಿಕ ಭಾರ ಹೆಚ್ಚಾಗುತ್ತಲೇ ಇತ್ತು. ಅವರು ತಮ್ಮ ಹಳೆಯ ಮುರುಕಲು ಮನೆಯಲ್ಲೇ ಅತ್ಯಂತ ಸರಳವಾದ ಜೀವನ ನಡೆಸುತ್ತಿದ್ದರು.

ಕೆಲವೊಮ್ಮೆ ಉರುವಲಿಗಾಗಿ ಸೌದೆ ಒಡೆಯುತ್ತಿದ್ದುದೂ ಉಂಟು. ಇನ್ನೂ ಕೆಲವೊಮ್ಮೆ ಮನೆಗೆ ಬಂದಿರುವ ಅತಿಥಿಗಳಿಗೆ ಚಹ ಕುಡಿಯುವಂತೆ ಆಗ್ರಹಿಸಿದ ಮೇಲೆ ಮನೆಯೊಳಗೆ ಹಾಲು, ಸಕ್ಕರೆ ಸಹ ಇಲ್ಲವೆಂಬ ಪರಿಸ್ಥಿತಿ ಎದುರಿಸುತ್ತಿದ್ದುದೂ ಇದೆ.

ಸಾಮಾನ್ಯವಾಗಿ ಸಾಮಾಜಿಕ ಕಾರ್ಯಕರ್ತನೊಬ್ಬನ ಕೀರ್ತಿ, ಗೌರವ ಇತ್ಯಾದಿ ಹೆಚ್ಚಿದಾಗ, ಆತನಿಗೆ ಸಮಾಜದಲ್ಲಿನ ಶ್ರೀಮಂತರಿಂದ ನೆರವು, ಪೋಷಣೆ ಇತ್ಯಾದಿ ಲಭಿಸುವುದು ಸ್ವಾಭಾವಿಕ. ಅವರೇ ಅಂತಹ ಕಾರ್ಯಕರ್ತನ ವೈಯಕ್ತಿಕ ಅಗತ್ಯತೆಗಳೆಲ್ಲವನ್ನೂ ಸಾಮಾನ್ಯವಾಗಿ ಪೂರೈಸುತ್ತಾರೆ. ಆದರೆ ಡಾ. ಹೆಡಗೇವಾರರು ಅಂತಹ ಎಲ್ಲ ಸೌಕರ್ಯಗಳಿಂದ ಪ್ರಯತ್ನಪೂರ್ವಕವಾಗಿ ಹಾಗೂ ಯಶಸ್ವಿಯಾಗಿ ತಮ್ಮನ್ನು ಬಚಾಯಿಸಿಕೊಂಡರು. ಅವರ ಈ ಅಸಾಧಾರಣ ಗುಣವಿಶೇಷ ಅವರ ವ್ಯಕ್ತಿತ್ವಕ್ಕೆ ಇನ್ನಷ್ಟು ಮೆರಗು ನೀಡಿದೆ. ರಾಜಾ ಲಕ್ಷ್ಮಣರಾವ್ ಭೋಂಸ್ಲೆ ಅವರು ತಮ್ಮ ಖಾಸಗಿ ಕಾರ್ಯದರ್ಶಿ ವಾಸುದೇವ ಶಾಸ್ತ್ರಿ ಅವರ ಮೂಲಕ ಡಾ. ಹೆಡಗೇವಾರರಿಗೆ ಒಂದಿಷ್ಟು ಜಮೀನನ್ನು ನೀಡಲು ಪ್ರಯತ್ನಿಸಿದ್ದರು. ಆದರೆ ಡಾ. ಹೆಡಗೇವಾರರು ಈ ಸಲಹೆಗೆ ಬಿಲ್‌ಕುಲ್ ಒಪ್ಪಲಿಲ್ಲ. ಸಿಂದಿಯಲ್ಲಿನ ನಾನಾಸಾಹೇಬ ಟಾಲಾಟುಲೆ ಅವರು ಓರ್ವ ಶ್ರೀಮಂತರಾಗಿದ್ದವರು ಮತ್ತು ಡಾ. ಹೆಡಗೇವಾರರನ್ನು ಅವರ ಕ್ರಾಂತಿಕಾರಿ ದಿನಗಳಿಂದಲೂ ಚೆನ್ನಾಗಿ ತಿಳಿದಿದ್ದವರು. ಅವರು 1926ರಲ್ಲಿ ಅಪ್ಪಾಜಿ ಜೋಶಿಯವರ ಜತೆಗೂಡಿ ಡಾ. ಹೆಡಗೇವಾರರನ್ನು ಅವರ ಆರ್ಥಿಕ ಒತ್ತಡದಿಂದ ಬಿಡುಗಡೆಗೊಳಿಸಲು ಭಾರೀ ಪ್ರಯತ್ನ ನಡೆಸಿದರು. ಟಾಲಾಟುಲೆಯವರು ವಾದಿಸಿದ್ದುದು ಹೀಗೆ: "ಸತತವಾಗಿ ಸಾರ್ವಜನಿಕ ಕೆಲಸಗಳಲ್ಲಿ ತೊಡಗಿರುವ ಕಾರಣದಿಂದಾಗಿ ಹಣ ಸಂಪಾದನೆ ಹಾಗೂ ಇನ್ನಿತರ ವಿಧ ಅಗತ್ಯದ ಸಂಗತಿಗಳ ಕಡೆ ನಿಮಗೆ ಲಕ್ಷ್ಯಹರಿಸಲು ಆಗುವುದಿಲ್ಲ. ಹೀಗಾಗಿ ಆರ್ಥಿಕ ಅಭಾವ ಸದಾ ನಿಮ್ಮನ್ನು ಕಾಡುತ್ತಿದೆ." ಈ ವಾದಕ್ಕೆ ಉತ್ತರವಾಗಿ ಡಾ. ಹೆಡಗೇವಾರರು "ನನಗೆ ಅಗತ್ಯವೆನಿಸಿದಾಗ ನಿಮ್ಮನ್ನು ಕೇಳುವೆ. ಈಗಂತೂ ಅಂತಹ ಅವಶ್ಯಕತೆಯೇನಿಲ್ಲ" ಎಂದಿದ್ದರು.

ಮುಂದಿನ ಎಂಟು ವರ್ಷಗಳ ಕಾಲ ಅವರ ಬಡತನ ಅದೇ ರೀತಿಯಲ್ಲಿ ಮುಂದುವರಿಯಿತು. ಅವರ ಅತ್ತಿಗೆ ರಮಾಬಾಯಿ ಅವರು ಸಂಸಾರ ನಡೆಸುವುದರಲ್ಲಿ ಅನೇಕ ವಿಧವಾಗಿ ಆರ್ಥಿಕವಾಗಿ ಇರುಸುಮುರುಸು ಎದುರಿಸಬೇಕಾಗಿ ಬರುತಿತ್ತು. ಇದು ಬೆಳಕಿಗೆ ಬಂದುದು ಸಹ ಒಂದು ವಿಶೇಷ ಸಂದರ್ಭದಲ್ಲಿ. ಡಾ. ಹೆಡಗೇವಾರರ ಪರಮ ಮಿತ್ರ ವಿಶ್ವನಾಥರಾವ್ ಕೇಳ್ಕರ್ ಅವರು ಒಮ್ಮೆ ಮನೆಗೆ ಬಂದಿದ್ದಾಗ, ಅವರಿಗೆ ಚಹ ಸ್ವೀಕರಿಸುವಂತೆ ಕೇಳಿಕೊಳ್ಳಲಾಯಿತು. ಆದರೆ ಪ್ರತ್ಯಕ್ಷದಲ್ಲಿ ಮನೆಯೊಳಗೆ ಚಹಕ್ಕೆ ಬೇಕಾದ ಯಾವ ವಸ್ತುವೂ ಇರಲಿಲ್ಲ. ಕೊನೆಗೆ ಚಹ ಬರಲೇ ಇಲ್ಲ. ಇಂತಹ ಚಿಂತಾಜನಕ ಸ್ಥಿತಿಯ ಅರಿವಾದ ಮೇಲೆ ಕೇಳ್ಕರ್ ಅವರು ಅದನ್ನು ಗುರೂಜಿ ಗೋಲ್ವಾಳ್ಕರ್‌ರಿಗೆ ತಿಳಿಸಿ, 'ನಿಮ್ಮ ನಾಯಕರ ಕಷ್ಟಗಳ ಬಗ್ಗೆ ನೀವೇಕೆ ಲಕ್ಷ್ಯ ಹರಿಸಿಲ್ಲ?' ಎಂದು ಪ್ರಶ್ನಿಸಿದರು. ಆಗ ಗುರೂಜಿಯವರು "ಏಕಾದಶಿಯ ಹೊಟ್ಟೆಯನ್ನು ಶಿವರಾತ್ರಿಯು ತುಂಬುವುದಾದರೂ ಹೇಗೆ ಸಾಧ್ಯ?" ಎಂದು ಉತ್ತರಿಸಿದರು. ಆಗ ಕೇಳ್ಕರ್ ಅವರು ಗುರೂಜಿಯವರ ಸಂಗಡವೇ ಡಾ. ಹೆಡಗೇವಾರರಿಗೆ ಒಂದಿಷ್ಟು ಆರ್ಥಿಕ ಸಹಾಯದ ವ್ಯವಸ್ಥೆ ಮಾಡುವುದು ಸಾಧ್ಯವೇ ಎಂಬ ಬಗ್ಗೆ ಚರ್ಚಿಸಿದರು. ಆದರೆ ಗುರೂಜಿಯವರು ಅದನ್ನು ಸ್ವತಃ

ಕೇಳ್ಕರ್ ಅವರೇ ಪ್ರಯತ್ನಿಸುವುದು ಉಚಿತ ಎಂದು ಅವರಿಗೆ ತಿಳಿಸಿದರು. ಅಂತಹ ಸಾಹಸಮಾಡಲು ಕೇಳ್ಕರ್ ಅವರಿಗೂ ಸಾಧ್ಯವಾಗಲಿಲ್ಲ ಮತ್ತು ಡಾ. ಹೆಡಗೇವಾರರ ಸ್ಥಿತಿ ಹೇಗಿತ್ತೋ ಹಾಗೆಯೇ ಮುಂದುವರಿಯಿತು.

1935ರಿಂದ ಸ್ವಯಂಸೇವಕರು ಪ್ರತಿವರ್ಷ ಅವರಿಗೆ ಐದು ನೂರು ರೂಪಾಯಿಗಳನ್ನು ಶ್ರದ್ಧಾನಿಧಿಯಾಗಿ ನೀಡಲು ಆರಂಭಿಸಿದರು. ಆದರೆ ಡಾ. ಹೆಡಗೇವಾರರು ಅದನ್ನು ಗುರುದಕ್ಷಿಣೆಯಾಗಿ ಸಮರ್ಪಿಸುತ್ತಿದ್ದರು. ಅವರ ಮನೆಯ ಗೋಡೆ ಉರುಳಿದಾಗ, ನಾಗಪುರದ ಬಾಲ ಸ್ವಯಂಸೇವಕರು ಒಂದಿಷ್ಟು ಹಣ ಸಂಗ್ರಹಿಸಿ, ಮನೆಯ ರಿಪೇರಿಗಾಗಿ ಅವರಿಗೆ ಅದನ್ನು ಸಮರ್ಪಿಸಿದ್ದರು. 'ಕೇಸರಿ' ಪತ್ರಿಕೆಯು ಒಮ್ಮೆ ತಮ್ಮ ಸಂಪಾದಕೀಯದಲ್ಲಿ "ಹಣದ ಕೊರತೆಯಿಂದಾಗಿ ಅವರೆಂದೂ ನಿರಾಶರಾಗಿಯೇ ಇರಲಿಲ್ಲ" ಎಂದು ಬರೆದಿತ್ತು.[24]

ಬಡತನವು ವಿನೋದದ ವಿಷಯವಾಗಬಾರದೆಂಬ ಬಗ್ಗೆ ಅವರ ಲಕ್ಷ್ಯವೂ ಇರುತ್ತಿತ್ತು. ಒಮ್ಮೆ ಓರ್ವ ಬಡ ಸ್ವಯಂಸೇವಕನ ಮಾತನ್ನು ಗೌರವಿಸಿ, ತಾನು ಚಹ ಕುಡಿಯದಿರುವ ವ್ರತವನ್ನು ಅವರು ಮುರಿದಿದ್ದೂ ಉಂಟು. "ಆ ಸ್ವಯಂಸೇವಕನ ಬಳಿ ಅತಿಥಿ ಸತ್ಕಾರಕ್ಕಾಗಿ ಬೇರೇನೂ ಇಲ್ಲದಿರಬೇಕಾದಲ್ಲಿ ಅವನ ಭಾವನೆಗಳನ್ನು ನಾವು ಗೌರವಿಸುವುದು ಬೇಡವೇ? ನಾವು ಚಹ ಕುಡಿಯದೇ ಹೋಗಿದ್ದಲ್ಲಿ ಅವನ ಭಾವನೆಗಳಿಗೆ ನೋವಾಗುತಿತ್ತು" ಎಂದು ಆಗ ಅವರು ಹೇಳಿದ್ದರು.

ಅವರ ಇಂತಹ ವ್ಯಕ್ತಿತ್ವದ ಪ್ರಭಾವ ಸಂಘದ ಕೆಲಸದ ಮೇಲೂ ಆಯಿತು. ಅವರು ವಿವಿಧ ಸಾಮಾಜಿಕ, ರಾಜಕೀಯ ಸಂಘಟನೆಗಳಲ್ಲಿ ಹಣದ ಪ್ರಭಾವ ಹೇಗೆ ಕೆಲಸ ಮಾಡುತ್ತಿದೆ ಎಂಬುದನ್ನು ಕಂಡಿದ್ದರು. ಅದಕ್ಕಾಗಿ ಸಂಘದ ಶಕ್ತಿಯ ಮೂಲವಾಗಿ ಅವರು ವ್ಯಕ್ತಿಯನ್ನು ಇರಿಸಿದರೇ ವಿನಾ ಹಣವನ್ನಲ್ಲ. 1928ರಲ್ಲಿ ಅವರು ಸಂಘಕಾರ್ಯದ ಒಂದು ಅಗತ್ಯವಾಗಿ ಗುರುದಕ್ಷಿಣಾ ಪದ್ಧತಿಯನ್ನು ಆರಂಭಿಸಿದರು. ಸ್ವಯಂಸೇವಕರು ತಮ್ಮ ಶಕ್ತಿ ಮತ್ತು ಶ್ರದ್ಧೆಗನುಸಾರವಾಗಿ ವರ್ಷಕ್ಕೊಮ್ಮೆ ಭಗವಾ ಧ್ವಜದ ಮುಂದೆ ದಕ್ಷಿಣೆಯ ರೂಪದಲ್ಲಿ ಧನವನ್ನು ಸಮರ್ಪಿಸುತ್ತಾರೆ. ಈ ಸಂದರ್ಭದಲ್ಲಿ ಬಡವ ಶ್ರೀಮಂತ ಎಂಬ ತಾರತಮ್ಯವಾಗದಿರಲಿ ಎಂಬುದಕ್ಕಾಗಿ ಯಾರಿಗೂ ಗೊತ್ತಾಗದಂತೆ ಲಕೋಟೆಯಲ್ಲಿ ದಕ್ಷಿಣೆಯನ್ನು ಸಮರ್ಪಿಸುತ್ತಾರೆ. ಆರಂಭದ ದಿನಗಳಲ್ಲಿ ಸಂಘದಿಂದ ಪ್ರಭಾವಿತರಾಗಿ ಜಿ.ಡಿ. ಬಿರ್ಲಾರಿಂದ ಮೊದಲ್ಗೊಂಡು ಪಂ. ಮದನ ಮೋಹನ ಮಾಳವೀಯರ ವರೆಗೆ ಅನೇಕರು ಸಂಘಕ್ಕೆ ಆರ್ಥಿಕವಾಗಿ ನೆರವೀಯಲು ಮುಂದೆ ಬಂದಿದ್ದರು. ಆದರೆ ಡಾ. ಹೆಡಗೇವಾರರು ಕೃತಜ್ಞತೆಯಿಂದಲೇ ಅವರ ನೆರವನ್ನು ನಿರಾಕರಿಸಿದರು. ಒಂದು ಕಡೆ ಸಂಘಸ್ಥಾನಕ್ಕಾಗಿ, ಕಾರ್ಯಾಲಯಕ್ಕಾಗಿ ಮತ್ತು ಅನ್ಯ ಪ್ರಾಂತ್ಯಗಳಿಗೆ ಪ್ರಚಾರಕರನ್ನು ಕಳುಹಿಸುವುದಕ್ಕಾಗಿ ಸಂಘವು ಹಣದ ಅಭಾವವನ್ನು ಅನುಭವಿಸುತ್ತಿದ್ದಲ್ಲಿ, ಇನ್ನೊಂದು ಕಡೆ ಶ್ರೀಮಂತರು ದಾನ ಮತ್ತು ಚಂದಾ ಕೊಡಲು ಚಡಪಡಿಸುವವರೂ ಇದ್ದರು. ಆದರೆ ತನ್ನ ಸ್ವಂತದ ಜೀವನದ ಶೈಲಿಯಂತೆ, ಡಾ. ಹೆಡಗೇವಾರರು ಸಂಘಕ್ಕಾಗಿ ಏನೂ

24. ಕೇಸರಿ, 25 ಜೂನ್ 1940

ಬೇಕಾಗಿಲ್ಲ ಎಂಬ ರೀತಿಯಲ್ಲೇ ತಮ್ಮ ಕಾರ್ಯಕೌಶಲ್ಯವನ್ನು ತೋರಿಸುತ್ತ ಅದರ ಕೀರ್ತಿಯನ್ನು ವಿಸ್ತರಿಸುತ್ತಲೇ ಬೆಳೆಸಿದರು. ಸಂಘದ ಮೊಟ್ಟಮೊದಲ ಗುರುದಕ್ಷಿಣೆಯಲ್ಲಿ ಸಮರ್ಪಿತವಾಗಿದ್ದ ಮೊತ್ತ ರೂ. ಎಂಬತ್ತನಾಲ್ಕು ಮತ್ತು ಕೆಲವು ಪೈಸಾಗಳು ಮಾತ್ರ. ಈ ಕಾರಣಕ್ಕಾಗಿಯೇ ಮದನ ಮೋಹನ ಮಾಳವೀಯ ಅವರು ನಾಗಪುರದ ಸ್ವಯಂಸೇವಕರನ್ನು ಉದ್ದೇಶಿಸಿ 'ಇನ್ನಿತರ ಸಂಸ್ಥೆಗಳ ಬಳಿ ಭಾರೀ ಕಟ್ಟಡಗಳು ಮತ್ತು ಹಣದ ರಾಶಿಯೇ ಇರುತ್ತದೆ. ಆದರೆ ಸಂಘದ ಬಳಿ ಮಾನವ ಸಂಪನ್ಮೂಲವೇ ಧಾರಾಳವಾಗಿ ಇದೆ' ಎಂದಿದ್ದರು.[25]

ಡಾ. ಹೆಡಗೇವಾರರು, ಗುರುದಕ್ಷಿಣೆ ಹಾಗೂ ಸಹಾನುಭೂತಿಸಹಿತ ಹಿತೈಷಿಗಳು ನೀಡಿದಂತಹ ಹಣದ ಲೆಕ್ಕಾಚಾರವನ್ನು ಅತ್ಯಂತ ಚೊಕ್ಕವಾಗಿ ಇರಿಸಿಕೊಳ್ಳುತ್ತಿದ್ದರು. ಸಾರ್ವಜನಿಕರಿಂದ ಜಮೆಯಾಗುವ ಹಣ ಅತ್ಯಮೂಲ್ಯವೆಂದು ತಿಳಿಯುತ್ತಿದ್ದವರು ಅವರು. ಅವರ ಈ ವಿಧದ ಮನೋಭಾವದ ಪ್ರಭಾವ ಸಂಘದ ಕೆಲಸದ ಶೈಲಿಯ ಮೇಲೂ ಆಯಿತು. ಸಂಘದಲ್ಲಿ ಮಧ್ಯಮ ಮತ್ತು ಕೆಳವರ್ಗದ ಜನರು ಸುಲಭವಾಗಿ ಸೇರುವಂತೆ ಆದುದು ಈ ಕಾರಣಕ್ಕಾಗಿಯೇ. ಸಂಘವು ಕಾರ್ಮಿಕ ಆಂದೋಳನದಲ್ಲಿ ನಿರಾತಂಕವಾಗಿ ಪ್ರವೇಶಿಸಲು ಸಾಧ್ಯವಾದುದು ಸಹ ಈ ಕಾರಣದಿಂದಲೇ ಎಂದು ಪ್ರತ್ಯೇಕವಾಗಿ ಹೇಳುವ ಅಗತ್ಯವೇನೂ ಇಲ್ಲ.

ಹೀಗಾಗಿ ಡಾ. ಹೆಡಗೇವಾರರ ಬದುಕಿನ ತತ್ವಜ್ಞಾನವು, ಸಕಾರಾತ್ಮಕವಾದ ಜೀವನ ಮೌಲ್ಯಗಳು, ಪ್ರಗತಿಶೀಲ ಸಾಮಾಜಿಕ, ಆರ್ಥಿಕ ಮನೋಭಾವ ಹಾಗೂ ಸಾಂಸ್ಕೃತಿಕ ರಾಷ್ಟ್ರೀಯತೆ ಇವೆಲ್ಲವನ್ನೂ ಏಕಕಾಲದಲ್ಲಿ ಬಿಂಬಿಸುವಂತಹುದಾಗಿತ್ತು.

---

25. ಮಹಾರಾಷ್ಟ್ರ, 25 ಜುಲೈ 1929

# ತತ್ವರೂಪಿ ಹೆಡಗೇವಾರ್

ವ್ಯಕ್ತಿಯೊಬ್ಬನ ಬದುಕಿನ ಸಾರ್ಥಕತೆಯಿರುವುದು ಅವನು ಎಷ್ಟು ದೀರ್ಘಕಾಲ ಜೀವಿಸಿದ್ದ ಎಂಬುದರಲ್ಲಿ ಅಲ್ಲ, ಬದಲಿಗೆ ಅವನ ಕರ್ತೃತ್ವ ಎಂಥದ್ದು ಎಂಬುದರಲ್ಲಿ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಶಕ್ತಿ, ಜೀವನದೃಷ್ಟಿ ಮತ್ತು ಕಲ್ಪನೆಗನುಗುಣವಾಗಿ ತನ್ನದೇ ಕರ್ಮಪಥದಲ್ಲಿ ಮುನ್ನಡೆಯುತ್ತಾನೆ. ಅವನು ತನ್ನ ಸಮಾಜ, ರಾಷ್ಟ್ರ ಮತ್ತು ನಾಗರಿಕತೆಯ ಹರಿವಿನ ಮೇಲೆ ತನ್ನ ವ್ಯಕ್ತಿತ್ವದ ಸಕಾರಾತ್ಮಕ ಪ್ರಭಾವವನ್ನು ಬೀರಲು ಸಮರ್ಥನಾದಾಗ, ಸಹಜವಾಗಿಯೇ ಅವನ ಹೆಸರು ಇತಿಹಾಸದ ಪುಟಗಳಲ್ಲಿ ದಾಖಲಾಗುತ್ತದೆ. ಮುಂದೆ ಬರಲಿರುವ ಪೀಳಿಗೆಗಳು ಅವನ ವ್ಯಕ್ತಿತ್ವದ ಮೌಲ್ಯಮಾಪನಮಾಡಿಕೊಂಡು ಅವನಿಂದ ಪ್ರೇರಣೆಯನ್ನೂ ಪಡೆಯುತ್ತವೆ. ಡಾ.ಹೆಡಗೇವಾರರು ಸಹ ತಮ್ಮ ಕೃತಿ, ಚಿಂತನೆ, ಜೀವನದೃಷ್ಟಿ ಮತ್ತು ಬದುಕಿನ ಮೌಲ್ಯಗಳ ಮೂಲಕ ಭಾರತೀಯ ರಾಷ್ಟ್ರವನ್ನು, ಅದರ ಸಂಸ್ಕೃತಿ, ನಾಗರಿಕತೆ ಮತ್ತು ಸ್ವಂತಿಕೆಗಳನ್ನು ರಾಷ್ಟ್ರೀಯ ಸ್ವಯಂಸೇವಕ ಸಂಘವೆಂಬ ಹೆಸರಿನ ಒಂದು ಹೊಸ ವಿಚಾರ ಮತ್ತು ಸಂಘಟನೆಯ ಸೂತ್ರದಲ್ಲಿ ಜಗತ್ತಿಗೆ ಪರಿಚಯಿಸಿದರು.

1925ರಿಂದ 1940ರ ವರೆಗೆ ಈ ಸಂಘಟನೆಯನ್ನು ಪ್ರಭಾವಿಯಾಗಿಸಲು ತಮ್ಮ ಶಕ್ತಿಯನ್ನೆಲ್ಲ ಸತತವಾಗಿ ಧಾರೆ ಎರೆದರು. ಸಂಘದ ಕೆಲಸ ಮತ್ತು ರಾಷ್ಟ್ರದ ಹಿತ ಇವುಗಳ ನಡುವೆ ಜೀವಂತ ಸಂಬಂಧವನ್ನು ಅವರು ಏರ್ಪಡಿಸಿದರು. ಅದಕ್ಕಾಗಿ ಸಂಘದ ಸ್ಥಾಪನೆಯ ನಂತರವೂ ಅವರು ರಾಷ್ಟ್ರದ ಸ್ವಾತಂತ್ರ್ಯ ಆಂದೋಳನದಲ್ಲಿ ಕ್ರಿಯಾಶೀಲರಾಗಿಯೇ ಉಳಿದರು.

ಆ ಹದಿನೈದು ವರ್ಷಗಳಲ್ಲಿ ಸಂಘದ ವಿಚಾರ, ಕಾರ್ಯವ್ಯವಸ್ಥೆ ಮತ್ತು ಆದರ್ಶಗಳು ಇವೆಲ್ಲವುಗಳಿಗೆ ಅವರು ಸ್ವತಃ ತಮ್ಮದೇ ತನು, ಮನ, ಬುದ್ಧಿ ಇವುಗಳನ್ನು ವಾಹಕವನ್ನಾಗಿ ಮಾಡಿಕೊಂಡರು. ವಿಚಾರ ಮತ್ತು ಆದರ್ಶಗಳು ಶರೀರ ಹಾಗೂ ಆತ್ಮ ಇದ್ದಂತೆ. ವಿಚಾರವು ಆತ್ಮವಾದಲ್ಲಿ, ಆದರ್ಶಗಳು ಅದರ ಶರೀರವಾಗುತ್ತವೆ. ವಿಚಾರಗಳು ಆದರ್ಶಗಳಿಗೆ ಜೀವ ತುಂಬಿ, ಅವುಗಳ ಮೂಲಕವೇ ಮೂರ್ತರೂಪ ಪಡೆಯುತ್ತವೆ. ಇದೇ ರೀತಿಯಲ್ಲಿ ಆತ್ಮರೂಪದ ವಿಚಾರವಿಲ್ಲದೇ ಹೋದಲ್ಲಿ, ಆದರ್ಶಗಳು ವ್ಯಕ್ತಿಯೊಬ್ಬನ ಜೀವನದ ಬರಿಯ ಗೊತ್ತು ಗುರಿಯಿಲ್ಲದ ಸಾಧನ ಮಾತ್ರವಾಗಿ ಉಳಿಯುತ್ತವೆ. ಡಾ. ಹೆಡಗೇವಾರರ ಜೀವನವಾದರೋ ವೈಚಾರಿಕ ಆತ್ಮವನ್ನು ಹೊಂದಿದ್ದ ಆದರ್ಶವಾದದ ಮೂರ್ತಿಮಂತ ಸ್ವರೂಪವನ್ನು ಪಡೆದಿತ್ತು. ಹೀಗಾಗಿ ಹೊರಗಣ್ಣಿಗೆ ಅವರ ವಿಚಾರ ಮತ್ತು ಕಾರ್ಯಗಳು ಇನ್ನಿತರ ಸಮಕಾಲೀನ ಸಂಘಟನೆಗಳಂತೆಯೇ ಮತ್ತು ಅಂದಿನ ಇತರ ಹಿಂದುತ್ವವಾದಿ ನಾಯಕರ ವಿಚಾರ ಮತ್ತು ಕಾರ್ಯಗಳಂತೆಯೇ

ಕಾಣಿಸುತ್ತಿದ್ದವು. ಆ ದಿನಗಳಲ್ಲಿ 'ಹಿಂದೂ ರಾಷ್ಟ್ರ', 'ಹಿಂದೂ ಸಂಘಟನೆ', 'ಸಾಮಾಜಿಕ ಸಮರಸತಾ' ಇತ್ಯಾದಿ ಶಬ್ದ ಪ್ರಯೋಗಗಳು ಹಿಂದೂ ಮಹಾಸಭೆ ಮತ್ತು ಇನ್ನಿತರ ಸಂಘಟನೆಗಳ ಮೂಲಕವೂ ಆಗುತ್ತಿದ್ದವು. ಆದರೆ ಡಾ. ಹೆಡಗೇವಾರರ ಕಣ್ಣ ಮುಂದಿದ್ದ ಸಂಕಲ್ಪವಾದರೋ ರಾಷ್ಟ್ರದ ಸಾಂಸ್ಕೃತಿಕ ಸ್ವಂತಿಕೆಯ ಪುನಃಸ್ಥಾಪನೆಯದು. ಅದನ್ನೇ ಅವರು 'ಹಿಂದೂರಾಷ್ಟ್ರ' ಎಂಬ ಹೆಸರಿನಿಂದ ಅದರ ಸಾಂಸ್ಕೃತಿಕ ಹಾಗೂ ಐತಿಹಾಸಿಕ ಹಿನ್ನೆಲೆಯಲ್ಲಿ ಜಗತ್ತಿಗೆಲ್ಲ ಪರಿಚಯಿಸಲು ಅಪೇಕ್ಷೆ ಪಟ್ಟಿದ್ದರು. ನಮ್ಮ ರಾಷ್ಟ್ರೀಯತೆಗೆ ಶಾಶ್ವತ ಸ್ವರೂಪ ಕೊಡಬೇಕೆಂದು ಅವರು ಅಪೇಕ್ಷೆ ಪಟ್ಟಿದ್ದುದು ಈ ರೂಪದಲ್ಲಿ.

ಸಂಘಟನೆ ಕಟ್ಟುವಂತಹ ಅತಿ ಕಠಿಣವಾದ ಕಾರ್ಯದಲ್ಲೂ ಅವರು ಈ ಸಂಕಲ್ಪ ಮತ್ತು ಸಾಧನೆಯನ್ನು ಪ್ರಕಟಿಸಿ ತೋರಿಸಿದರು. ಒಂದು ರಾಷ್ಟ್ರದ ಘಟಕಗಳ ಪೈಕಿ ಪ್ರಧಾನವಾಗಿರಬೇಕಾದವನು ಅದರ ಸರ್ವಸಾಮಾನ್ಯ ವ್ಯಕ್ತಿಯೇ. ರಾಷ್ಟ್ರದ ಸ್ವಂತಿಕೆ, ಇತಿಹಾಸ, ಸಂಸ್ಕೃತಿ ಮತ್ತು ಪರಂಪರೆಗಳು ಅವನ ಮೂಲಕವೇ ಬಿಂಬಿತವಾಗುತ್ತವೆ. ಅದಕ್ಕಾಗಿ ಡಾ. ಹೆಡಗೇವಾರರು ವಿಚಾರ ಮತ್ತು ನಡವಳಿಕೆ ಇವೆರಡರಲ್ಲೂ ತನ್ನಂತೆ ಇರುವಂತಹವರ ಒಂದು ಬೃಹತ್ ಸಮುದಾಯವನ್ನೇ ರೂಪಿಸಿದರು. ಈ ಕಾರ್ಯವನ್ನು ಮಾಡುತ್ತ ಮಾಡುತ್ತ ಅವರ ಶರೀರವೆಲ್ಲ ಐವತ್ತೊಂದು ವರ್ಷಗಳ ವಯಸ್ಸಿನಲ್ಲೆ ಜರ್ಜರಿತವಾಗಿ ರಾಷ್ಟ್ರಯಜ್ಞದಲ್ಲಿ ಹವಿಸ್ಸಾಗಿ ಅರ್ಪಿತವಾಯಿತು. ಅವರ ಮೃತ್ಯುವಿನ ನಂತರ ಅವರಿಗೆ ಶ್ರದ್ಧಾಂಜಲಿ ಸಮರ್ಪಿಸುತ್ತ ರಾಮ ಗೋಸಾವಿ ಅವರು ಹೇಳಿದುದು ಹೀಗೆ:

"ಡಾ. ಹೆಡಗೇವಾರರು ತಮ್ಮ ಗುಣ ವಿಶೇಷಗಳಿಂದಾಗಿ ಮಹಾಪುರುಷರಾದರು. ವ್ಯಕ್ತಿಯೊಬ್ಬನ ಮಹಾನತೆಯ ರಹಸ್ಯವಿರುವುದು ಶರೀರದ ಶಕ್ತಿಯಲ್ಲಲ್ಲ, ಆದರೆ ಆತನ ನೈತಿಕತೆಯಲ್ಲಿ. ಡಾ. ಹೆಡಗೇವಾರರ ಬಳಿಯಂತೂ ನೈತಿಕ ಶಕ್ತಿಯ ಭಂಡಾರವೇ ಇತ್ತು. ಅವರ ಸ್ವಾರ್ಥರಹಿತ ಬದುಕು ಜಗತ್ತಿನಲ್ಲಿ ಹೋಲಿಕೆಯೇ ಇಲ್ಲದುದು. ಅವರು ತಮಗಾಗಿ ಒಂದು ಮನೆಯನ್ನೂ ಮಾಡಿಕೊಳ್ಳಲಿಲ್ಲ. ಬದಲಾಗಿ ಸಂಪೂರ್ಣ ಹಿಂದೂಸ್ಥಾನವನ್ನೇ ತಮ್ಮ ಮನೆಯನ್ನಾಗಿ ಮಾಡಿಕೊಂಡರು. ಅವರು ಪ್ರಸಿದ್ಧಿ, ಪ್ರಚಾರಗಳಿಂದ ದೂರವಿರುತ್ತಿದ್ದರು."

ಅವರು ಓರ್ವ ಅಗ್ರಮಾನ್ಯ ಸನ್ಯಾಸಿಯಂತೆ ಕಠೋರ ನಿಷ್ಠಾವಂತ ಬದುಕು ನಡೆಸಿ, ತಮ್ಮ ಕರ್ಮಪಥದಲ್ಲಿ ಮುನ್ನಡೆದರು. ತಮಗಾಗಿ ದೀರ್ಘ ಆಯುಷ್ಯ ಬೇಕೆಂದು ಇಚ್ಛೆಪಟ್ಟವರಲ್ಲ; ತಮ್ಮ ದೇಹಾರೋಗ್ಯದ ಬಗ್ಗೆ ಚಿಂತಿಸಿದವರೂ ಅಲ್ಲ. ಅವರು ಗಂಭೀರವಾಗಿ ಚಿಂತಿಸಿ ಹೆಚ್ಚಿನ ಮಹತ್ವ ನೀಡಿದುದು ರಾಷ್ಟ್ರದ ಆರೋಗ್ಯಕ್ಕೆ ಮತ್ತು ತಮ್ಮ ಸಂಘಟನೆಯ ದೀರ್ಘಾಯುವಿಗೆ. ಅವರಿಗೆ 1924ರಲ್ಲಿ ನ್ಯುಮೋನಿಯಾ ಕಾಡಿತ್ತು. ಅಷ್ಟಾದರೂ ಆ ದಿನಗಳಲ್ಲಿ ಅವರು ನಾಗಪುರದ ಕ್ರೀಡಾ ಕ್ಷೇತ್ರದಿಂದ ಮೊದಲ್ಗೊಂಡು ರಾಜಕಾರಣದ ವರೆಗೆ ಎಲ್ಲ ವಿಧ ಚಟುವಟಿಕೆಗಳಲ್ಲೂ ಅತ್ಯಂತ ಕ್ರಿಯಾಶೀಲ ಆಸಕ್ತಿ ವಹಿಸಿದ್ದರು. ಅವರು ಗಂಭೀರ ರೀತಿಯ ಕಾಯಿಲೆಗೊಳಗಾದುದು 1932ರಲ್ಲಿ. 1930ರಲ್ಲಿ ತಾವು ಅನುಭವಿಸಿದ್ದ ಒಂದು ವರ್ಷದ ಸೆರೆವಾಸದಲ್ಲಿ ಅವರ ಆರೋಗ್ಯ ಕೆಡಲಾರಂಭಿಸಿತ್ತು. ಹೀಗಾಗಿ ಕಾರಾಗೃಹದಿಂದ ಬಿಡುಗಡೆಯಾಗಿ ವಾಪಸ್ ಬಂದ ಮೇಲೆ ಧಂತೋಲಿಯಲ್ಲಿನ ಡಾ.ಹರದಾಸ್ ಅವರ ಮನೆಯಲ್ಲೆ ಅವರಿರುತ್ತಿದ್ದರು. ಆದರೆ ಎರಡು ತಿಂಗಳ ವಿಶ್ರಾಂತಿ ಎಂದು ಹೇಳಲಾಗಿದ್ದುದು ಸಹ ಕೇವಲ ಹೆಸರಿಗೆ ಮಾತ್ರ

ಎನ್ನುವುದೇ ಸಮಂಜಸವಾದೀತು. ಅಲ್ಲಿಂದಲೇ ಅವರು ಸಂಘಕಾರ್ಯಕ್ಕೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳನ್ನೂ ನಡೆಸುತ್ತಿದ್ದರು. ಡಾ. ಹರದಾಸ್ ಅವರು "ಅವರ ಕಾರ್ಯಮಗ್ನತೆಯಿಂದಾಗಿಯೇ ಅವರ ಆರೋಗ್ಯದಲ್ಲಿ ಅಸ್ತವ್ಯಸ್ತತೆಯುಂಟಾಗುತ್ತಿದೆ" ಎನ್ನುತ್ತಿದ್ದರು.

ಸಂಘದ ಕಾರ್ಯಕ್ಕಾಗಿ ಅವರು ತಮ್ಮ ಶರೀರದ ಕಣಕಣವನ್ನೂ ಗಂಧದಂತೆ ತೇಯ್ದರು. 1935ರಲ್ಲಿ ಅವರಿಗೆ ಸೊಂಟದಲ್ಲಿ ನೋವು ಕಾಣಿಸಿತು. ಆದರೆ ಸಂಘದ ಕಾರ್ಯಕ್ಕೆ ಅದರಿಂದ ತಡೆಯಾಗದಿರಲೆಂಬ ಉದ್ದೇಶದಿಂದ ಅವರು ತಮ್ಮ ದೇಹದ ನೋವನ್ನು ಯಾರಿಗೂ ತೋರ್ಪಡಿಸಲಿಲ್ಲ. 1935ರಲ್ಲಿ ಒಂದು ಕಾರ್ಯಕ್ರಮಕ್ಕಾಗಿ ಸಾಂಗ್ಲಿಗೆ ಹೋಗಿದ್ದಾಗ ಈ ನೋವು ಅವರಿಗೆ ಅಸಾಧ್ಯ ಪೀಡೆ ನೀಡಿತು. ಅವರು ಸ್ವತಃ ಬರೆದಿರಿಸಿದುದು – "ನನ್ನ ಸೊಂಟದ ನೋವನ್ನು ಹೇಗೋ ಏನೋ ಸಹಿಸಿಕೊಂಡೆ. ಅಲ್ಲಿ ರೈಲ್ವೇಸ್ಟೇಶನ್‌ಗೆ ಬಂದಿದ್ದವರಿಗೆ ಸ್ವಲ್ಪವೂ ಗೊತ್ತಾಗದಂತೆ ಎಚ್ಚರವಹಿಸಿ ಅವರೆಲ್ಲರಿಂದ ಸ್ವಾಗತ ಸ್ವೀಕರಿಸಿದೆ. ಸ್ಟೇಶನ್‌ನಿಂದ ತೆರಳಿದಂತೆಯೇ ಮೊದಲ ಕಾರ್ಯಕ್ರಮವೇ ಸಂಘಸ್ಥಾನದಲ್ಲಿ ಪೆರೇಡ್‌ನದು. ಭಾರೀ ಕಷ್ಟಪಟ್ಟು ಪೂರ್ವ ನಿರ್ಧಾರಿತ ಯೋಜನೆಯಂತೆ ಕಾರ್ಯಕ್ರಮದಲ್ಲೂ ಭಾಗವಹಿಸಿದೆ. ಆದರೆ ಇಷ್ಟೆಲ್ಲ ಪರಿಶ್ರಮದಿಂದಾಗಿ ಸೊಂಟದ ನೋವು ಇನ್ನಷ್ಟು ಹೆಚ್ಚಿತು."

ಅವರು ಕೆಲವು ದಿನಗಳ ಕಾಲ ಸಾಂಗ್ಲಿಯಲ್ಲೇ ಉಳಿಯಬೇಕಾಯಿತು. ಅಷ್ಟಾದರೂ ವಿಶ್ರಾಂತಿ ಎಂಬುದು ಅವರ ಭಾಗ್ಯದಲ್ಲಿ ಇರಲಿಲ್ಲ ಎನ್ನುವುದೇ ಹೆಚ್ಚು ಸಮಂಜಸ. ಹಾಸಿಗೆಯಲ್ಲಿ ಮಲಗಿದ್ದರೂ ಅವರು ಸಂಘಕಾರ್ಯದಲ್ಲಿ ಪೂರಾ ತನ್ಮಯರಾಗಿರುತ್ತಿದ್ದರು. ಹೀಗಾಗಿ ಅವರ ಕಾಯಿಲೆಯನ್ನು ಸ್ವಯಂಸೇವಕರು "ಮಾತಾಡುವ ಕಾಯಿಲೆ" ಎಂದು ವಿನೋದಪೂರ್ಣವಾಗಿ ಹೇಳುತ್ತಿದ್ದುದುಂಟು.

1936ರ ನವೆಂಬರ್‌ನಲ್ಲಿ ಅವರಿಗೆ ಕೆಮ್ಮು ಮತ್ತು ಜ್ವರ ಆರಂಭವಾದವು. ಆ ಸ್ಥಿತಿಯಲ್ಲೂ ನವೆಂಬರ್ 13ರಿಂದ ಅವರು ಕಾಟೋಲ ತಾಲೂಕಿನಲ್ಲಿ ಹತ್ತು ದಿನಗಳ ಪ್ರವಾಸ ಮಾಡಿದರು. ಈ ಪ್ರವಾಸದಲ್ಲಿ ಹೆಚ್ಚು ಪ್ರಯಾಣ ಮಾಡಬೇಕಾಗಿದ್ದ ಕಾರಣದಿಂದಲೂ ಅವರಿಗೆ ವಿಶ್ರಾಂತಿ ಲಭಿಸುತ್ತಲೇ ಇರಲಿಲ್ಲ. ಅವರು ಹೆಚ್ಚು ಪ್ರವಾಸ ಮಾಡುವಂತಾಗಲು ಮುಖ್ಯ ಕಾರಣವೆಂದರೆ ಹೆಚ್ಚುತ್ತಲೇ ಇರುತ್ತಿದ್ದ ಅವರ ಖ್ಯಾತಿ. 1935ರ ಏಪ್ರಿಲ್ 16ರಂದು ಅವರು ಆಬಾಜಿ ಹೆಡಗೇವಾರರಿಗೆ ಬರೆದಿದ್ದ ಪತ್ರದಲ್ಲಿ "ನಿನ್ನೆ ರಾತ್ರಿ ನಿಟ್ಟುಂದ ಬೀಳ್ಕೊಂಡ ನಂತರ ನಮ್ಮ ಮುಂದಿನ ಪ್ರವಾಸ ಆರಂಭವಾಯಿತು. ದಾರಿಯುದ್ದಕ್ಕೂ ಶಾಖೆಗಳಿರುವಲ್ಲೆಲ್ಲ – ಹೆಚ್ಚಿನ ಸ್ಥಾನಗಳಲ್ಲಂತೂ ಶಾಖೆಗಳಿದ್ದೇ ಇವೆ – ಸ್ವಯಂಸೇವಕರು ಭೇಟಿಗಾಗಿ ಬರುತ್ತಲೇ ಇದ್ದರು. ಹೀಗಾಗಿ ರಾತ್ರಿಯಲ್ಲಿ ಒಂದು ಕ್ಷಣವಾದರೂ ನಿದ್ರೆ ಮಾಡಲು ಅವಕಾಶವಾಗಲೇ ಇಲ್ಲ" ಎಂದು ತಿಳಿಸಿದ್ದರು.

ಡಾ. ಹೆಡಗೇವಾರರು ಸಾಮಾನ್ಯವಾಗಿ ರಾತ್ರಿ ಮಲಗುತ್ತಿದ್ದುದೇ ಒಂದು ಅಥವಾ ಎರಡು ಘಂಟೆಯ ಸುಮಾರಿಗೆ. ಪ್ರಾತಃಕಾಲ ಏಳುತ್ತಿದ್ದುದು ಹೊತ್ತಿಗೆ ಮುಂಚೆಯೇ. ಇದೆಲ್ಲವೂ ಅವರ ಆರೋಗ್ಯದ ಮೇಲೆ ಗಂಭೀರ ಪರಿಣಾಮಗಳನ್ನು ಬೀರಿದವು.

1937ರ ಮಾರ್ಚ್ 11ರಂದು ಬಾಳಾಜಿ ಹುದ್ದಾರರಿಗೆ ಅವರು ಬರೆದಿದ್ದ ಪತ್ರದಲ್ಲಿ "ನನ್ನ ಆರೋಗ್ಯ ಹೇಗಿರಬೇಕಿತ್ತೋ ಹಾಗಿಲ್ಲ. ಅದು ಅಷ್ಟು ಚೆನ್ನಾಗಿ ಇಲ್ಲ ಎಂಬುದು

ಸತ್ಯವೇ. ಆದರೆ ಅದಕ್ಕೆ ಹೊಣೆ ನನ್ನ ಪ್ರಕೃತಿಯಲ್ಲ. ವಾಸ್ತವಿಕವಾಗಿ ಅನೇಕ ವಿಧದ ಕೆಲಸಗಳ ಒತ್ತಡ ಮತ್ತು ಅದರಿಂದಾಗಿ ಅನುಭವಿಸಬೇಕಾಗಿ ಬರುವಂತಹ ಕಷ್ಟಗಳನ್ನು ಗಣನೆಗೆ ತೆಗೆದುಕೊಂಡಲ್ಲಿ, ನನ್ನ ಈಗಿರುವ ಆರೋಗ್ಯವೇ ಚೆನ್ನಾಗಿದೆ. ಕಳೆದ ನಾಲ್ಕು ತಿಂಗಳುಗಳಿಂದ ಸಂಘ ಕಾರ್ಯದ ಸಲುವಾಗಿ ಪ್ರವಾಸದಲ್ಲೇ ಇದ್ದೇನೆ. ಪ್ರತಿನಿತ್ಯ ಬೇರೆ ಬೇರೆ ನಗರಗಳಲ್ಲಿ ವಾಸ ಮತ್ತು ರಾತ್ರಿಹೊತ್ತು ಎರಡು ಘಂಟೆಗಿಂತ ಮೊದಲು ಮಲಗಲು ಅವಕಾಶ ಸಿಗುವುದಿಲ್ಲ" ಎಂದು ಹೇಳಿದ್ದಾರೆ.

1939ರ ಡಿಸೆಂಬರ್ 7ರಂದು ನಿಸರ್ಗ ಚಿಕಿತ್ಸೆಗಾಗಿ ಅವರು ಬಿಹಾರದ ರಾಜಗೃಹಕ್ಕೆ ತೆರಳಿದರು. ಅವರ ಜತೆಯಲ್ಲಿ ಅಪ್ಪಾಜಿ ಜೋಶಿ ಹಾಗೂ ಇನ್ನೂ ಕೆಲವು ಸಹಕಾರಿಗಳಿದ್ದರು. ಅಲ್ಲಿಂದ ವಾಪಸ್ ಬಂದ ಮೇಲೆ 1940ರ ಮೇ 1 ರಿಂದ ವರೆಗೆ ಅವರು ಪುಣೆಯ ಸಂಘ ಶಿಬಿರದಲ್ಲಿ ಭಾಗವಹಿಸಿದರು. ಮೇ 16ರಂದು ಅವರು ನಾಗಪುರಕ್ಕೆ ಮರಳಿದರು. ಅಲ್ಲಿ ಆಗ ಒಂದು ತಿಂಗಳ ಕಾಲಾವಧಿಯ ಸಂಘಶಿಕ್ಷಾ ವರ್ಗ ನಡೆಯುತಿತ್ತು. ಸಂಘದ ದೃಷ್ಟಿಯಲ್ಲಿ ಅದು ಅತಿ ಮಹತ್ವದ ಕಾರ್ಯಕ್ರಮ. ಇಡೀ ದೇಶದಿಂದ ಆಯ್ದ ಸ್ವಯಂಸೇವಕರು ಪ್ರಶಿಕ್ಷಣಕ್ಕಾಗಿ ಅಲ್ಲಿ ಬಂದಿದ್ದರು. ಆದರೆ ದೌರ್ಭಾಗ್ಯದಿಂದ ಡಾ. ಹೆಡಗೇವಾರರು ದಿ. 16ರಂದೇ ಅನಾರೋಗ್ಯಕ್ಕೆ ಒಳಗಾದರು. ಶರೀರದಲ್ಲಾಗುತ್ತಿದ್ದ ವೇದನೆಗಿಂತ ಹೆಚ್ಚಾಗಿ ತಾನು ವರ್ಗದಲ್ಲಿರಲಾಗುತ್ತಿಲ್ಲವಲ್ಲಾ ಎಂಬ ಕಾರಣಕ್ಕಾಗಿ ಅವರು ಮನೋವೇದನೆಯನ್ನು ಅನುಭವಿಸುತ್ತಿದ್ದರು. ಅದಕ್ಕಾಗಿ ಅವರು ತಮ್ಮ ಚಿಕಿತ್ಸೆ ನಡೆಸುತ್ತಿದ್ದ ವೈದ್ಯರ ಬಳಿ ಒಂದೇ ಸಮನೆ ತಮ್ಮ ಮನದ ಆಗ್ರಹವನ್ನು ಒತ್ತಾಯಿಸುತ್ತಲೂ ಇದ್ದರು. ಆದರೆ ವೈದ್ಯರು ಅವರಿಗೆ ವರ್ಗಕ್ಕೆ ಹೋಗಲು ಪ್ರಾರಂಭದಲ್ಲಿ ಅನುಮತಿ ನೀಡಲೇ ಇಲ್ಲ. ಕಟ್ಟಕಡೆಯಲ್ಲಿ ಅವರು ಹಪಹಪಿಸುತ್ತಿರು-ವುದನ್ನು ಗುರುತಿಸಿದ ಸಂಘದ ಅಧಿಕಾರಿಗಳು ಮತ್ತು ಚಿಕಿತ್ಸಕರು ಸಹ, ಮೂರು ಬಾರಿ ವರ್ಗದ ಭೇಟಿಗಾಗಿ ಅವರಿಗೆ ಅನುಮತಿ ನೀಡಿದರು. ಮೇ 16, ಜೂನ್ 2 ಮತ್ತು ಜೂನ್ 9 – ಹೀಗೆ ಮೂರು ಬಾರಿ ಅವರು ವರ್ಗಕ್ಕೆ ಭೇಟಿ ನೀಡಿದರು. ಅದರಲ್ಲಿ ಅವರಿಗೆ ಮಾತಾಡಲು ಅವಕಾಶ ದೊರಕಿದ್ದುದು ಜೂನ್ 9ರಂದು ಮಾತ್ರ. ಅವರ ಅಂದಿನ ಭಾಷಣವು ಅಂತಃಕರಣದಲ್ಲಿನ ಅದಮ್ಯ ಇಚ್ಛಾಶಕ್ತಿ ಹಾಗೂ ಮನದಲ್ಲಿ ಉಕ್ಕಿ ಹರಿಯುತ್ತಿದ್ದ ಉತ್ಕಟ ದೇಶಭಕ್ತಿಯ ಭಾವನೆಯ ಸಂಗಮವೇ ಆಗಿತ್ತು. ಅದೇ ಅವರು ತಮ್ಮ ಜೀವನದಲ್ಲಿ ಮಾಡಿದ್ದ ಕಟ್ಟಕಡೆಯ ಭಾಷಣ. ಅವರು ದೇಶವು ಸ್ವತಂತ್ರ-ವಾದುದನ್ನು ತಮ್ಮ ಕಣ್ಣುಗಳಿಂದ ಕಾಣದಾದರು; ಆದರೆ 1925ರಲ್ಲಿ ಅವರು ಯಾವ ವಿರಾಟ ಹಿಂದೂರಾಷ್ಟ್ರದ ಉದಾತ್ತ ಹಾಗೂ ಅವಿನಾಶಿ ರೂಪದ ಕಲ್ಪನೆ ಮಾಡಿದ್ದರೋ, ಅದರದ್ದೇ ಪುಟ್ಟ ರೂಪವೊಂದು ಜೂನ್ 9ರಂದು ಅವರ ಮುಂದಿತ್ತು. ಅಂದಿನ ತಮ್ಮ ಭಾಷಣದಲ್ಲಿ ಅವರು ಹೇಳಿದುದು:

"ಕಳೆದ 24 ದಿನಗಳಿಂದಲೂ ನಾನು ರುಗ್ಣ ಶಯ್ಯೆಯಲ್ಲಿರುವುದು ನಿಮಗೆಲ್ಲ ತಿಳಿದೇ ಇದೆ. ಸಂಘದ ದೃಷ್ಟಿಯಲ್ಲಿ ಇದು ಅತ್ಯಂತ ಸೌಭಾಗ್ಯದ ವರ್ಷವಾಗಿದೆ. ಇಂದು ನನ್ನ ಕಣ್ಣ ಮುಂದೆ ಹಿಂದೂರಾಷ್ಟ್ರದ ಒಂದು ಪುಟ್ಟ ಸ್ವರೂಪವನ್ನು ಕಾಣುತ್ತಿದ್ದೇನೆ."

ಮುಂದೆ ಸಂಘದ ವಿಚಾರದ ಮಹತ್ವವನ್ನು ವಿವರಿಸುತ್ತ "ನಿಮ್ಮ ಜತೆ ನನಗೆ ಪರಿಚಯವೇ ಇರದಿದ್ದರೂ, ನನ್ನ ಹೃದಯ ನಿಮ್ಮೆಡೆಗೆ ಮತ್ತು ನಿಮ್ಮ ಹೃದಯಗಳು ನನ್ನೆಡೆಗೆ ಪರಸ್ಪರ ಸೆಳೆಯುವಂತಾಗಲು ಕಾರಣವೇನು? ರಾಷ್ಟ್ರೀಯ ಸ್ವಯಂಸೇವಕ

ಸಂಘದ ವಿಚಾರಧಾರೆಯಲ್ಲಿರುವ ವಿಶೇಷತೆಯೇ ಅದು. ಅದರ ಪ್ರಭಾವದಿಂದಾಗಿ ಪರಸ್ಪರ ಪರಿಚಯವೇ ಇಲ್ಲದಿದ್ದರೂ ಒಬ್ಬರು ಇನ್ನೊಬ್ಬರನ್ನು ಸುಲಭವಾಗಿಯೇ ಗುರುತಿಸುತ್ತಾರೆ" ಎಂದು ಅವರು ಹೇಳಿದರು.

ತದನಂತರ ಸಂಘದ ಕಾರ್ಯದ ಯಥಾರ್ಥ ಸ್ವರೂಪವನ್ನು ವಿಶೇಷ ಒತ್ತು ನೀಡಿ ಮಂಡಿಸಲಾರಂಭಿಸಿದ ಅವರು, "ಇಂದು ನೀವೆಲ್ಲರೂ ನಿಮ್ಮ ಸ್ವಸ್ಥಾನಗಳಿಗೆ ಹೋಗುವವರಿದ್ದೀರಿ. ನಾನು ನಿಮ್ಮೆಲ್ಲರನ್ನೂ ಪ್ರೀತಿಯಿಂದ ಬೀಳ್ಕೊಡುತ್ತೇನೆ. ಇದು ಪರಸ್ಪರ ಅಗಲುವ ಸಂದರ್ಭವಾದರೂ ದುಃಖದಾಯಕವಾದುದೇನೂ ಅಲ್ಲ. ಯಾವ ಕಾರ್ಯವನ್ನು ಚೆನ್ನಾಗಿ ಮಾಡುವ ನಿರ್ಧಾರ ತೊಟ್ಟು ನೀವೆಲ್ಲ ಇಲ್ಲಿಗೆ ಬಂದಿರುವಿರೋ, ಅದನ್ನು ಪೂರ್ತಿಗೊಳಿಸುವ ಸಲುವಾಗಿಯೇ ನೀವೀಗ ನಿಮ್ಮ ಸ್ವಂತದ ಊರುಗಳಿಗೆ ಹೋಗುತ್ತಿದ್ದೀರಿ. ಶರೀರದಲ್ಲಿ ಪ್ರಾಣವಿರುವವರೆಗೂ, ಸಂಘದ ಕಾರ್ಯವನ್ನು ಮರೆಯುವುದಿಲ್ಲ ಎಂಬ ಪ್ರತಿಜ್ಞೆಯನ್ನು ಸ್ವೀಕರಿಸಿ. ಯಾವುದೇ ಮೋಹದಿಂದ ವಿಚಲಿತರಾಗಬೇಡಿ.... ಕೇವಲ ಸಂಘದ ಕಾರ್ಯಕ್ರಮವನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸಿದ ಮಾತ್ರದಿಂದ ಅಥವಾ ಪ್ರತಿನಿತ್ಯ ನಿಯಮಿತವಾಗಿ ಸಂಘಸ್ಥಾನದಲ್ಲಿ ಹಾಜರಿದ್ದ ಮಾತ್ರದಿಂದ ಸಂಘದ ಕೆಲಸ ಪೂರ್ಣಗೊಳ್ಳುವುದಿಲ್ಲವೆಂಬುದು ನೆನಪಿರಲಿ... ಆಸೇತು ಹಿಮಾಚಲ ವ್ಯಾಪಿಸಿರುವ ಈ ನಮ್ಮ ವಿಶಾಲ ಹಿಂದೂ ಸಮಾಜವನ್ನು ನಾವು ಸಂಘಟಿಸಬೇಕಾಗಿದೆ. ನಮ್ಮ ನಿಜವಾದ ಕಾರ್ಯಕ್ಷೇತ್ರವು ಸಂಘದ ಹೊರಗಿರುವ ಹಿಂದೂ ಸಮಾಜವೇ ಆಗಿದೆ. ಸಂಘವಿರುವುದು ಕೇವಲ ಸ್ವಯಂಸೇವಕರಿಗಾಗಿ ಅಷ್ಟೇ ಅಲ್ಲ. ಸಂಘದ ಹೊರಗಿರುವ ಜನರಿಗೆ ರಾಷ್ಟ್ರದ ಉನ್ನತಿಯ ನಿಜವಾದ ಮಾರ್ಗವನ್ನು ನಾವು ತೋರಿಸಿಕೊಡಬೇಕಾಗಿದೆ. ಅದು ನಮ್ಮ ಕರ್ತವ್ಯವೂ ಹೌದು. ಈ ಮಾರ್ಗವು ನಮ್ಮ ಸಂಘಟನೆಯದೇ ಆಗಿದೆ" ಎಂದು ಅವರು ಸ್ವಯಂಸೇವಕರ ಲಕ್ಷ್ಯವನ್ನು ಸೆಳೆದರು.

ಈ ಶಿಬಿರದಲ್ಲಿ ದೇಶಾದ್ಯಂತದಿಂದ ಬಂದಿದ್ದ 1500 ಸ್ವಯಂಸೇವಕರಿದ್ದರು. ಡಾ. ಹೆಡಗೇವಾರರು ತಮ್ಮ ಮಾತಿನ ಮೂಲಕ, ಗಣವೇಷ, ಪರೇಡ್, ಆಟಗಳು ಹಾಗೂ ವಿಭಿನ್ನ ರೀತಿಯ ಶಾರೀರಿಕ ಕಾರ್ಯಕ್ರಮಗಳಿಂದಾಗಿ ಕಾಣುವಂತಹ ಅರೆಸೈನಿಕ ಮಾದರಿಯ ಈ ಸಂಘಟನೆಯು ಒಂದು ಸೇನೆಯೂ ಅಲ್ಲ ಅಥವಾ ಯಾವುದೋ ಒಂದು ಹಿಂದೂ ಸಂರಕ್ಷಕ ದಳವೂ ಇಲ್ಲ ಎಂಬುದರ ಜತೆಯಲ್ಲಿ, ಇದು ಸಂಪೂರ್ಣ ರಾಷ್ಟ್ರವನ್ನು ಒಂದು ಗುರಿಯೆಡೆಗೆ ಮೌಲ್ಯಾಧಾರಿತವಾಗಿ ವೈಭವಸಂಪನ್ನ-ಗೊಳಿಸುವಂತಹ ಸಂಘಟನೆಯಾಗಿದೆ ಎಂಬುದನ್ನು ಸ್ಪಷ್ಟಗೊಳಿಸಿದರು. ಸಂಘದ ಕೆಲಸವು ಅಧಿಕಾರ ಪ್ರಾಪ್ತಿಯದಾಗಲಿ, ಈ ರಾಷ್ಟ್ರವನ್ನು ಹಿಂದೂ ಬಹುಮತ-ವನ್ನುಳ್ಳದ್ದನ್ನಾಗಿ ಮಾಡುವುದಾಗಲಿ, ಅಥವಾ ರಾಷ್ಟ್ರಜೀವನದ ಯಾವುದೊ ಒಂದೆರಡು ಆಯಾಮಗಳಿಗೆ ಮಾತ್ರ ಸೀಮಿತಗೊಳಿಸುವುದಾಗಲಿ ಆಗಿರದೆ, ಸಂಪೂರ್ಣ ರಾಷ್ಟ್ರದ ಸರ್ವಾಂಗೀಣ ಉನ್ನತಿಯ ಸಾಧನೆಯದಾಗಿದೆ ಎಂಬುದನ್ನು ಅವರು ಒತ್ತಿ ಹೇಳಿದರು. ಸಂಘವನ್ನು ಸಂಪೂರ್ಣ ಸಮಾಜದೊಂದಿಗೆ ಸಮೀಕರಿಸಿದ ಅವರು ಅದರ ಗುರಿಯನ್ನು ರಾಷ್ಟ್ರದ ಭೂತ, ವರ್ತಮಾನ ಮತ್ತು ಭವಿಷ್ಯ ಇವೆಲ್ಲದರ ಜತೆ ಸಂಬದ್ಧಗೊಳಿಸಿದರು. ಯಾವುದೋ ಒಂದೆರಡು ಸಣ್ಣ ಸಂಗತಿಗಳ ಸಾಧನೆ ಮಾತ್ರದಿಂದ ಸಂಘಟನೆಯ ಕಾರ್ಯವು ಪೂರ್ಣಗೊಳ್ಳುವುದಿಲ್ಲ; ಬದಲಿಗೆ ಸಂಪೂರ್ಣ ಸಮಾಜ ಹಾಗೂ ರಾಷ್ಟ್ರದ ಮುನ್ನಡೆಗೆ ಚಾಲನೆ ನೀಡುವುದೇ ಸಂಘದ ಕಾರ್ಯವಾಗಿದ್ದು, ಸ್ವಯಂಸೇವಕರು

ಅದಕ್ಕಾಗಿ ಈ ಕೆಲಸವನ್ನು ತಮ್ಮ ಜೀವನದ ಏಕಮಾತ್ರ ಕಾರ್ಯವನ್ನಾಗಿ ಮಾಡಿಕೊಳ್ಳುವಂತೆ ಅವರು ಕರೆ ನೀಡಿದರು.

ಅಂತಿಮ ಸಂದೇಶದ ನಂತರ ಅವರ ಆರೋಗ್ಯ ಇನ್ನಷ್ಟು ಕೆಡುತ್ತಲೇ ಮುಂದುವರಿಯಿತು. ಇಂತಹ ಸ್ಥಿತಿಯಲ್ಲೂ ಅವರ ಮೇಲೆ ಭರವಸೆಯಿರಿಸಿ ಇಬ್ಬರು ರಾಷ್ಟ್ರೀಯ ನಾಯಕರು – ಡಾ. ಶ್ಯಾಮಾಪ್ರಸಾದ ಮುಖರ್ಜಿ ಮತ್ತು ಸುಭಾಷ್‌ಚಂದ್ರ ಬೋಸ್ ಅವರು ಡಾ. ಹೆಡಗೇವಾರರನ್ನು ಕಾಣಲು ಬಂದರು. ಅವರಿಬ್ಬರೂ ಬಂದಿದ್ದ ಉದ್ದೇಶ ಕೇವಲ ಭೇಟಿ ಮಾತ್ರವಾಗಿರದೇ, ಡಾ. ಹೆಡಗೇವಾರರಿಂದ ಮಾರ್ಗದರ್ಶನ ಮತ್ತು ಸಹಕಾರವನ್ನೂ ಅವರು ಅಪೇಕ್ಷಿಸಿದ್ದರು. ಮೇ 21ರಂದು ಡಾ.ಮುಖರ್ಜಿ–ಯವರು ಅವರ ಭೇಟಿಗೆ ಬಂದಾಗ ಡಾ. ಹೆಡಗೇವಾರರಿಗೆ 103 ಡಿಗ್ರಿ ಜ್ವರವಿತ್ತು. ಡಾ.ಮುಖರ್ಜಿಯವರು ಬಂದಿದ್ದುದು ಬಂಗಾಳದಲ್ಲಿ ಸರ್ಕಾರದ ಆಶ್ರಯದಲ್ಲೇ ಬೆಳೆಯುತ್ತಿದ್ದ ಮುಸಲ್ಮಾನರ ಆಕ್ರಮಣಕಾರಿ ಭಾವನೆಯ ಸವಾಲನ್ನು ಎದುರಿಸಲು 'ಹಿಂದೂ ರಕ್ಷಾದಳ' ವನ್ನು ಕಟ್ಟುವ ವಿಚಾರದಲ್ಲಿ ಡಾ. ಹೆಡಗೇವಾರರ ಜತೆಯಲ್ಲಿ ಚರ್ಚಿಸುವ ಸಲುವಾಗಿ. ಈ ವಿಷಯದಲ್ಲಿ ಡಾ. ಹೆಡಗೇವಾರರು ಹೇಳಿರುವ ವಿಚಾರವು, ಅವರ ರಾಷ್ಟ್ರನಿಷ್ಠೆ ಮತ್ತು ಬುದ್ಧಿ ಮನಗಳ ಮೇಲೆ ಪೂರ್ಣವಾಗಿ ಸಂತುಲನ ಹೊಂದಿರುವ, ಹಾಗೂ ಸಕಾರಾತ್ಮಕ ಚಿಂತನಶೈಲಿಯ ಮೇಲೆ ಸೊಗಸಾಗಿ ಬೆಳಕು ಚೆಲ್ಲಿದೆ. ಅವರು ಹೇಳಿದುದು: "ಬಂಗಾಳದಲ್ಲಾಗಲಿ, ಪಂಜಾಬ್‌ನಲ್ಲಾಗಲಿ, ಈಗ ಉಂಟಾಗಿರುವ ಪರಿಸ್ಥಿತಿಗೆ ದೋಷವಿರುವುದು ಹಿಂದೂ ಸಮಾಜದ ಅಸಂಘಟನೆಯಲ್ಲೆ. ಇಂತಹ ಸ್ಥಿತಿಯನ್ನು ಶಾಶ್ವತವಾಗಿ ಸರಿಪಡಿಸದೆ, ಮೇಲುಮೇಲಿನ ಇನ್ನಾವುದೇ ಪ್ರಯತ್ನದಿಂದ ಲಾಭವೇನೂ ಆಗದು... ಅಸಂಘಟನೆಯ ಕಾರಣದಿಂದ ಆಗುವ ಉಪಟಳವು ಮುಂದೆಯೂ ಆಗುತ್ತಲೇ ಇರುವಂಥದು. ಪ್ರಸ್ತುತ ಸವಾಲಿಗೆ ಯಾವುದೋ ತಾತ್ಕಾಲಿಕ ಪ್ರತಿಕ್ರಿಯೆಯಾಗಿ ಅಥವಾ ಆಂಶಿಕ ಮಾತ್ರವಾಗಿ ಮಾಡುವ ಯಾವುದೋ ಉಪಾಯ ಯೋಜನೆಯಿಂದ ಪರಿಸ್ಥಿತಿಯಲ್ಲಿ ಏನೂ ಪರಿವರ್ತನೆ ಆಗುವುದಿಲ್ಲ. ಅದಕ್ಕಾಗಿ ಸಂಪೂರ್ಣ ದೇಶದಲ್ಲಿ ಎಲ್ಲ ಹಿಂದೂಗಳಲ್ಲಿ ಸಮಾಜವ್ಯಾಪಿಯಾದ ದೃಷ್ಟಿಯನ್ನು ಬೆಳೆಸಬೇಕಾಗಿದೆ. ಹಾಗೂ ರಾಷ್ಟ್ರೀಯತೆಯ ಸಂಸ್ಕಾರಗಳನ್ನು ಹಿಂದೂಗಳ ಮನದಲ್ಲಿ ತುಂಬುವ ಅಗತ್ಯವಿದೆ. ಹಿಂದೂಗಳು ಪರಸ್ಪರರಲ್ಲಿ ಪ್ರೀತಿ ಬೆಳೆಸಿಕೊಂಡು, ಒಟ್ಟು ರಾಷ್ಟ್ರವನ್ನು ವೈಭವಪೂರ್ಣಗೊಳಿಸುವ ಮಹತ್ವಾಕಾಂಕ್ಷೆಯನ್ನು ಮೈಗೂಡಿಸಿ–ಕೊಳ್ಳುವಂತೆ ಮಾಡುವುದೇ ರಾಷ್ಟ್ರದ ಏಳ್ಗೆಯ ನಿಜವಾದ ರಚನಾತ್ಮಕ ಹಾಗೂ ಶಾಶ್ವತವಾದ ಮಾರ್ಗವಾಗಬಲ್ಲದು. ಸಂಘವು ಮಾಡುತ್ತಿರುವುದು ಅದನ್ನೇ."

ಸರಿಯಾಗಿ ಒಂದು ತಿಂಗಳ ನಂತರ ಜೂನ್ 20ರಂದು ಅವರನ್ನು ಕಾಣಲು ಸುಭಾಷ್‌ಚಂದ್ರ ಬೋಸ್ ಬಂದರು. ಅಷ್ಟುಹೊತ್ತಿಗೆ ಡಾ. ಹೆಡಗೇವಾರರು ಬದುಕಿ ಉಳಿಯಬಹುದೆಂಬ ಆಸೆ ಉಳಿದೇ ಇರಲಿಲ್ಲ. ಜೂನ್ 15ರಿಂದ ಮೂರು ದಿನಗಳ ಕಾಲ ಅವರ ಆರೋಗ್ಯದ ತಪಾಸಣೆಗಾಗಿ ಮೇಯೊ ಆಸ್ಪತ್ರೆಗೆ ಅವರನ್ನು ದಾಖಲಿಸಲಾಗಿದ್ದು, ನಂತರ ಜೂನ್ 18ರಂದು ಸಿವಿಲ್ ಲೈನ್ಸ್‌ನಲ್ಲಿರುವ ಬಾಬಾಸಾಹೇಬ ಘಟಾಟೆ ಅವರ ಬಂಗ್ಲೆಗೆ ಅವರನ್ನು ತರಲಾಗಿತ್ತು. ಡಾ. ಹೆಡಗೇವಾರರಿಗೆ ಆಗಲೇ ತಮ್ಮ ಮೃತ್ಯುವಿನ ನೆರಳು ಕಂಡಿತ್ತು. ಅವರು ಜೂನ್ 15ರಂದೇ ತಮ್ಮ ಉಪಚಾರದ ಹೊಣೆಯಲ್ಲಿದ್ದ ಯಾದವರಾವ್ ಜೋಶಿ ಅವರ ಬಳಿ ಪ್ರಶ್ನೆಯೊಂದನ್ನು ಕೇಳಿದ್ದರು: "ಸಂಘದ

ಹಿರಿಯ ಅಧಿಕಾರಿ ನಿಧನರಾದಲ್ಲಿ ಅವರ ಅಂತಿಮ ಸಂಸ್ಕಾರವನ್ನು ಸೈನಿಕ ಪದ್ಧತಿಯಲ್ಲಿ ಮಾಡುವಿರಾ?"

ಈ ಪ್ರಶ್ನೆ ಕೇಳಿ ಜೋಶಿ ಅವರ ಕಣ್ಣುಗಳು ಹನಿಗೂಡಿದವು. ಅವರು ಉತ್ತರ ನೀಡದೇ ಪ್ರಶ್ನೆಯನ್ನು ತಳ್ಳಿ ಹಾಕಿದರು. ಅದೊಂದು ತಂದೆ ಹಾಗೂ ಮಗನ ನಡುವೆ ನಡೆಯುವಂತಹ ಮಾತುಕತೆಗಿಂದಲೂ ಹೆಚ್ಚು ಹೃದಯಸ್ಪರ್ಶಿಯಾಗಿದ್ದ ಪ್ರಸಂಗ. ತನ್ನ ಮೃತ್ಯುವಿನ ನಂತರ ಯಾವುದೇ ತಪ್ಪು ಪರಂಪರೆ ಹುಟ್ಟಿಕೊಳ್ಳಬಾರದು ಎಂಬ ಬಗ್ಗೆ ಡಾ. ಹೆಡಗೇವಾರರು ಯೋಚಿಸುತ್ತಿದ್ದರು. ಸಂಘದಲ್ಲಿ ಹೊರಗಿನಿಂದ ಕಾಣುವಂತಹ ಸೈನಿಕ ಮಾದರಿಯ ಪ್ರಶಿಕ್ಷಣದಿಂದಾಗಿ, ಅಕಸ್ಮಾತ್ ತನ್ನ ಅಂತಿಮ ಸಂಸ್ಕಾರವು ಸೈನಿಕ ರೀತಿಯಲ್ಲಿ ಆಗಬಹುದೇ ಎಂಬ ಸಂದೇಹ ಅವರಿಗೆ ಉಂಟಾಗಿತ್ತು. ಕೊನೆಯಲ್ಲಿ ಡಾ. ಹೆಡಗೇವಾರರು ತಾವೇ ಅಭಿಪ್ರಾಯವನ್ನು ಸ್ಪಷ್ಟಪಡಿಸಿದರು: "ಸಂಘವು ಒಂದು ವಿಶಾಲವಾದ ಕುಟುಂಬವಾಗಿದೆ. ಇದು ಸೈನಿಕ ಸಂಘಟನೆಯೇನಲ್ಲ. ಅದಕ್ಕಾಗಿ ಕುಟುಂಬದ ಸದಸ್ಯನೊಬ್ಬನ ಮರಣ ಸಂಭವಿಸಿದಲ್ಲಿ ಯಾವ ರೀತಿಯಲ್ಲಿ ಅಂತಿಮ ಸಂಸ್ಕಾರವಾಗುವುದೋ, ಅದೇ ರೀತಿಯಲ್ಲಿ ಸರ್ವಸಾಮಾನ್ಯರಂತೆ ಸರಳವಾಗಿಯೇ ಅದನ್ನು ನಡೆಸಬೇಕು."

ಅವರು ತಮ್ಮ ಕೊನೆಯುಸಿರಿನವರೆಗೂ ತಮ್ಮ ವಿಚಾರ ಮತ್ತು ಆದರ್ಶಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತ ಇದ್ದರು. ಅವರ ವ್ಯಕ್ತಿತ್ವದ ವಿಶಾಲತೆ ಮತ್ತು ಆದರ್ಶಕ್ಕೆ ಬದ್ಧತೆ ಇವುಗಳನ್ನು ಕಂಡು ಪ್ರಾಯಶಃ ಸ್ವಯಂ ಮೃತ್ಯುವೇ ಸಹ ಕ್ಷಣಕಾಲ ಹಿಂಜರಿದಿರಬಹುದು ಅನಿಸುತ್ತದೆ. ಮೃತ್ಯು ಅವರನ್ನು ಬೆನ್ನಟ್ಟಿ ಬರುತ್ತಿದ್ದರೂ ಅವರು ತಮ್ಮ ಸ್ವಭಾವಕ್ಕನುಗುಣವಾಗಿ ಮನವನ್ನು ಸಂಘಕಾರ್ಯಕ್ಕಾಗಿಯೇ ಮೀಸಲಿರಿಸಿದ್ದರು. ಜೂನ್ 19ರಂದು ಸಹ ಅವರು ಮುಂಬಯಿಯಲ್ಲಿನ ಓರ್ವ ಸ್ವಯಂಸೇವಕನಿಗೆ ಅವನ ಶಸ್ತ್ರಚಿಕಿತ್ಸೆಯು ಯಶಸ್ವಿಯಾಗಿ ಆದುದಕ್ಕೆ ಸಂತಸ ವ್ಯಕ್ತಪಡಿಸಿ ಪತ್ರ ಬರೆದಿದ್ದರು. ದಿ. 19ರ ರಾತ್ರಿಯನ್ನು ಎಲ್ಲ ವೈದ್ಯರು ಮತ್ತು ಆಸ್ಪತ್ರೆಯಲ್ಲಿದ್ದ ಸಂಘದ ಕಾರ್ಯಕರ್ತರೂ ಎಚ್ಚರವಿದ್ದುಕೊಂಡೇ ಕಳೆದರು. ಪ್ರತಿಯೊಬ್ಬರಲ್ಲೂ ಚಿಂತೆ ಕ್ಷಣಕ್ಷಣಕ್ಕೂ ಹೆಚ್ಚತೊಡಗಿತ್ತು. ಡಾ. ಹೆಡಗೇವಾರರು ತಮ್ಮನ್ನೆಲ್ಲ ಅಗಲಿ ಹೋಗಬಹುದೆಂಬುದನ್ನು ಕಲ್ಪಿಸಲು ಸಹ ಯಾರೂ ತಯಾರಿರಲಿಲ್ಲ. ದಿ. 20ರಂದು ಅವರ ದೇಹ ಸ್ಥಿತಿ ಇನ್ನಷ್ಟು ಕೆಟ್ಟಿತು. ಅಂತಹ ಮನ ಕರಗುವ ಸ್ಥಿತಿಯಲ್ಲಿಯೂ ಅವರು ಮಾತ್ರ ಹಿಮಾಲಯದಂತೆ ದೃಢವಾಗಿ ಕಾಣಿಸಿಕೊಂಡರು. ಅವರ ಪಾಲಿಗೆ ತನ್ನ ಸ್ವಂತದ ಬದುಕು ಅಥವಾ ಮರಣ ಮಹತ್ವದ್ದಾಗಿರಲಿಲ್ಲ. ಆ ಸಂದರ್ಭದಲ್ಲಿ ಅವರ ಮನಸ್ಸನ್ನು ವ್ಯಾಪಿಸಿದ್ದುದು ಒಂದೇ ಸಂಗತಿ. ಅದು ನಮ್ಮ ರಾಷ್ಟ್ರದ ಹಾಗೂ ಅದರ ಉತ್ಥಾನದ ಸಾಧನವಾಗಿ ಇರುವ ಸಂಘ ಮಾತ್ರ. ಈ ನಡುವೆ ಜೂನ್ 20ರಂದು ಚಿಕಿತ್ಸಕರಿಂದ ಒಂದಿಷ್ಟು ಸಮಯ ಕೇಳಿ ಅವರು ಗಂಭೀರವಾಗಿ ವಿಚಾರಮಗ್ನರಾದರು. ಕೊನೆಯಲ್ಲಿ ಗೋಳ್ವಾಲ್ಕರ್ ಅವರನ್ನು ಸಮೀಪ ಕರೆದು, ಅಲ್ಲಿದ್ದ ಇತರ ಹಿರಿಯ ಕಾರ್ಯಕರ್ತರ ಸಮಕ್ಷಮದಲ್ಲಿ "ಮುಂದಿನ ಸಂಘ ಕಾರ್ಯದೆಲ್ಲದರ ಹೊಣೆಯನ್ನು ನೀವು ನಿರ್ವಹಿಸಬೇಕು" ಎಂದು ಹೇಳಿದರು.

ಈ ಮಾತನ್ನು ಕೇಳಿ ಗೋಳ್ವಾಲ್ಕರ್‌ಜಿ ಅವರೂ ಅತ್ಯಂತ ಶೋಕವಿಹ್ವಲರಾದರು. ವೈದ್ಯರು ಲಂಬರ್ ಪಂಕ್ಚರ್‌ಗಾಗಿ ಸೂಕ್ತವಾದ ಸಮಯವನ್ನೂ ನಿರ್ಧರಿಸುವುದರಲ್ಲಿದ್ದರು.

ಡಾ. ಹೆಡಗೇವಾರರ ಹೆಚ್ಚುತ್ತಿರುವ ತಳಮಳದ ಹಿನ್ನೆಲೆಯಲ್ಲಿ, ಇಡೀ ವಾತಾವರಣದಲ್ಲಿ ಗಂಭೀರವಾದ ಚಿಂತೆ ವ್ಯಾಪಿಸಿತು. ಅಂದು ರಾತ್ರಿ 11 ಘಂಟೆಗೆ ಅವರ ಜ್ವರ ಇನ್ನೂ ಏರಿತು. ಮುಖವು ಇನ್ನಷ್ಟು ಗಂಭೀರವಾಗತೊಡಗಿತು. ರಾತ್ರಿ 2.30ಕ್ಕೆ ಅವರು ಪ್ರಜ್ಞಾಹೀನರಾದರು. ಜೂನ್ 21ರ ಪ್ರಾತಃಕಾಲ 9 ಘಂಟೆ 27 ನಿಮಿಷಕ್ಕೆ ಅವರು ಕೊನೆಯುಸಿರು ಎಳೆದರು. ಅಂದು ಜ್ಯೇಷ್ಠ ಬಹುಳ ಬಿದಿಗೆ.

ಅವರ ನಿಧನದ ವಾರ್ತೆ ಕಾಳ್ಗಿಚ್ಚಿನಂತೆ ಎಲ್ಲ ಕಡೆ ಹಬ್ಬಿತು. ಪ್ರಾಂತದ ಮೂಲೆಮೂಲೆಗಳಿಂದ ಮತ್ತು ಹೊರಪ್ರಾಂತಗಳಿಂದಲೂ ಜನರು ಪ್ರವಾಹದಂತೆ ಹರಿದುಬರತೊಡಗಿದರು. ಅಂದು ದಿನವೆಲ್ಲ ಮುದುಕರು, ಮಕ್ಕಳು, ಮಹಿಳೆಯರನ್ನೊಳಗೊಂಡು, ಸಾವಿರಾರು ಮಂದಿ ಅವರ ಅಂತಿಮ ದರ್ಶನಕ್ಕಾಗಿ ಧಾವಿಸಿ ಬಂದರು. ಆ ದಿನ ನಾಗಪುರದಲ್ಲಿ ಭಾರೀ ಮಳೆ. ಆದರೂ ಜನರ ಪ್ರವಾಹ ನಿಲ್ಲಲೇ ಇಲ್ಲ.

ಸಂಜೆ ಐದು ಘಂಟೆಗೆ ಅವರ ಶವಯಾತ್ರೆ ಹೊರಟಿತು. ಸಾವಿರಾರು ಸಂಖ್ಯೆಯಲ್ಲಿ ಸ್ತ್ರೀ ಪುರುಷರೆಲ್ಲರೂ ಸೇರಿದ್ದ ಅಂತಿಮ ಯಾತ್ರೆ ಅದು. ಈ ಶವಯಾತ್ರೆಯ ಕುರಿತು ತನ್ನ ವರದಿಯಲ್ಲಿ 'ಹಿತವಾದ'ವು "ಇದು ನಾಗಪುರದ ಇತಿಹಾಸದಲ್ಲೆ ಅತಿ ದೊಡ್ಡದಾದ ಶವಯಾತ್ರೆ. ಭಾರೀ ಮಳೆ ಸುರಿಯುತ್ತಿದ್ದರೂ ಸಾವಿರಾರು ಮಂದಿ ಇದರಲ್ಲಿ ಪಾಲ್ಗೊಂಡಿದ್ದರು. ನಗರದ ಪ್ರಮುಖರೆಲ್ಲರೂ ಇದರಲ್ಲಿ ಭಾಗವಹಿಸಿದ್ದರು. ಶವಯಾತ್ರೆ ಸಂಜೆ ಐದು ಘಂಟೆಗೆ ಹೊರಟಿತು. ದಾರಿಯುದ್ದಕ್ಕೂ ಶವದ ಮೇಲೆ ಹೂ ಮಳೆಗರೆಯಲಾಗುತಿತ್ತು. ಯಾತ್ರೆ ಮುಂದುವರೆಯುತ್ತಿದ್ದಂತೆ ಅದರಲ್ಲಿ ಭಾಗವಹಿಸುವವರ ಸಂಖ್ಯೆಯೂ ಹೆಚ್ಚುತ್ತಲೇ ಇತ್ತು. ರೇಶಂಬಾಗ್ ಮೈದಾನ ತಲಪಲು ಯಾತ್ರೆಗೆ ನಾಲ್ಕು ಘಂಟೆಗಳ ಕಾಲ ಹಿಡಿಯಿತು"[1] ಇದರಲ್ಲಿ ಸಂತ ಪಾಂಚಲೇಗಾಂವ್‌ಕರ್ ಮಹಾರಾಜ್, ಗಣಪತರಾವ್ ಬುಟಿ, ಡಾ. ಚೋಳ್ಕರ್, ಡಾ. ಪರಾಂಜಪೆ, ರಾಮಭಾವು ರುಯಿೀಕರ್, ಸೇಠ್ ಪೂನಂಚಂದ್, ವೀರ ಹರಕರೆ, ಬಾಳಾಜಿ ಹುದ್ದಾರ್, ಅಳೇಕರ್, ನಾ.ಭಾ. ಖರೆ, ಓಗ್ಲೆ ಮೊದಲಾದವರಲ್ಲದೆ, ಕಾಂಗ್ರೆಸ್, ಸೋಶಲಿಸ್ಟ್, ಫಾರ್ವರ್ಡ್ ಬ್ಲಾಕ್ ಮತ್ತು ಮಜದೂರ ಸಂಘಟನೆಗಳ ಪ್ರಮುಖ ವ್ಯಕ್ತಿಗಳೆಲ್ಲ ಸೇರಿದ್ದರು" ಎಂದು ಬರೆದಿತ್ತು.

ತನ್ನ ಸಂಪಾದಕೀಯದಲ್ಲಿ 'ಹಿತವಾದ'ವು "ಡಾ. ಹೆಡಗೇವಾರರಿಗಿಂತ ಹೆಚ್ಚು ಕುಶಲ ಸಂಘಟಕನು ದೇಶದಲ್ಲಿ ಅಲಭ್ಯ" ಎಂದು ಬರೆಯಿತು.[2]

ಪುಣೆಯಿಂದ ಪ್ರಕಟಿತವಾಗುವ 'ಮರಾಠಾ' ಪತ್ರಿಕೆಯು ಅವರನ್ನು 'ಹಿಂದೂ ರಾಷ್ಟ್ರದ ಪ್ರವಾದಿ' ಎಂದು ಬಣ್ಣಿಸಿತು. ಅದು ತನ್ನ ಸಂಪಾದಕೀಯದಲ್ಲಿ "ನಾವೇನೋ ನಿಃಸ್ವಾರ್ಥ ಎಂಬ ಪದವನ್ನು ಬಳಸುತ್ತೇವೆ. ಅದಕ್ಕೆ ಡಾ. ಹೆಡಗೇವಾರರ ಬದುಕು ಪ್ರಕಟ ರೂಪ ನೀಡಿದೆ..... ತಮ್ಮ ರೀತಿನೀತಿಗಳಿಂದ ಮತ್ತು ನಿಃಸ್ವಾರ್ಥ ಜೀವನದ ಕಾರಣಗಳಿಂದಾಗಿ ಅವರು ಮಹಾರಾಷ್ಟ್ರದ ಸಂತಕವಿ ಹಾಗೂ ನಾಯಕರಾಗಿದ್ದ ರಾಮದಾಸರಂತೆ ಇದ್ದವರು" ಎಂದು ಹೇಳಿತು.[3]

---

1. 'ಹಿತವಾದ', 23 ಜೂನ್ 1940 ಪುಟ. 1
2. 'ಹಿತವಾದ', 23 ಜೂನ್ 1940 ಪುಟ. 1 'ಸ್ವರ್ಗೀಯ ಡಾ. ಹೆಡಗೇವಾರ್'
3. ದಿ ಮರಾಠಾ, 28 ಜೂನ್ 1940

'ಮಹಾರಾಷ್ಟ್ರ' ಪತ್ರಿಕೆಯು ತನ್ನ ಸಂಪಾದಕೀಯದಲ್ಲಿ ಅವರನ್ನು ಲೋಕಮಾನ್ಯ ತಿಲಕರ ಜತೆ ಹೋಲಿಸಿತು.[4]

'ಕೇಸರಿ'ಯು ಅವರ ಜೀವನ ಮತ್ತು ಕಾರ್ಯದ ಬಗ್ಗೆ ತಿಳಿಸುತ್ತಾ "ಸಾಮಾನ್ಯವಾಗಿ ನಾಯಕರುಗಳಲ್ಲಿ ಕಾಣಿಸದೆ ಇರುವಂತಹ ವಿನಯಶೀಲತೆಯು ಅವರಲ್ಲಿ ತುಂಬಿತ್ತು. ರಾಷ್ಟ್ರದ ಸೇವೆಗಾಗಿ ಸ್ವಂತದ ಪರಿವಾರ ಮತ್ತು ತಮ್ಮ ಉಜ್ವಲ ಭವಿಷ್ಯವನ್ನೂ ತ್ಯಾಗಮಾಡಿದವರು ಅವರು. ತ್ಯಾಗದ ಗುಣ ಅವರಲ್ಲಿ ಉಕ್ಕಿ ಹರಿಯುವಷ್ಟು ತುಂಬಿತ್ತು. ಸಂಘವು ಈಗ ರಾವಲ್ಪಿಂಡಿಯಿಂದ ಮದ್ರಾಸ್ ವರೆಗೆ, ಕರಾಚಿಯಿಂದ ಕಲ್ಕತ್ತಾವರೆಗೆ ವಿಸ್ತರಿಸಿದೆ. ಹಿಂದೂ ರಾಷ್ಟ್ರದ ಹೋಲಿಕೆಯಲ್ಲಿ ಸಂಘದ ರೂಪವೀಗ ಅತಿ ಚಿಕ್ಕದಾಗಿ ಕಾಣಿಸುತ್ತಿದ್ದರೂ, ಅದು ರಾಷ್ಟ್ರೀಯ ಏಕತೆಯ ಬೆನ್ನೆಲುಬಿನಂತೆ ಇದೆ. ಇದರ ಶಕ್ತಿ ಮತ್ತು ಪ್ರಭಾವವನ್ನು ಕಂಡೇ ಗಾಂಧೀಜಿಯವರು ಇದನ್ನು ಭಾರತದ ಸರ್ವಶ್ರೇಷ್ಠ ಸಂಘಟನೆ ಎಂದು ಹೇಳಿ ಪ್ರಶಂಸಿಸಿದ್ದರು" ಎಂದು ಬರೆದಿತ್ತು.[5]

ಅದೇ ರೀತಿಯಲ್ಲಿ ಇನ್ನೊಂದು ಮರಾಠಿ ಪತ್ರಿಕೆ 'ಕಾಳ'ವು "ಭಾರತದ ಸ್ವಾತಂತ್ರ್ಯಕ್ಕಾಗಿ ಅವರು ನಡೆಸಿದ್ದ ಅವಿರತ ಪ್ರಯತ್ನಕ್ಕೆ ಸರಿಸಾಟಿಯಾದುದು ಬೇರೊಂದಿಲ್ಲ" ಎಂದು ಬರೆಯಿತು.[6]

ಮಧ್ಯಪ್ರಾಂತದ ಮತ್ತು ಮಹಾರಾಷ್ಟ್ರಗಳ ಸರಿಸುಮಾರು ಪ್ರತಿಯೊಂದು ಊರು ಮತ್ತು ನಗರಗಳಲ್ಲೂ ಸ್ಕೂಲ್ ಮತ್ತು ಕಾಲೇಜ್‌ಗಳಲ್ಲಿ ಹಾಗೂ ಸ್ಥಾನೀಯ ಆಡಳಿತವಿರುವ ಎಲ್ಲ ನಗರ ಸಭೆಗಳಲ್ಲಿ 'ಹೆಡಗೇವಾರ್ ದಿನ' ಆಚರಿಸಲ್ಪಟ್ಟು, ಅಲ್ಲಿ ಅವರಿಗೆ ಶ್ರದ್ಧಾಂಜಲಿ ಸಮರ್ಪಿತವಾಯಿತು. ಅವರ ಜನಪ್ರಿಯತೆಗೆ ಇದೊಂದೇ ಸಾಕ್ಷಿ ಸಾಕಾದೀತು. ಮುಂಬಯಿಯಲ್ಲಿನ ಶಿವಾಜಿನಗರದ ಹರಿಜನ ವಸತಿ ಕ್ಷೇತ್ರದಲ್ಲಿ 22 ಜೂನ್ 1940ರಂದು ನಡೆದ ಒಂದು ಶೋಕ ಸಭೆಯಲ್ಲಿ ಅವರನ್ನು ಕುರಿತು "ಹರಿಜನರಲ್ಲಿ ಆತ್ಮವಿಶ್ವಾಸ ತುಂಬಿಸಿದ ಪ್ರವಾದಿ" ಎಂದು ಹರಿಜನ ಕಾರ್ಯಕರ್ತರು ಹೇಳಿದರು. ಸಂಘವನ್ನು ಕಟುವಾಗಿ ಟೀಕಿಸುತ್ತಿದ್ದ ಪತ್ರಿಕೆ 'ಮಾತೃಭೂಮಿ'ಯ ಸಂಪಾದಕಿ ಪ್ರಮೀಳಾ ಓಕ್ ಅವರು ತಮ್ಮ ಸಂಪಾದಕೀಯದಲ್ಲಿ

"ಅವರ ವಿಚಾರಗಳೊಂದಿಗೆ ನಮಗೆ ಭಿನ್ನಾಭಿಪ್ರಾಯಗಳಿರಬಹುದು. ಆದರೆ ಅವರ ತ್ಯಾಗದ ಗುಣ, ಎಂದೂ ಅಚಲ ದೃಢ ನಿರ್ಧಾರ ಮತ್ತು ಇನ್ನೆಲ್ಲೂ ಕಾಣಿಸದಂತಹ ಸಂಘಟನಾ ಕೌಶಲ್ಯ ಮೊದಲಾದ ಗುಣಗಳನ್ನು ಪ್ರಶಂಸಿಸದೆ ಇರುವುದು ಸಾಧ್ಯವೇ ಇಲ್ಲ. ತಮ್ಮ ಸಂಪೂರ್ಣ ಜೀವನವನ್ನೇ ಸಮಾಜ ಕಾರ್ಯಕ್ಕಾಗಿ ಸಮರ್ಪಿಸಿದವರು ಅವರು"[7] ಎಂದು ಬರೆದಿದ್ದರು.

ತಮ್ಮ ಬದುಕಿನ ಚಿಂತನ, ವೈಚಾರಿಕ ಪಾವಿತ್ರ್ಯ ಇವೆಲ್ಲವನ್ನೂ ಅವರು ರಾಷ್ಟ್ರದ ಹಿತಕ್ಕಾಗಿಯೇ ಮೀಸಲಾಗಿರಿಸಿದ್ದರು. ರಾಷ್ಟ್ರೀಯ ಜಾಗೃತಿ, ಸ್ವಚ್ಛ ಸಾರ್ವಜನಿಕ ಬದುಕು,

---

4. 'ಮಹಾರಾಷ್ಟ್ರ', 25 ಜೂನ್ 1940
5. ಕೇಸರಿ, 25 ಜೂನ್ 1940 ಪು. 8
6. 'ಕಾಳ', 24 ಜೂನ್ 1940
7. ಮಾತೃಭೂಮಿ, 25 ಜೂನ್ 1940 ಪು. 6

ದೇಶಭಕ್ತಿ ಮತ್ತು ಲೋಕಸಂಗ್ರಹ ಮೊದಲಾದ ಸದ್ಗುಣಗಳಿಗೆ ಅವರೇ ಒಂದು ರೀತಿಯ ಒರೆಗಲ್ಲು ಆದರು. ಮೃತರಾದ ಕಾರಣದಿಂದಾಗಿ ಅವರ ನಶ್ವರ ಶರೀರವೇನೋ ಇಲ್ಲವಾಯಿತು. ಆದರೆ ಅವರು ತಮ್ಮ ಚಿಂತನೆಗೆ ಸ್ವತಃ ಮೂರ್ತರೂಪರಾಗಿ ಉಳಿದರು. ನಮ್ಮ ರಾಷ್ಟ್ರ ಜೀವನದಲ್ಲಿ ಸ್ವತಃ ಒಂದಾಗಿ ಕರಗಿ ಸಂಘಕ್ಕೆ ಪ್ರೇರಕ ಶಕ್ತಿಯಾಗಿ ಚಿರಸ್ಥಾಯಿಯಾದರು.

ಸ್ವಾಮಿ ವಿವೇಕಾನಂದರಂತೆ ಅಲ್ಪಾಯು ಮಾತ್ರವಾಗಿದ್ದರೂ, ಅವರು ಮಾಡಿದ ಕಾರ್ಯವು ರಾಷ್ಟ್ರೀಯ ಪುನರ್ಜಾಗರಣದ ಇನ್ನೊಂದು ಮಹತ್ವದ ಪ್ರಯತ್ನವಾಯಿತು. ಅದಕ್ಕಾಗಿಯೇ ಅವರ ಮೃತ್ಯುವಿನ ನಂತರ ಅವರ ವಿಚಾರ ಮತ್ತು ಕಾರ್ಯ ಇವೆರಡರ ಮಹತ್ವ ಹಾಗೂ ತಾರ್ಕಿಕತೆಗಳು ದಿನಕಳೆದಂತೆ ಹೆಚ್ಚುತ್ತ ಭಾರತದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಒಂದು ಪರ್ಯಾಯ ಸ್ಥಾನವನ್ನು ಗಳಿಸುತ್ತಲಿವೆ.

ಯಾವುದೇ ಓರ್ವ ದ್ರಷ್ಟಾರನ ಜೀವನ ಮತ್ತು ವಿಚಾರಗಳ ಸಾರ್ಥಕ್ಯಗಳು, ರಾಷ್ಟ್ರೀಯ ಜೀವನ ಹಾಗೂ ಭವಿಷ್ಯದ ಪೀಳಿಗೆಗಳ ಮೇಲೆ ಅವು ಎಷ್ಟು ಪ್ರಭಾವ ಬೀರಬಲ್ಲವು ಎಂಬುದರ ಮೇಲೆ ನಿಂತಿದೆ. ಅಂತಹ ವ್ಯಕ್ತಿತ್ವದ ಮೌಲ್ಯಮಾಪನವನ್ನು ಅದೆಷ್ಟೇ ರೀತಿಯಲ್ಲಿ ಮಾಡಿದರೂ ಅಪೂರ್ಣವಾಗಿಯೇ ಉಳಿಯುವಂತಹದು. ಅದು ಪೂರ್ಣಗೊಳ್ಳುವುದು ದೇಶದ ಇತಿಹಾಸದ ಚಕ್ರ ಉರುಳಿದಂತೆ ಅದರ ಪ್ರಸ್ತುತತೆ ಹೆಚ್ಚುತ್ತಾ ಅದರ ಬಲವಾದ ಮುದ್ರೆಯೂ ರಾಷ್ಟ್ರಜೀವನದ ಮೇಲೆ ಅಚ್ಚೊತ್ತುವಂತಾದಾಗಲೇ. ಡಾ. ಹೆಡಗೇವಾರರು ಅಂತಹ ಶ್ರೇಣಿಯ ಮಹಾ ಪುರುಷರಾಗಿದ್ದರು. ಅವರು ನಿಧನರಾದಾಗ ವೀರ ಸಾವರಕರರು ಪ್ರಕಟಿಸಿದ ನಿಜಕ್ಕೂ ಅತ್ಯಂತ ಅರ್ಥಪೂರ್ಣ ಶ್ರದ್ಧಾಂಜಲಿ ಹೀಗಿದೆ (Hedgewar is dead..... long live Hedgewar) "ಹೆಡಗೇವಾರರು ವಿಧಿವಶ – ಹೆಡಗೇವಾರರು ಅಮರ."

Dr. Keshav Baliram Hedgewar (Kannada)

ಡಾ. ಕೇಶವ ಬಲಿರಾಮ ಹೆಡಗೇವಾರರು ಭಾರತೀಯ ಸಂಸ್ಕೃತಿಯ ಪರಮ ಉಪಾಸಕರಾಗಿದ್ದವರು. ಅವರು ಸಕ್ರಿಯ ಕರ್ಮಯೋಗಿ, ಸತ್ಯನಿಷ್ಠ ಮತ್ತು ರಾಷ್ಟ್ರವಾದಿಯಾಗಿದ್ದುದರ ಜತೆಯಲ್ಲಿ ಸ್ವತಂತ್ರ ಮನೋಭಾವದವರೂ ಆಗಿದ್ದವರು. ಹಿಂದೂಗಳಲ್ಲಿ ನವಚೈತನ್ಯವನ್ನು ಎಚ್ಚರಿಸುವಂತಹ ಉಲ್ಲೇಖನೀಯ ಕಾರ್ಯವಾಗಿ ಅವರು ರಾಷ್ಟ್ರೀಯ ಸ್ವಯಂಸೇವಕ ಸಂಘವನ್ನು ಆರಂಭಿಸಿದರು. ಈ ಗ್ರಂಥದಲ್ಲಿ ಅವರ ವ್ಯಕ್ತಿತ್ವ ಮತ್ತು ಬದುಕಿನ ವಿಭಿನ್ನ ಆಯಾಮಗಳ ಮೇಲೆ ಬೆಳಕು ಚೆಲ್ಲಲಾಗಿದೆ. ಮಾತ್ರವಲ್ಲ ಅವರ ಕುರಿತು ಇದುವರೆಗೆ ಅಷ್ಟಾಗಿ ತಿಳಿದಿರದ ಹಲವು ಮಾಹಿತಿಗಳನ್ನು ನೀಡಲಾಗಿದೆ.

ಗ್ರಂಥದ ಲೇಖಕ ರಾಕೇಶ ಸಿನ್ಹಾ ಅವರು ದಿಲ್ಲಿ ವಿಶ್ವವಿದ್ಯಾಲಯದಲ್ಲಿ ರಾಜ್ಯಶಾಸ್ತ್ರದ ಉಪನ್ಯಾಸಕರಾಗಿದ್ದಾರೆ. ಇದಲ್ಲದೆ ಅವರು ಅಂಕಣಕಾರರಾಗಿ ಮತ್ತು ರಾಜನೈತಿಕ ವಿಶ್ಲೇಷಕರಾಗಿ ಪರಿಚಿತರಾಗಿದ್ದಾರೆ.



ಬೆಲೆ : ₹ 140.00


ಪ್ರಕಾಶನ ವಿಭಾಗ
ಸಮಾಚಾರ ಮತ್ತು ಪ್ರಸಾರ ಸಚಿವಾಲಯ
ಭಾರತ ಸರ್ಕಾರ



ISBN : 978-81-230-2814-9
BMI - KAN-TR-023-2018-19